# ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಮಾದಿಗರು: ಚಾರಿತ್ರಿಕ ಅಧ್ಯಯನ

(ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ಸಂಬಂಧಿಸಿದಂತೆ)

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ ಮಹಾಪ್ರಬಂಧ

ಸಂಶೋಧಕ

ಕೆ.ಆರ್.ಜೆ. ರಾಜಕುಮಾರ್

ಮಾರ್ಗದರ್ಶಕರು

ಪ್ರೊ. ಲಕ್ಷ್ಮಣ್ ತೆಲಗಾವಿ

ಪ್ರಾಧ್ಯಾಪಕರು



ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೨

# ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಮಾದಿಗರು: ಚಾರಿತ್ರಿಕ ಅಧ್ಯಯನ

(ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ಸಂಬಂಧಿಸಿದಂತೆ)

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್. ಡಿ. ಮಹಾಪ್ರಬಂಧ



ಸಂಶೋಧಕ
ಕೆ.ಆರ್.ಜೆ. ರಾಜಕುಮಾರ್

ಮಾರ್ಗದರ್ಶಕರು
ಪ್ರೊ. ಲಕ್ಷ್ಮಣ್ ತೆಲಗಾವಿ
ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೨

# ಪ್ರಮಾಣ ಪತ್ರ

ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಮಾದಿಗರು : ಚಾರಿತ್ರಿಕ ಅಧ್ಯಯನ (ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ಸಂಬಂಧಿಸಿದಂತೆ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪ್ರೊ. ಲಕ್ಷ್ಮಣ್ ತೆಲಗಾವಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಕೆ.ಆರ್.ಜೆ. ರಾಜಕುಮಾರ್
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 9.06.09
ಸ್ಥಳ : ವಿದ್ಯಾರಣ್ಯ

# ದೃಢೀಕರಣ ಪತ್ರ

ಶ್ರೀ ಕೆ.ಆರ್.ಜೆ.ರಾಜಕುಮಾರ್ ಇವರು ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಮಾದಿಗರು : ಚಾರಿತ್ರಿಕ ಅಧ್ಯಯನ (ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ಸಂಬಂಧಿಸಿದಂತೆ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಸಮಾಜವಿಜ್ಞಾನ ನಿಕಾಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಪ್ರೊ. ಲಕ್ಷ್ಮಣ್ ತೆಲಗಾವಿ
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ :
ಸ್ಥಳ : ವಿದ್ಯಾರಣ್ಯ

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಎಚ್.ಜೆ. ಲಕ್ಕಪ್ಪಗೌಡ, ಕುಲಸಚಿವರಾದ ಡಾ. ಕೆ.ವಿ. ನಾರಾಯಣ ಹಾಗೂ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ ಮತ್ತು ಹಿಂದಿನ ಕುಲಪತಿಗಳಾಗಿದ್ದ ಡಾ. ಎಂ.ಎಂ. ಕಲಬುರ್ಗಿ, ಕುಲಸಚಿವರಾಗಿದ್ದ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್, ಅಧ್ಯಯನಾಂಗದ ನಿರ್ದೇಶಕರಾಗಿದ್ದ ಬಾಲಸುಬ್ರಹ್ಮಣ್ಯ ಹಾಗೂ ಡಾ. ಹಿ.ಚಿ.ಬೋರಲಿಂಗಯ್ಯ ಇವರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ನನ್ನಲ್ಲಿ ಸಂಶೋಧನ ಪ್ರವೃತ್ತಿ ಬೆಳೆಸಿ ಅಧ್ಯಯನದಲ್ಲಿ ತೊಡಗುವಂತೆ ಮಾಡಿ, ಪ್ರಬಂಧದ ರಚನೆಯ ಪ್ರತಿಹಂತದಲ್ಲೂ ಸೂಕ್ತ ಸಲಹೆಗಳನ್ನು ನೀಡಿ ಪ್ರೋತ್ಸಾಹಿಸಿ ಮಾರ್ಗದರ್ಶನ ಮಾಡಿದ ಪ್ರೊ. ಲಕ್ಷ್ಮಣ್ ತೆಲಗಾವಿಯವರಿಗೆ ನಾನು ಚಿರಋಣಿ. ವಿವಿಧ ರೀತಿಯಲ್ಲಿ ಪ್ರೋತ್ಸಾಹ ನೀಡಿದ ವಿಭಾಗದ ಮುಖ್ಯಸ್ಥರಾದ ಡಾ. ಟಿ.ಪಿ.ವಿಜಯ್, ಡಾ. ಸಿ.ಆರ್.ಗೋವಿಂದರಾಜು, ಮೋಹನ್ ಕೃಷ್ಣ ರೈ, ಡಾ. ಚಿನ್ನಸ್ವಾಮಿ ಸೋಸಲೆ, ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಮತ್ತು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಉಪನಿರ್ದೇಶಕರಾದ ಡಾ. ಮೈಲಹಳ್ಳಿ ರೇವಣ್ಣ, ಪ್ರೊ.ಯಲ್ಲಪ್ಪ ಬೂತಯ್ಯ ಹಾಗೂ ವಿಧಾನ ಪರಿಷತ್ ಸದಸ್ಯರಾದ ಡಾ.ಎಲ್.ಹನುಮಂತಯ್ಯ ಅವರಿಗೆ,

ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ನೀಡಿದ ಎರಡೂ ಜಿಲ್ಲೆಗಳ ಮಾದಿಗ ಜನಾಂಗದ ವ್ಯಕ್ತಿಗಳು ಮತ್ತು ದಲಿತ ಸಂಘಟನೆಗಳ ಪದಾಧಿಕಾರಿಗಳಿಗೆ ಹಾಗೂ ಉಪಯುಕ್ತ ದಾಖಲೆಗಳನ್ನು ಒದಗಿಸಿದ ಬಿ.ಆರ್.ಶಿವಕುಮಾರ್, ಎಂ. ಚಿತ್ರಲಿಂಗಸ್ವಾಮಿ, ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ರಾಜಣ್ಣ, ದೊಗ್ಗನಾಳ್ ಅಂಜಿನಪ್ಪ, ಶಂಕರಮೂರ್ತಿ ಹಾಗೂ ಅಧ್ಯಯನಕ್ಕೆ ಪೂರಕವಾದ ಗ್ರಂಥಗಳನ್ನು ಒದಗಿಸಿದ ಗ್ರಂಥಾಲಯದ ಸಿಬ್ಬಂದಿಗೆ,

ಪ್ರಬಂಧದ ಹಸ್ತಪ್ರತಿಯನ್ನು ಗಮನಿಸಿ ಕೆಲವು ಸಲಹೆ, ಸೂಚನೆಗಳನ್ನು ನೀಡಿದ ಎಸ್.ಆರ್. ಗುರುನಾಥ್, ಜಾಜಿ ದೇವೇಂದ್ರಪ್ಪ ಹಾಗೂ ಶ್ರೀಧರರಾವ್ ಪಿಸ್ಸೆ ಅವರಿಗೆ, ಪ್ರೀತಿ ವಿಶ್ವಾಸ ತೋರಿದ ಗೆಳೆಯರಾದ ಯರಿಸ್ವಾಮಿ, ಮಾರುತಿ, ಗೋವಿಂದ, ನಿಂಗಪ್ಪ ಮುದೇನೂರು, ದಿನೇಶ್, ತಿಪ್ಪೇಸ್ವಾಮಿ, ಚಂದ್ರು, ಗ್ಯಾನಪ್ಪ, ಶಿವಕುಮಾರ್, ಎ.ವೆಂಕಟೇಶ್, ಕೆ.ಎಲ್.ರಾಜಶೇಖರ್, ಸಿದ್ದಪ್ಪ, ಕೃಷ್ಣ, ಮಹೇಶ್, ಜಯಣ್ಣ, ಉಮೇಶ್, ಮ್ಯಾಗೇರಿ, ನಾಗಭೂಷಣ, ಕರಿಸಿದ್ದನಗೌಡ, ವಾಣಿ ಶಿವರಾಂ, ಕುಮಾರಸ್ವಾಮಿ, ರಾಜೇಶ್, ವೆಂಕಟೇಶ್ ಅವರಿಗೆ,

ಪ್ರೀತಿಯಿಂದ ಬೆನ್ನುತಟ್ಟಿ ಪ್ರೋತ್ಸಾಹಿಸಿದ ದಸಂಸದ ಹಿರಿಯ ಗೆಳೆಯರಾದ ರಾಜ್ಯ ಸಂಚಾಲಕ ಎಂ.ಜಯಣ್ಣ, ಟಿ.ರಾಮು, ಹನುಮಂತಪ್ಪ, ಮಾಯಣ್ಣ, ಜಗದೀಶ್, ಕೆ.ರಾಜು ಮತ್ತು ಅನೇಕ ಸಂದರ್ಭಗಳಲ್ಲಿ ಆರ್ಥಿಕ ನೆರವು ನೀಡಿದ ಸಹೋದರ ಕರ್ನಾಟಕ ರಾಜ್ಯ ಪೌರಸೇವಾ ನೌಕರರ ಸಂಘದ ಅಧ್ಯಕ್ಷರಾದ ಜಿ.ಎಸ್.ಮಂಜುನಾಥ್ ಮತ್ತು ಭಾನುಮೂರ್ತಿ ಅವರಿಗೆ,

ನಾನು ಇಲ್ಲಿಯವರೆಗೆ ವಿದ್ಯಾಭ್ಯಾಸ ಮಾಡಲು ಕಾರಣರಾದ ನನ್ನ ತಂದೆ, ತಾಯಿಗಳಿಗೆ, ವಿದ್ಯಾಭ್ಯಾಸದ ಪ್ರತಿ ಹಂತದಲ್ಲಿ ಬೆನ್ನು ತಟ್ಟಿ ಪ್ರೋತ್ಸಾಹಿಸಿದ ನನ್ನ ಚಿಕ್ಕಪ್ಪನವರಿಗೆ, ಅಧ್ಯಯನಕ್ಕೆ ತೊಂದರೆಯಾಗಬಾರದೆಂಬ ದೃಷ್ಟಿಯಿಂದ ನನ್ನ ಮಗನ ಸಾಕುವ ಹೊಣೆ ಹೊತ್ತ ಅತ್ತೆಯವರಾದ ಉಮಾದೇವಿ, ನೀಲಮ್ಮ ಮತ್ತು ಮಾವ ಈಶ್ವರಪ್ಪ ಅವರಿಗೆ, ಒಡಹುಟ್ಟಿದ ರಘು, ವಜ್ರಮಾರುತಿ, ಕುಮಾರಿ, ಅಳಿಯರಾದ ರಾಘು, ಮಂಜು ಹಾಗೂ ಬಂಧುಗಳಿಗಿಂತಲೂ ಹೆಚ್ಚಿನ ಪ್ರೀತಿ ವಿಶ್ವಾಸ ತೋರಿದ ಉಮಾದೇವಿ ಚಿಕ್ಕಣ್ಣ, ಗೌರಮ್ಮ ತಿಪ್ಪೇರುದ್ರಪ್ಪ ಕುಟುಂಬದವರಿಗೆ ನಾನು ಆಭಾರಿಯಾಗಿದ್ದೇನೆ.

ಅಧ್ಯಯನಕ್ಕೆ ತೊಡಗಿಕೊಂಡಂದಿನಿಂದ ಅನೇಕ ಸಂದರ್ಭಗಳಲ್ಲಿ ಕೋಪಿಸಿಕೊಂಡಿದ್ದರೂ ಅದನ್ನು ಸಹಿಸಿಕೊಂಡು ಪ್ರೀತಿಯಿಂದ ನಗುನಗುತ್ತಾ ಪ್ರೋತ್ಸಾಹ ನೀಡಿದ ನನ್ನ ಬಾಳ ಸಂಗಾತಿ ವೇದಾ ಮತ್ತು ಮುದ್ದಿನ ಕಂದ ಪ್ರಜ್ವಲ್ ಇವರನ್ನು ಪ್ರೀತಿಯಿಂದ ನೆನೆಯುವೆ.

ಆರಂಭದಿಂದಲೂ ನನ್ನ ಬರವಣಿಗೆ ಗಮನಿಸಿ ಸೂಕ್ತ ಸಲಹೆಗಳನ್ನು ನೀಡುತ್ತಾ ಬಂದು ಕೊನೆಯಲ್ಲಿ ಕರಡು ಪ್ರತಿಯನ್ನು ಸಮಗ್ರವಾಗಿ ಪರಿಶೀಲಿಸಿದ ಡಾ. ಎಸ್.ವೈ. ಸೋಮಶೇಖರ್ ಅವರಿಗೆ, ಸುಂದರವಾಗಿ ಅಕ್ಷರಗಳನ್ನು ಸಂಯೋಜನೆ ಮಾಡಿದ ಎ.ಎಂ. ಕೃಪಾಶಂಕರ್ ಅವರಿಗೆ ಕೃತಜ್ಞನಾಗಿದ್ದೇನೆ.

**ಕೆ.ಆರ್.ಜೆ.ರಾಜಕುಮಾರ್**

# ಪರಿವಿಡಿ

ಭಾರತೀಯ ಸಮಾಜ ಜಾತಿ ಪ್ರಧಾನವಾದುದು. ಇಲ್ಲಿ ಸಾಮಾಜಿಕ ಸ್ಥಾನಮಾನಗಳು ನಿರ್ಧಾರವಾಗುವುದು ಆ ನೆಲೆಯಲ್ಲಿಯೇ. ಇದರಿಂದಾಗಿ ಇದು ಶ್ರೇಣೀಕೃತ ಜಾತಿವ್ಯವಸ್ಥೆಯನ್ನು ಹೊಂದಿದೆ. ಪರಿಣಾಮವಾಗಿ ಜಾತಿ ಜಾತಿಗಳ ನಡುವೆ ಮೇಲುಕೀಳೆಂಬ ಭಾವನೆಗಳು ಆಳವಾಗಿ ಬೇರೂರಿವೆ.ಇಲ್ಲಿ ಸುಮಾರು ಮೂರು ಸಾವಿರಕ್ಕೂ ಹೆಚ್ಚು ಜಾತಿಗಳು ಅಸ್ತಿತ್ವದಲ್ಲಿದ್ದು, ಪ್ರತಿಯೊಂದು ಜಾತಿ ಪ್ರತ್ಯೇಕತೆಯಿಂದ ಕೂಡಿ ತನ್ನದೇ ಸಂಸ್ಕೃತಿಯೊಂದನ್ನು ಹೊಂದಿವೆ. ವಿವಿಧ ಸಂಸ್ಕೃತಿಗಳ ಬೀಡಾಗಿರುವ ಭಾರತೀಯ ಸಮಾಜ ಬಹುಸಂಸ್ಕೃತಿಯದೂ ಹೌದು. ಹೀಗೆ ಬಹುಸಂಸ್ಕೃತಿಗಳನ್ನೂ ಒಳಗೊಂಡಿರುವ ಈ ಸಮಾಜವನ್ನು ಎರಡು ಪ್ರಧಾನ ಸಂಸ್ಕೃತಿಗಳ ನೆಲೆಯಲ್ಲಿ ಗುರುತಿಸಬಹುದು. ಒಂದು ಆರ್ಯ ಸಂಸ್ಕೃತಿಯಾದರೆ, ಮತ್ತೊಂದು ದ್ರಾವಿಡ ಸಂಸ್ಕೃತಿ. ಮೊದಲನೆಯದು ಪರಕೀಯ ಸಂಸ್ಕೃತಿ, ಎರಡನೆಯದು ಈ ನೆಲದ ಮೂಲನಿವಾಸಿಗಳ ಸಂಸ್ಕೃತಿ. ಈ ಎರಡು ಸಂಸ್ಕೃತಿಗಳ ಜನಸಮುದಾಯಗಳ ನಡುವೆ ಘರ್ಷಣೆ ನಡೆದು ಆರ್ಯರು ಜಯಗಳಿಸಿದ ಪರಿಣಾಮವಾಗಿ ಯಜಮಾನ್ಯ ಸಂಸ್ಕೃತಿ ಈ ಸಮಾಜದ ಮೇಲೆ ಗಾಢವಾದ ಪ್ರಭಾವ ಬೀರಲು ಅವಕಾಶವಾಯಿತು. ಆದರೆ ದ್ರಾವಿಡ ಪರಂಪರೆಯನ್ನು ನಾಶಮಾಡಲಾಗಲಿಲ್ಲ. ಕೆಳಹಂತದ ಜನರು ತಮ್ಮ ಸಂಸ್ಕೃತಿಯ ಆಚಾರ ವಿಚಾರ, ನಂಬಿಕೆ, ಸಂಪ್ರದಾಯ ಮುಂತಾದವುಗಳನ್ನು ಮುಂದುವರಿಸಿದ್ದು ಕಾರಣವಾಗಿದೆ. ಆದ್ದರಿಂದ ಇವರನ್ನೂ ದ್ರಾವಿಡ ಸಂಸ್ಕೃತಿಯ ರಕ್ಷಕರೆಂದು ಕರೆದರೆ ತಪ್ಪಾಗಲಾರದು.

ದ್ರಾವಿಡ ಸಂಸ್ಕೃತಿಯ ಮೂಲಸತ್ವವನ್ನು ಉಳಿಸಿಬೆಳೆಸಿಕೊಂಡು ಬಂದಿರುವ ಕೆಳಜಾತಿಗಳಲ್ಲಿ ಮಾದಿಗ ಜಾತಿಯೂ ಒಂದು. ಇದು ಶ್ರೇಣೀಕೃತ ಜಾತಿವ್ಯವಸ್ಥೆಯಿಂದ ಕೂಡಿರುವ ಈ ಸಮಾಜದಲ್ಲಿ ಅತ್ಯಂತ ಕೊನೆಯ ಘಟಕವಾದ ಅಸ್ಪೃಶ್ಯವರ್ಗದಲ್ಲಿ ಕಂಡುಬರುವ ಒಂದು ಜಾತಿ. ಪರಂಪರೆಯಲ್ಲಿ ಯಾವುದೇ ಸಾಮಾಜಿಕ ಸ್ಥಾನಮಾನಗಳನ್ನು ಇದಕ್ಕೆ ನೀಡಲಾಗಿಲ್ಲ. ಕೀಳುಜಾತಿಯೆಂದು ಪರಿಗಣಿಸಿ ಸಮಾಜದ ಕೊನೆಯ ಸ್ಥಾನವನ್ನು ನೀಡುತ್ತಾ ಬರಲಾಗಿದೆ. ಸಾಮಾಜಿಕ ಸ್ವಾತಂತ್ರ್ಯವನ್ನು ಕಳೆದುಕೊಂಡಿದ್ದರಿಂದ ಮಾದಿಗರು ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯವಾಗಿ ಅತ್ಯಂತ ಹಿಂದುಳಿಯಲು ಕಾರಣವಾಯಿತು. ಸಾವಿರಾರು ವರುಷಗಳಿಂದ ಎಲ್ಲಾ ಕ್ಷೇತ್ರದಲ್ಲಿ ಹಿಂದುಳಿಯುತ್ತಾ ಬಂದ ಈ ಜನಾಂಗವನ್ನು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಅಂಗೀಕರಿಸಿದ ಹೊಸ ಸಂವಿಧಾನವು ಕೆಲವೊಂದು ವಿಶೇಷ ಕಾನೂನುಗಳಿಂದ ರಕ್ಷಿಸಲು ಪ್ರಯತ್ನಿಸಿತು. ಅವರ ಅಭಿವೃದ್ಧಿಗೆ ಸಂಬಂಧಿಸಿದಂತೆ ಸರ್ಕಾರಗಳು ಅನೇಕ ಯೋಜನೆಗಳನ್ನು ಜಾರಿಗೊಳಿಸತೊಡಗಿದವು. ಇಂಥಾ ಯೋಜನೆಗಳು ಈ ಸಮುದಾಯವನ್ನು ಎಷ್ಟರಮಟ್ಟಿಗೆ ಮುಂದುವರಿಯಲು ಅವಕಾಶ ಮಾಡಿಕೊಟ್ಟಿವೆಂಬುದನ್ನು ನಿಖರವಾಗಿ

ತಿಳಿಯುವ ಹಾಗೂ ಚರ್ಚಿಸುವ ಅಗತ್ಯವಿದೆ. ಮಾದಿಗರ ಹಿಂದಿನ ಮತ್ತು ಪ್ರಸ್ತುತ ಸ್ಥಿತಿಗತಿಗಳನ್ನು ವೈಜ್ಞಾನಿಕ ನೆಲೆಯಲ್ಲಿ ಅಧ್ಯಯನ ಮಾಡುವ ಜರೂರು ಮೊದಲಿಗಿಂತಲೂ ಈಗ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಮಾದಿಗ ಸಮುದಾಯದ ವಿವಿಧ ಮುಖಗಳನ್ನು, ಸ್ಥಿತಿ,ಗತಿಗಳನ್ನು ಇಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

ಭಾರತದಾದ್ಯಂತ ಮಾದಿಗರು ನೆಲೆಸಿರುವುದು ಕಂಡುಬರುತ್ತದೆ. ಇವರು ವೃತ್ತಿ, ಪ್ರದೇಶ ಮತ್ತು ಭಾಷೆಗಳ ನೆಲೆಯಲ್ಲಿ ವಿವಿಧ ಹೆಸರುಗಳನ್ನು ಹೊಂದಿದ್ದಾರೆ. ವೃತ್ತಿಯ ನೆಲೆಯಲ್ಲಿ ಚಮ್ಮಾರ, ಸಮಗಾರ, ಮೋಚಿ, ಮಾದಿಗ, ಮಾದಾರ ಮುಂತಾದ ಹೆಸರುಗಳಿಂದ ಇವರನ್ನು ಗುರುತಿಸಿದರೆ, ಪ್ರಾದೇಶಿಕ ನೆಲೆಯಲ್ಲಿ ದಕ್ಷಿಣ ಭಾರತದಲ್ಲಿ ಮಹಾರಾಷ್ಟ್ರದಲ್ಲಿ 'ಮಾಂಗ್' ತಮಿಳುನಾಡಿನಲ್ಲಿ ಚಕ್ಕಲಿಯನ್, ಆಂಧ್ರದಲ್ಲಿ ಮಾದಿಗ ಎಂತಲೂ. ಕರ್ನಾಟಕದಲ್ಲಿ ಆದಿ ಕರ್ನಾಟಕ, ಆದಿ ದ್ರಾವಿಡ, ಮಾದಿಗ, ಮಾದಾರ ಹೆಸರುಗಳಿಂದ ಇವರನ್ನು ಗುರುತಿಸಲಾಗುತ್ತಿದೆ. ಭಾಷಿಕ ನೆಲೆಯಲ್ಲಿ ಕನ್ನಡ ಮಾದಿಗ, ತೆಲುಗು ಮಾದಿಗ, ತಮಿಳು ಮಾದಿಗರೆಂದು ಕರೆಯುತ್ತಾರೆ. ಈ ಹೆಸರುಗಳಲ್ಲದೇ, ಹರಿಜನ, ಆದಿಜಾಂಬವ, ಜಾಂಬವಲು ಮುಂತಾದ ಹೆಸರುಗಳೂ ಉಂಟು.

ಸಾಮಾಜಿಕವಾಗಿ ಅತ್ಯಂತ ಆಳಕ್ಕೆ ತಳ್ಳಲ್ಪಟ್ಟಿರುವ ಮಾದಿಗರು ಯಾವುದೇ ಸ್ವಾತಂತ್ರ್ಯವಿಲ್ಲದೆ ಕುಗ್ಗಿ ಹೋಗಿದ್ದಾರೆ. ಇವರು ಈ ನೆಲದ ಮೂಲ ನಿವಾಸಿಗಳಾಗಿದ್ದರೂ ಇವರನ್ನು ಚರಿತ್ರೆಯಲ್ಲಿ ಸರಿಯಾಗಿ ದಾಖಲಿಸದಿರುವುದು ಸ್ಪಷ್ಟ. ಚರಿತ್ರೆ ರಚನಾ ಕಾರ್ಯ ಆರಂಭಗೊಂಡ ಕಾಲದಿಂದ ವಸಾಹತುಶಾಹಿ ಕಾಲಘಟ್ಟದವರೆಗೆ ರಚನೆಗೊಂಡ ಅನೇಕ ಕೃತಿಗಳು ರಾಜರ ಆಳ್ವಿಕೆ, ದಂಡೆಯಾತ್ರೆ ಮತ್ತು ಧಾರ್ಮಿಕ ಅಂಶಗಳನ್ನು ಮುಖ್ಯವಾಗಿ ಗಮನದಲ್ಲಿಟ್ಟುಕೊಂಡು ರಚನೆಯಾದವು. ಇವುಗಳಲ್ಲಿ ರಾಜರ ಆಡಳಿತ ಮತ್ತು ಅಂದಿನ ಧಾರ್ಮಿಕ ಸ್ಥಿತಿಗಳ ಬಗ್ಗೆ ಹೆಚ್ಚು ಮಾಹಿತಿ ದೊರಕುತ್ತದೆ. ಕೆಲವು ಕೃತಿಗಳಲ್ಲಿ ಮಾದಿಗರನ್ನು ಕೆಲವೇ ಪದ ಇಲ್ಲವೇ ಸಾಲುಗಳಲ್ಲಿ ಉಲ್ಲೇಖಗೊಂಡಿರುವುದು ಬಿಟ್ಟರೆ ಇವರ ಬಗ್ಗೆ ಹೆಚ್ಚು ಮಾಹಿತಿ ದೊರೆಯುವುದಿಲ್ಲ. ಆದರೆ ಇಂದು ಚರಿತ್ರೆಯ ದೃಷ್ಟಿ ಬದಲಾಗಿದೆ. ಪ್ರತಿಯೊಂದು ಜನಾಂಗದ ಸಂಸ್ಕೃತಿಯನ್ನು ಗುರುತಿಸುವ ಕಾರ್ಯ ಆರಂಭಗೊಂಡಿದೆ. ''ಸಂಸ್ಕೃತಿಯ ವಿಕಾಸದ ದೃಷ್ಟಿಯಿಂದ ಇತಿಹಾಸದತ್ತ ನೋಡುವ ಪ್ರವೃತ್ತಿ ಈಗ ಹೆಚ್ಚುತ್ತಲಿದೆ. ಮೊದಲು ಒಮ್ಮೆ ಇತಿಹಾಸವೆಂದರೆ ಕೇವಲ ರಾಜವಂಶಗಳ ಚರಿತ್ರೆ ಎಂಬ ಕಲ್ಪನೆ ರೂಢಿಯಲ್ಲಿತ್ತು.ಆದರೆ ಈಗ ಯಾವುದೊಂದು ಕಟ್ಟುನಿಟ್ಟು ಜನಾಂಗದ ಸಮಗ್ರ ಜೀವನ ಚರಿತ್ರೆಯೇ ಇತಿಹಾಸವಾಗಬಲ್ಲದು" (ಮೈಸೂರು ರಾಜ್ಯ ಪು.೧)ಈ ಹಿನ್ನೆಲೆಯಲ್ಲಿ ಮಾದಿಗರ ಸಮಗ್ರ ಜೀವನವನ್ನು ಪರಿಶೀಲಿಸಿ ಅವರ ಚರಿತ್ರೆಯೊಂದನ್ನು ಕಟ್ಟಿಕೊಡುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

ವಸಾಹತುಶಾಹಿ ಕಾಲಘಟ್ಟದಲ್ಲಿ ಪಾಶ್ಚಾತ್ಯರ ಸಂಪರ್ಕ ಮತ್ತು ಆಧುನಿಕತೆಗಳು ಹೊಸ ಚಿಂತನೆಗೆ ಅವಕಾಶ ಮಾಡಿಕೊಟ್ಟವು. ಈ ಹಿನ್ನೆಲೆಯಲ್ಲಿ ಭಾರತೀಯ ಸಮಾಜವನ್ನು ವಿವಿಧ ವಿಧಾನ ದೃಷ್ಟಿಕೋನಗಳಿಂದ ಅಧ್ಯಯನ ಮಾಡಲು ಉತ್ಸಾಹ ಮೂಡಿತು. "ಭಾರತೀಯ ರಚನಾ ಶಾಸ್ತ್ರದ ಸಂದರ್ಭದಲ್ಲಿ ನಾವು ಎರಡು ಬಗೆಯ ಅಧ್ಯಯನ ಕ್ರಮಗಳನ್ನು ಗಮನಿಸಬಹುದಾಗಿದೆ. ಒಂದನೆಯದು ಸ್ಥೂಲ ಚರಿತ್ರೆಯಾದರೆ ಎರಡನೆಯದು ಸೂಕ್ಷ್ಮಸ್ತರದ ಚರಿತ್ರೆಯಾಗಿದೆ. ಸ್ಥೂಲ ಚರಿತ್ರೆಯ ಅಧ್ಯಯನ ಕ್ರಮವೆಂದರೆ ದೊಡ್ಡ ಸಾಮ್ರಾಜ್ಯದ ಹಾಗೂ ವಿಸ್ತಾರವಾದ ರಾಜ್ಯಗಳ ಚರಿತ್ರೆಯ ಅಧ್ಯಯನ ಕ್ರಮವಾಗಿರುತ್ತದೆ. ಇಂತಹ ಅಧ್ಯಯನ ಕ್ರಮವು ೧೮ನೇ ಶತಮಾನದಿಂದಲೂ ನಡೆಯುತ್ತಾ ಬಂದಿದೆ. ಆದರೆ ಸೂಕ್ಷ್ಮಸ್ತರದ ಅಧ್ಯಯನ ಇದಕ್ಕಿಂತ ಭಿನ್ನವಾದುದು. ಒಂದು ಸಂಸ್ಕೃತಿಯ ಬೆಳವಣಿಗೆಯ ದೃಷ್ಟಿಯಿಂದ ಇಂತಹ ಸೂಕ್ಷ್ಮಸ್ತರದ ರಾಜಕೀಯ, ಸಾಮಾಜಿಕ, ಆರ್ಥಿಕ ಸಂಘಟನೆಗಳು ಪ್ರಮುಖ ಪಾತ್ರವಹಿಸುತ್ತವೆ. ಈ ರೀತಿಯ ಸಬಲ್ಟರ್ನ್ ಅಧ್ಯಯನಗಳಿಂದ ಸಾಮಾನ್ಯ ಜನರ ಬದುಕು ಹಾಗೂ ಪ್ರಾದೇಶಿಕ ಬೆಳವಣಿಗೆಯನ್ನು ಕುರಿತು ಸಂಶೋಧನೆ ಮಾಡುವುದು ಇಂದಿನ ಅವಶ್ಯಕತೆಯಾಗಿದೆ" (ಬಸವರಾಜಪ್ಪ ಎಚ್.ಈ., ಪು.೧೯)ಈ ಕಾರಣದಿಂದಾಗಿ ಅಲಕ್ಷಿತರ ಚರಿತ್ರೆಯನ್ನು ರೂಪಿಸುವ ನಿಟ್ಟಿನಲ್ಲಿ ಮಾದಿಗ ಸಮುದಾಯ ಕುರಿತ ಈ ಅಧ್ಯಯನ ಹೆಚ್ಚು ಪ್ರಸ್ತುತವಾಗಿದೆಯನ್ನಬಹುದು.

ಮಾದಿಗರನ್ನು ಕುರಿತು ಅಧ್ಯಯನ ಆರಂಭಗೊಂಡುದು ೧೮ನೇ ಶತಮಾನದಲ್ಲಿ. ಈ ಸಮುದಾಯ ವನ್ನು ಅಧ್ಯಯನಕ್ಕೊಳಪಡಿಸಿದ ಮೊದಲಿಗರೆಂದರೆ ಇ.ಥರಸ್ಟನ್. ಇವರು ತಮ್ಮ 'ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ' ದಲ್ಲಿ ಮಾದಿಗರನ್ನು ಕುರಿತು ಸಾಕಷ್ಟು ಮಾಹಿತಿ ಒದಗಿಸಿದ್ದಾರೆ. ಆನಂತರದಲ್ಲಿ ಪ್ರಕಟಗೊಂಡ ಎಲ್.ಕೆ.ಎ.ಐಯ್ಯರ್ ಅವರ 'ದ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್' ಗ್ರಂಥದಲ್ಲಿಯೂ ಸಹ ಇವರ ಕುರಿತು ಮಾಹಿತಿ ದೊರೆಯುತ್ತದೆ. ಇವೆರಡು ಗ್ರಂಥಗಳು ಮಾದಿಗರ ಕುಟುಂಬ, ಆಹಾರ, ಭಾಷೆ, ಮದುವೆ, ಸಂಪ್ರದಾಯ ಮುಂತಾದವುಗಳ ಬಗೆಗೆ ತಕ್ಕಮಟ್ಟಿನ ವಿವರ ಒದಗಿಸುತ್ತವೆ. ಹಾಗೂ ಅವರ ಸಂಸ್ಕೃತಿಯನ್ನು ದಾಖಲಿಸುತ್ತವೆ. ಕೆ.ಎಸ್.ಸಿಂಗ್ ಅವರ 'ಇಂಡಿಯಾಸ್ ಕಮ್ಯುನಿಟೀಸ್' ಸಹಾ ಮಾದಿಗ ಮತ್ತು ಸಂಬಂಧಿತ ಜಾತಿಗಳ ಬಗ್ಗೆ ಸಾಕಷ್ಟು ಮಾಹಿತಿ ನೀಡುವ ಇನ್ನೊಂದು ಪ್ರಮುಖ ಗ್ರಂಥ.

ಕರ್ನಾಟಕದ ಸಂದರ್ಭದಲ್ಲಿ ಮಾದಿಗರನ್ನು ಕುರಿತ ಯಾವುದೇ ಪ್ರತ್ಯೇಕ ಅಧ್ಯಯನ ಇದುವರೆಗೂ ನಡೆದಿಲ್ಲ. ಆದರೆ ಇತ್ತೀಚೆಗೆ ೯೦ರ ದಶಕದಲ್ಲಿ ಇವರನ್ನು ಕುರಿತು ಕೆಲವು ಅಧ್ಯಯನಗಳು ನಡೆದಿರು ವುದು ಕಂಡು ಬರುತ್ತದೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಯನ ಕೈಗೊಂಡ ಡಾ.ಮೈಲಹಳ್ಳಿ ರೇವಣ್ಣನವರ 'ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು' ಕೃತಿ ಇಲ್ಲಿ ಪ್ರಸ್ತಾಪಿಸಲರ್ಹವಾದುದು. ಇದು ಮಾದಿಗರನ್ನು ಕುರಿತ ಹೆಚ್ಚಿನ ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟಿದೆ.

ಈ ಅಧ್ಯಯನದ ಮೂಲಕ ಡಾ.ರೇವಣ್ಣನವರು ಚಿತ್ರದುರ್ಗ ಪ್ರದೇಶದ ಮಾದಿಗರಲ್ಲಿ ಅಡಗಿರುವ ಜಾನಪದ ಕಾವ್ಯ ಸಂಗ್ರಹ ಸಾಮರ್ಥ್ಯವನ್ನು ಗುರುತಿಸಿಕೊಟ್ಟಿದ್ದಾರೆ. ಜಾನಪದ ಕಾವ್ಯಗಳಿಗೆ ವಿಶೇಷವಾಗಿ ಒತ್ತುಕೊಟ್ಟಿದ್ದರೂ ಮಾದಿಗರ ಸಂಸ್ಕೃತಿಯಲ್ಲಿ ಅಡಕವಾಗಿರುವ ಭಾಷೆ, ಆಹಾರ ಪದ್ಧತಿ, ನಂಬಿಕೆ, ಮದುವೆ, ಸಂಪ್ರದಾಯ ಮುಂತಾದವುಗಳ ಬಗ್ಗೆಯೂ ವಿವರಿಸಿದ್ದಾರೆ. ಮಾದಿಗರನ್ನು ಕುರಿತು ಅಧ್ಯಯನ ಮಾಡುವವರಿಗೆ ಇದೊಂದು ಮುಖ್ಯ ಆಕರ. ಹಾಗೆಯೇ ಮಾದಿಗರು ತಮ್ಮನ್ನು ಕರೆದುಕೊಳ್ಳುವ ಹಿನ್ನೆಲೆಯಲ್ಲಿ ಡಾ.ಪಾಂಡುರಂಗ ಬಾಬು ಅವರು ಭಾಷಾ ನೆಲೆಯಲ್ಲಿ 'ಆದಿಜಾಂಬವರ ಕನ್ನಡ' ಎಂಬ ವಿಷಯದ ಮೇಲೆ ವಿಶೇಷವಾಗಿ ಅಧ್ಯಯನ ಮಾಡಿದ್ದಾರೆ. ಈ ಅಧ್ಯಯನದಲ್ಲಿ ಮಾದಿಗರ ಸಾಮಾಜಿಕ, ಆರ್ಥಿಕ,ಮುಂತಾದ ಅಂಶಗಳ ಮೇಲೆ ಕೆಲವು ನೋಟಗಳನ್ನು ಕಾಣಬಹುದು. ಕನ್ನಡ ಸಾಹಿತ್ಯ ಅಕಾಡಮಿಯವರು ಉಪಸಂಸ್ಕೃತಿಯ ಮಾಲೆಯಲ್ಲಿ ಹೊರತಂದಿರುವ ಕೊಟಗಾನಹಳ್ಳಿ ರಾಮಯ್ಯನವರ 'ಸಿಂದ್ ಮಾದಿಗರ ಸಂಸ್ಕೃತಿ' ಪುಸ್ತಕ ಇಲ್ಲಿ ಪರಿಶೀಲಿಸಬೇಕಾದ ಇನ್ನೊಂದು ಆಕರ. ಇಲ್ಲಿ ಮಾದಿಗರ ಒಂದು ಪಂಗಡವಾದ ಸಿಂದ್ ಮಾದಿಗರನ್ನು ವಿಶೇಷವಾಗಿ ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಲೇಖಕರು ಈ ಕೃತಿಯಲ್ಲಿ ಸಿಂದ್ ಮಾದಿಗರು ಮಾದಿಗರೊಂದಿಗೆ ಹೊಂದಿರುವ ಪೌರಾಣಿಕ ಮತ್ತು ಚಾರಿತ್ರಿಕ ಸಂಬಂಧಗಳ ಬಗ್ಗೆ ಸಾಕಷ್ಟು ವಿವರಗಳು ದೊರೆಯುತ್ತವೆ. ಮಾದಿಗ ಮತ್ತು ಹೊಲೆಯರ ನಡುವೆ ಇರುವ ಎಡ-ಬಲ ಭಿನ್ನತೆಯಲ್ಲಿ ನಡೆದ ಸಾಂಸ್ಕೃತಿಕ ಸಂಘರ್ಷದ ಬಗ್ಗೆ ವಿಪುಲವಾದ ಮಾಹಿತಿಯನ್ನು ಅವರು ಒದಗಿಸಿದ್ದಾರೆ. ಸಿಂಧ್ ಮಾದಿಗರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ,ರಾಜಕೀಯ ಹಾಗೂ ಸಾಂಸ್ಕೃತಿಕ ಅಂಶಗಳ ಬಗ್ಗೆ ಸಾಕಷ್ಟು ಚರ್ಚೆಯನ್ನು ಇಲ್ಲಿ ನಡೆಸಲಾಗಿದೆ. ಇತ್ತೀಚೆಗೆ ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಡಾ.ಬುದ್ಧಕಾಶಪ್ಪನವರು 'ಹೈದರಾಬಾದ್ ಕರ್ನಾಟಕದ ಮಾದಿಗರ ಸಾಂಸ್ಕೃತಿಕ ಅಧ್ಯಯನ' ಕೈಗೊಂಡಿರುವುದುಂಟು. ಆದರೆ ಚಾರಿತ್ರಿಕ ನೆಲೆಯಲ್ಲಿ ನಡೆಸಲಾದ ಅಧ್ಯಯನಗಳು ಕಂಡು ಬರುವುದಿಲ್ಲವೆಂಬುದು ಗಮನೀಯ ಅಂಶವಾಗುತ್ತದೆ. ಈ ದೃಷ್ಟಿಯಿಂದ ಪ್ರಸ್ತುತ ಅಧ್ಯಯನವು ಚಾರಿತ್ರಿಕ ನೆಲೆಯ ಮೊದಲ ಅಧ್ಯಯನವೆನ್ನುವುದರಲ್ಲಿ ಸಂದೇಹವಿಲ್ಲ.

ಪ್ರತಿಯೊಂದು ಅಧ್ಯಯನವೂ ತನ್ನ ವ್ಯಾಪ್ತಿಯನ್ನು ಮೊದಲೇ ಗುರುತಿಸಿಕೊಳ್ಳಬೇಕಾಗುತ್ತದೆ. ಇದರಿಂದ ಪೂರ್ಣ ಪ್ರಮಾಣದ ಅಧ್ಯಯನ ಕೈಗೊಳ್ಳಲು ಸಾಧ್ಯವಾಗುತ್ತದೆ. ಅಧ್ಯಯನ ವಸ್ತು ವಿಷಯಕ್ಕೆ ಇರುವ ಮಹತ್ವದ ಹಿನ್ನೆಲೆಯಲ್ಲಿ ಅದರ ವ್ಯಾಪ್ತಿಯನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ಈ ಕಾರಣದಿಂದಾಗಿ, ಪರಿಪೂರ್ಣ ಮತ್ತು ಸಮಗ್ರ ಅಧ್ಯಯನ ಕೈಗೊಳ್ಳಬೇಕೆಂಬ ದೃಷ್ಟಿಯಿಂದ ಪ್ರಸ್ತುತ ಅಧ್ಯಯನವು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಪ್ರದೇಶದಲ್ಲಿ ನೆಲೆಸಿರುವ ಮಾದಿಗರಿಗೆ ಮಾತ್ರವೇ ಸೀಮಿತವಾಗಿದೆ. ಕೆಲವು ಅಧ್ಯಾಯಗಳಲ್ಲಿ ಈ ಪ್ರದೇಶಗಳ ವ್ಯಾಪ್ತಿಯನ್ನು ಮೀರಿರುವ ಸಾಧ್ಯತೆಗಳಿದ್ದರೂ ಅವು ಅಧ್ಯಯನ ವಿಷಯಕ್ಕೆ ಪೂರಕವಾಗಿವೆಯೆಂಬುದನ್ನು ಗಮನಿಸಬೇಕು.

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಮಾದಿಗರನ್ನು ಕುರಿತು ಚಾರಿತ್ರಿಕ ನೆಲೆಯಲ್ಲಿ ಈ ಅಧ್ಯಯನ ಕೈಗೊಳ್ಳಲಾಗಿದೆಯೆಂಬುದನ್ನು ಇಲ್ಲಿ ಒತ್ತಿ ಹೇಳಬೇಕು.

ಸದ್ಯದ ಸವಾಲುಗಳನ್ನು ಎದುರಿಸುವಲ್ಲಿ ಚರಿತ್ರೆಯ ಪಾತ್ರ ಪ್ರಮುಖವಾದದು. ಜಾಗತೀಕರಣ, ಖಾಸಗೀಕರಣ, ಉದಾರೀಕರಣದ ಪರಿಣಾಮವಾಗಿ ಸಂದಿಗ್ಧತೆಯ ಸುಳಿಯಲ್ಲಿ ಸಿಲುಕಿರುವ ಕೆಳಜಾತಿಗಳು ಹಿಂದೆಂದಿಗಿಂತಲೂ ಅಪಾಯಕಾರ ಸನ್ನಿವೇಶವನ್ನು ಎದುರಿಸುತ್ತಿವೆ. ಪ್ರಮುಖ ಅಸ್ಪೃಶ್ಯ ಜಾತಿಗೆ ಸೇರಿರುವ ಮಾದಿಗರ ಸ್ಥಿತಿ-ಗತಿಯಂತೂ ತೀರಾ ಶೋಚನೀಯ ಸ್ಥಿತಿ ತಲುಪುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಮಾದಿಗರನ್ನು ಕುರಿತು ಈವರೆಗೆ ನಡೆದ ಅಧ್ಯಯನಗಳನ್ನು ಮಾತ್ರವಲ್ಲದೆ, ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಂದರ್ಶಿಸಲಾದ ವ್ಯಕ್ತಿಗಳು ಮತ್ತು ಗ್ರಾಮಗಳು ಹಾಗೂ ಸರ್ಕಾರಿ ದಾಖಲೆಗಳ ನೆರವನ್ನು ಪಡೆಯಲಾಗಿದೆ. ಮುಖ್ಯವಾಗಿ ವಿವಿಧ ಕ್ಷೇತ್ರಗಳಲ್ಲಿ ತೊಡಗಿಕೊಂಡಿರುವ ಅನೇಕ ವ್ಯಕ್ತಿಗಳನ್ನು ಸಂದರ್ಶಿಸಿ, ಸ್ವಾತಂತ್ರ್ಯ ಚಳವಳಿ, ದಲಿತ ಚಳವಳಿ, ಪ್ರತ್ಯೇಕ ಮೀಸಲಾತಿ ಚಳವಳಿಯಲ್ಲಿ ಭಾಗವಹಿಸಿರುವ ಮಾದಿಗ ಜನಾಂಗದ ಪಾತ್ರವನ್ನು ಕುರಿತು ಮಾಹಿತಿ ಸಂಗ್ರಹಿಸಲಾಗಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಎಲ್ಲಾ ತಾಲ್ಲೂಕುಗಳಲ್ಲಿ ಸಂಚರಿಸಿದ್ದು, ವಿಶೇಷವಾಗಿ ಕೆಲವು ಗ್ರಾಮಗಳನ್ನು ಸಂದರ್ಶಿಸಿ ಅಲ್ಲಿಯ ಮಾದಿಗರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯ ಸ್ಥಿತಿಗತಿಗಳ ಬಗ್ಗೆ ಮಾಹಿತಿ ಪಡೆದುಕೊಳ್ಳಲಾಗಿದೆ. ಜೊತೆಗೆ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮಾದಿಗರು ನಿರ್ವಹಿಸಿದ ಪಾತ್ರವನ್ನು ಕುರಿತು ಮಾಹಿತಿ ಕಲೆ ಹಾಕಿ ಇಲ್ಲಿ ವಿಶ್ಲೇಷಿಸಲಾಗಿದೆ.

ಚರಿತ್ರೆಯ ಸಂದರ್ಭದಲ್ಲಿ ಯಾವುದೇ ಸಮುದಾಯದ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಪರಿಸ್ಥಿತಿಗಳನ್ನು ಮಾತ್ರವಲ್ಲದೆ, ಸಾಂಸ್ಕೃತಿಕ ಚಟುವಟಿಕೆಗಳನ್ನು ಕುರಿತು ಸಮಗ್ರ ಅಧ್ಯಯನ ನಡೆಸಬೇಕಾಗುತ್ತದೆ. ಆದ್ದರಿಂದ ಮಾದಿಗರನ್ನು ಎಲ್ಲಾ ದೃಷ್ಟಿಕೋನಗಳಿಂದಲೂ ಅಧ್ಯಯನ ಮಾಡುವ ಪ್ರಯತ್ನ ಈ ಅಧ್ಯಯನದ್ದಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ವಿಭಾಗಿಸಲಾಗಿರುವ ಅಧ್ಯಾಯಗಳು ವಿಷಯ ನಿರೂಪಣೆಯ ದೃಷ್ಟಿಯಿಂದ ಸಹಕಾರಿಯಾಗಿವೆ.ಮೊದಲನೆಯ ಅಧ್ಯಾಯದಲ್ಲಿ ಮಾದಿಗರನ್ನು ಕುರಿತ ಅಧ್ಯಯನದ ಉದ್ದೇಶವನ್ನು ತಿಳಿಸಲೆತ್ನಿಸಿದೆ. ಅಧ್ಯಯನ ನೆಲೆ, ಅಧ್ಯಯನದ ವಿಧಾನ, ಅಧ್ಯಾಯನ ವ್ಯಾಪ್ತಿ ಮುಂತಾದುವನ್ನು ಸೂಚಿಸಿದೆ.

ಎರಡನೆಯ ಅಧ್ಯಾಯದಲ್ಲಿ 'ಮಾದಿಗ' ಪದದ ಉಗಮ ಮತ್ತು ಮಾದಿಗರು ಹೊಂದಿರುವ ಹೆಸರುಗಳ ಚಾರಿತ್ರಿಕ ಸಂದರ್ಭಗಳನ್ನು ವಿಶ್ಲೇಷಿಸಿರುವುದಲ್ಲದೆ ಇವರ ಪೌರಾಣಿಕ ಮತ್ತು ಚಾರಿತ್ರಿಕ

ಮಾದಿಗರು ಸೈನಿಕರು, ಮುಖಂಡರು, ಧಾರ್ಮಿಕ ವ್ಯಕ್ತಿಗಳ ಬಗೆಗಿನ ಅಂಶಗಳನ್ನು ಸಾಹಿತ್ಯ, ಶಾಸನ, ಐತಿಹ್ಯಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಮೂರನೇ ಅಧ್ಯಾಯದಲ್ಲಿ, ಮಾದಿಗರ ಸಾಮಾಜಿಕ ಸ್ಥಿತಿ-ಗತಿಗಳನ್ನು ಕುರಿತು ಚರ್ಚಿಸಲಾಗಿದೆ. ಪ್ರತಿಯೊಂದು ಜನಾಂಗವೂ ತನ್ನದೇ ಆಚಾರ-ವಿಚಾರಗಳಲ್ಲಿ ಪ್ರತ್ಯೇಕತೆಯನ್ನು ಹೊಂದಿದ್ದು, ಪ್ರತ್ಯೇಕ ಸಂಸ್ಕೃತಿಯನ್ನೂ ಮೈಗೂಡಿಸಿಕೊಂಡಿರುತ್ತದೆ. ಇದೇ ರೀತಿಯಲ್ಲಿ ಮಾದಿಗರ ಸಂಸ್ಕೃತಿಯೊಂದು ಅಸ್ತಿತ್ವದಲ್ಲಿರುವುದು ಕಂಡುಬರುತ್ತದೆ. ಅವರ ಸಂಸ್ಕೃತಿಯನ್ನು ಸಮಗ್ರವಾಗಿ ತಿಳಿಯುವ ನಿಟ್ಟಿನಲ್ಲಿ ಅವರ ಜೀವನ ವಿಧಾನ, ಕೌಟುಂಬಿಕ ರಚನೆ, ಆಹಾರ, ಭಾಷೆ, ಉಡುಗೆ-ತೊಡುಗೆ, ಮದುವೆ, ಸಂಪ್ರದಾಯ ಮುಂತಾದ ಅಂಶಗಳನ್ನು ವಿವರಿಸಲಾಗಿದೆ. ಪ್ರತ್ಯೇಕ ಸಂಸ್ಕೃತಿಯೊಂದನ್ನು ಮಾದಿಗರು ಹೊಂದಿದ್ದರೂ ಇತರೆ ಜಾತಿಗಳೊಂದಿಗೆ ಭಾವನಾತ್ಮಕ ಹಾಗೂ ಸಾಂಸ್ಕೃತಿಕ ಸಂಬಂಧವನ್ನು ಹೊಂದಿರುವದು ಸ್ವಾಭಾವಿಕ. ಈ ಹಿನ್ನೆಲೆಯಲ್ಲಿ ಮಾದಿಗರು ಇತರೆ ಜಾತಿಗಳೊಂದಿಗೆ ಸಾಮಾಜಿಕ ಸಂಬಂಧವನ್ನು ಚರ್ಚಿಸಲಾಗಿದೆ. ಶ್ರೇಣಿಕೃತ ಜಾತಿ ವ್ಯವಸ್ಥೆಯಿಂದಾಗಿ ಅತ್ಯಂತ ಕೆಳಹಂತಕ್ಕೆ ತಳ್ಳಲ್ಪಟ್ಟಿರುವ ಮಾದಿಗರು ವಿವಿಧ ರೀತಿಯ ಶೋಷಣೆಗೆ ಒಳಗಾಗಿದ್ದಾರೆ. ಅಸ್ಪೃಶ್ಯತೆ, ಬಸವಿ ಪದ್ಧತಿ, ಜೀತಪದ್ಧತಿ, ಮುಂತಾದ ಸಾಮಾಜಿಕ ಪಿಡುಗುಗಳಿಂದ ತತ್ತರಿಸಿದ್ದಾರೆ. ಅಂತಹ ಅನಿಷ್ಟಗಳಿಂದ ಮುಕ್ತರಾಗುವ ಆಶಯದೊಂದಿಗೆ ಮತಾಂತರಗೊಳ್ಳತೊಡಗಿರುವುದು ಕಂಡುಬರುತ್ತದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತುತ ಪರಿಸ್ಥಿತಿಯಲ್ಲಿ ಮಾದಿಗರ ಸ್ಥಾನಮಾನ ಮತ್ತು ಸ್ಥಿತಿಗತಿಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಮಾದಿಗರ ಆರ್ಥಿಕ ಸ್ಥಿತಿಗತಿಗಳನ್ನು ಕುರಿತದ್ದು. ಆರ್ಥಿಕವಾಗಿ ತೀರಾ ಹಿಂದುಳಿದಿರುವ ಮಾದಿಗರು ಇಂದಿಗೂ ಬದುಕುತ್ತಿರುವುದು ಕಡುಬಡತನದಲ್ಲಿ. ಇವರು ಇಂದಿಗೂ ಮುಖ್ಯವಾಗಿ ನಂಬಿಕೊಂಡಿರುವುದು ಚರ್ಮಗಾರಿಕೆ, ಕೂಲಿ, ಆಯಾಗಾರಿಕೆ ಹಾಗೂ ಜೀತಗಾರಿಕೆಗಳನ್ನು. ಇವರು ಹಿಂದಿನಿಂದಲೂ ದಿನನಿತ್ಯದ ಜೀವನ ನಿರ್ವಹಣೆಗಾಗಿ ಭೂ ಮಾಲೀಕರ ಕುಟುಂಬಗಳನ್ನು ಆಶ್ರಯಿಸಬೇಕಾಗಿದೆ. ಅವರ ಹೊಲಗಳಲ್ಲಿ ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದು, ಕೃಷಿ ಮಾಡುವ ಕುಟುಂಬದ ಸದಸ್ಯರಿಗೆ ಬೇಕಾಗುವ ಚಪ್ಪಲಿ ಹಾಗೂ ಕೃಷಿ ಸಲಕರಣೆಗಳಿಗೆ ಬೇಕಾದ ಚರ್ಮದ ವಸ್ತುಗಳನ್ನು ತಯಾರಿಸಿಕೊಡುತ್ತಿದ್ದರು. ಅದಕ್ಕೆ ಪ್ರತಿಫಲವಾಗಿ ಸುಗ್ಗಿಯ ಕಾಲಕ್ಕೆ 'ಆಯಾ'(ಕಾಳುಕಡಿ) ವನ್ನು ಪಡೆಯುತ್ತಿದ್ದರು. ಇದಲ್ಲದೇ ಬಹುಪಾಲು ಮಾದಿಗ ಕುಟುಂಬಗಳು ಜೀವನ ನಿರ್ವಹಣೆ ಅನಿವಾರ್ಯವಾಗಿ ಜೀತಕ್ಕೆ ಒಳಗಾಗಿವೆ. ಇಂದಿಗೂ ಇಂತಹ ಪರಿಸ್ಥಿತಿಯಲ್ಲಿ ಬದಲಾವಣೆಯೇನೂ ಇಲ್ಲ. ಈ ರೀತಿಯಲ್ಲಿ ಬದುಕುತ್ತಿರುವ ಮಾದಿಗರು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸರ್ಕಾರ ತಂದ ಅನೇಕ ಸುಧಾರಣೆಗಳಿಂದ ಕೊಂಚ ಚೇತರಿಸಿಕೊಂಡಿದ್ದಾರೆ. ಈ ಸುಧಾರಣೆಗಳು ಕೆಲವೊಂದು ಶೋಷಣೆಗಳಿಂದ ಮುಕ್ತರಾಗುವಂತೆ ಮಾಡಿವೆ. ಭೂ ಹಂಚಿಕೆ, ಭೂ ಸುಧಾರಣೆಗಳ ಫಲವಾಗಿ

ಮಾದಿಗರು ಆರ್ಥಿಕವಾಗಿ ಮುಂದುವರಿಯತೊಡಗಿದ್ದಾರೆ. ಸ್ವಲ್ಪ ಪ್ರಮಾಣದಲ್ಲಿ ಭೂಮಿಯನ್ನು ಹೊಂದಲೂ ಸಾಧ್ಯವಾಗಿದೆ. ಕೃಷಿಯಲ್ಲಿ ತೊಡಗಲು ಅನುಕೂಲವಾಗುವಂತೆ ಯೋಜನೆಗಳು ಇವರಿಗೆ ಸ್ವಲ್ಪಮಟ್ಟಿಗೆ ಆರ್ಥಿಕ ಚೈತನ್ಯವನ್ನು ನೀಡಿವೆ. ಈ ಬಗೆಯ ಯೋಜನೆಗಳು ಮಾದಿಗರನ್ನು ಆರ್ಥಿಕವಾಗಿ ಎಷ್ಟರಮಟ್ಟಿಗೆ ಸುಧಾರಿಸಲು ಸಾಧ್ಯವಾಗಿದೆಯೆಂಬುದನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಆಧುನಿಕ ಕೈಗಾರಿಕೆಯು ಮಾದಿಗರ ಪ್ರಧಾನ ವೃತ್ತಿಯಾದ ಚರ್ಮಗಾರಿಕೆಗೆ ಬಲವಾದ ಹೊಡೆತ ಕೊಟ್ಟ ಪರಿಣಾಮವಾಗಿ ಅವರು ಅದನ್ನು ಕೈಬಿಟ್ಟು ಕೂಲಿಯನ್ನೇ ಹೆಚ್ಚು ಅವಲಂಬಿಸುವಂತಾಯಿತು. ಚರ್ಮವೃತ್ತಿಯನ್ನು ಸಂಪೂರ್ಣವಾಗಿ ತೊರೆದಿರುವುದು ಕಂಡುಬರುವುದಿಲ್ಲವಾದರೂ ಆ ವೃತ್ತಿಯನ್ನು ಈ ಜನಾಂಗ ಗ್ರಾಮೀಣ ಪ್ರದೇಶದಲ್ಲಿ ಇನ್ನು ಉಳಿಸಿಕೊಂಡು ಬಂದಿರುವುದರ ಕಾರಣಗಳನ್ನು ಚರ್ಚಿಸಲಾಗಿದೆ. ಇವುಗಳನ್ನು ಬಿಟ್ಟರೆ, ಮಾದಿಗರು ಇತರೆ ವೃತ್ತಿಗಳಲ್ಲಿ ತೊಡಗಿಸಿಕೊಂಡಿರುವುದು ಕಡಿಮೆ. ವ್ಯಾಪಾರ ಮತ್ತು ಕೈಗಾರಿಕೆಗಳಲ್ಲಿ ತೊಡಗಿಕೊಳ್ಳಲು ಬಂಡವಾಳದ ಕೊರತೆ ಇರುವುದರಿಂದ ಇಂಥವುಗಳಲ್ಲಿ ತೊಡಗಿಕೊಂಡಿರುವುದೂ ಕಡಿಮೆ. ಹಿಂದುಳಿದವರನ್ನು ಆರ್ಥಿಕವಾಗಿ ಮೇಲೆತ್ತಲು ಸರ್ಕಾರ ಕೈಗೊಂಡ ಕ್ರಮಗಳನ್ನು ಇಲ್ಲಿ ಗಮನಿಸಲಾಗಿದೆ. ಸರ್ಕಾರಿ ಉದ್ಯೋಗಗಳಲ್ಲಿ ಮೀಸಲಾತಿ, ಭೂ ಹಂಚಿಕೆ, ವಸತಿ, ಸಾಲ ಸೌಲಭ್ಯ ಮುಂತಾದವು ಮಾದಿಗ ಜನಾಂಗವನ್ನು ಆರ್ಥಿಕವಾಗಿ ಬಲಗೊಳ್ಳಲು ಎಷ್ಟರಮಟ್ಟಿಗೆ ಸಹಾಯಕವಾಗಿವೆ ಎಂಬ ಅಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಐದನೆಯ ಅಧ್ಯಾಯವು ಮಾದಿಗರ ಶೈಕ್ಷಣಿಕ ಪ್ರಗತಿಗೆ ಸಂಬಂಧಿಸಿದೆ. ಶಿಕ್ಷಣವು ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಒಂದು. ಅದು ಅವರಲ್ಲಿ ಉತ್ತಮ ಮೌಲ್ಯಗಳನ್ನು ರೂಪಿಸಿಕೊಳ್ಳಲು ಅವಕಾಶ ಮಾಡಿಕೊಡುತ್ತದೆ. ಆಧುನಿಕ ಶಿಕ್ಷಣ ಭಾರತೀಯರಿಗೆ ದೊರೆತ ಪರಿಣಾಮವಾಗಿಯೇ ಅವರ ಆಲೋಚನ ಕ್ರಮದಲ್ಲಿ ಬದಲಾವಣೆ ಕಂಡುಬಂದಿತು. ವಸಾಹತುಶಾಹಿ ಕಾಲಘಟ್ಟದಲ್ಲಿ ಅಸ್ಪೃಶ್ಯರಿಗೆ ಶಿಕ್ಷಣ ಕಲಿಯಲು ಅವಕಾಶ ಮಾಡಿಕೊಟ್ಟಿದ್ದು, ಅವರಲ್ಲಿ ಹೊಸ ಜಾಗೃತಿ ಮೂಡಲು ಸಹಕಾರಿಯಾಯಿತು. ಸ್ವಾತಂತ್ರ್ಯಪೂರ್ವ ಮತ್ತು ನಂತರದಲ್ಲಿ ಸರ್ಕಾರ ಅಸ್ಪೃಶ್ಯರು ಶೈಕ್ಷಣಿಕ ಪ್ರಗತಿಯನ್ನು ಸಾಧಿಸಲು ವಿದ್ಯಾರ್ಥಿ ನಿಲಯ, ಫೀ ರಿಯಾಯಿತಿ, ವಿದ್ಯಾರ್ಥಿವೇತನ, ಪ್ರತಾಭಾನ್ವಿತ ವಿದ್ಯಾರ್ಥಿಗಳಿಗೆ ಪುರಸ್ಕಾರ, ಪಠ್ಯಪುಸ್ತಕ ಮತ್ತು ಬಟ್ಟೆ ವಿತರಣೆ ಮುಂತಾದ ಕ್ರಮಗಳು ಮಾದಿಗ ಜನಾಂಗ ಶೈಕ್ಷಣಿಕ ಪ್ರಗತಿ ಸಾಧಿಸಲು ಎಷ್ಟರ ಮಟ್ಟಿಗೆ ಕಾರಣವಾಗಿವೆ. ಅಲ್ಲದೆ ಈ ಜನಾಂಗದ ಅನೇಕರು ಶೈಕ್ಷಣಿಕ ಕ್ಷೇತ್ರದಲ್ಲಿ ಸೇವೆ ಸಲ್ಲಿಸಲು ವಿವಿಧ ಶೈಕ್ಷಣಿಕ ಸಂಸ್ಥೆಗಳನ್ನು ಸಹ ತೆರೆದಿರುವುದು ಉಂಟು. ಈ ಹಿನ್ನೆಲೆಯಲ್ಲಿ ಮಾದಿಗ ಜನಾಂಗದ ಶೈಕ್ಷಣಿಕ ಪ್ರಗತಿ ಸಾಧಿಸುವಲ್ಲಿ ಸರ್ಕಾರದ ಮತ್ತು ಸಾರ್ವಜನಿಕ ಕ್ರಮಗಳು ಯಾವ ರೀತಿ ಸಹಾಯವಾಗಿವೆ ಮತ್ತು ಶಿಕ್ಷಣ ಕ್ಷೇತ್ರಕ್ಕೆ ಈ ಜನಾಂಗ ನೀಡಿರುವ ಸೇವೆಯ ಸ್ವರೂಪ ಎಂತಹದು ಎಂಬುದನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಆಧುನಿಕ ರಾಜಕಾರಣ ಸಂದರ್ಭದಲ್ಲಿ ಮಾದಿಗರ ರಾಜಕೀಯ ಪ್ರಾತಿನಿಧ್ಯ ಕುರಿತು ಚರ್ಚಿಸಲಾಗಿದೆ. ರಾಜಪ್ರಭುತ್ವದಿಂದ ಹಿಡಿದು ವಸಾಹತು ಕಾಲದವರೆಗಿನ ರಾಜಕಾರಣದಲ್ಲಿ ರಾಜಶಾಹಿ,ಪುರೋಹಿತ ಶಾಹಿ, ಭೂಮಾಲಿಕರು ಮಾತ್ರವೇ ಪ್ರಮುಖ ಪಾತ್ರವಹಿಸಿದ್ದಾರೆ. ಆದರೆ ಆಧುನಿಕ ರಾಜಕಾರಣವು ಆ ಪ್ರಾಬಲ್ಯವನ್ನು ಅಲುಗಾಡಿಸಿ ಸ್ವಾತಂತ್ರ್ಯಪೂರ್ವದಲ್ಲಿ ಹಿಂದುಳಿದವರಿಗೆ ಕೆಲವೊಂದು ಪ್ರಾತಿನಿಧ್ಯವನ್ನು ನೀಡಿತು. ಅದು ಅವರಲ್ಲಿ ರಾಜಕೀಯ ಪ್ರಜ್ಞೆಯನ್ನು ಜಾಗೃತಗೊಳಿಸಿತು. ರಾಷ್ಟ್ರಮಟ್ಟದಲ್ಲಿ ಅಸ್ಪೃಶ್ಯರ ರಾಜಕೀಯ ಹಕ್ಕುಗಳನ್ನು ದೊರಕಿಸಿಕೊಡಲು ಡಾ.ಬಿ.ಆರ್.ಅಂಬೇಡ್ಕರ್ ನಡೆಸಿದ ದೀರ್ಘಕಾಲದ ಹೋರಾಟದ ಫಲವಾಗಿ ಗಾಂಧಿಯೊಂದಿಗೆ ನಡೆದ 'ಪೂನಾ ಒಪ್ಪಂದ'ವು ಇವರಿಗೆ ಕೆಲವೊಂದು ರಾಜಕೀಯ ಮೀಸಲಾತಿಯನ್ನು ದೊರಕಿಸಿಕೊಟ್ಟಿತು. ಅಲ್ಲಿಂದ ಆರಂಭಗೊಂಡ ರಾಜಕೀಯ ಮೀಸಲಾತಿ ಸ್ವಾತಂತ್ರ್ಯಾನಂತರದಲ್ಲಿ ಅಂಗೀಕರಿಸಿದ ಸಂವಿಧಾನದ ಚೌಕಟ್ಟಿಗೆ ಒಳಪಡಿಸಿದೆ. ರಾಜಕೀಯ ಅಧಿಕಾರ ವಿಕೇಂದ್ರಿಕರಣದ ಹಿನ್ನೆಲೆಯಲ್ಲಿ ತಂದಂಥ ಅನೇಕ ಸುಧಾರಣೆಗಳು ಗ್ರಾಮಪಂಚಾಯತಿ, ತಾಲ್ಲೂಕು ಪಂಚಾಯತಿ, ಜಿಲ್ಲಾ ಪಂಚಾಯತಿಗಳಲ್ಲಿ ಮಾದಿಗಜನಾಂಗದ ಅನೇಕರು ಸದಸ್ಯರಾಗಿ ರಾಜಕೀಯ ಅಧಿಕಾರವನ್ನು ಅನುಭವಿಸುವಂತಾಗಿದೆ. ಈ ರೀತಿ ಗ್ರಾಮ ಪಂಚಾಯತಿಯಿಂದ ಹಿಡಿದು ಲೋಕಸಭೆಯವರೆಗೆ ಪ್ರಾತಿನಿಧ್ಯ ಪಡೆಯುವಲ್ಲಿ ಮಾದಿಗ ಜನಾಂಗಕ್ಕೆ ಎಷ್ಟರಮಟ್ಟಿಗೆ ಸಾಧ್ಯವಾಗಿದೆಯೆಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಇದಲ್ಲದೆ ಮಾದಿಗರಿಂದ 'ಪ್ರತ್ಯೇಕ ಮೀಸಲಾತಿ ಬೇಡಿಕೆ 'ಯ ಹೋರಾಟ ರಾಜಕೀಯ ನೆಲೆಯಿಂದ ಹುಟ್ಟಿ ಇಂದು ಸಾಮಾಜಿಕ ಸಮಸ್ಯೆಯಾಗಿ ಪರಿಣಮಿಸಿರುವುದರಿಂದ, ವಿಶೇಷವಾಗಿ ಈ ಹೋರಾಟ ಕುರಿತಂತೆ ಪ್ರತ್ಯೇಕವಾಗಿ ವಿಶ್ಲೇಷಣೆ ಮಾಡಲಾಗಿದೆ.

ಅಧ್ಯಾಯ ಏಳರಲ್ಲಿ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮಾದಿಗರ ಪಾತ್ರವನ್ನು ಕುರಿತು ಚರ್ಚಿಸಲಾಗಿದೆ. ಸಾಂಸ್ಕೃತಿಕ ಚಟುವಟಿಕೆಗಳು ಮಾನವನ ಜೀವನದಲ್ಲಿ ಹಾಸುಹೊಕ್ಕಾಗಿ ಬಂದಿರುವಂಥವು. ಮಾನವನ ಜೀವನಕ್ರಮ, ನಂಬಿಕೆ, ಸಂಪ್ರದಾಯ, ಪರಂಪರೆ ಮುಂತಾದ ಅಂಶಗಳನ್ನು ಪ್ರತಿಬಿಂಬಿಸುವ ಕನ್ನಡಿಯಾಗಿದೆ. ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಪ್ರತಿಯೊಂದು ಗ್ರಾಮದಲ್ಲಿ ನೆಲೆಸಿರುವ ಮಾದಿಗರು ತಮಟೆ ಬಡಿಯುವ, ಸುಡಿಗೆ ಹಿಡಿಯುವ, ಮಾವಿನತೋರಣ ಕಟ್ಟುವ, ಸಿಡಿ ಆಡುವ, ಬಲಿಹಾಕುವ, ಚರಗ ಚೆಲ್ಲುವ ಮುಂತಾದ ಕೆಲಸಗಳನ್ನು ಮಾಡಬೇಕಾಗುತ್ತದೆ.ಈ ರೀತಿಯ ಸೇವೆಗಳೇ ಅಲ್ಲದೆ ಮಾದಿಗರು ಇಂಥಾ ಕಾರ್ಯಕ್ರಮಗಳಲ್ಲಿ ಅನೇಕ ಸಂದರ್ಭಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಾರೆ. ಅಂತಹ ಅಂಶಗಳನ್ನು ಕುರಿತಂತೆ ಇಲ್ಲಿ ವಿವರಿಸಲಾಗಿದೆ. ಇದಲ್ಲದೇ ಈ ಜನಾಂಗದಲ್ಲಿ ಅಡಗಿರುವ ಕಲಾ ಪ್ರತಿಭೆಗಳನ್ನು, ಅವರ ಕಲಾ ಪ್ರಕಾರಗಳನ್ನು ದಾಖಲಿಸುವ ಪ್ರಯತ್ನವನ್ನು ಮಾಡಲಾಗಿದೆ. ಇಂದು ಸಾಹಿತ್ಯ ಮತ್ತು ಸಂಶೋಧನ ಕ್ಷೇತ್ರಕ್ಕೆ ಅವರು ನೀಡಿರುವ ಕೊಡುಗೆಯನ್ನು ಈ ಅಧ್ಯಾಯದಲ್ಲಿ ವಿಶ್ಲೇಷಣೆಗೆ ಒಳಪಡಿಸಿದೆ.

ಒಟ್ಟಿನಲ್ಲಿ ಈ ಮೇಲಿನ ಏಳು ಅಧ್ಯಾಯಗಳಲ್ಲಿ ಮಾದಿಗರಿಗೆ ಸಂಬಂಧಿಸಿದ ಪೌರಾಣಿಕ, ಚಾರಿತ್ರಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸ್ಥಿತಿ-ಗತಿಗಳನ್ನು ಕುರಿತು ಅಧ್ಯಯನ ಕೈಗೊಂಡು ಮಾದಿಗರ ಚರಿತ್ರೆಯನ್ನು ತಕ್ಕಮಟ್ಟಿಗೆ ಕಟ್ಟಿಕೊಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಎಂಟನೆಯ ಅಧ್ಯಾಯದಲ್ಲಿ ಅಧ್ಯಯನದಲ್ಲಿ ಕಂಡುಕೊಂಡ ಸಂಗತಿಗಳ ಸಂಕ್ಷಿಪ್ತ ರೂಪವನ್ನು ನೀಡಲಾಗಿದೆ.

## ಅಧ್ಯಾಯ ೨

# ಪೌರಾಣಿಕ ಮತ್ತು ಚಾರಿತ್ರಿಕ ಹಿನ್ನೆಲೆ

೨.೧ ಮಾದಿಗ ಪದದ ಅರ್ಥ

೨.೨ ಮಾದಿಗರ ಹೆಸರುಗಳು : ವಿವಿಧ ಚಾರಿತ್ರಿಕ ಸಂದರ್ಭಗಳಲ್ಲಿ

೨.೩ ಮಾದಿಗ ಸಂಬಂಧಿತ ಜಾತಿಗಳು

೨.೪ ಪೌರಾಣಿಕ ಹಿನ್ನೆಲೆ

೨.೫ ಪ್ರಾಚೀನ ಕಾಲದಿಂದ ವಸಾಹತುಶಾಹಿ ಕಾಲದವರೆಗಿನ ಚಾರಿತ್ರಿಕ ಹಿನ್ನೆಲೆ

೨.೬ ಸ್ವಾತಂತ್ರ್ಯ ಮತ್ತು ಮೈಸೂರು ಸಂಸ್ಥಾನ ಚಳವಳಿಗಳಲ್ಲಿ ಮಾದಿಗರ ಪಾತ್ರ

೨.೭ ಏಕೀಕರಣ ಚಳವಳಿ ಮತ್ತು ಸಂಡೂರು ಹೋರಾಟಗಳಲ್ಲಿ ಮಾದಿಗರು

೨.೮ ದಲಿತ ಚಳವಳಿಯಲ್ಲಿ ಮಾದಿಗರ ಪಾತ್ರ

೨.೯ ಪ್ರತ್ಯೇಕ ಮೀಸಲಾತಿ ಹೋರಾಟ

## ೨.೧. ಮಾದಿಗ ಪದದ ಅರ್ಥ

'ಮಾದಿಗ' ಪದವು 'ಮಾದ' ಮತ್ತು 'ಇಗ' ಎಂಬೆರಡು ಶಬ್ದಗಳಿಂದ ರೂಪಿತವಾಗಿದೆ. ಇದು ಸಮಾಜದ ಅತ್ಯಂತ ಕೆಳಹಂತದಲ್ಲಿರುವ ಅಸ್ಪೃಶ್ಯ ಜಾತಿಯೊಂದನ್ನು ಸೂಚಿಸುತ್ತದೆ. ಅನೇಕ ಸಂದರ್ಭಗಳಲ್ಲಿ ಮೇಲು ಜಾತಿಗಳು ಇದನ್ನು 'ಬೈಗಳ ಪದ'ವಾಗಿ ಸಹ ಬಳಸುತ್ತಾರೆ. ಇದರಿಂದಾಗಿ ಈ ಪದವು 'ಜಾತಿ ಸೂಚಕ' ಮಾತ್ರವಲ್ಲದೇ 'ಬೈಗುಳ ವಾಚಕ'ವೂ ಹೌದು. ಈ ಪದವು ನೇರವಾಗಿ ಮಾದಿಗರ ವೃತ್ತಿಯನ್ನು ಸೂಚಿಸದೆ ಹೋದರೂ ಚರ್ಮದ ವೃತ್ತಿಯ ಹಿನ್ನೆಲೆಯಲ್ಲಿ ಬಂದಿರುವ ಸಾಧ್ಯತೆಯಿದೆ.

ಮಾದಿಗರು ಕೇವಲ 'ಮಾದಿಗ' ಎನ್ನುವ ಪದದಿಂದ ಮಾತ್ರವಲ್ಲದೆ ಇನ್ನೂ ಅನೇಕ ಹೆಸರುಗಳಿಂದ ಗುರುತಿಸಿಕೊಳ್ಳುತ್ತಾರೆ. ಅವುಗಳಲ್ಲಿ ಕೆಲವು ಪುರಾತನ ಕಾಲದ ಸಂದರ್ಭಗಳಲ್ಲಿ ಪಡೆದ ಹೆಸರುಗಳಾದರೆ ಇನ್ನೂ ಕೆಲವು ಆಧುನಿಕ ಸಂದರ್ಭದಲ್ಲಿ ಹುಟ್ಟಿಕೊಂಡ ಪದಗಳಾಗಿವೆ. ವೃತ್ತಿಯ ಹಿನ್ನೆಲೆಯಲ್ಲಿ 'ಚಮ್ಮಾರ' ಪದದಿಂದ ಹೆಚ್ಚಾಗಿ ಗುರುತಿಸಿಕೊಳ್ಳುವುದು ಉತ್ತರ ಭಾರತದಲ್ಲಿ ಕಂಡುಬಂದರೆ ದಕ್ಷಿಣ ಭಾರತದಲ್ಲಿ ವಿವಿಧ ಹೆಸರುಗಳನ್ನು ಮಾದಿಗರು ಹೊಂದಿದ್ದಾರೆ. ಮಹಾರಾಷ್ಟ್ರದಲ್ಲಿ ಮಾಂಗ್, ತಮಿಳುನಾಡಿನಲ್ಲಿ ಚಕ್ಕಲಿಯನ್, ಆಂಧ್ರದಲ್ಲಿ ಮಾದಿಗ ಕರ್ನಾಟಕದ ಉತ್ತರ ಜಿಲ್ಲೆಗಳಾದ ಬೀದರ್, ಬೆಳಗಾಂ, ಗುಲ್ಬರ್ಗಾ, ರಾಯಚೂರು, ಧಾರವಾಡಗಳಲ್ಲಿ 'ಮಾದಿಗ' 'ಮಾದರ್ ' 'ಮಾದರು' ಪದಗಳಿಂದ ಗುರುತಿಸುತ್ತಾರೆ. ದಕ್ಷಿಣ ಭಾಗದಲ್ಲಿ ಆದಿಕರ್ನಾಟಕ ಮತ್ತು 'ಆದಿದ್ರಾವಿಡ' ಪದಗಳಿಂದ ಗುರುತಿಸಲಾಗುತ್ತಿದೆ. ಆದರೆ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಮಾದಿಗರನ್ನೂ 'ಆದಿಕರ್ನಾಟಕ' ಪದದಿಂದ ಗುರುತಿಸುವುದು ವಾಡಿಕೆಯಾಗಿದೆ. ರಾಜ್ಯದಲ್ಲಿ ಮೇಲಿನ ಪದ ಪ್ರಯೋಗಗಳು ಮಾತ್ರವಲ್ಲದೇ 'ಆದಿಜಾಂಬವ' 'ಜಾಂಬವುಲು' 'ಮಾತಂಗ' 'ಎಡಗೈ' 'ನಿಮ್ನವರ್ಗ' ಪರಿಶಿಷ್ಟಜಾತಿ' 'ದಲಿತ' ಪದಗಳನ್ನೂ ಮಾದಿಗರು ಬಳಸುತ್ತಿರುವುದು ಕಂಡುಬರುತ್ತದೆ. ಇವುಗಳಲ್ಲಿ ಕೆಲವು ಮಾದಿಗ ಜನಾಂಗವನ್ನು ನೇರವಾಗಿ ಸೂಚಿಸಿದರೆ, ಇನ್ನೂ ಕೆಲವು ಆ ವರ್ಗದಲ್ಲಿ ಬರುವ ಒಂದು ಜಾತಿ ಎಂದು ಗುರುತಿಸಲಾಗುತ್ತದೆ. ಇವುಗಲ್ಲದೆ ಪಂಚಮ, ಅಂತ್ಯಜ, ಚಂಡಾಲ, ಶ್ವಪಚ ಮುಂತಾದ ಹೆಸರುಗಳನ್ನು ಮಾದಿಗರಿಗೆ ಅನ್ವಯಿಸಲಾಗಿದೆ.

## ೨.೧. ಮಾದಿಗ ಪದದ ನಿಷ್ಪತ್ತಿ

'ಮಾದಿಗ' ಪದವು ಅಸ್ಪೃಶ್ಯ ಜಾತಿಗಳಲ್ಲಿ ಒಂದಾದ ಮಾದಿಗರಿಗೆ ಬಂದದ್ದಾದರೂ ಹೇಗೆಂಬ ಪ್ರಶ್ನೆಗೆ ಮೊದಲು ಉತ್ತರವನ್ನು ಕಂಡುಕೊಳ್ಳಬೇಕಾದ ಅಗತ್ಯತೆ ಇದೆ. ಈ ಹಿನ್ನೆಲೆಯಲ್ಲಿ 'ಮಾದಿಗ'

ಪದಕ್ಕೆ ಸಂಬಂಧಿಸಿದಂತೆ ವಿವಿಧ ಅರ್ಥಕೋಶಗಳು ನೀಡಿರುವ ಅರ್ಥಗಳ ವಿಶ್ಲೇಷಣೆ ಇಲ್ಲಿ ಮಾಡಲಾಗಿದೆ. ರೆವರೆಂಡ್ ಎಫ್. ಕಿಟೆಲ್ ಅವರ ಕನ್ನಡ-ಇಂಗ್ಲೀಷ್ ಡಿಕ್ಷ್ ನರಿಯಲ್ಲಿ ಮಾದಿಗ ಎನ್ನುವ ಪದದ ಅರ್ಥ ಹೀಗಿದೆ. ಎ ಕಾಬುಲರ್, ಎ ಚಕ್ಕಲರ್ ಶ್ವಪಚ, ಮಾತಂಗ ಎಂದಿದೆ[೧].

ಕನ್ನಡ ಸಾಹಿತ್ಯ ಪರಿಷತ್‌ನಿಂದ ಪ್ರಕಟಿಸಿರುವ ಕನ್ನಡ ನಿಘಂಟಿನಲ್ಲಿ 'ಮಾದೆಗ, ಮಾದಗ, ಮಾದಿಗ, ಮಾದೀಗ, ಮಾದೆಂಗ(ನಾ) ಎನ್ನುವ ಪದಗಳಿಗೆ ೧. ಹರಿಜನರ ಒಂದು ಒಳಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು: ಚಮ್ಮಾರ, ಶ್ವಪಚ, ಮಾದೆಗ : ೧ ಹುನುವಳ್ಳಿಯ ಮಾದಗರ ಕಮ್ಮಯ್ಯನ ಮಗನಂ ಅರಿವಮ್ನ ಗಾವುಣ್ಡುಗೆಯ್ಯ ಮಾದಿಗ : ೧ ಶ್ವಪಚ, ಪುಲ್ಕಸ; ಮಾತಂಗ''[೨] ಎಂದಿದೆ. ತೆಲಗು ನಿಘಂಟಿನಲ್ಲಿ ಮಾದಿಗ ಎಂಬ ಪದಕ್ಕೆ ಚಪ್ಪಲಕಟ್ಟುವಾಡು, ಮಾದಿಗವಾಡು (ಚಪ್ಪಲಿ ಮಾಡುವವನು) ಮಾದಿಗ ಎಂಬುದಾಗಿದೆ(ಶಬ್ಧಕಾರಮು, ಪು.೮೫೭).

ಈ ಮೇಲಿನ ಮೂರು ಅರ್ಥಕೋಶಗಳಲ್ಲಿ ಚರ್ಮದ ವೃತ್ತಿ ಕೈಗೊಂಡಿರುವ ಜಾತಿಗೆ ಸೇರಿದವನು 'ಮಾದಿಗ' ಎಂದರ್ಥ ನೀಡುತ್ತವೆಯಾದರೂ 'ಮಾತಂಗ' ಎನ್ನುವ ಅರ್ಥವನ್ನೂ ಎರಡು ಕಡೆಯು ಗಮನಿಸಬಹುದು(ಥರಸ್ಟನ್, ಪು.೩೨೫). ಇದರೊಂದಿಗೆ ಮಾದಿಗರು ಇಂದಿಗೂ ನಾವು 'ಮಾತಂಗಿ ಮಕ್ಕಳು' (ಥರಸ್ಟನ್, ಪು.೨೯೮)ಮತ್ತು 'ಮತಂಗ ಬ್ರಾಹ್ಮಣರು' ಎಂದು ಕರೆದುಕೊಳ್ಳುತ್ತಿರುವ ಅಂಶಗಳನ್ನು ಗಮನಿಸಿದಾಗ 'ಮಾದಿಗ' ಪದವು 'ಮಾತಂಗ' ಪದದಿಂದ ಬಂದಿರುವ ಸಾಧ್ಯತೆ ಇದೆ. 'ಮಾತಂಗ' ಪದವು ಆನೆ ಮತ್ತು ಮಾದಿಗ'[೩]ಎಂಬೆರಡು ಅರ್ಥಗಳನ್ನು ನೀಡುವುದು. 'ಮಾದಿಗ' ಪದವು 'ಮಾತಂಗ' ಪದದಿಂದ ಬಂದಿದೆ ಎನ್ನುವುದನ್ನು ಮತ್ತಷ್ಟು ಖಚಿತಪಡಿಸುತ್ತದೆ. ಅಲ್ಲದೆ ಆನೆಗೂ ಮತ್ತು ಮಾದಿಗರಿಗೆ ಒಂದು ರೀತಿಯ ಸಂಬಂಧ ಕಲ್ಪಿಸಿರುವುದು ಕಂಡುಬರುತ್ತದೆ.

ಟಿ.ಆರ್.ಸಿಂಗ್ ಅವರು ತಮ್ಮ ಗ್ರಂಥದಲ್ಲಿ ಮಾದಿಗ ಎಂಬ ಹೆಸರು 'ಮಹಾದಿಗೆ'(ಕೆಳಗೆ ಇಳಿದು ಬಂದ ಶ್ರೇಷ್ಟ ಪುರುಷ) ಅಥವಾ ಮಹಾದಿಗಿರಾ' (ಮಹಾಪುರುಷ ಇಳಿದು ಬಾ) ಎಂಬುದರಿಂದ ನಿಷ್ಪನ್ನಗೊಂಡಿದೆ ಎಂದಿದ್ದಾರೆ.[೪] ಮತ್ತೊಂದು ವಿವರಣೆ ಪ್ರಕಾರ ''ಸತ್ತ ದನವನ್ನು ಆಹಾರವಾಗಿ ಉಪಯೋಗಿಸಿದ್ದರಿಂದ ಈ ಪದ ಬಳಕೆಯಾಗಿದೆ. ಜಾನುವಾರು ಸತ್ತಾಗ ಮಾದಿಗರ ಪೂರ್ವಜರು 'ಮಾದಿಗೊಡ್ಡು'(ಇದು ನಮ್ಮದು) ಎಂದು ಕೇಳುತ್ತಿದ್ದರು. ಹಾಗಾಗಿ ಅವರನ್ನೂ ಮಾದಿಗೊಡ್ಡು ಎಂದೇ ಕರೆಯಲಾರಂಬಿಸಿದರು. ಮಾದಿಗೊಡ್ಡು ಎಂಬುದು ಮುಂದೆ 'ಮಾದಿಗ' ಎಂದಾಯಿತು.'[೫] ಇಲ್ಲಿ ಮೊದಲ ಅರ್ಥವು ಮಾದಿಗರ ಮೂಲಪುರುಷ ಆದಿಜಾಂಬವನ ಕುರಿತಂತೆ ಹೇಳಲಾಗಿದೆ. ಎರಡನೆಯ ವಿವರಣೆಯು ಮಾದಿಗರು ಆಹಾರವಾಗಿ ಸೇವಿಸುತ್ತಿದ್ದ ಸತ್ತ ಪ್ರಾಣಿಗಳನ್ನು ಇದು ನಮ್ಮದು ಎಂಬುದರಿಂದ ಮಾದಿಗ ಪದ ನಿಷ್ಪತ್ತಿಯಾಗಿದೆ ಎನ್ನುತ್ತದೆ. ಇಂದು ಗ್ರಾಮೀಣ ಪರಿಸರದಲ್ಲಿ ಮಾತ್ರವಲ್ಲದೆ ಅನೇಕ ಪಟ್ಟಣ ಪ್ರದೇಶಗಳಲ್ಲಿಯೂ ಸಹ ಸತ್ತ ಪ್ರಾಣಿಗಳನ್ನೂ ಎತ್ತಿ

ಹಾಕುವ ಹಕ್ಕು ಇರುವುದು ಮಾದಿಗರಿಗೆ ಮಾತ್ರ. ಆದರೆ ಇಂತಹ ಕೀಳು ವೃತ್ತಿಯನ್ನು ಈ ಜನಾಂಗದವರೇ ಮಾಡಬೇಕೆಂದು ಹೇರಿದುದರ ಪರಿಣಾಮವಾಗಿ ಈ ಕೀಳು ಕೆಲಸವನ್ನು ಪವಿತ್ರ ಕಾರ್ಯವೆಂದು ಮಾಡುತ್ತಾ ಬಂದಿರುತ್ತಾರಾದರೂ ಇದೇ 'ಮಾದಿಗ' ಪದದ ಮೂಲ ಅಲ್ಲ.

ಮಾದಿಗ ಪದದ ಹುಟ್ಟಿನ ಬಗ್ಗೆ ಮೈಲಹಳ್ಳಿ ರೇವಣ್ಣನವರು ಜನಪದದ ಅಭಿಪ್ರಾಯವೊಂದನ್ನು ತಮ್ಮ ಪಿಎಚ್.ಡಿ.ಮಹಾಪ್ರಬಂಧದಲ್ಲಿ ಹೀಗೆ ದಾಖಲಿಸಿದ್ದಾರೆ. ನಾಯಕ, ಗೊಲ್ಲ ಮತ್ತು ಮಾದಿಗ ಈ ಮೂವರೂ ಪೂರ್ವದಲ್ಲಿ ಅಣ್ಣ ತಮ್ಮಂದಿರಾಗಿದ್ದರು. ಇವರಲ್ಲಿ ಮಾದಿಗ ಹಿರಿಯವನು ಉಳಿದಿಬ್ಬರು ತಮ್ಮಂದಿರು. ಕಾರಣಾಂತರದಿಂದ ಮೂವರೂ ಬೇರೆ ಬೇರೆಯಾದರು. ಆಗ ಒಬ್ಬೊಬ್ಬರು ಒಂದೊಂದು ಹೆಸರನ್ನು ಇಟ್ಟುಕೊಂಡರು. ಅವರದೆ ಆದ ವೃತ್ತಿಯನ್ನೂ ಆಯ್ಕೆ ಮಾಡಿಕೊಂಡರು. ಕುಟುಂಬಕ್ಕೆ ಮಾದಿಗ ಹಿರಿಯನಾದುದರಿಂದ ಅವನನ್ನು ಮೊದಲಿಗನೆಂದು ಕರೆಯುತ್ತಿದ್ದರು. ಅದು ಕಾಲಕ್ರಮೇಣ ಮೊದಲಿಗ 'ಮಾದಿಗ' ಆಗಿದೆ[೬] ಎನ್ನಲಾಗಿದೆ. ಇಂದು ಗ್ರಾಮೀಣ ಪರಿಸರದಲ್ಲಿ ನಾಯಕ ಮತ್ತು ಗೊಲ್ಲ ಜನಾಂಗದೊಂದಿಗೆ ಭಾವನಾತ್ಮಕ ಸಂಬಂಧ ಇದೆ. ಅಲ್ಲದೆ ನಾಯಕ ಜನಾಂಗದಲ್ಲಿರುವ ಕೆಲವು ಗೋತ್ರ ಅಥವಾ ಬೆಡಗುಗಳು ಮಾದಿಗ ಜನಾಂಗದಲ್ಲಿ ಕಂಡುಬರುತ್ತವೆ. ಆದರೆ 'ಮಾದಿಗ' ಹಿರಿಯನಾದುದರಿಂದ ಆ ಹೆಸರು ಬಂದಿದೆ ಎನ್ನುವುದಾದರೆ ಅವರು ಕೈಗೊಂಡಿರುವಂತಹ ಕೀಳು ಕೆಲಸಗಳನ್ನು ಇವರೇ ಏಕೆ ಮಾಡುತ್ತಿದ್ದಾರೆ. ಅಲ್ಲದೇ ನಾಯಕ ಮತ್ತು ಗೊಲ್ಲ ಜನಾಂಗಗಳು 'ಮಾದಿಗ'ರನ್ನು ಅಸ್ಪೃಶ್ಯರನ್ನಾಗಿ ಕಾಣುವ ಮನೋಭಾವ ಇರುವುದನ್ನು ನೋಡಿದರೆ 'ಮಾದಿಗ' ಪದವು 'ಹಿರಿಯ' ಎನ್ನುವ ಕಾರಣದಿಂದ ಬಂದುದಲ್ಲ ಎನ್ನಬಹುದು.

ಮಾದಿಗರು ಇಂದಿಗೂ ಮುಂದುವರಿಸಿಕೊಂಡು ಬಂದಿರುವ ಚರ್ಮದ ವೃತ್ತಿಗೂ ಮತ್ತು ಮಾದಿಗರಿಗೂ ಅವಿನಭಾವ ಸಂಬಂಧ ಇದೆ. ಚರ್ಮವೃತ್ತಿಯನ್ನೆ ಪ್ರಧಾನವಾದ ವೃತ್ತಿಯನ್ನಾಗಿ ಸ್ವೀಕರಿಸಿದ್ದ ಈ ಜನಾಂಗ ಆಧುನಿಕತೆಯಿಂದಾಗಿ ಹುಟ್ಟಿಕೊಂಡ ಕೈಗಾರಿಕೆಗಳು ಇವರನ್ನು ಆ ವೃತ್ತಿಯಿಂದಲೇ ನಿವೃತ್ತಿಯಾಗುವಂತೆ ಮಾಡಿವೆ. ಒಂದು ಕಾಲಕ್ಕೆ ಈ ವೃತ್ತಿಯು ಮಾದಿಗರ ಜೀವನವನ್ನು ನಡೆಸುತ್ತಿದ್ದರೆ ಇಂದು ಜೀವನೋಪಾಯಕ್ಕಾಗಿ ಬೇರೆ ಬೇರೆ ವೃತ್ತಿಯನ್ನೂ ಅವಲಂಬಿಸಿಕೊಳ್ಳುವಂತೆ ಮಾಡಿದೆ. ಈ ಹಿನ್ನೆಲೆಯಲ್ಲಿ 'ಮಾದಿಗ' ಪದವು ಮಾದಿಗರು ಕೈಗೊಂಡಿದ್ದ ಚರ್ಮಗಾರಿಕೆ ವೃತ್ತಿಯ ಹಿನ್ನೆಲೆಯಲ್ಲಿ ಈ ಪದ ಬಂದಿರಬಹುದಾದ ಸಾಧ್ಯತೆ ಹೆಚ್ಚು. ಚಮ್ಮಾವು(ಚಪ್ಪಲಿ)ಗಳನ್ನು ತಯಾರು ಮಾಡುತ್ತಿದ್ದು ಮಾದಿಗರನ್ನು ಕುರಿತು ಚಪ್ಪಲಿ ಧರಿಸುವ ಮೇಲು ಜಾತಿಯ ಜನರು ಮೈಲಿಗೆಯ ಭಯದಿಂದ ಮಾದಿಗರ ಕೇರಿ ಅಥವಾ ಹಟ್ಟಿಯ ಒಳಗೆ ಪ್ರವೇಶ ಮಾಡುತ್ತಿರಲಿಲ್ಲ. ಆಗ ತಯಾರಿಸಿದ ಚಮ್ಮಾವು(ಚಪ್ಪಲಿ)ಗಳನ್ನು ಹಾದಿಗೆ ತಾ ಎಂದು ದಾರಿಯಲ್ಲೆ ನಿಂತು ಕೂಗುತ್ತಿದ್ದರು. ಈ ಅಂಶವನ್ನು ಇಂದಿಗೂ ಅನೇಕ ಗ್ರಾಮಗಳಲ್ಲಿ ಗಮನಿಸಬಹುದು.

ಈ ರೀತಿ ಚಮ್ಮಾವು ಹಾದಿಗೆ ತಾ ಎಂಬುದು ಬರುಬರುತ್ತಾ ಚಮ್ಮಾವು ಹಾದಿಗೆ ತಾ > ಚಮ್ಮಾದಿಗೆ ತಾ >ಮಾದಿಗ ಎಂದು ಆಗಿರಬಹುದು.

ಮೇಲಿನ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ 'ಮಾದಿಗ' ಎನ್ನುವ ಪದವು ಮಾದಿಗರು ತಾವು ಕೈಗೊಂಡಿರುವ ಚರ್ಮದ ವೃತ್ತಿ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿದೆ ಎಂದು ಅಭಿಪ್ರಾಯ ಪಡಬಹುದು.

## ೨.೨. ಮಾದಿಗರ ಹೆಸರುಗಳು : ವಿವಿಧ ಚಾರಿತ್ರಿಕ ಸಂದರ್ಭಗಳ ಹಿನ್ನೆಲೆ

### ಆದಿಜಾಂಬವ ಮತ್ತು ಮಾತಂಗ

ಮಾದಿಗರು ಪ್ರಪ್ರಥಮವಾಗಿ ತಮ್ಮನ್ನು 'ಆದಿಜಾಂಬವ' ಮತ್ತು 'ಮಾತಂಗ' ಎಂಬೆರಡು ಹೆಸರುಗಳಿಂದ ಗುರುತಿಸಿಕೊಂಡಿದ್ದಾರೆ. ಇದಕ್ಕೆ ಸಂಬಂಧಿಸಿದ ಯಾವುದೇ ಚಾರಿತ್ರಿಕ ದಾಖಲೆಗಳು ದೊರಕುವುದಿಲ್ಲ. ಆದರೆ ಮಾದಿಗರ ಒಂದು ಪಂಗಡವಾದ 'ಸಿಂದ್ ಮಾದಿಗರು' ತಾವು ಈ ಹಿಂದೆ ಪ್ರದರ್ಶಿಸುತ್ತಿದ್ದ 'ಮಾದಿಗ ಆಟ' ಅಥವಾ 'ಎಲ್ಲಮ್ಮ ಆಟ' ಮತ್ತು 'ಸಿಂದ್ ಕತೆ ಅಥವಾ 'ಆದಿಜಾಂಬವ ಪುರಾಣ'ಗಳು ಮಾದಿಗ ಕುಲದ ಚರಿತ್ರೆ ಹಾಗೂ ಪೌರಾಣಿಕ ಹಿನ್ನೆಲೆಯನ್ನು ನೀಡುತ್ತವೆ. ಸಿಂದ್ ಕತೆ-ಮಾದಿಗ ಕುಲದ ಮೂಲ ಪುರುಷ ಆದಿ ಜಾಂಬವನ ಹುಟ್ಟಿನೊಂದಿಗೆ ಆರಂಭವಾಗಿ ಕುಲ ಮತಗಳ ವಿಂಗಡಣೆಯವರೆಗೂ ಸಾಗುತ್ತದೆ. ಈ ಮಧ್ಯೆ 'ತಾತ' ಆದಿಶಕ್ತಿಯೊಂದಿಗೆ ಕೂಡಿ ತ್ರಿಮೂರ್ತಿಗಳಿಗೆ ಜನ್ಮ ಕೊಟ್ಟಿದ್ದು ಆಕಾಶ, ಭೂಮಿ, ಸೂರ್ಯ, ಚಂದ್ರ ನಕ್ಷತ್ರಗಳನ್ನು ಸೃಷ್ಟಿಸಿದ್ದು, ಜಲಮಯವಾಗಿದ್ದ ಭೂಭಾಗವನ್ನು ರೂಪಿಸಲು ತನ್ನ ಸ್ವಂತ ಮಗನನ್ನೆ ಬಲಿಕೊಟ್ಟ ಎಂದು ತಿಳಿಸುತ್ತದೆ. ಜೊತೆಗೆ ತಾತ ಆದಿ ಜಾಂಬವ ತನ್ನ ಮಗಳಾದ ಮತಂಗ ಕನ್ಯೆಯ ಬೆನ್ನಿನ ಚರ್ಮವನ್ನೇ ಸಿಗಿದು ತುಂಡು ತುಂಡುಗಳನ್ನಾಗಿ ಕತ್ತರಿಸಿ ಒಂದೊಂದು ಗುಂಪಿಗೂ ಹಂಚಿದನಂತೆ.[೭] ಮಾದಿಗರ ಮೂಲ ಪುರುಷನಾದ ಆದಿ ಜಾಂಬವನು ಸಮಸ್ತ ಸೃಷ್ಟಿಗೆ ಮೂಲಪುರುಷನೆಂದು ಜೊತೆಗೆ 'ಮತಂಗ' ಕನ್ಯೆಯ ಬೆನ್ನು ಚರ್ಮವೇ ಅನೇಕ ಕುಲ ವಿಂಗಡಣೆಗೆ ಮೂಲಧಾರವೆಂದು ತಿಳಿಸುತ್ತದೆ. ಇದು ಮಾದಿಗ ಕುಲಗಳ ನಂಬಿಕೆಯೂ ಆಗಿದೆ. ಈ ಹಿನ್ನೆಲೆಯಲ್ಲಿ ಮಾದಿಗರು ತಮ್ಮ ಮೂಲಪುರುಷನಾದ 'ಆದಿಜಾಂಬವ' ಮತ್ತು ಕಾಲಗಳ ವಿಂಗಡಣೆಗೆ ಕಾರಣವಾದ 'ಮತಂಗ' ಕನ್ಯೆಯ ಹೆಸರಲ್ಲಿ ತಮ್ಮನ್ನು ಮೊದಲು ಗುರುತಿಸಿಕೊಳ್ಳಲು ಆರಂಭಿಸಿದರೆಂದು ಕಾಣುತ್ತದೆ. ಇಂದಿಗೂ ಮಾದಿಗರು 'ಆದಿಜಾಂಬವ' 'ಜಾಂಬವಲು' ಎಂಬ ಹೆಸರುಗಳಲ್ಲಿ ಗುರುತಿಸಿಕೊಳ್ಳುತ್ತಾರೆ. ಆದಿಜಾಂಬವ ಗುರು ಪರಂಪರೆಗೆ ಸಂಬಂಧಿಸಿದ 'ಆದಿಜಾಂಬವ ಮಹಾಸಂಸ್ಥಾನ' ಮಠವೊಂದು ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಕೊಡಿಹಳ್ಳಿ ಗ್ರಾಮದಲ್ಲಿ ಇರುವುದು ಕಂಡುಬರುತ್ತದೆ. ಇಂದು ಆದಿವಾಲದಲ್ಲಿ ಅದರ ಶಾಖಾ ಮಠ ಮತ್ತು ಹಿರಿಯೂರು ಪಟ್ಟಣದಲ್ಲಿ ಹೊಸದಾಗಿ ನಿರ್ಮಿಸಿರುವ ಕಟ್ಟಡ ಇದೆ.

ಆದಿಜಾಂಬವ ಹೆಸರಲ್ಲಿ ಅನೇಕ ಸಂಘ ಸಂಸ್ಥೆಗಳು ಇಂದು ಕಂಡುಬರುತ್ತವೆ. ಜೊತೆಗೆ ಈ ಹೆಸರಲ್ಲೆ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮಾದಿಗರು ಮಾಡುತ್ತಿದ್ದಾರೆ. ಇದಲ್ಲದೆ ಮಾದಿಗರು ತಮ್ಮನ್ನು 'ಮಾತಂಗಿಯ ಮಕ್ಕಳು' ಎಂದು ಕರೆದುಕೊಳ್ಳುತ್ತಾರೆ. ಅಲ್ಲದೆ ಕ್ರಿ.ಶ. ೧೮೯೧ರ ಮೈಸೂರಿನ ಜನಗಣತಿ ವೇಳೆ ಕೆಲವು ಮಾದಿಗರು ಯಾವುದೋ ಪುರಾಣದ ಅಧಾರ ಕೊಟ್ಟು ತಾವು ಮತಂಗ ಬ್ರಾಹ್ಮಣರೆಂದು ಹೇಳಿಕೊಂಡು ಹಾಜರಿದ್ದುದಾಗಿ ಇ.ಥರ್‌ಸ್ಟನ್ ತಮ್ಮ ದಕ್ಷಿಣ ಭಾರತದ ಜಾತಿಗಳು ಮತ್ತು ಬುಡಕಟ್ಟುಗಳು ಕೃತಿಯಲ್ಲಿ ದಾಖಲಿಸಿದ್ದಾರೆ[೯]. ಇದಲ್ಲದೇ ಪೌರಾಣಿಕ ಹಾಗೂ ಚಾರಿತ್ರಿಕ ದಾಖಲೆಗಳಲ್ಲಿ ಅಲ್ಲಲ್ಲಿ 'ಆದಿಜಾಂಬವ' 'ಜಾಂಬವ' 'ಮತಂಗ' ಮುಂತಾದ ಹೆಸರುಗಳು ಉಲ್ಲೇಖವಾಗಿವೆ. ಈ ಹೆಸರುಗಳಿಗಿಂತಲೂ ಮೊದಲು 'ಮಾದಿಗ' ಎನ್ನುವ ಪದ ಬಹುಶಃ ಎಲ್ಲಿಯೂ ಕಂಡುಬರುವುದಿಲ್ಲ. ಇದರಿಂದಾಗಿ ಮಾದಿಗರು ಪ್ರಪ್ರಥಮವಾಗಿ ತಮ್ಮನ್ನು 'ಆದಿಜಾಂಬವ' 'ಮಾತಂಗ' ಹೆಸರುಗಳಿಂದ ಗುರುತಿಸಿಕೊಂಡಿರುವುದು ತಿಳಿಯುತ್ತದೆ.

ಪಂಚಮ

'ಪಂಚಮ'ರೆಂದು ಗುರುತಿಸಿರುವ ಜಾತಿಗಳಲ್ಲಿ ಮಾದಿಗ ಜನಾಂಗವು ಒಂದು. ಪಂಚಮ ಪದ ಬಳಕೆಯು ವರ್ಣವ್ಯವಸ್ಥೆಯ ಕಾಲಘಟ್ಟದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ ವರ್ಗಗಳ ನಂತರ ಬರುವ ಜಾತಿಗಳನ್ನು ಗುರುತಿಸಲು ಬಳಕೆಯಾಗಿದೆ ಎನ್ನಬಹುದಾದರೂ ಅದಕ್ಕೆ ಚಾರಿತ್ರಿಕ ದಾಖಲೆಗಳು ದೊರಕುವುದಿಲ್ಲ. 'ಪಂಚಮ' ಪದ ಬಳಕೆ ಕುರಿತು ಹೆಚ್.ವಿ.ನಂಜುಡಯ್ಯನವರು ಈ ರೀತಿ ತಿಳಿಸಿದ್ದಾರೆ. ಪಂಚಮ ಪದ ಇತ್ತೀಚಿನದು. ಶಾಸ್ತ್ರಗಳಲ್ಲಿ ಉಕ್ತವಾದ ನಾಲ್ಕು ವರ್ಣಗಳ ಕಕ್ಷೆಯಿಂದ ಹೊರಗಿರುವ ಹೊಲೆಯ, ಮಾದಿಗ ವರ್ಗಗಳನ್ನು ಸೂಚಿಸುವ ಸಲುವಾಗಿಯೇ ಈ ಪದ ಬಳಕೆಯಾಯಿತು ಎನ್ನುತ್ತಾರೆ. ಈ ಅಂಶದ ಹಿನ್ನೆಲೆಯಲ್ಲಿ 'ಪಂಚಮ'ರೆಂದು ಕೇವಲ ಅಸ್ಪೃಶ್ಯ ವರ್ಗದಲ್ಲಿ ಕಂಡುಬರುವ ಪ್ರಮುಖ ಜಾತಿಗಳಾದ ಮಾದಿಗರು ಮತ್ತು ಹೊಲೆಯರನ್ನು ಮಾತ್ರವೇ ಗುರುತಿಸಲು ಬಳಸಲಾಗಿದೆ[೧೦] ಮೈಸೂರು ಅರಸರ ಆಳ್ವಿಕೆಯ ಸಂದರ್ಭದಲ್ಲಿ ಈ ಪದ ಪ್ರಯೋಗ ಹೆಚ್ಚಾಗಿ ಮಾಡಿರುವುದು ಕಂಡುಬರುತ್ತದೆ. ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದ ಮಾದಿಗ ಮತ್ತು ಹೊಲೆಯ ಜಾತಿಗಳಿಗೆ ಶಿಕ್ಷಣ ಕಲಿಯುವ ಸೌಲಭ್ಯ ಒದಗಿಸಿಕೊಡುವ ಸಲುವಾಗಿ 'ಪಂಚಮ' ಶಾಲೆ ಮತ್ತು ಹಾಸ್ಟಲ್‌ಗಳನ್ನೂ ತೆರೆಯಲಾಯಿತು. ಅಂತಹ ಒಂದು ಹಾಸ್ಟಲ್ (ಪಂಚಮ ಬೋರ್ಡಿಗ್ ಹಾಸ್ಟಲ್) ಚಿತ್ರದುರ್ಗ ನಗರದಲ್ಲಿ ಸ್ಥಾಪನೆ ಆಗಿತ್ತೆಂಬುದು ಅಧ್ಯಯನ ಸಂದರ್ಭದಲ್ಲಿ ತಿಳಿದುಬಂದಿತು. ಈ ಪದ ಬಳಕೆಯು ಸುಮಾರು ೧೯೧೪-೧೫ರಲ್ಲಿ ಆರಂಭಗೊಂಡಿತೆನ್ನಬಹುದು. ಏಕೆಂದರೆ ಆ ಕಾಲದಿಂದಲೇ ಅಸ್ಪೃಶ್ಯವರ್ಗದ ಬಗ್ಗೆ ಕಾಳಜಿ ಆರಂಭಗೊಂಡಿದ್ದು, ಅಂತಹ ಶಾಲೆ ಮತ್ತು ಬೋರ್ಡಿಂಗ್ ಹಾಸ್ಟಲ್‌ಗಳು ಸ್ವಾತಂತ್ರ್ಯನಂತರದ ಕಾಲದವರೆಗೂ ಇದ್ದವು. ಆ ನಂತರದಲ್ಲಿ ಶಾಲೆಗಳಲ್ಲಿ ಎಲ್ಲರಂತೆ ಅಸ್ಪೃಶ್ಯರಿಗೂ ಅವಕಾಶ ಮಾಡಿಕೊಟ್ಟಿದ್ದರಿಂದ ಈ ಹೆಸರಿನ ಶಾಲೆ ಮತ್ತು

ಹಾಸ್ಟಲ್‌ಗಳು ಕಂಡುಬರುವುದಿಲ್ಲ. 'ಆದಿಕರ್ನಾಟಕ' 'ಆದಿಜಾಂಬವ' ಹಾಗೂ 'ಹರಿಜನ' ಹೆಸರುಗಳಲ್ಲಿ ಹಾಸ್ಟಲ್‌ಗಳು ಇರುವುದು ಚಿತ್ರದುರ್ಗ ಜಿಲ್ಲೆಯಲ್ಲಿ ಹಿರಿಯೂರು, ಹೊಸದುರ್ಗ, ಹೊಳಲ್ಕೆರೆ, ಚಳ್ಳಕೆರೆ ಪಟ್ಟಣಗಳಲ್ಲಿ ಕಂಡುಬರುತ್ತವೆ. ಆದರೆ ಬಳ್ಳಾರಿ ಜಿಲ್ಲೆಯಲ್ಲಿ ಈ ಹೆಸರಿನ ಹಾಸ್ಟಲ್‌ಗಳು ಇರುವುದಿಲ್ಲ.

**ಆದಿದ್ರಾವಿಡ**

ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ಮಾದಿಗರು ಆದಿ ದ್ರಾವಿಡರೆಂದೇ ಗುರುತಿಸಿಕೊಳ್ಳುತ್ತಾರೆ. ಆದರೆ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಈ ಹೆಸರಿನಿಂದ ಗುರುತಿಸಿಕೊಳ್ಳುವವರು ಹೊಲೆಯರು ಮಾತ್ರ. ಈ ಪದ ಬಳಕೆ ೧೯ನೇ ಶತಮಾನದಲ್ಲಿ ಆರಂಭಗೊಂಡಿತು. ಈ ಪದವನ್ನು ಚಾಲ್ತಿಗೆ ತಂದವರು ತಮಿಳುನಾಡಿನ ಜಾಗೃತ ಅಸ್ಪೃಶ್ಯರು. ಅವರು ತಮ್ಮನ್ನು 'ಆದಿದ್ರಾವಿಡ'ರೆಂದು ಕರೆದುಕೊಂಡು ೧೮೫೭ರಲ್ಲಿ 'ಆದಿದ್ರಾವಿಡ' ಮಹಾಜನ ಸಭಾ' ಎಂಬ ಸಂಘವನ್ನು ಕಟ್ಟಿಕೊಂಡರು. ಈ ಸಂಘ ೧೯೧೭ರಲ್ಲಿ ತಮಿಳು ನಾಡಿಗೆ ಭೇಟಿಕೊಟ್ಟಿದ್ದ 'ಮಾಂಟೆಗೊ ಚಲ್ಮ್ಸ್‌ಫರ್ಡ್ ಸಮಿತಿ'ಗೆ ಅಹವಾಲು ಸಲ್ಲಿಸಿ ಇನ್ನು ಮುಂದೆ ತಮ್ಮನ್ನು 'ಆದಿ ದ್ರಾವಿಡ'ರೆಂದು ಕರೆಯಬೇಕೆಂದು ಒತ್ತಾಯಿಸಿದರು. ಮುಂದೆ ಈ ಸಂಘದ ಕಾರ್ಯದರ್ಶಿ ಎಂ.ಸಿ.ರಾಜರನ್ನು ಮದ್ರಾಸ್ ಪ್ರೆಸಿಡೆನ್ಸಿಯ ರಾಜ್ಯಪಾಲರಾಗಿದ್ದ ಲಾರ್ಡ್‌ವಿಲ್ಲಿಂಗ್ಡನ್ ವಿಧಾನ ಮಂಡಲದ ಸದಸ್ಯರಾಗಿ ನೇಮಕವಾದ ನಂತರ ಅವರು ಕೌನ್ಸಿಲ್‌ಗೆ ಮನವರಿಕೆ ಮಾಡಿದಾಗ ಅಸ್ಪೃಶ್ಯರನ್ನು ಅಲ್ಲಿಂದಾಚೆಗೆ 'ಆದಿ ದ್ರಾವಿಡ'ರೆಂದು ಕರೆಯಲು ಒಪ್ಪಿಸಿದರು[೨೦] ಆ ನಂತರ ಈ ಪದದ ಬಳಕೆ ಹೆಚ್ಚು ಕಂಡುಬಂದಿತು. ಈ ಪದದ ಬಳಕೆಯು ತಮಿಳುನಾಡು, ಕರ್ನಾಟಕ ಹಾಗೂ ಪಾಂಡಿಚೆರಿಗಳಲ್ಲಿ ಹೆಚ್ಚುವುದು ಕಂಡುಬರುತ್ತದೆ. ಕರ್ನಾಟಕದಲ್ಲಿ ಮಾದಿಗರು ಸುಮಾರು ೧೯೨೦ರ ಸುಮಾರಿಗೆ ಈ ಪದ ಬಳಸಿರಬಹುದಾದ ಸಾಧ್ಯತೆ ಇದೆ. ಈ ಪದದ ಹೆಸರಲ್ಲಿ ಮಾದಿಗರು(ಎಡಗೈ) ಬೆಂಗಳೂರು, ಚಿಕ್ಕಮಂಗಳೂರು, ಹಾಸನ, ಕೋಲಾರ ಹಾಗೂ ಮಂಡ್ಯಗಳಲ್ಲಿ ಗುರುತಿಸಿಕೊಳ್ಳುತ್ತಾರೆ. ಚಿತ್ರದುರ್ಗ, ತುಮಕೂರು ಹಾಗೂ ಶಿವಮೊಗ್ಗಗಳಲ್ಲಿ ಹೊಲೆಯ(ಬಲಗೈ)ರನ್ನು ಆದಿದ್ರಾವಿಡರೆಂದು ಗುರುತಿಸಲಾಗುತ್ತಿದೆ ಎಂದು ಕೆ.ಎಸ್. ಸಿಂಗ್ ರವರು 'ಆಲ್ ಕಮ್ಯುನಿಟೀಸ್' ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ೧೯೮೧ರ ಜನಗಣತಿಯ ವರದಿಯ ಪ್ರಕಾರ ರಾಜ್ಯದಲ್ಲಿ ಆದಿದ್ರಾವಿಡರು. ೫,೧೮,೮೬೦ ರಷ್ಟು ಜನಸಂಖ್ಯೆಯನ್ನು ಹೊಂದಿದ್ದು 'ಆದಿ ದ್ರಾವಿಡ' ಪದ ಬಳಕೆಯನ್ನು ಮಾದಿಗ ಮತ್ತು ಹೊಲೆಯರಿಬ್ಬರು ಬಳಸುವುದು ಕಂಡುಬಂದರು, ಮಾದಿಗರು ಈ ಪದ ಬಳಕೆ ಮಾಡಿರುವ ಕಡೆ ಹೊಲೆಯರು ಅದೇ ಪದದ ಹೆಸರಲ್ಲಿ ಗುರುತಿಸಿಕೊಂಡಿಲ್ಲ. ಹಾಗೆಯೇ ಹೊಲೆಯರು ಈ ಪದದ ಹೆಸರಲ್ಲಿ ಗುರುತಿಸಿಕೊಂಡಿರುವ ಕಡೆ ಮಾದಿಗರು ಗುರುತಿಸಿಕೊಂಡಿಲ್ಲ. ಇದು ಇವರ ನಡುವಿನ ಸಾಂಸ್ಕೃತಿಕ ಭಿನ್ನಭಿಪ್ರಾಯವನ್ನು ಖಚಿತಪಡಿಸುತ್ತದೆ. ಆದರೆ ಆದಿದ್ರಾವಿಡ ಪದ ಪ್ರಯೋಗ ಯಾರು ಮೊದಲು ಮಾಡಿದರು ಎಂಬ ಪ್ರಶ್ನೆ ಕಾಡುತ್ತದೆ. ಪ್ರಶ್ನೆಗೆ ಉತ್ತರ ತಿಳಿಯಲು ಈ ಪದ ಪ್ರಯೋಗದ

ಬಗ್ಗೆ ವಿಶೇಷವಾದ ಅಧ್ಯಯನ ಅಗತ್ಯತೆ ಕಂಡುಬರುತ್ತದೆ. ಈ ಪದ ಪ್ರಯೋಗವು ಕೇವಲ ಮೈಸೂರು ಅರಸರ ಆಳ್ವಿಕೆಗೆ ಒಳಪಟ್ಟಿದ್ದ ಆ ಜಿಲ್ಲೆಗಳಲ್ಲಿ ಮಾತ್ರ ಇತ್ತು. ಆ ನಂತರ ಇದು ಇತರೆ ಜಿಲ್ಲೆಗಳಲ್ಲಿ ವಿಸ್ತರಿಸಿದರೂ ಉತ್ತರ ಕರ್ನಾಟಕದ ಮಾದಿಗರು ಈ ಪದ ಪ್ರಯೋಗಕ್ಕೆ ಮಹತ್ವ ನೀಡಿಲ್ಲದಿರುವುದು ಕಂಡುಬರುತ್ತದೆ.

**ಆದಿಕರ್ನಾಟಕ**

ಆದಿಕರ್ನಾಟಕ ಪದದ ಬಳಕೆಯನ್ನು ಮಾದಿಗರು ಕೂಡ ಬಳಸುವುದು ಕಂಡುಬರುತ್ತದೆ. ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಾದ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕೇವಲ ಮಾದಿಗರು ಮಾತ್ರವೇ ಬಳಸುತ್ತಾರೆ. ಹಿಂದೆ ತಿಳಿಸಿರುವಂತೆ ಜಾಗೃತ ಅಸ್ಪೃಶ್ಯರು ಆದಿದ್ರಾವಿಡ ಪದ ಬಳಕೆಯನ್ನು ಮಾಡಿದ ನಂತರದಲ್ಲಿ ಆಂಧ್ರದಲ್ಲಿ 'ಆದಿಆಂಧ್ರ' ಎಂದು, ಕರ್ನಾಟಕದಲ್ಲಿರುವ ಅಸ್ಪೃಶ್ಯರು 'ಆದಿಕರ್ನಾಟಕ' ಎಂದು ಗುರುತಿಸಿಕೊಳ್ಳುವ ಪ್ರಕ್ರಿಯೆ ಆರಂಭಗೊಂಡಿತು. ಈ ಪದ ಬಳಕೆಯ ಹಿಂದೆ ಸೈದ್ಧಾಂತಿಕ ವಿಚಾರ ಅಡಗಿದೆ. ಆದಿ(ಮೊದಲು) ಅಂದರೆ ಇಲ್ಲಿಯ ಮೂಲ ನಿವಾಸಿಗಳಾದ ನಾವು ದ್ರಾವಿಡ ಪರಂಪರೆಯವರೆಂದು ಗುರುತಿಸಿಕೊಳ್ಳಲು ಈ ಪದ ಬಳಕೆಯನ್ನು ಮಾಡಿದ್ದಾರೆ. ಆದರೆ ಶ್ರೇಣೀಕೃತ ಜಾತಿವ್ಯವಸ್ಥೆಯ ಪರಿಣಾಮವಾಗಿ ಅಸ್ಪೃಶ್ಯ ಜಾತಿಗಳಾದ ಮಾದಿಗರು ಮತ್ತು ಹೊಲೆಯರ ನಡುವೆ ಈ ಪದ ಪ್ರಯೋಗಕ್ಕೆ ಸಂಬಂಧಸಿದಂತೆ ಭಿನ್ನಾಭಿಪ್ರಾಯ ಇರುವುದು ಕಂಡುಬರುತ್ತದೆ. ಈ ಕಾರಣಕ್ಕಾಗಿಯೇ ಮಾದಿಗ ಮತ್ತು ಹೊಲೆಯರು ವಿವಿಧ ಪ್ರದೇಶಗಳಲ್ಲಿ ಭಿನ್ನ ಭಿನ್ನ ಹೆಸರುಗಳಿಂದ ಗುರುತಿಸಿಕೊಂಡಿದ್ದಾರೆ. ಬಹುಶಃ ಮಾದಿಗರು ಮೊದಲು ಆದಿಕರ್ನಾಟಕ ಪದ ಬಳಕೆ ಮಾಡಿರುವ ಕಡೆ ಹೊಲೆಯರು ಆ ಹೆಸರಿನಿಂದ ತಮ್ಮನ್ನು ಗುರುತಿಸಿಕೊಳ್ಳಲು ಹಿಂಜರಿದಿರಬಹುದು. ಹೊಲೆಯರು 'ಆದಿದ್ರಾವಿಡ' ಎಂದು ಗುರುತಿಸಿಕೊಂಡ ಪ್ರದೇಶಗಳಲ್ಲಿ ಮಾದಿಗರು ಈ ಪದ ಪ್ರಯೋಗ ಮಾಡಲು ಹಿಂಜರಿದಿರಬಹುದು. ಈ ಕಾರಣದಿಂದ ಮಾದಿಗ ಮತ್ತು ಹೊಲೆಯ ಜನಾಂಗ ಗಳೆರಡರಲ್ಲೂ 'ಆದಿದ್ರಾವಿಡ' ಮತ್ತು 'ಆದಿ ಕರ್ನಾಟಕ' ಪದ ಬಳಕೆ ಕಂಡುಬರುತ್ತದೆ.

ಆದಿ ಕರ್ನಾಟಕ ಪದ ಬಳಕೆ ಆರಂಭಗೊಂಡಿದ್ದು ೧೯೨೫ರಲ್ಲಿ. ೧೯೨೫ರ ಮೇ ತಿಂಗಳಲ್ಲಿ ಆರ್. ಗೋಪಾಲಸ್ವಾಮಿಯವರ ಮುಂದಾಳತ್ವದಲ್ಲಿ ತುಮಕೂರು ಜಿಲ್ಲೆ ಕೊರಟಗೆರೆಯಲ್ಲಿ ಪಂಚಮರ ಸಮ್ಮೇಳನ ನಡೆಯಿತು. ಆ ಸಮ್ಮೇಳನದಲ್ಲಿ ಪಂಚಮರನ್ನು 'ಆದಿಕರ್ನಾಟಕ'ರೆಂದು ಕರೆಯಬೇಕೆಂಬ ಠರಾವು ಮಾಡಿ ಸರ್ಕಾರಕ್ಕೆ ಕಳುಹಿಸಿದರು. ಅದನ್ನು ಪರಿಶೀಲಿಸಿದ ಸರ್ಕಾರ ೧೯೨೫ರ ಆಕ್ಟೋಬರ್ ತಿಂಗಳಲ್ಲಿ ಅ ಬಗ್ಗೆ ಸರಕಾರಿ ಆಜ್ಞೆ ಹೊರಡಿಸಿತು.[೧೧] ಅಲ್ಲಿಂದ ಆರಂಭಗೊಂಡ ಈ ಪದ ಪ್ರಯೋಗ ಇಂದಿಗೂ ಮುಂದುವರಿದಿದೆ ೧೯೮೧ರ ಜನಗಣತಿಯ ವರದಿ ಪ್ರಕಾರ ಆದಿಕರ್ನಾಟಕ ಜನಸಂಖ್ಯೆ ರಾಜ್ಯದಲ್ಲಿ ಒಟ್ಟು ೧೮,೯೯,೫೫೮ ರಷ್ಟು ಇದೆ.

**ಹರಿಜನ**

'ಹರಿಜನ' ಪದವನ್ನು ರಾಷ್ಟ್ರದ್ಯಾಂತ ಅಸ್ಪಶ್ಯರನ್ನು ಗುರುತಿಸಲು ಬಳಸಲಾಗುತ್ತಿದೆ. ಮುಖ್ಯವಾಗಿ ಮಾದಿಗರು ಮತ್ತು ಹೊಲೆಯನ್ನು ಮಾತ್ರವೇ ಗುರುತಿಸಲು ಬಳಸಲಾಗಿದೆ. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಮಾದಿಗರನ್ನು ಮಾತ್ರ 'ಹರಿಜನ'ರೆಂದು ಗುರುತಿಸಲಾಗುತ್ತಿದೆ. ಚಿತ್ರದುರ್ಗ ಜಿಲ್ಲೆಗಿಂತಲೂ ಬಳ್ಳಾರಿ ಜಿಲ್ಲೆಯಲ್ಲಿ ಈ ಪದ ಪ್ರಯೋಗ ಹೆಚ್ಚಿನ ಪ್ರಮಾಣದಲ್ಲಿ ಬಳಕಯಾಗಿರುವುದು ಕಂಡುಬರುತ್ತದೆ. ಈ ಪದ ಬಳಕೆ ಹೆಚ್ಚಿನ ಪ್ರಮಾಣದಲ್ಲಿ ಆರಂಭಗೊಂಡಿದ್ದು ಸ್ವಾತಂತ್ರ್ಯ ಚಳವಳಿಯ ಕಾಲದಲ್ಲಿ. ಗಾಂಧೀಜಿ ಅವರು ಈ ಪದಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಟ್ಟು ಭಾರತದ್ಯಾಂತ ಹೆಚ್ಚು ಬಳಕೆಗೆ ತರಲು ಕಾರಣವಾದರು. ಈ ಪದ ಪ್ರಯೋಗ ಈ ಹಿಂದೆ ಕಂಡುಬಂದರೂ ಅದು ಹೆಚ್ಚು ಪ್ರಚಲಿತದಲ್ಲಿರಲಿಲ್ಲ. ಗಾಂಧೀಜಿಯವರ ಸಂಪಾದಕತ್ವದ 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ ಅವರು ಅಸ್ಪೃಶ್ಯರು ಎಂಬ ಪದಬಳಕೆ ಮಾಡುತ್ತಿದ್ದರು. ಅದಕ್ಕೆ ವಿರೋಧ ವ್ಯಕ್ತಪಡಿಸಿದ ಅಸ್ಪೃಶ್ಯನಾದ ಪತ್ರಿಕಾ ವರದಿಗಾರ ಈ ಹಿಂದೆ ಸಂತ ಕವಿ(ಗುಜರಾತ್) ಅಸ್ಪೃಶ್ಯರನ್ನು ಸಂಬೋಧಿಸಲು ಬಳಸಿದ ''ಹರಿಜನ'' ಪದವನ್ನು ಬಳಸಲು ಸಲಹೆ ಮಾಡಿದ. ಆ ಸಲಹೆಯ ಮೇರೆಗೆ ಆ ಪದವನ್ನು ಒಪ್ಪಿಕೊಂಡು ತಮ್ಮ ಪತ್ರಿಕೆಗೆ 'ಹರಿಜನ ಪತ್ರಿಕೆಯೆಂದು ಕರೆದರು.[೧೨] ಅಲ್ಲಿಂದ ಗಾಂಧೀಜಿಯವರು 'ಹರಿಜನ' ಎಂದರೆ ದೇವರಲ್ಲಿ ಒಬ್ಬನಾದ 'ಹರಿ'ಯ ಮಕ್ಕಳು ಅಂದರೆ ದೇವರ ಮಕ್ಕಳು ಎಂಬರ್ಥದಲ್ಲಿ ಈ ಪದ ಪ್ರಯೋಗಕ್ಕೆ ಹೆಚ್ಚು ಮಹತ್ವ ನೀಡಿದರು.

ಕರ್ನಾಟಕದಲ್ಲಿ ೧೯೩೩ರ ಮಾರ್ಚಿಯಲ್ಲಿ ಮೈಸೂರು ಜಿಲ್ಲೆ ಎಡೆತೊರೆಯಲ್ಲಿ ಜರುಗಿದ ಸಮ್ಮೇಳನದಲ್ಲಿ ಎಲ್ಲ ಅಸ್ಪೃಶ್ಯರನ್ನು 'ಹರಿಜನ'ರೆಂದು ಕರೆಯಬೇಕೆಂದು ನಿರ್ಣಯಿಸಲಾಯಿತು.[೧೩] ಅಲ್ಲಿಂದ ಈ ಪದದ ಬಳಕೆ ಆರಂಭಗೊಂಡಿತು ಎನ್ನಬಹುದು. ಈ ಪದಕ್ಕೆ ಸಂಬಂಧಿಸಿದಂತೆ 'ಹರಿಜನ' ಬದಲಾಗಿ 'ಆದಿಜನ' ಎಂದು ಕರೆದರೆ ಹೆಚ್ಚು ಅರ್ಥ ಇದೆ ಎಂದು ಗಾಧೀಜಿಗೆ ಸಲಹೆ ಕೊಟ್ಟಿದ್ದು ಉಂಟು. ಆದರೆ 'ಹರಿಜನ' ಪದವೆ ಸೂಕ್ತ ಎಂದಿದ್ದರು. ಈ ಪದ ಪ್ರಯೋಗಕ್ಕೆ ಹೆಚ್ಚು ಮಹತ್ವ ನೀಡಬೇಕೆಂದು ೧೯೩೮ರಲ್ಲಿ ಬೊಂಬಾಯಿ ಶಾಸನ ಸಭೆಯಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷ ಈ ಹೊಸ ಹೆಸರನ್ನು ನ್ಯಾಯ ಸಮ್ಮತವಾದುದೆಂದು ಗುರುತಿಸಿ ಅಂಗೀಕರಿಸಬೇಕೆಂಬ ವಿಷಯವನ್ನು ಮಂಡಿಸಿದಾಗ ಡಾ.ಬಿ.ಆರ್ .ಅಂಬೇಡ್ಕರ್ ಅವರು ಅಸ್ಪೃಶ್ಯರನ್ನು 'ಹರಿಜನ' ಪದದ ಮೂಲಕ ಗುರುತಿಸಲು ವಿರೋಧ ವ್ಯಕ್ತಪಡಿಸಿದರು. ಈ ಪದ ಮಾನವೀಯ ಗೌರವಕ್ಕೆ ಭಾದಕವಾಗಿದೆ ಎಂದು ಭಾವಿಸಿದರು.[೧೪] ದೇವದಾಸಿ ಅನಿಷ್ಟ ಪದ್ದತಿಗೆ ಒಳಗಾಗಿದ್ದ ಅಸ್ಪೃಶ್ಯವರ್ಗದ ಹೆಣ್ಣುಮಕ್ಕಳು ಭೋಗವಿಲಾಸಿಗಳಿಗೆ ವೇಶ್ಯೆಯರಾಗಿ ಅವರ ಲೈಂಗಿಕ ಬಯಕೆಯನ್ನು ಈಡೇರಿಸಬೇಕಿತ್ತು. ಆದರೆ ಅದರ ಪ್ರತಿಫಲವಾಗಿ ಹುಟ್ಟಿದ ಮಕ್ಕಳನ್ನು 'ದೇವರ ಮಕ್ಕಳು' ಎಂದು ಕರೆಯಲಾಗುತ್ತಿತ್ತು. ಈ

ಹಿನ್ನೆಲೆಯಲ್ಲಿ ಆ ಪದ ಬಳಕೆಯನ್ನೂ ವಿರೋಧಿಸಯಿತು. ಹೀಗೆ ಅಲ್ಲಿಂದ ಆರಂಭಗೊಂಡ ವಿರೋಧ ಇತ್ತೀಚಿನವರೆಗೂ ಮುಂದುವರಿದಿದೆ. ಕೆಲವು ಸಂಸತ್ತು ಸದಸ್ಯರು ಮತ್ತು ಸಾಮಾಜಿಕ ಕಾರ್ಯಕರ್ತರು ಸರ್ಕಾರದ ಮೇಲೆ ಒತ್ತಡ ತಂದುದರ ಪರಿಣಾಮವಾಗಿ ಕೇಂದ್ರ ಸರ್ಕಾರವು ಈ ವಿಷಯವನ್ನು ಎಚ್ಚರಿಕೆಯಿಂದ ಪರಿಶೀಲಿಸಿ ೧೯೯೦ರ ಆಗಸ್ಟ್ ೧೬ ರಂದು ರಾಜ್ಯ ಮತ್ತು ಕೇಂದ್ರಾಡಳಿತ ಸರ್ಕಾರಗಳಿಗೆ ಹರಿಜನಕ್ಕೆ ಬದಲಾಗಿ 'ಪರಿಶಿಷ್ಟ ಜಾತಿ' ಪದವನ್ನು ಬಳಸಲು ಸಲಹೆ ಮಾಡಿತ್ತು. ಆ ನಂತರ ೧೯೯೧ರ ಮಾಚ್ ೨೧ ರಂದು ಕೇಂದ್ರ ಮಂತ್ರಿ ರಾಮಜಿಲಾಲ್ ಸುಮನ್ ಅವರು 'ಹರಿಜನ' ಮತ್ತು 'ಗಿರಿಜನ' ಪದಗಳನ್ನು ಸರ್ಕಾರದ ಪತ್ರ ವ್ಯವಹಾರದಲ್ಲಿ ನಿಷೇಧಿಸಲಾಗಿದೆ ಎಂದು ರಾಜ್ಯಗಳ ಮುಖ್ಯಮಂತ್ರಿಗಳಿಗೆ ಒಂದು ಸುತ್ತೋಲೆಯ ಮೂಲಕ ತಿಳಿಸಿದರು.[೧೫] ಹೀಗೆ ಅದರ ಬಳಕೆಯನ್ನು ನಿಷೇಧಿಸಿದರು. ಇನ್ನೂ ಗ್ರಾಮೀಣ ಪರಿಸರದಲ್ಲಿ ಆ ಪದ ಬಳಕೆ ಹೆಚ್ಚಾಗಿ ಕಂಡು ಬರುತ್ತದೆ.

## ನಿಮ್ನವರ್ಗ (ಡಿಪ್ರೆಸ್ಡ್ ಕ್ಲಾಸ್) ಮತ್ತು ಪರಿಶಿಷ್ಟ ಜಾತಿ

ಶೋಷಿತ ಅಸ್ಪೃಶ್ಯ ಜಾತಿಗಳನ್ನು ನಿಮ್ನವರ್ಗ ಅಥವಾ ಡಿಪ್ರೆಸ್ಡ್ ಕ್ಲಾಸ್ ಎಂದು ಸಹ ಹಿಂದೆ ಗುರುತಿಸಲಾಗುತ್ತಿತ್ತು. ಈ ರೀತಿ ಗುರುತಿಸುತ್ತಿದ್ದ ವರ್ಗದಲ್ಲಿ ಮಾದಿಗ ಜನಾಂಗವು ಒಂದು. ಈ ಪದ ಬಳಕೆಯು ಆರಂಭಗೊಂಡಿದ್ದು ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ. ಸರ್ಕಾರವು ಸಾಮಾಜಿಕವಾಗಿ ಹಿಂದುಳಿದವರನ್ನು ಗುರುತಿಸುವ ಸಲುವಾಗಿ ಜನಗಣತಿಯ ಸಂದರ್ಭದಲ್ಲಿ ಕೆಲವೊಂದು ಅಂಶಗಳನ್ನು ಪರಿಗಣಿಸಿ ಜನಗಣತಿ ಆಯುಕ್ತರಿಗೆ ಸೂಚಿಸಿತು. ಆ ಪ್ರಕಾರ ಆ ಪರಿವ್ಯಾಪ್ತಿಯಲ್ಲಿ ಗುರುತಿಸಿರುವಂತಹ ಜಾತಿ-ಜನಾಂಗಗಳನ್ನು 'ಡಿಪ್ರೆಸ್ಡ್ ಕ್ಲಾಸ್' ಎಂದೆ ಕರೆಯಲಾಯಿತು.[೧೬] ಅಲ್ಲಿಂದ ಆರಂಭಗೊಂಡ ಈ ಪದಗಳು ಸ್ವಾತಂತ್ರ್ಯಾನಂತರದ ಕಾಲದವರೆಗೂ ಬಳಕೆಯಾಗಿರುವುದು ಕಂಡುಬರುತ್ತದೆ. ಇದಲ್ಲದೆ 'ಪರಿಶಿಷ್ಟ ಜಾತಿ' ಪದದ ಬಳಕೆಯೂ ಕಂಡುಬರುತ್ತದೆ. ಈ ಪದವು ಭಾರತಕ್ಕೆ ಬ್ರಿಟಿಷರ ರಾಯಭಾರಿಯಾಗಿ ಬಂದಿದ್ದ ಸೈಮನ್ ಆಯೋಗ ಅಸ್ಪೃಶ್ಯರಿಗೆ 'ಪರಿಶಿಷ್ಟ ಜಾತಿ' ಎಂದು ನಾಮಕರಣ ಮಾಡಿತು.[೧೭] ಅಲ್ಲಿಂದ ಈ ಪದ ಪ್ರಯೋಗ ಆರಂಭಗೊಂಡಿತು. ಈ ಪದ ಬಳಕೆಯ ನಂತರದಲ್ಲಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಕೆಲವೊಂದು ಆಯೋಗಗಳನ್ನು ರಚಸಿ ಹಿಂದುಳಿದವರನ್ನು ಗುರುತಿಸಲು ಮತ್ತು ಅವರ ಅಭಿವೃದ್ಧಿಗೆ ಸಲಹೆಗಳನ್ನು ನೀಡಲು ತಿಳಿಸಿತು. ಅವುಗಳು ನೀಡಿದ ವರದಿಯನ್ನು ಆಧರಿಸಿ ಪರಿಶಿಷ್ಟ ಜಾತಿಯ ಪಟ್ಟಿಯೊಳಗೆ ಮಾದಿಗ ಮತ್ತು ಹೊಲೆಯರಲ್ಲದೆ ಅಸ್ಪೃಶ್ಯೇತರ ಜಾತಿಗಳಾದ ಬೋವಿ, ಲಂಬಾಣಿ, ಇತ್ಯಾದಿ ೧೮೦ಕ್ಕೂ ಜಾತಿಗಳ ಸೇರ್ಪಡೆಯಾಗಿರುವುದು ಇಂದು ಕಂಡುಬರುತ್ತದೆ. ಈ ಪದ ಪ್ರಯೋಗವು ಸರ್ಕಾರಿ ದಾಖಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

**ದಲಿತ**

'ದಲಿತ' ಎನ್ನುವ ಪದವು ದಮನಕ್ಕೆ ಒಳಗಾದ ಅಥವಾ ಶೋಷಿತ ಸಮುದಾಯಗಳನ್ನು ಗುರುತಿಸಲು ಮಹಾರಾಷ್ಟ್ರ ಜಾಗೃತ ದಲಿತರು ಬಳಸಲಾರಂಭಿಸಿದರು. ಈ ರೀತಿ ಶೋಷಿತ ಜಾತಿಗಳಲ್ಲಿ ಉಂಟಾದ ಜಾಗೃತಿ 'ದಲಿತ ಸಂಘಟನೆ'ಯ ಹುಟ್ಟಿಗೆ ಕಾರಣವಾಯಿತು. ಕರ್ನಾಟಕದಲ್ಲಿ ಈ ಪದದ ಬಳಕೆ ೧೯೭೦ರ ದಶಕದಲ್ಲಿ ಆರಂಭಗೊಂಡಿತು. ಈ ಸಂಘಟನೆಯಲ್ಲಿ ಪ್ರಮುಖವಾಗಿ ಮಾದಿಗ ಮತ್ತು ಹೊಲೆಯರು ತೊಡಗಿಸಿಕೊಂಡಿದ್ದರಿಂದ ಅವರು ಈ ಪದ ಪ್ರಯೋಗದ ಮೂಲಕ ತಮ್ಮನ್ನೂ ಗುರುತಿಸಿಕೊಂಡರು. ಈ ಪದದ ಅರ್ಥವನ್ನು ಅನೇಕರು ವಿವಿಧ ರೀತಿಯಲ್ಲಿ ಅರ್ಥೈಸುತ್ತ ಬಡತನದಿಂದ ನರಳುತ್ತಿರುವ ಎಲ್ಲಾ ಜಾತಿಯ ಜನರು ಒಳಗೊಳ್ಳುವಂತೆ ಮಾಡಿದರೂ ಅದನ್ನು ಹೆಚ್ಚಾಗಿ ಮಾದಿಗರು ಮತ್ತು ಹೊಲೆಯರು ಮಾತ್ರವೇ ಬಳಸುತ್ತಾರೆ. ಸಾಹಿತ್ಯಿಕ ವಲಯದಲ್ಲಿ ಈ ಪದವು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ.

ಈ ಮೇಲಿನ ಎಲ್ಲಾ ಹೆಸರುಗಳಿಂದ ಮಾದಿಗರು ಗುರುತಿಸಿಕೊಂಡಿರುವುದು ಕಂಡು ಬರುವುದಲ್ಲದೇ ಇನ್ನೂ ಅನೇಕ ಹೆಸರುಗಳು ಅವರಿಗುಂಟು.

## ೨.೩ ಮಾದಿಗ ಸಂಬಂಧಿತ ಪ್ರಮುಖ ಜಾತಿಗಳು

ಮಾದಿಗ ಜನಾಂಗವು ಪೌರಾಣಿಕ, ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಹಲವಾರು ಜಾತಿಗಳೊಂದಿಗೆ ತಮ್ಮ ಸಂಬಂಧ ಹೊಂದಿರುವುದು ಕಂಡುಬರುತ್ತದೆ. ಕೆಲವೊಂದು ಜಾತಿಗಳು ವೃತ್ತಿಯ ನೆಲೆಯಲ್ಲಿ ಮತ್ತು ಕೆಲವು ಜಾತಿಗಳು ಸಾಂಸ್ಕೃತಿಕ ಅಂಶಗಳ ನೆಲೆಯಲ್ಲಿ ಇವರೊಂದಿಗೆ ಸಂಬಂಧ ಹೊಂದಿದ್ದಾರೆ. ಅದನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಸಿಂದ್ ಮಾದಿಗರು**

ಮಾದಿಗ ಸಂಬಂಧಿತ ಜಾತಿಯಲ್ಲಿ ಪ್ರಮುಖವಾದುದು ಸಿಂದ್ ಮಾದಿಗರು. ಇವರು ಸಿಂದ್ ಪದವನ್ನು ಮಾದಿಗ ಜಾತಿಯೊಂದಿಗೆ ಹೊಂದಿರುವುದರಿಂದ ಇವರನ್ನು ಸಿಂದ್ ಮಾದಿಗರೆಂದು ಕರೆಯುತ್ತಾರೆ. ಸಿಂದ್ ಎಂಬುದು ತೆಲುಗಿನ 'ಚಿಂದು' ಪದದ ತದ್ಭವ ರೂಪ. ತೆಲುಗು ವಿಶ್ವವಿದ್ಯಾಲಯದ ನಿಘಂಟಿನ ಪ್ರಕಾರ 'ಚಿಂದು' ಪದವು ಎರಡು ಅರ್ಥಗಳನ್ನು ಹೊಂದಿರುವುದು ಕಂಡುಬರುತ್ತದೆ. ೧. ನಾಟ್ಯ ೨. ಮಾದಿಗರ ಬಳಿಯಾಚಿಸುವ ಒಂದು ಶಾಖೆ.[೧೮] ಈ ಎರಡು ಅಂಶಗಳನ್ನು ಒಳಗೊಂಡಿರುವ ಮಾದಿಗರನ್ನು 'ಸಿಂದ್ ಮಾದಿಗರು' ಎಂದು ಕರೆಯಲಾಗುತ್ತಿದೆ. ಮಾದಿಗ ಕುಲದಲ್ಲಿ ನಡೆಯುವ ಮದುವೆಗಳಲ್ಲಿ 'ತಂಗಡಿದ್ಯಾವ್ರ' ಆಚರಣೆ ಇಂದಿಗೂ ಕಂಡುಬರುತ್ತದೆ. ಒಂದೆ ಇದೊಂದು ವಿಶಿಷ್ಟ ಬಗೆಯ ಆಚರಣೆಯಾಗಿದ್ದು ಇಂಥಹ ಸಂದರ್ಭದಲ್ಲಿ ಸಿಂದ್ ಮಾದಿಗರ

ಕುಣಿತ ಇದ್ದೆ ಇರುತ್ತಿತ್ತು. (ಇಂದು ಮರೆಯಾಗಿದೆ) ಕುಣಿತ ಮಾಡುತ್ತಿದ್ದ ಗುಂಪು ಅಥವಾ ಪಂಗಡದ ಮಾದಿಗರನ್ನು ಸಿಂದ್ ಮಾದಿಗರೆಂದು ಕರೆಯುವುದರಿಂದ ಆ ಪದವು ಮುಂದುವರಿದು ಇದೊಂದು ಪ್ರತ್ಯೇಕ ಜಾತಿಯಾಗಿ ಮುಂದುವರಿದಿದೆ. ಇಂದಿಗೂ ಆಂಧ್ರದಲ್ಲಿ ಇವರು ಹೆಚ್ಚಾಗಿ ನೆಲೆಸಿರುವುದು ಕಂಡುಬರುತ್ತದೆ. ಅಲ್ಲದೇ ಇವರ ಮೂಲ ನೆಲೆ ಆಂಧ್ರ ಪ್ರದೇಶ. ತೆಲಂಗಾಣ ಪ್ರಾಂತ್ಯದಲ್ಲಿ ಇವರನ್ನು ಚಿಂದುಲು(ಚಿಂಡರು), ಚಿಂದೋಳ್ಳು(ಚಿಂದೋರು), ಸಿಂದೊಳ್ಳು(ಸಿಂದೋರು) ಎಂದು ಕರೆದರೆ ಉಳಿದ ಪ್ರಾಂತ್ಯಗಳಲ್ಲಿ 'ಮಾದಿಗ ಬೋಗಲು(ಮಾದಿಗ ಬೋಗಗಳು) ಎಂದು ಕರೆಯಲಾಗುತ್ತಿದೆ.[೧೯] ಅಲ್ಲದೆ ಚಿನ್ನ ಮಾದಿಗರು (ಚಿಕ್ಕ ಮಾದಿಗರು), ಸಿನ್ನ ಮಾದಿಗರು(ಚಿಕ್ಕಮಾದಿಗರು) ಇತ್ಯಾದಿ ಹೆಸರುಗಳಿಂದಲೂ ಕರೆಯುತ್ತಾರೆ.[೨೦] ಈ ರೀತಿ ವಿವಿಧ ಹೆಸರುಗಳಿಂದ ಕರೆಯುತ್ತಿರುವ ಸಿಂಗ್ ಮಾದಿಗರು ದಕ್ಷಿಣ ಭಾರತದ ಅಸ್ಪೃಶ್ಯ ಸಮುದಾಯದ ಎಡಗೈ ಪಣಕ್ಕೆ ಸೇರಿದ ಮಾದಿಗರ ಒಳ ಪ್ರಬೇಧವಾದ 'ತಣಿಗೆ ಭುವ್ವ'ದ ಒಂದು ಶಾಖೆಯಾಗಿದೆ.[೨೧]

ಸಿಂದ್ ಮಾದಿಗರು ಮದುವೆ ಸಂದರ್ಭದಲ್ಲಿ ಮಾಡುತ್ತಿದ್ದ ಕುಣಿತವು ಬರಬರುತ್ತಾ ನಿಂತು ಹೋದದ್ದರಿಂದ ಅದರ ಆಚರಣೆಯ ಭಾಗವಾಗಿ ಅಥವಾ ಸಂಕೇತಿಕವಾಗಿ ಮದುವೆಯ ಮರುದಿನ 'ತಗಡಿದ್ಯಾವು'ನ್ನೂ ಆಚರಣೆ ಮಾಡುವುದು ಮಾದಿಗರಲ್ಲಿ ಕಂಡುಬರುತ್ತದೆ. ಹಿಂದೆ ಈ ಆಚರಣೆಯ ಸಂದರ್ಭದಲ್ಲಿ ಕುಣಿತ ಮಾಡುತ್ತಿದ್ದ ಮಾದಿಗರ ಒಂದು ಗುಂಪಿಗೆ ಪ್ರತಿಫಲವಾಗಿ ವಸ್ತುಗಳು ಇಲ್ಲವೇ ಅಹಾರ ನೀಡುತ್ತಿದ್ದರೆಂದು ಕಾಣುತ್ತದೆ. ಈ ಕಾರಣಕ್ಕಾಗಿ ಸಿಂದ್ ಮಾದಿಗರು ಮಾದಿಗರನ್ನೆ ಅವಲಂಬಿಸಿದ್ದಾರೆ. ಸಿಂದ್ ಮಾದಿಗರು ಮೂಲತಃ ಕಲೆ ನಂಬಿಕೊಂಡು ಜೀವನ ಮಾಡುತ್ತಿದ್ದ ಕಲಾವಿದರಾಗಿದ್ದುದರಿಂದ ಅಲೆಮಾರಿ ಜೀವನ ನಡೆಸುತ್ತಿದ್ದರಿಂದ ಒಂದೇ ಕಡೆ ನೆಲೆಸಲು ಸಾಧ್ಯವಾಗದೆ ಅನೇಕ ಕಡೆ ಈ ಕುಟುಂಬಗಳು ಹರಡಿಕೊಂಡಿರುವುದು ಕಂಡುಬರುತ್ತದೆ. ಆಂಧ್ರದಿಂದ ವಲಸೆ ಬಂದು ಕರ್ನಾಟಕದ ಕೆಲವು ಭಾಗಗಳಲ್ಲಿ ನೆಲೆಸಿದ್ದಾರೆ. ಇಂದು ಕೃಷಿಯಲ್ಲಿ ತೊಡಗಿಕೊಂಡು ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನ ಮತಂಗಪುರ, ಸುಗ್ಗಂಡಹಳ್ಳಿ, ಹುಳದೇವನಹಳ್ಳಿ, ಕೊರ್ನಹೊಸಳ್ಳಿ, ಕೋಲಾರ ತಾಲ್ಲೂಕಿನ ಆಲಹಳ್ಳಿ, ಗುಲಗಂಜಿಗುರ್ಕಿ, ಚಿಂತಾಮಣಿ-ತಾಲ್ಲೂಕಿನ ಮಂಗಳಪಲ್ಲಿ, ಶ್ರೀರಾಮಪುರ ಕಾಲೋನಿಗಳಲ್ಲಿ ಇವರು ನೆಲೆನಿಂತಿರುವರು. ಸುಮಾರು ೪೦-೫೦ ಕುಟುಂಬಗಳಿರುವ ಮಾತಂಗಪುರದಲ್ಲಿ ರಜಪೂತರು, ಆಚಾರಿಗಳ ಒಂದೆರಡು ಮನೆ ಬಿಟ್ಟರೆ ಉಳಿದೆಲ್ಲವು ಸಿಂದ್ ಮಾದಿಗರವೇ[೨೨] ಆಗಿವೆ.

ಸಿಂದ್ ಮಾದಿಗರ ಅದರಲ್ಲೂ ಮುಖ್ಯವಾಗಿ ಮಾದಿಗರ ಕುಲದ ಹುಟ್ಟು ಮತ್ತು ಚರಿತ್ರೆಗಳನ್ನು ಸಾದರಪಡಿಸುವ ಸಿಂದ್ ಕತೆ ಅಥವಾ ಜಾಂಬವ ಪುರಾಣ ಹಾಗೂ ಮಾದಿಗ ಆಟ ಅಥವಾ ಎಲ್ಲಮ್ಮ ಕತೆಗಳನ್ನು ಇವರು ಪ್ರದರ್ಶಿಸುತ್ತಿದ್ದರು. ಶ್ರೇಣಿಕೃತ ಜಾತಿ ವ್ಯವಸ್ಥೆಯ ಒಳಗಡೆ ಮಾದಿಗರ ಚರಿತ್ರೆಯನ್ನು ಪ್ರದರ್ಶಿಸುವ ನಾಟಕಗಳನ್ನು ಆಡುತ್ತಿದ್ದುದು ಒಂದು ಸಾಹಸವೆ ಸರಿ. ಇವುಗಳಲ್ಲದೆ

ಮಹಾಭಾರತ, ರಾಮಾಯಣಗಳಿಂದ ಆಯ್ದ ಪ್ರಸಂಗಗಳ ಪ್ರದರ್ಶನಗಳನ್ನೂ ಜನಪದ, ಚಾರಿತ್ರಿಕ ನಾಟಕಗಳನ್ನು ಇವರು ಪ್ರದರ್ಶಿಸುತ್ತಾರೆ.[೧೩] ಕಲಾವಿದರಾಗಿದ್ದ ಸಿಂದ್ ಮಾದಿಗರು ಮದುವೆ, ಹುಟ್ಟು, ಸಾವುಗಳ ಆಚರಣೆಗೆ ಸಂಬಂಧಿಸಿದಂತೆ ಬೇರೆ ಮಾದಿಗರಲ್ಲಿಲ್ಲದ ಕೆಲವು ವಿಶಿಷ್ಟ ಆಚರಣೆಗಳನ್ನು ಅನುಸರಿಸುತ್ತಾರೆ. ಇದನ್ನು ಹೊರತುಪಡಿಸಿದರೆ ಮಿಕ್ಕಂತೆ ಸಿಂದ್ ಮಾದಿಗರು ಮಾದಿಗ ಕುಲದ ಚರಿತ್ರೆ, ಪೌರಾಣಿಕ ಹಿನ್ನೆಲೆಯನ್ನು ಹೊಂದಿದ್ದಾರೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಿಂದ್ ಮಾದಿಗರು ಮೂಲತಃ ಮಾದಿಗರ ಒಂದು ಪಂಗಡವಾಗಿದ್ದು ಬರುಬರುತ್ತಾ ಅದು ಪ್ರತ್ಯೇಕ ಜಾತಿಯಾಗಿ ಗುರುತಿಸಿಕೊಳ್ಳಲಾಗಿದೆ.

### ದಕ್ಕಲಿಗರು

ಮಾದಿಗ ಸಂಬಂಧಿತ ಜಾತಿಗಳಲ್ಲಿ ದಕ್ಕಲಿಗ ಜನಾಂಗವು ಒಂದು. ಕರ್ನಾಟಕದಲ್ಲಿ ಇವರನ್ನು ದಕ್ಕಲಿಗ, ದಕ್ಕಲ, ದಕ್ಕಲ್ಲಾರ್, ಡೊಕ್ಕಲು ಇತ್ಯಾದಿ ಹೆಸರುಗಳಿಂದ ಗುರುತಿಸಲಾಗುತ್ತಿದೆ. ಇವರು ಮಹಾರಾಷ್ಟ್ರದ ಮಾಂಗ್, ಆಂಧ್ರದ ತೆಲುಗು ಮಾದಿಗ ಹಾಗೂ ಕರ್ನಾಟಕದ ಮಾದಿಗರ ಉಪಜಾತಿಯಾಗಿದೆ. [೧೪] 'ದಕ್ಕಲ' ಪದ ನಿಷ್ಪತ್ತಿಗೆ ಮತ್ತು ಮಾದಿಗರೊಂದಿಗೆ ಇವರು ಹೊಂದಿರಬಹುದಾದ ಸಂಬಂಧ ತಿಳಿಯಲು ಪುರಾಣ ಕತೆಗಳ ಮೊರೆಹೊಗಬೇಕಾಗಿದೆ. 'ದಕ್ಕಲ' ಎಂಬುದು ತೆಲುಗಿನಲ್ಲಿ 'ಡಕ್ಕಲ್' ಅಥವಾ 'ಡೊಕ್ಕ' ಎಂಬುದಕ್ಕೆ ಬೆನ್ನೆಲುಬು ಎಂದಿದ್ದು ಬೆನ್ನೆಲುಬಿನಿಂದ ಮತ್ತೆ ಜೀವಪಡೆದವನ್ನು ಎಂಬ ಅರ್ಥವನ್ನು ಸೂಚಿಸುತ್ತದೆ.[೧೫] ಇದೇ ಅರ್ಥ ಕೊಡುವ ಕತೆಯೊಂದು ಹೀಗಿದೆ. ಶಿವನ ಮದುವೆಗೆ ಆಭರಣಗಳನ್ನು ತಯಾರಿಸಲು ಅಕ್ಕಸಾಲಿಗನನ್ನು ಕರೆಸಲಾಯಿತು. ಅವನ ಬಳಿ ಈ ಸಂಬಂಧ ಯಾವ ಉಪಕರಣಗಳು ಇಲ್ಲದಿದ್ದ ಕಾರಣ ಜಾಂಬವಮುನಿ ತನ್ನ ಮಗನನ್ನು ಬಲಿಕೊಟ್ಟ ಫಲವಾಗಿ ಆಭರಣ ತಯಾರಿಸಲಾಯಿತು. ಆದರೆ ಬೆನ್ನುಮೂಳೆಯನ್ನು ಹಾಗೆಯೇ ಬಿಡಲಾಯಿತು. ಶಿವನ ಕೃಪೆಯಿಂದ ಮತ್ತೆ ಜೀವ ಪಡೆದ ಜಾಂಬವ ಮುನಿಯ ಮಗ ತಂದೆಯಲ್ಲಿಗೆ ಬಂದಾಗ ತಂದೆ ಮಗನನ್ನು ಗುರುತಿಸಿದಂತಾಗಿ ಮನೆಗೆ ಪ್ರವೇಶ ನೀಡದೆ ಬೆನ್ನೆಲುಬಿನಿಂದ ಭಿಕ್ಷೆ ಬೇಡಿ ಬದುಕೆಂದು ಹೇಳಿದ. ಹೀಗೆ 'ದಕ್ಕಲ' ಎಂಬ ಪದವು ಜಾಂಬವ ಮುನಿಯಿಂದ ಸೃಷ್ಟಿಗೊಂಡಿತೆಂದು ತಿಳಿದು ಬರುತ್ತದೆ. ವೈಜ್ಞಾನಿಕವಾಗಿ ಆಲೋಚಿಸಿದಾಗ ಇದು ಸಾಧ್ಯವೇ ಎಂಬ ಪ್ರಶ್ನೆ ಎದುರಾದರೂ ಅದರ ಮಾದಿಗರೊಂದಿಗೆ ದಕ್ಕಲಿಗರು ಹೊಂದಿರುವ ಸಾಂಸ್ಕೃತಿಕ ಸಂಬಂಧವನ್ನು ಸೂಚಿಸುತ್ತದೆ. ಮಾದಿಗರ ಮೂಲವ್ಯಕ್ತಿಯಾದ ಜಾಂಬವನೊಂದಿಗೆ ಹೊಂದಿರುವ ಸಂಬಂಧ ಇಂತಹ ಕಲ್ಪನೆಗೆ ಇಂಬು ಕೊಡುವಂತೆ ದಕ್ಕಲರು ಇಂದಿಗೂ ಮಾದಿಗರ ಕೇರಿ ಅಥವಾ ಹಟ್ಟಿಯ ಪಕ್ಕದಲ್ಲೆ ಮನೆಗಳನ್ನು ನಿರ್ಮಿಸಿಕೊಂಡಿರುತ್ತಾರೆ. ಮಾದಿಗರು ದಕ್ಕಲರಿಗೆ ಅನ್ನ ನೀರು ಬಟ್ಟೆ ಕೊಡಬೇಕು. ಅವರು ಕೇಳಿದುದನ್ನು ಕೊಡಲು ಒಪ್ಪದೆ ಹೋದರೆ ಅವರು ಓಡಾಡುವ ದಾರಿಗೆ ಅಗ್ಗವನ್ನು ಹಾಕುವ ಇಲ್ಲವೇ ಕೇರಿಯ ಬಾವಿಗೆ ಬೊಂಬೆ ಕಟ್ಟಿ ಅವಮಾನಿಸುವ ಅಧಿಕಾರ ಅವರಿಗಿರುತ್ತದೆ.[೧೬] ಆದರೆ ವಿಚಿತ್ರ ಎಂದರೆ

ದಕ್ಕಲರು ಮಾದಿಗರ ಹಟ್ಟಿಗಳಲ್ಲಿ ಪ್ರವೇಶ ಮಾಡುವುದಿಲ್ಲ. ಆದರೆ ಇಂದು ಅನೇಕ ಬದಲಾವಣೆಗಳು ಆಗಿವೆ. ಕಡಿಮೆ ಸಂಖ್ಯೆಯನ್ನು ಹೊಂದಿರುವ ಈ ಜನಾಂಗ ಅನೇಕ ಜಿಲ್ಲೆಗಳಲ್ಲಿ ಅಂದರೆ ಮಾದಿಗರು ಹೆಚ್ಚಾಗಿ ನೆಲೆಸಿರುವ ಕಡೆಯಲ್ಲಿ ಇವರು ಕಂಡುಬರುತ್ತಾರೆ. ಅಧ್ಯಯನ ವ್ಯಾಪ್ತಿಯ ಪ್ರದೇಶಗಳಾದ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲೂ ಇವರು ನೆಲೆಸಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಮೀರಾಸಾಬಿಹಳ್ಳಿ, ಜಾನಕಲ್ಲು, ಪಟ್ರೆಹಳ್ಳಿ, ಬಳ್ಳಾರಿ ಜಿಲ್ಲೆಯ ಕಮಲಾಪುರ, ಕಂಪ್ಲಿ, ದರೋಜಿ ಮುಂತಾದ ಸ್ಥಳಗಳಲ್ಲಿ ಕಂಡುಬರುತ್ತಾರೆ. ಜಾಂಬವಂತನೊಂದಿಗೆ ಇವರು ಹೊಂದಿರುವ ಸಂಬಂಧ ಹಾಗೂ ಮಾದಿಗರ ಜೊತೆ ಹೊಂದಿರುವ ಸಾಂಸ್ಕೃತಿಕ ಸಂಬಂಧದ ಹಿನ್ನೆಲೆಯಲ್ಲಿ ನೋಡಿದರೆ ದಕ್ಕಲರು ಮೂಲದಲ್ಲಿ ಮಾದಿಗರಾಗಿರುವ ಸಾಧ್ಯತೆ ಇದೆ. ೧೯೮೧ರ ಜನಗಣತಿ ವರದಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಇವರ ಜನಸಂಖ್ಯೆ ೩೬೩ ಎಂದು ತಿಳಿದುಬರುತ್ತದೆ.

## ಮಾಸ್ಟಿಕರು

ಮಾದಿಗ ಸಂಬಂಧಿತ ಜಾತಿಗಳಲ್ಲಿ ಮಾಸ್ಟಿಕರು ಒಬ್ಬರು. ಈ ಪಂಗಡದಲ್ಲಿ ಎರಡು ಬಗೆಯ ಮಾಸ್ಟಿಕರು ಕಂಡು ಬರುತ್ತಾರೆ. ೧. ಮಾದಿಗ ಮಾಸ್ಟೀಕರು ೨. ಹೊಲೆಯ ಮಾಸ್ಟೀಕರು. ಈ ಮಾಸ್ಟೀಕರು ಆಯಾ ಜಾತಿಯ ಮಾದಿಗರನ್ನು ಮತ್ತು ಹೊಲೆಯರನ್ನು ಅಶ್ರಯಿಸಿದ್ದಾರೆ. ಮಾದಿಗ ಮಾಸ್ಟೀಕರು ಮಾದಿಗರೊಂದಿಗೆ ಹೊಂದಿರುವ ಸಂಬಂಧವನ್ನು ಹೆಸರಿನಲ್ಲಿ ತಿಳಿದುಬರುತ್ತದೆಯಾದರೂ ಇವರು ಪ್ರತ್ಯೇಕವಾದ ಜಾತಿಯಾಗಿ ಗುರುತಿಸಿಕೊಂಡಿದ್ದಾರೆ. ಇವರು ಮೂಲತಃ ಮಾದಿಗ ಜನಾಂಗಕ್ಕೆ ಸೇರಿದವರಾಗಿದ್ದು ಆನಂತರದಲ್ಲಿ ತಾವು ಕೈಗೊಂಡ ವೃತ್ತಿಯ ಹಿನ್ನೆಲೆಯಲ್ಲಿ ಬೇರೆ ಒಂದು ಪಂಗಡವಾಗಿ ಉಳಿದುಕೊಂಡು ಬಂದಿರಬಹುದು. ಮಾದಿಗ ಮಾಸ್ಟೀಕರ ಬಗ್ಗೆ ಪುರಾಣ ಕತೆಯೊಂದು ಈ ರೀತಿ ಇದೆ : ಕಂಚಿ ಪಟ್ಟಣವನ್ನು ಯಯಾತಿ ರಾಜನೊಬ್ಬ ಆಳುತ್ತಿದ್ದು ಅದರ ಸುತ್ತಲಿರುವ ಕಾಡುಗಳಲ್ಲಿ ಸಿಂಹಗಳ ಉಪಟಳ ಜಾಸ್ತಿಯಾದಂತೆ ಅವುಗಳನ್ನು ಕೊಲ್ಲಲು ರಾಜ ಡಂಗುರ ಹಾಕಿಸಿದಾಗ ಮಾದಿಗವಾಡದಲ್ಲಿ(ಗ್ರಾಮ)ದನ ಕಾಯುವ ಕೆಲಸದಲ್ಲಿ ತೊಡಗಿಕೊಂಡಿದ್ದ ಹನುಮಂತರಾವು ಅವುಗಳನ್ನು ಸದೆ ಬಡಿಯಲು ಒಪ್ಪುತ್ತಾನೆ. ಅವುಗಳನ್ನು ಕೊಂದು ಬಂದನಂತರ ರಾಜ ತನ್ನ ಆಸ್ಥಾನದ ಜಗಜಟ್ಟಿಯಾಗಿ ಅವನನ್ನು ನೇಮಿಸಿಕೊಂಡನು.[೨೨] ಮತ್ತೊಂದು ವಿವರಣೆಯಲ್ಲಿ ಕಂಚಿ ಕಾಮಾಕ್ಷಮ್ಮನ ತೇರು ಏಳು ವರ್ಷಗಳಿಂದಲೂ ಕದಲದೆ ಚಕ್ರಗಳು ನೆಲದಲ್ಲಿ ಹೂತು ಹೋಗಿದ್ದವು. ಈ ತೇರನ್ನು ಕದಲಿಸಿದವರಿಗೆ ಕೇಳಿದ ಬಹುಮಾನವನ್ನು ಕೊಡುವುದಾಗಿ ಯಯಾತಿ ಡಂಗುರ ಹೊಡೆಸಿದ. ಆ ತೇರಿನ ಚಕ್ರವನ್ನು ಮೇಲೆತ್ತಲು ಇದೇ ಹನುಮಂತರಾವು ತನ್ನ ಗರ್ಭಿಣಿ ಹೆಂಡತಿಯನ್ನು ಬಲಿಕೊಟ್ಟು ಆ ಕಾರ್ಯವನ್ನು ಮಾಡಿ ರಾಜನಿಂದ ಅವನು ಪಡೆದ ಬಳುವಳಿ ವಿಚಿತ್ರವಾಗಿತ್ತು. ಅದೇನೆಂದರೆ ೯ ಪಣಕಟ್ಟಿನ ಜನರಿಂದ ನನಗೆ ಮತ್ತು ನನ್ನ ವಂಶದವರಿಗೆ ಮನೆಗಿಷ್ಟು ಕಾಣಿಕೆ ಕೊಡಬೇಕು ಎಂಬ ಹಕ್ಕು ಪತ್ರವೊಂದನ್ನು ಕೇಳಿ ಪಡೆದ[೨೩]ನೆಂದು ತಿಳಿದು

ಬರುತ್ತದೆ. ಅಲ್ಲಿಂದ ಮಾಸ್ತೀಕರು ೯ ಪಣದವರಿಂದ ಕಾಣಿಕೆ ಪಡೆದು ಜೀವನ ಮಾಡಲು ಆರಂಭಿಸಿದ್ದರಿಂದ ಪ್ರತ್ಯೇಕ ವರ್ಗವಾಗಿಯೇ ಗುರುತಿಸಿಕೊಂಡಿದ್ದಾರೆ. ಆದರೆ ಮಾಸ್ತೀಕರು ತಮ್ಮ ಪಕ್ಕದಲ್ಲಿ ಮಾದಿಗ ಪದ ಸೇರ್ಪಡೆಯ ಹಿನ್ನೆಲೆಯಲ್ಲಿ ಮಾದಿಗರೊಂದಿಗೆ ನೇರ ಸಂಬಂಧ ಹೊಂದಿದ್ದಾರೆ ಎನ್ನಬಹುದು. ಇವರಲ್ಲದೆ ಮಾಸ್ತೀಕರು ತಮ್ಮ ಕುಲಬಂಧುಗಳಾದ ದಕ್ಕಲರು ಮತ್ತು ಸಿಂದ್ ಮಾದಿಗರೊಂದಿಗೆ ಪರಿಶಿಷ್ಟ ಸಂಸ್ಕೃತಿ ಅದರಲ್ಲೂ ಪ್ರಧಾನವಾಗಿ ಜಾಂಬವಕುಲದ ಮೂಲ ಸಂಸ್ಕೃತಿಯ ಅಧಿಕೃತ ವಾರಸುದಾರರೆಂಬ ಅಂಶ ಮಾದಿಗರೊಂದಿಗಿನ ಅವರ ಸಂಬಂಧವನ್ನು ಇನ್ನಷ್ಟು ಸ್ಪಷ್ಟಪಡಿಸುತ್ತವೆ. ೧೯೭೫ವರೆಗೆ ಪ್ರತ್ಯೇಕವಾಗಿ ಮಾಸ್ತೀಕರನ್ನು ಗುರುತಿಸಿಲ್ಲ. ಮಾದಿಗ ಮತ್ತು ಹೊಲೆಯ ಜಾತಿಗಳ ಜೊತೆ ಪರಿಶಿಷ್ಟ ಜಾತಿಯಲ್ಲಿ ಸೇರ್ಪಡೆ ಮಾಡುತ್ತಿದ್ದರಿಂದ ಇವರ ಸಂಖ್ಯೆ ತಿಳಿದಿಲ್ಲ. ೧೯೭೬ರಲ್ಲಿ ಮಾಸ್ತೀಕರನ್ನು ಸಾಮಾನ್ಯವಾದ 'ಮಾಸ್ತೀ' ಎಂಬ ಹೆಸರಿನಲ್ಲಿ ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಸೇರಿಸಲಾಗಿದೆ.[೨೯]

## ಮಾಚಾಳರು

ಮಾದಿಗ ಸಂಬಂಧಿತ ಜಾತಿಗಳಲ್ಲಿ ಮಾಚಾಳರು ಒಬ್ಬರು. ಇವರು ದಕ್ಕಲರಂತೆ ಮಾದಿಗರನ್ನು ಆಶ್ರಯಿಸಿ ಬದುಕುವಂತಹ ಜನಾಂಗವಾಗಿದೆ. ಇವರು ಮೊದಲು ಮಾದಿಗರ ಮದುವೆ ಮತ್ತು ಮನೆದೇವರ ಆಚರಣೆಯ ಸಂದರ್ಭದಲ್ಲಿ ಕಹಳೆ ಊದುವ ಕೆಲಸ ಮಾಡುತ್ತಿದ್ದರು. ಅತ್ಯಂತ ಕಡಿಮೆ ಜನಸಂಖ್ಯೆಯನ್ನು ಹೊಂದಿರುವ ಇವರು ಚಿತ್ರದುರ್ಗ ಜಿಲ್ಲೆಯ ಗೌಡಿಗೆರೆ, ಗೊಡಬನಾಳು, ಸಿದ್ದಿಹಳ್ಳಿ ಗ್ರಾಮಗಳಲ್ಲಿ ಮಾಚಾಳ ಕುಟುಂಬಗಳಿವೆ. ಮಾದಿಗರ ಮನೆಯ ಒಳಗಡೆ ಇವರಿಗೆ ಪ್ರವೇಶವುಂಟು. ಇವರ ವೃತ್ತಿ ಕಹಳೆ ಊದುವುದಾಗಿದ್ದರೂ ಅದು ಮದುವೆಗಳಲ್ಲಿ ಮಾತ್ರ. ಹಿಂದೆ ಮಾಚಾಳರು ಮಾದಿಗರ ಕೇರಿಗಳಲ್ಲಿ ತಮ್ಮ ಹಕ್ಕಿನ ದವಸಧಾನ್ಯ ಹಾಗೂ ಇಂತಿಷ್ಟು ಹಣವನ್ನು ಪಡೆದು ಊರುಗಳಿಗೆ ಮರಳುತ್ತಿದ್ದರು.[೩೦]

## ಡೋರ, ಮೋಚಿ-ಸಮಗಾರ

ಮಾದಿಗರಂತೆ ಚರ್ಮದ ಕೆಲಸದಲ್ಲಿ ನಿರತರಾಗಿರುವ ಇತರೆ ಜಾತಿಗಳೆಂದರೆ ಡೋರ ಅಥವಾ ಡೋಹಾರ, ಮಚಗಾರ ಅಥವಾ ಮೋಚಿ ಹಾಗೂ ಸಮಗಾರರು. ಈ ಎಲ್ಲಾ ಜಾತಿಗಳು ಸಾಂಪ್ರದಾಯಿಕ ಚರ್ಮ ವೃತ್ತಿಯನ್ನು ಮುಂದುವರಿಸಿಕೊಂಡು ಬರುತ್ತಿರುವುದನ್ನು ನೋಡಿದರೆ ಇವು ಮೂಲದಲ್ಲಿ ಒಂದೇ ಆಗಿದ್ದು ನಂತರದಲ್ಲಿ ಪ್ರತ್ಯೇಕವಾಗಿ ಸಿಡಿದುಹೋಗಿದ್ದಾರೆ ಎನ್ನಬಹುದು. ಮಹಾರಾಷ್ಟ್ರದಿಂದ ವಲಸೆ ಬಂದ ಹಿನ್ನೆಲೆಯಲ್ಲಿ ಆ ರಾಜ್ಯದ ಭಾಷೆ ಮರಾಠಿಯಲ್ಲಿ 'ಡೋರ' ಎಂದರೆ ದನದ ತೊಗಲಿನ ಕೆಲಸ ಮಾಡುವವ ಮತ್ತು ಬಣ್ಣ ಹಾಕುವವ ಎಂಬ ಅರ್ಥವಿದೆ.[೩೧] ಡೋರ ಅಥವಾ ಡೋಹಾರ ಎಂದು ಕರೆಯಲಾಗುವ ಈ ಜಾತಿಯ ಜನರು ಕೇವಲ ತೊಗಲನ್ನು ಹದ ಮಾಡಿ

ಚರ್ಮವನ್ನು ತಯಾರಿಸುತ್ತಾರೆ. ತಯಾರಿಸುವ ಚರ್ಮದಲ್ಲಿ ಹಲವಾರು ವಿಧಗಳಿವೆ. ಅದರಲ್ಲೂ ಬಣ್ಣದ ಚರ್ಮವನ್ನು ತಯಾರಿಸುತ್ತಾರೆ. ಸಮಗಾರ ಮತ್ತು ಮಚಗಾರ ಜಾತಿಯ ಜನ ಡೋರರಿಂದ ಚರ್ಮವನ್ನು ತಂದು ಪಾದರಕ್ಷೆಗಳನ್ನು ಅಥವಾ ಇತರ ವಸ್ತುಗಳನ್ನು ತಯಾರಿಸುತ್ತಾರೆ. ಮಚಗಾರ ಪದ 'ಮಚ್ಚೆ' ಎನ್ನುವ ಪಾದರಕ್ಷೆಗಳನ್ನು ಹೊಲಿಯುವುದರಿಂದ ಬಂದಿದೆ. ಆದ್ದರಿಂದ ಇವರಿಗೆ ಮಚಗಾರರು ಎಂದು ಕರೆಯುತ್ತಾರೆ. ಇವರು ಮಚ್ಚೆಗಳನ್ನು, ಬೂಟುಗಳನ್ನು ಹೊಲಿಯುವುದಲ್ಲದೆ ಹಳೆಯ ಪಾದರಕ್ಷೆಗಳನ್ನು ರಿಪೇರಿ ಮಾಡಿಕೊಡುತ್ತಾರೆ. ಮಾದಿಗರು ಚರ್ಮವನ್ನು ತಯಾರಿಸಿ ಹಳೆಯ ಮತ್ತು ಹೊಸ ಪಾದರಕ್ಷೆಗಳನ್ನು ಹೊಲಿಯುತ್ತಾರೆ.[೨೨] ಹೀಗೆ ಒಂದೇ ವೃತ್ತಿಯಲ್ಲಿ ತೊಡಗಿರುವ ಈ ಎಲ್ಲಾ ಜಾತಿಗಳ ನಡುವೆ ಮೇಲೆ ಕೀಳು ಭಾವನೆಗಳಿದ್ದು ಯಾವುದೇ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲ. ಚರ್ಮ ವೃತ್ತಿಯಲ್ಲಿ ತೊಡಗಿಕೊಂಡಿರುವ ಬೃಹತ್ ಸಮುದಾಯ 'ಚಮ್ಮಾರ' ಹೆಸರಿನಿಂದ ಉತ್ತರ ಭಾರತದಲ್ಲಿ ಗುರುತಿಸಿಕೊಂಡಿದೆ. ಆದರೆ ಕರ್ನಾಟಕದಲ್ಲಿ ಈ ವೃತ್ತಿಯಲ್ಲಿ ತೊಡಗಿರುವವರು ಮಾದಿಗ, ಢೋರ, ಮಚಗಾರ ಅಥವಾ ಮೋಚಿ, ಸಮಗಾರ ಎಂದು ಪ್ರತ್ಯೇಕವಾಗಿಯೇ ಗುರುತಿಸಿಕೊಂಡಿವೆ. ಢೋರರು ಬೆಳಗಾವಿ ಮತ್ತು ಗುಲ್ಬರ್ಗಾ ಭಾಗಗಳಲ್ಲಿ ಹೆಚ್ಚಾಗಿ ಕಂಡುಬಂದರೆ ಸಮಗಾರರು ಗುಲ್ಬರ್ಗಾ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಾಣಿಸುತ್ತಾರೆ.[೨೩] ಇವರು ಕಕ್ಕಯ್ಯನ ಕುಲದವರೆಂದು ಕರೆದುಕೊಳ್ಳುತ್ತಾರೆ. ಚರ್ಮ ವೃತ್ತಿಯಲ್ಲಿ ತೊಡಗಿದ್ದ ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ ಹಾಗೂ ಸಮಗಾರ ಹರಳಯ್ಯನವರು ೧೨ನೇ ಶತಮಾನದ ಶರಣ ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸಿರುವುದು ಗಮನಾರ್ಹ. ಮೋಚಿ ಮತ್ತು ಸಮಗಾರರು ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಪಟ್ಟಣ ಮತ್ತು ನಗರ ಪ್ರದೇಶಗಳಲ್ಲೂ ನೆಲೆಸಿದ್ದು ಚರ್ಮದ ಕೆಲಸವನ್ನು ಇಂದಿಗೂ ಮುಂದುವರಿಸಿದ್ದಾರೆ. ಆದರೆ ಗ್ರಾಮೀಣ ಪ್ರದೇಶದಲ್ಲಿ ಕಂಡುಬರುವುದು ಅಪರೂಪ. ಸಮಗಾರರನ್ನು ಚಿತ್ರದುರ್ಗ ಜಿಲ್ಲೆಯಲ್ಲಿ 'ಮೋಚಿ'ಗಳೆಂದೇ ಗುರುತಿಸಲಾಗುತ್ತಿದೆ.

## ೨.೪ ಪೌರಾಣಿಕ ಹಿನ್ನೆಲೆ

ಮಾದಿಗರ ಇತಿಹಾಸವನ್ನು ಕುರಿತ ಯಾವುದೇ ಚಾರಿತ್ರಿಕ ದಾಖಲೆಗಳು ದೊರಕದೆ ಹೋದರೂ ಪುರಾಣ ಮತ್ತು ಐತಿಹ್ಯಗಳು ಅವರ ಮೂಲ ವೃತ್ತಿ ಮತ್ತಿತರ ಅಂಶಗಳ ಬಗ್ಗೆ ಮಾಹಿತಿಯನ್ನು ನೀಡುತ್ತವೆ. ಯಾವುದೇ ಜನಸಮುದಾಯದ ಚರಿತ್ರೆಯನ್ನು ಹುಡುಕಲು ಪುರಾಣ ಕಥೆಗಳು ಶಕ್ತ ಸಾಧನಗಳಾಗಿವೆ. ಜನಪದ ಪುರಾಣಗಳು ಕಟ್ಟುಕಥೆಯಲ್ಲ. ಅವು ಬಹುಸಂಖ್ಯಾ ಜನತೆಯ ಬದುಕಿಗೆ ಹಿಡಿದ ಕನ್ನಡಿ. ಪುರಾಣವು ಅನಾಗರಿಕ ಜನರಲ್ಲಿ ಹೇಳಿದ ಕತೆಯಲ್ಲ. ಅತ್ಯಂತ ಕ್ರಿಯಾಶೀಲವಾದ ಸಾಂಸ್ಕೃತಿಕ ಶಕ್ತಿ ಎಂಬ ಮ್ಯಾಲಿನೋವಸ್ಕಿಯ ಮಾತುಗಳನ್ನು ಜನಪದ ಪುರಾಣಗಳಿಗೆ ಖಚಿತವಾಗಿ ಅನ್ವಯಿಸಬಹುದು.[೨೪] ಹಾಗೆಯೇ ರೂಪದಲ್ಲಿ ತೀರಾ ಸರಳವಾಗಿದ್ದು ಒಂದು ನಿರ್ದಿಷ್ಟ ವ್ಯಕ್ತಿ, ಸ್ಥಳ

ಅಥವಾ ಘಟನೆಗಳ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕತೆಗಳನ್ನು 'ಐತಿಹ್ಯ' ಎನ್ನುತ್ತೇವೆ.[೩೫] ಇವು ವಿವಿಧ ಜನಾಂಗದ ಮೂಲ, ಚರಿತ್ರೆ ಮುಂತಾದ ಅಂಶಗಳನ್ನು ತಿಳಿಸುತ್ತವೆ. ಐತಿಹ್ಯ ಇತಿಹಾಸದ ಅಂಶಗಳನ್ನು ಒಳಗೊಂಡಿದ್ದು ಸ್ಥಳೀಯವಾಗಿರುತ್ತದೆ. ಚರಿತ್ರೆಗೆ ಸ್ಥಳೀಯರು ತಮ್ಮ ಪರಿಸರದ ಸಂಬಂಧವನ್ನು ಕಲ್ಪಿಸುವ ಕಥೆಯೇ 'ಐತಿಹ್ಯ'. ಮನುಷ್ಯ ಸಾಮರ್ಥ್ಯದ ಅತ್ಯಧಿಕ ಪ್ರಮಾಣ ಐತಿಹ್ಯದಲ್ಲಿ ವ್ಯಕ್ತವಾಗುತ್ತದೆ. ಪುರಾಣದಲ್ಲಿ ಅತಿಮಾನುಷ ಗುಣವಿದ್ದರೆ. ಐತಿಹ್ಯದಲ್ಲಿ ಸಾಹಸದ ಪ್ರಯತ್ನಗಳನ್ನು ನೋಡುತ್ತೇವೆ.[೩೬] ಈ ಹಿನ್ನೆಲೆಯಲ್ಲಿ ಮಾದಿಗರು ತಮ್ಮ ಮೂಲ, ಚರಿತ್ರೆಯ ಬಗ್ಗೆ ಪುರಾಣ ಮತ್ತು ಐತಿಹ್ಯಗಳಲ್ಲಿ ಯಾವ ರೀತಿಯ ಸಂಬಂಧ ಹೊಂದಿದ್ದಾರೆ ಎಂಬುದು ಇಲ್ಲಿ ಗೊತ್ತಾಗುತ್ತದೆ.

### ಆದಿಜಾಂಬವ ಪುರಾಣ

ಮಾದಿಗ ಕುಲದ ಹುಟ್ಟು ಮತ್ತು ಚರಿತ್ರೆಯನ್ನು ಸಾದರಪಡಿಸುವ ಕಲಾ ಪ್ರಕಾರಗಳೆಂದರೆ ಮಾದಿಗ ಆಟ ಅಥವಾ ಎಲ್ಲಮ್ಮನ ಆಟ ಮತ್ತು ಸಿಂದ್ ಕತೆ ಅಥವಾ ಆದಿ ಜಾಂಬವ ಪುರಾಣ. ಇವುಗಳನ್ನು ವಿಶೇಷವಾಗಿ ಮಾದಿಗರಲ್ಲೆ ಒಂದು ಪಂಗಡವಾಗಿ ಪ್ರದರ್ಶಿಸುತ್ತಾರೆ. ಸಿಂದ್ ಪದವನ್ನು ತಮ್ಮ ಜನಾಂಗದ ಹೆಸರಿನೊಂದಿಗೆ ಗುರುತಿಸಿಕೊಳ್ಳುತ್ತಿರುವ ಸಿಂದ್ ಮಾದಿಗರು. ಮಾದಿಗ ಆಟ ನಾಟಕ ರೂಪದಲ್ಲಿದ್ದರೆ ಸಿಂದ್ ಕತೆ ಕಥನಶೈಲಿಯಲ್ಲಿದೆ.[೩೭] 'ಮಾದಿಗ ಆಟದಲ್ಲಿ ಬ್ರಾಹ್ಮಣ-ಜಾಂಬವ ಮಹಾಮುನಿ(ಗೋಸಂಗಿ ಮುನಿ) ಸಂವಾದದಲ್ಲಿ ಸೃಷ್ಟಿ ಕ್ರಮವನ್ನು ಕುರಿತು ವಿವರಿಸುವ ಪ್ರಸಂಗವಿದೆ.[೩೮] ಸಿಂದ್ ಕತೆ ಅಥವಾ ಆದಿ ಜಾಂಬವ ಪುರಾಣವು ಮಾದಿಗ ಕುಲದ ಮೂಲ ಪುರುಷನಾದ ಆದಿಜಾಂಬವನ ಹುಟ್ಟಿನೊಂದಿಗೆ ಆರಂಭವಾಗಿ ಕುಲಮತಗಳ ವಿಂಗಡನೆಯವರೆಗೂ ಸಾಗುತ್ತದೆ. ಈ ಮಧ್ಯೆ 'ತಾತ' ಆದಿಶಕ್ತಿಯೊಂದಿಗೆ ಕೂಡಿ ತ್ರಿಮೂರ್ತಿಗಳಿಗೆ ಜನ್ಮಕೊಟ್ಟಿದ್ದು ಆಕಾಶ, ಭೂಮಿ, ಸೂರ್ಯ, ಚಂದ್ರ, ನಕ್ಷತ್ರಗಳನ್ನು ಸೃಷ್ಟಿಸಿದ್ದು, ಜಲಮಯವಾಗಿದ್ದ ಈ ಜಗತ್ತಿನಲ್ಲಿ ಭೂಭಾಗವನ್ನು ರೂಪಿಸಲು ತನ್ನ ಸ್ವಂತ ಮಗನನ್ನೆ ಬಲಿಕೊಟ್ಟಿದ್ದು ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಶ್ವ ಬ್ರಹ್ಮ ತನ್ನ ನಿರ್ಮಿಸುವ ಶಕ್ತಿಯನ್ನೇ ಕಳೆದುಕೊಂಡಾಗ, ಇನ್ನೊಬ್ಬ ಮಗನನ್ನು ಕಡಿದುಕೊಂಡು ಅವನ ದೇಹದ ಅಂಗಾಂಗಳಿಂದ ವಿಶ್ವಬ್ರಹ್ಮನಿಗೆ ಬೇಕಾದ ಆಯುಧಗಳನ್ನು ಮಾಡಿಕೊಟ್ಟಿದ್ದುದಾಗಿ ಮುಂದುವರಿಯುತ್ತದೆ. ಆನಂತರ 'ತಾತ ಆದಿಜಾಂಬವ ತನ್ನ ಮಗಳಾದ ಮತಂಗ ಕನ್ಯೆಯ ಬೆನ್ನಿನ ಚರ್ಮವನ್ನೆ ಸಿಗಿದು ತುಂಡು ತುಂಡುಗಳನ್ನಾಗಿ ಕತ್ತರಿಸಿ ಒಂದೊಂದು ಗುಂಪಿಗೂ ಹಂಚಿದನಂತೆ. ಅವುಗಳನ್ನು ಮಾಲವಾರ(ಹೊಲೆಯರು), ಮಾದಿಗವಾರ(ಮಾದಿಗರು), ಕಾಪುವಾರ(ಒಕ್ಕಲಿಗರು) ಗಾಂಡ್ಲವಾರ (ಗಾಣೇಗಾರು) ಜಲಜವಾರ(ಬಲಿಜಿಗರು), ಬಾಪುನಿವಾರ(ಬ್ರಾಹ್ಮಣ) ತುಂಡುಗಳೆಂದು ಒಂದೊಂದು ಕುಲದವರಿಗೂ ಹಂಚಿಕೊಟ್ಟನಂತೆ. ಆಗ ಕೊನೆಗೆ ಎಲ್ಲರಿಗೂ ಹಂಚಿದ ಮೇಲೆ ಉಳಿದು

ಕೊಂಡಿದ್ದನ್ನು ಮೊಂಡಿವಾರ(ಮೊಂಡರ) ಎಂದನಂತೆ.[೩೯] ಈ ರೀತಿ ಆದಿ ಜಾಂಬವ ಪುರಾಣ ಮತ್ತು ಮಾದಿಗ ಆಟ ಎರಡರಲ್ಲಿಯೂ ಮಾದಿಗರ ಮೂಲಪುರಷನಾದ ಆದಿಜಾಂಬವನ ಪ್ರಸ್ತಾಪ ಬರುತ್ತದೆ. ಇಲ್ಲಿ ಎಲ್ಲಾ ಜೀವ ಜಗತ್ತು ಸೃಷ್ಟಿಸಿದವ ಮತ್ತು ಮಗಳ ಬೆನ್ನು ಚರ್ಮ ಸಿಗಿದು ತುಂಡು ತುಂಡಾಗಿ ಕತ್ತರಿಸಿದನೆಂಬ ಅಂಶಗಳು ಅವೈಜ್ಞಾನಿಕವಾಗಿದ್ದರೂ ಈ ಅಂಶದ ಒಳಗೆ ಮಾದಿಗರ ಮೂಲ ಪುರುಷ, ಚರ್ಮ ವೃತ್ತಿ ಹಾಗೂ ಸತ್ತ ಪ್ರಾಣಿಗಳ ಚರ್ಮವನ್ನು ಸುಲಿಯುವ ಚಾಣಾಕ್ಷತೆಗಳು ಮತ್ತು ಮಾದಿಗರಿಗೂ ಸಂಬಂಧ ಇದೆ. ಏಕೆಂದರೆ ಮಾದಿಗರು ಆದಿಜಾಂಬವನು ತಮ್ಮ ಮೂಲಪುರುಷನೆಂದು ಕರೆದುಕೊಳ್ಳುತ್ತಾರೆ. ಸತ್ತದನ ಕರುಗಳನ್ನು ಎತ್ತಿಹಾಕಿ ಚರ್ಮ ಸುಲಿಯುವ ಹಾಗೂ ಅದರಿಂದ ಚಪ್ಪಲಿ ಮಾತ್ರವಲ್ಲದೆ ಕೃಷಿಗೆ ಬೇಕಾಗುವ ಎಲ್ಲಾ ಸಲಕರಣೆ ತಯಾರಿಸುವುದನ್ನು ಮಾದಿಗರು ಇಂದಿಗೂ ಮುಂದುವರಿಸಿಕೊಂಡು ಬಂದಿರುವ ಹಿನ್ನೆಲೆಯಲ್ಲಿ ಈ ಕತೆಗೂ ಮತ್ತು ಮಾದಿಗರಿಗೂ ಇದ್ದ ನಿಕಟ ಸಂಬಂಧ ಸ್ಪಷ್ಟಪಡಿಸುತ್ತದೆ.

## ಪೌರಾಣಿಕ ಗ್ರಂಥಗಳಲ್ಲಿ

ಪ್ರಾಚೀನ ಕಾಲದ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳಲ್ಲಿ ಮಾದಿಗರ ಕುರಿತ ಐತಿಹ್ಯಗಳಿವೆ. ಮಾದಿಗರನ್ನು ಚರಿತ್ರೆ ಮತ್ತು ಪುರಾಣಗಳಲ್ಲಿ 'ಮತಂಗ'ರೆಂದು ಗುರುತಿಸಲಾಗಿದ್ದು ಸಾಧ್ಯತೆ ಇರುವುದರಿಂದ ಇಲ್ಲಿ 'ಮತಂಗ' 'ಜಾಂಬವ' ಪದ ಬಳಕೆಯಾಗಿರುವ ಸಂದರ್ಭಗಳನ್ನು ಮಾತ್ರವೇ ವಿಶ್ಲೇಷಿಸಲಾಗಿದೆ.

**ಮಾತಂಗ ೧ :** ಒಬ್ಬ ಬ್ರಹ್ಮರ್ಷಿ ಋಷ್ಯಮೂಕ ಪರ್ವತದಲ್ಲಿ ತಪಸ್ಸು ಮಾಡಿಕೊಂಡಿದ್ದ. ವಾಲಿ ದುಂಧುಬಿಯೆಂಬ ರಕ್ಕಸನನ್ನು ಕೊಂದು ಮಧೋನ್ಮತ್ತನಾಗಿ, ಆ ದುಂದುಭಿಯ ರುಂಡವನ್ನು ಎಸೆದ ಅದು ಮತಂಗ ಮುನಿಯ ಆಶ್ರಯದಲ್ಲಿ ಬಿದ್ದು ಸುತ್ತ ಮುತ್ತಣ ಪ್ರದೇಶವನ್ನು ಮಲಿನಮಾಡಿತು. ಕೃದ್ಧನಾದ ಮುನಿ ಮರಳಿ ವಾಲಿ ಇಲ್ಲಿಗೆ ಬಂದರೆ ಅವನು ಬದುಕಲಾರ ಎಂದು ಶಾಪವಿತ್ತ.[೪೦]

**ಮತಂಗ ೨ :** ಬ್ರಾಹ್ಮಣ ಸ್ತ್ರೀಯಿಂದ ಕ್ಷೌರಿಕನೊಬ್ಬನಿಗೆ ಹುಟ್ಟಿದ ಮಹರ್ಷಿ ಈ ಮತಂಗ. ಈ ಹುಟ್ಟಿನ ಗುಟ್ಟು ಬ್ರಾಹ್ಮಣ ಸ್ತ್ರೀಯ ಗಂಡನಿಗಾಗಲಿ ಮತಂಗನಿಗಾಗಲಿ ಬಹು ಕಾಲದವರೆಗೂ ತಿಳಿದಿರಲಿಲ್ಲ. ಒಮ್ಮೆ ಈತ ನಿಷ್ಕಾರಣವಾಗಿ ಒಂದು ಕತ್ತೆಯ ಮರಿಯನ್ನು ಹೊಡೆಯಲಾಗಿ ಅದು ತನ್ನ ತಾಯಿಯ ಬಳಿ ದೂರಿತು. ಆಗ ಹೆಣ್ಣು ಕತ್ತೆ, ಅವನು ಚಂಡಾಲ, ಎಷ್ಟು ತಪಸ್ಸು ಮಾಡಿದರೇನು? ಹುಟ್ಟು ಗುಣ ಎಲ್ಲಿ ಹೋದಿತು. ಅದನ್ನು ಕೇಳಿದ ಮತಂಗ ಆ ಹೆಣ್ಣು ಕತ್ತೆಯ ಬಳಿ ಸಾರಿ ತನ್ನ ಹುಟ್ಟಿನ ಗುಟ್ಟನ್ನು ತಿಳಿದು ತಪಸ್ಸು ಮಾಡತೊಡಗಿದ, ಅನೇಕ ವೇಳೆ ಇಂದ್ರ ಈತನಲ್ಲಿಗೆ ಬಂದು ಬ್ರಾಹ್ಮಣ್ಯ ದುರ್ಲಬವೆಂದು ಹೇಳಿ ಬೇರೆ ಬೇರೆ ಎಷ್ಟೋ ವರಗಳಿಂದ ಪ್ರಲೋಬಗೊಳಿಸಿದರೂ ಕಡೆಗೂ ತನ್ನ ತಪೋ ಮಹಿಮೆಯಿಂದ ಬ್ರಹ್ಮರ್ಷಿಯಾದ.[೪೧]

ಈ ಎರಡು ಸಂದರ್ಭಗಳಲ್ಲಿ ಕಂಡುಬರುವ ಮತಂಗರಿಗೂ ಮತ್ತು ಮಾದಿಗರಿಗೂ ಯಾವುದೇ ಸಂಬಂಧ ಇರುವುದಿಲ್ಲ. ಅಲ್ಲದೆ ಮಾದಿಗರು ಮೂಲ ಜನಾಂಗವಾಗಿದ್ದು ಬ್ರಹ್ಮಪೂಜ್ಯರಾದ ಬ್ರಾಹ್ಮಣರಿಗಿಂತಲೂ ಪ್ರಾಚೀನರೆಂದು ಸ್ಥಿರಪಟ್ಟಿದೆ. ಹೀಗಿರುವಾಗ ಮಾದಿಗ ಕುಲದ ಮೂಲ ಇಲ್ಲಿಂದ ಉತ್ಪತ್ತಿಯಾಗಿರುವುದಂತೂ ಅಸಂಭವ[೪೨] ಎಂದೇ ತಿಳಿಯಬಹುದಾಗಿದೆ.

**ಜಾಂಬವಂತ ೧ :** ವಾಲ್ಮೀಕಿ ರಾಮಾಯಣದ ಬಾಲ ಕಾಂಡದ ಕತೆಯೊಂದು ಜಾಂಬವಂತನ ಕುರಿತು ಹೀಗೆ ಹೇಳಿದೆ. ಜಾಂಬವಂತ ಪ್ರಚಂಡ ಕಪಿ. ಸುಗ್ರೀವನ ಮಂತ್ರಿಯಾಗಿದ್ದವನು. ಇವನ ಹುಟ್ಟಿನ ಬಗೆಗಿರುವ ಸಾಮಾನ್ಯ ಕಥೆ ಹೀಗಿದೆ : ರಾವಣನ ಅನೇಕ ಕ್ರೂರ ವರ್ತನೆಗಳನ್ನು ತಾಳಲಾರದ ಭೂದೇವಿಯ ಮತ್ತು ಇತರೆ ದೇವತೆಗಳು ಬ್ರಹ್ಮನ ಬಳಿಗೆ ಹೋಗಿ ತಮ್ಮ ತೊಂದರೆಗಳನ್ನು ಹೇಳಿ ಪರಿಹಾರ ಸೂಚಿಸಬೇಕೆಂದು ಕೇಳಿಕೊಂಡರು. ಬ್ರಹ್ಮನು ಅವರನ್ನು ಕ್ಷೀರಾಬಿದ್ಧಿಯಲ್ಲಿಯ ವಿಷ್ಣುವಿನಲ್ಲಿಗೆ ಕರೆದುಕೊಂಡು ಹೋದನು. ಮಹಾವಿಷ್ಣುವು ಎಲ್ಲವನ್ನು ಕೇಳಿ ತಾನು ದಶರಥನ ಮಗನಾಗಿ ಹುಟ್ಟಿ ರಾವಣನನ್ನು ಕೊಲ್ಲುತ್ತೇನೆಂದು ಹೇಳಿದನು. ಆ ಸಂದರ್ಭಕ್ಕೆ ತನ್ನ ಸಹಾಯಕ್ಕಾಗಿ ಕತೆಗಳನ್ನು ಸೃಷ್ಟಿಸುವಂತೆ ಬ್ರಹ್ಮನಿಗೆ ತಿಳಿಸಿದನು. ಇದರ ಪ್ರಕಾರ ಬ್ರಹ್ಮನು ಜಾಂಬವಂತ ಮತ್ತಿತರ ಕಪಿಗಳನ್ನು ಸೃಷ್ಟಿಸಿದನು. ಜಾಂಬವಂತನ ಹುಟ್ಟಿನ ಬಗೆಗೆ ಪುರಾಣದಲ್ಲಿ ಎರಡು ಕಥೆಗಳಿವೆ. ಬ್ರಹ್ಮ ಬಹಳ ಕಾಲದವರೆಗೂ ಕಪಿಗಳನ್ನು ಸೃಷ್ಟಿಸುವುದರ ಬಗೆಗೆ ಯೋಚಿಸುತ್ತಾ ಕುಳಿತನು. ಆ ವೇಳೆಗೆ ಬ್ರಹ್ಮನಿಗೆ ಆಕಳಿಕೆ ಬಂತು. ಹಾಗೆ ಆಕಳಿಸಲು ತೆರದ ಬಾಯಿಯಿಂದಲೇ ಜಾಂಬುವಂತ ಹುಟ್ಟಿ ಬಂದ ನನ್ನ ಆಕಳಿಸಿದ ಬಾಯಿಂದ ನಾನು ಶ್ರೇಷ್ಠನಾದ ಕರಡಿ ರೂಪದ ಜಾಂಬವಂತನನ್ನು ಈಗಾಗಲೇ ಸೃಷ್ಟಿಸಿದ್ದೇನೆಂದು[೪೩] ಹೇಳಿಕೊಂಡನು.

**ಜಾಂಬವಂತ ೨ :** ಕಂಬರಾಮಾಯಣದಲ್ಲಿ ಜಾಂಬವಂತನ ಕುರಿತ ಬ್ರಹ್ಮನ ಒಂದು ಹಗಲಿನ ಸಮಯ ಕಳೆದು ರಾತ್ರಿಯಲ್ಲಿ ಎರಡು ಯಾಮಗಳು(ಆರುಘಂಟೆ) ಮುಂದುವರೆದವು. ಮಹಾವಿಷ್ಣುವಿನ ಕಿವಿಯ ಪಿಸುರಿನಿಂದ ಹುಟ್ಟಿದ ಮಧು ಕೈಭಟರು ಮಹಾಪ್ರವಾಹದ ನೀರಿನಲ್ಲಿ ಕೋಲಾಹಲವನ್ನೆಬ್ಬಿಸಿದರು. ಆಗ ನೀರಿನ ಮೇಲೆ ಕಮಲವೊಂದನ್ನು ಅವರು ಕಂಡರು. ಬ್ರಹ್ಮನು ಅದರಲ್ಲಿರುವುದನ್ನು ಕಂಡು ಅವನನ್ನು ಯುದ್ಧಕ್ಕೆ ಅಹ್ವಾನಿಸಿದನು. ಇವರ ಕೂಗನ್ನು ಕೇಳಿದ ಬ್ರಹ್ಮನು ಹೆದರಿ ಮಧ್ಯದ ಮುಖವು ಬೆವರಲಾರಂಭಿಸಿತು. ಅವನ ಗಲ್ಲದ ಮೇಲಿಂದ ಹರಿದ ಬೆವರು ಸೊಂಟವನ್ನು ತಲುಪಿತು. ಈ ಬೆವರಿನಿಂದ ಜಾಂಬವಂತ ಹುಟ್ಟಿದನು. ಆದ್ದರಿಂದಲೇ ಈತ 'ಅಂಬುಜಾತ' ಎಂಬ ಹೆಸರನ್ನು ಪಡೆದುಕೊಂಡನು. ಜಂಬುದ್ವೀಪಕ್ಕೆ ಮೊದಲು ಈತನೇ ಪ್ರವೇಶಿಸಿದ್ದರಿಂದ ಈತನನ್ನು ಜಾಂಬವಂತ ಎಂದು ಕರೆಯಲಾಯಿತು. ಈತ ಹುಟ್ಟಿದಾಗ ಈ ಜಗತ್ತಾಗಲೀ ಸಮಯವಾಗಲೀ ಇಲ್ಲದಿದ್ದರಿಂದ ಈತನ ವಯಸ್ಸನ್ನಾಗಲಿ ಹುಟ್ಟಿದ ದಿನವನ್ನಾಗಲಿ ನಿಶ್ಚಯಿಸಲಾಗುವುದಿಲ್ಲ. ರಾಮನ ಕಾಲಕ್ಕೆ ಜಾಂಬವಂತ ಆರು ಮನ್ವಂತರಗಳು ಮತ್ತು ನೂರಾ ಅರವತ್ತ ನಾಲ್ಕು ಚತುರ್ಯುಗಗಳಷ್ಟು

ವಯಸ್ಸಿನವನಾಗಿದ್ದನು. ಜಾಂಬುವಂತನು ಮತ್ಸ್ಯಾವತಾರದಿಂದ ಹಿಡಿದು ರಾಮನ ಅವತಾರದವರೆಗಿನ ಎಲ್ಲ ಅವತಾರಗಳನ್ನು ಪ್ರತ್ಯಕ್ಷವಾಗಿ ಕಂಡಿದ್ದಾನೆಂದು[೪೪] ಹೇಳಿದೆ.

**ಜಾಂಬವಂತ ೩ :** ವಾಲ್ಮೀಕಿ ರಾಮಾಯಣದ ಕಿಷ್ಕಿಂಧ ಕಾಂಡವು ರಾಮನ ಕಾಲದಲ್ಲಿ ಜಾಂಬವಂತನು ಸುಗ್ರೀವನ ಮಂತ್ರಿಯಾಗಿದ್ದನು, ಅಗ್ನಿಯ ಮಗನಾದ ನೀಲ, ಹನುಮಂತ, ಜಾಂಬವಂತ, ಸುಹೋತ್ರ, ಸೆಷೆಣ, ಋಷಭ, ಮೈಂದ, ದ್ವಿವಿದ, ವಿಜಯ, ಗಂಧ ಮಾದನ, ಉಲ್ಕಾಮುಖ, ಅಸರಿಗ, ಅಂಗದ ಮತ್ತಿತರರು ಸುಗ್ರೀವನ ಮಂತ್ರಿಗಳಾಗಿದ್ದರೆಂದು[೪೫] ತಿಳಿಸುತ್ತದೆ.

**ಜಾಂಬವಂತ ೪ :** ವಾಲ್ಮಿಕಿ ರಾಮಾಯಣದಲ್ಲಿ ರಾಮನವತಾರದಲ್ಲಿಯ ಜಾಂಬುವಂತನ ವರ್ಣನೆ ಹೀಗಿದೆ: ಮಹಾಬಲಿಶಕ್ತಿಯನ್ನು ಅಡಗಿಸುವುದಕ್ಕಾಗಿ ಜಾಂಬವಂತನು ರಾಮನಾಗಿ ಹುಟ್ಟಿದ ಮಹಾ ವಿಷ್ಣುವಿಗೆ ಪ್ರದಕ್ಷಿಣೆ ಮಾಡಿದನು. ಆ ವೇಳೆಗೆ ಜಾಂಬವಂತನು ಅತ್ಯಂತ ಬಲಾಢ್ಯನಾಗಿದ್ದನು. ಆದರೆ ರಾಮಾವತಾರದ ಕಾಲಕ್ಕೆ ಜಾಂಬವಂತನ ಶಕ್ತಿ ಪೂರ್ಣವಾಗಿ ಇಳಿದು ಹೋಗಿತ್ತು. ಸೀತೆಯನ್ನು ಹುಡುಕಿಕೊಂಡು ಹೊರಟು ಸಮುದ್ರ ತೀರದ ಬಳಿಸೇರಿದ್ದ ಕಪಿಗಳನ್ನು ಕುರಿತು ಹಿಂದಿನ ಕಾಲದಲ್ಲಿ ನನ್ನ ಸಾಮರ್ಥ್ಯವು ಈಗ ನೀವು ನೋಡುವಂತಿರಲಿಲ್ಲ ಅನಂತನಾದ ವಿಷ್ಣುವು 'ಮಹಾಬಲಿಯ ಯಜ್ಞದ ಸಂದರ್ಭದಲ್ಲಿ ಸಮುದ್ರವನ್ನು ಹಾರಲು ಆಸಕ್ತನಾಗಿರುವೆ ಎಂದು ಹೇಳಿದುದು ತಿಳಿದು ಬರುತ್ತದೆ.[೪೬]

**ಜಾಂಬವಂತ ೫ :** ಕೃಷ್ಣವತಾರದ ಜಾಂಬವಂತನ ವರ್ಣನೆಯಲ್ಲಿ ಮಹಾವಿಷ್ಣುವಿನ ಹತ್ತು ಅವತಾರಗಳಲ್ಲಿ ಒಂಬತ್ತು ಅವತಾರಗಳನ್ನು ಕಣ್ಣಾರೆ ಕಂಡಂಥ ದೀರ್ಘಯುಷಿ ಜಾಂಬವಂತನು ಕೃಷ್ಣವತಾರದ ಕಾಲದಲ್ಲಿ ಅಮೂಲ್ಯವಾದ ಶಮಂತಕ ಮಣಿಯ ಕಥೆಗೆ ಸಂಬಂಧಪಟ್ಟಂತೆ ಮತ್ತೆ ಕಾಣಿಸಿಕೊಳ್ಳುವನು. ಸತ್ರಾರ್ಜಿತ ರಾಜನಿಗೆ ಸೂರ್ಯದೇವನು ಶ್ಯಮಂತ ಮಣಿಯನ್ನು ಕೊಟ್ಟಿದ್ದನು. ಸತ್ರಾಜಿತನ ಕಿರಿಯ ಸೋದರ ಪ್ರಸೇನನು ಈ ಮಣಿಯನ್ನು ಧರಿಸಿ ಬೇಟೆಗೆ ಹೋದನು. ಕಾಡಿನಲ್ಲಿ ಸಿಂಹವೊಂದು ಪ್ರಸೇನನನ್ನು ಕೊಂದು ಮಣಿಯನ್ನು ಬಾಯಿಯಲ್ಲಿ ಕಚ್ಚಿಕೊಂಡು ಕಾಡಿನಲ್ಲಿ ಹೋಗುತ್ತಿರುವಾಗ ಜಾಂಬವಂತನು ಆ ಸಿಂಹವನ್ನು ಕೊಂದು ಮಣಿಯನ್ನು ವಶಪಡಿಸಿಕೊಂಡನು. ಕೃಷ್ಣನೇ ಪ್ರಸೇನನನ್ನು ಕೊಂದು ಮಣಿಯನ್ನು ಅಪಹರಿಸಿದನೆಂದು ಸುದ್ದಿ ಹಬ್ಬಿತು, ಆಗ ಕೃಷ್ಣನೇ ಕಾಡಿಗೆ ಹೋಗಿ ಜಾಂಬವಂತನನ್ನು ಸೋಲಿಸಿ ಆ ಮಣಿಯನ್ನೂ ಸತ್ರಾಜಿತನಿಗೆ ಹಿಂದುರಿಗಿಸಿದನು. ಅಲ್ಲದೆ ಕೃಷ್ಣನು ಜಾಂಬವಂತನ ಮಗಳಾದ ಜಾಂಬವತಿಯನ್ನು ವಿವಾಹವಾದನು.

**ಜಾಂಬವಂತ ೬ :** ವಾಮನಾವತಾರದ ಕಾಲದಲ್ಲಿ ಜಾಂಬವಂತ ಅತ್ಯಂತ ಬಲಿಷ್ಠನೂ ಪರಾಕ್ರಮಿಯೂ ಆಗಿದ್ದನು. ವಾಮನು ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನು ಅಳೆದು ತನ್ನ ಅಧೀನಕ್ಕೆ ತೆಗೆದುಕೊಂಡ ಮೇಲೆ ಈ ಸುದ್ದಿಯನ್ನು ಹೊತ್ತು ಜಾಂಬವಂತನು ಎಲ್ಲ ಕಡೆಯೂ ಪ್ರಯಾಣ

ಮಾಡಿದನು. ಮೂರು ಕ್ಷಣಗಳೊಳಗಾಗಿಯೇ ಜಾಂಬವಂತನು ಮೂರು ಲೋಕಗಳನ್ನೂ ಸಂಚರಿಸಿದನು. ಹೀಗೆ ಮಿಂಚಿನ ವೇಗದಲ್ಲಿ ಪ್ರಯಾಣ ಮಾಡುತ್ತಿದ್ದಾಗ ಉಗುರಿನ ತುದಿಯು ಮಹಾಮೇರುವಿನ ಶಿಖರವನ್ನು ತಾಕಿತು. ಇದರಿಂದಾಗಿ ತನಗೆ ಅವಮಾನವಾದಂತಾಗಿ ಮಹಾಮೇರು ಪರ್ವತವು ನೀನು ನಿನ್ನ ಯೌವನ ಹಾಗೂ ವೇಗದಿಂದಾಗಿ ಸೊಕ್ಕಿರುವೆ. ಇಲ್ಲಿಂದ ಮುಂದೆ ನಿನ್ನ ಬುದ್ದಿಯು ಎಲ್ಲಿಗೆ ಹೋಗುತ್ತದೋ ಅಲ್ಲಿಗೆ ನಿನ್ನ ದೇಹವು ತಲುಪದೇ ಇರಲಿ ಮತ್ತು ನೀನು ಶಾಶ್ವತವಾಗಿ ವೃದ್ಯಾಪ್ಯವನ್ನು ಅನುಭವಿಸು ಎಂದು ಜಾಂಬವಂತನಿಗೆ ಶಾಪ ಕೊಟ್ಟಿತು. ಈ ಶಾಪದಿಂದಾಗಿ ಜಾಂಬವಂತನು ವೃದ್ಧನಾದನು ಮತ್ತು ತಾನು ಇಚ್ಚಿಸಿದ್ದುದನ್ನು ಸಾಧಿಸಲಾರದಾದ್ದನೆಂದು ಕಂಬರಾಮಾಯಣದಲ್ಲಿ ಹೇಳಿದೆ.[೪೭]

ಹೀಗೆ ರಾಮಾಯಣ ಮತ್ತು ಮಹಾಭಾರತದ ಕೆಲವು ಸಂದರ್ಭಗಳಲ್ಲಿ ಜಾಂಬವಂತನ ಬಗ್ಗೆ ಉಲ್ಲೇಖವಾಗಿರುವುದು ಕಂಡುಬರುತ್ತದೆ. ಆದರೆ ಇವು ನೇರವಾಗಿ ಮಾದಿಗರೊಂದಿಗೆ ಯಾವುದೇ ಸಂಬಂಧವನ್ನು ತಿಳಿಸುವುದಿಲ್ಲ. ಆದರೆ ಇಂದು ಮಾದಿಗರು ತಾವು ಜಾಂಬವರು ಎಂದು ಗುರುತಿಸಿಕೊಳ್ಳುವುದರ ಹಿನ್ನೆಲೆಯಲ್ಲಿ ಹೆಚ್ಚಿನ ಅಧ್ಯಯನ ಅಗತ್ಯ ಕಂಡುಬರುತ್ತದೆ. ಆದರೆ ಮೊದಲು ಪ್ರಸ್ತಾಪವಾಗಿರುವ ಆದಿಜಾಂಬವ ಪುರಾಣಗಳು ನೇರವಾಗಿ ಮಾದಿಗರ ನಡುವಿನ ಸಂಬಂಧವನ್ನು ಬಿಚ್ಚಿಡುತ್ತವೆ. ಹೀಗೆ ಶಿಷ್ಟ ಮತ್ತು ಪರಿಶಿಷ್ಟ ಪುರಾಣಗಳಲ್ಲಿ ಆದಿಜಾಂಬವ, ಜಾಂಬವ, ಮತಂಗರ ಉಲ್ಲೇಖವಾಗಿದೆ.

## ೨.೫ ಪ್ರಾಚೀನ ಕಾಲದಿಂದ ವಸಾಹತುಶಾಹಿ ಕಾಲದವರೆಗಿನ ಚಾರಿತ್ರಿಕ ಹಿನ್ನೆಲೆ

ಚರಿತ್ರೆ ರಚನೆಯ ಸಂದರ್ಭದಲ್ಲಿ ಮಾದಿಗರು ನಿರ್ಲಕ್ಷ್ಯಕ್ಕೊಳಗಾಗಿದ್ದಾರೆ. ಮೊದಲು ಚರಿತ್ರೆಯು ಕೇವಲ ರಾಜವಂಶದವರು ನಡೆಸುತ್ತಿದ್ದ ಆಡಳಿತ, ಸಾಮ್ರಾಜ್ಯ ವಿಸ್ತರಣೆಗೆ ಕೈಗೊಂಡ ಯುದ್ಧ, ದಾನದತ್ತಿ ಮುಂತಾದ ಅಂಶಗಳನ್ನು ಮಾತ್ರವೇ ಒಳಗೊಂಡಿರುತ್ತಿತ್ತು. ಇದರಿಂದಾಗಿ ಚರಿತ್ರೆ ರಚನೆಯ ಅವು ಮುಖ್ಯ ಕೇಂದ್ರಬಿಂದುಗಳಾಗಿದ್ದವು. ಹೀಗಿರುವಾಗ ಹಿಂದೊಮ್ಮೆ ಮಾದಿಗರು ರಾಜ್ಯದ ಸೈನ್ಯದ ಮುಖಂಡರು, ಸೈನಿಕರು, ಆಗಿದ್ದರೂ ಈ ಬಗ್ಗೆ ಯಾವ ಚರಿತ್ರೆಕಾರರು ವಿಶೇಷವಾಗಿ ದಾಖಲಿಸದೆ ಹೋಗಿದ್ದಾರೆ. ಇವರು ರಾಜರಾಗಿ ಆಳ್ವಿಕೆ ಮಾಡಿದ್ದರೂ ಚರಿತ್ರೆಯ ರಚನೆಯಲ್ಲಿ ನಿರ್ಲಕ್ಷ್ಯ ಮಾಡಿರುವುದು ದುರಂತ. ಬಹುಶಃ ಜಾತಿಯ ಹಿನ್ನೆಲೆಯ ಕಾರಣಕ್ಕಾಗಿ ಅವರ ಬಗ್ಗೆ ದಾಖಲಿಸಲು ಹಿಂದೆ ಸರಿಯಲಾಗಿದೆ ಎನ್ನಬಹುದು. ಆದರೂ ಗೊತ್ತಿದ್ದೋ ಅಥವಾ ಗೊತ್ತಿಲ್ಲದೆಯೋ ಅನೇಕ ಕಡೆ ಅವರ ಕುರಿತ ಚಾರಿತ್ರಿಕ ಅಂಶಗಳು ಉಲ್ಲೇಖಗೊಂಡಿವೆ. ಮಾದಿಗರ ಕುರಿತ ಚಾರಿತ್ರಿಕ ಅಂಶಗಳು ಸಾಹಿತ್ಯ, ಶಾಸನ, ಮಹಾಸತಿ ವೀರಗಲ್ಲು ಮುಂತಾದವುಗಳಲ್ಲಿ ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ಅಂತಹ ಚಾರಿತ್ರಿಕ ಅಂಶಗಳನ್ನೂ ಇಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿದೆ. ಅವುಗಳನ್ನು ಅಧ್ಯಯನ

ಅನುಕೂಲತೆಯ ದೃಷ್ಟಿಯಿಂದ ಈ ಕೆಳಗಿನಂತೆ ವಿಭಾಗಿಸಿಕೊಂಡಿದೆ.

೧. ಮಾತಂಗ, ಮಾತಂಗಿ ಪದ ಬಳಕೆಯ ಹಿನ್ನೆಲೆಯಿಂದ

೨. ಶಾಸನ, ಮಹಾಸತಿ-ವೀರಗಲ್ಲು ಹಿನ್ನೆಲೆಯಿಂದ

೩. ಕಾವ್ಯ ಹಾಗೂ ಜಾನಪದ ಸಾಹಿತ್ಯದ ಹಿನ್ನೆಲೆಯಿಂದ

೪. ಮಧ್ಯಕಾಲೀನ ಮತ್ತು ನಂತರದ ಸಾಹಿತ್ಯದಲ್ಲಿ ಪ್ರಸ್ತಾಪಗೊಂಡಿರುವ ವ್ಯಕ್ತಿಗಳು

**೧. ಮಾತಂಗ, ಮಾತಂಗಿ**

ಮಾತಂಗ ಎಂದರೆ ಆನೆ ಮತ್ತು ಮಾದಿಗ ಎಂಬ ಎರಡು ಅರ್ಥವಿದೆ.[೪೮] ಮಾತಂಗ ಪದದಿಂದಲೆ ಮಾದಿಗ ಪದವು ನಿಷ್ಪತ್ತಿಯಾಗಿರುವುದರಿಂದ ಮಾದಿಗ, ಮಾತಂಗ ಪದಗಳ ನಡುವೆ ಅವಿನಾಭಾವ ಸಂಬಂಧವಿದೆ. ಮಾದಿಗರು ತಮ್ಮನ್ನು ಮತಂಗ, ಮಾತಂಗ[೪೯] ಮತ್ತು ಮಾತಂಗಿಯ ಮಕ್ಕಳು[೫೦] ಎಂದು ಕರೆದುಕೊಳ್ಳುತ್ತಾರೆ. ಅಲ್ಲದೆ ೧೮೯೧ರಲ್ಲಿ ಮೈಸೂರು ಜನಗಣತಿಯ ಸಂದರ್ಭದಲ್ಲಿ ಅಲ್ಲಿಯ ಕೆಲವು ಮಾದಿಗರು ಯಾವುದೋ ಪುರಾಣದ ಆಧಾರಕೊಟ್ಟು ತಮ್ಮನ್ನ ಮತಂಗ ಬ್ರಾಹ್ಮಣರೆಂದು[೫೧] ಕರೆದುಕೊಂಡಿರುವುದು ಉಂಟು. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ 'ಮಾತಂಗಿ' 'ಮಾತಂಗ ಪದ ಬಳಕೆಯಾಗಿರುವ ಚಾರಿತ್ರಿಕ ಸಂದರ್ಭಗಳಲ್ಲಿ ಅವರನ್ನು ಮಾದಿಗರೆಂದೆ ಪರಿಗಣಿಸಲಾಗಿದೆ.

ಮತಂಗರು ರಾಜ್ಯ ಕಟ್ಟಿ ಆಳುವಷ್ಟು ಪ್ರಬಲರಾಗಿದ್ದರೆಂದು ಅನೇಕ ಇತಿಹಾಸಜ್ಞರು ಅಭಿಪ್ರಾಯ ಪಡುತ್ತಾರೆ. ಎಂ.ಎ.ಸ್ಟುವರ್ಟ್ ಅವರು ಪ್ರಾಚೀನ ಕಾಲದ ಕನ್ನಡ ನಾಡಿನಲ್ಲಿ ಮತಂಗ ರಾಜಸಂತತಿ ಆಳ್ವಿಕೆ ಮಾಡಿದ್ದು, ಆ ಸಂತತಿಗೆ ಸೇರಿದವರು ನಾವು ಎಂದು ಮಾದಿಗರು ನಂಬುತ್ತಾರೆಂದು ತಿಳಿಸುತ್ತಾರೆ.[೫೨] ಈ ಅಂಶಗಳು ಒಂದು ಕಾಲಕ್ಕೆ ಮಾದಿಗರು ರಾಜರಾಗಿದ್ದರೆಂಬುದನ್ನು ದೃಢಪಡಿಸುತ್ತದೆ. ಮತ್ತೊಂದು ಕಡೆ ಮತಂಗ ರಾಜನಿಗೆ ಸಂಬಂಧಪಟ್ಟಂತೆ ಉಲ್ಲೇಖವಿದೆ. ಬೌದ್ಧರ ಲಲಿತ ವಿಸ್ತಾರದಲ್ಲಿ ಪ್ರಸ್ತಾಪಿತವಾಗಿರುವಂತೆ ಕೋಸಲ ದೇಶದ ಮಹಾರಾಜ ಪ್ರಸೇನಜಿತ್ ಮಾತಂಗ ಕುಲದವನು. ಭಗವಾನ್ ಬುದ್ಧನ ಸಂಬಂಧಿ ಮಹಾನಾಯಕನ ಮಗಳನ್ನು ಲಗ್ನವಾಗಿದ್ದನು. ಮಗಧ ದೇಶದ ರಾಜ ಬಿಂಬಸಾರನಿಗೆ ತನ್ನ ತಂಗಿ ಕೋಸಲ ದೇವಿಯನ್ನು ವಿವಾಹ ಮಾಡಿ ಕಾಶಿ ಹತ್ತಿರದ ಹಳ್ಳಿಯೊಂದನ್ನು ಬಳುವಳಿಯಾಗಿ ಕೊಟ್ಟಿದ್ದನು. ಬಿಂಬಸಾರನ ಮರಣಾನಂತರ ಆತನ ಮಗ ಅಜಾತ ಶತೃವು ಪ್ರಸನಜಿತ್ ರಾಜನ ಮಗಳು ವಜ್ರಳನ್ನು ವಿವಾಹವಾಗಿ ಅದೇ ಹಳ್ಳಿಯನ್ನು ಮತ್ತೆ ಬಳುವಳಿಯಾಗಿ ಪಡೆಯುತ್ತಾನೆ.[೫೩] ಪ್ರಸೇನಜಿತ್ ಮಾದಿಗ ಜನಾಂಗಕ್ಕೆ ಸೇರಿದವನೆಂತಲೂ ಹಾಗೂ ಬುದ್ಧನ ಸಂಬಂಧಿಕರೊಂದಿಗೆ ವೈವಾಹಿಕ ಸಂಬಂಧ ಹೊಂದಿರುವುದನ್ನು ಇದು ತಿಳಿಸುತ್ತದೆ. ಇದಕ್ಕೆ ಪೂರಕ ವಾದ ಮತ್ತೊಂದು ಅಂಶವು ಹೀಗಿದೆ. ಹಿಂದೆ ಭಗವಾನ್ ಬುದ್ಧನ ಶಿಷ್ಯರು ಮತ್ತು ಅನುಯಾಯಿಗಳನ್ನು 'ಮಹತೊ' ಎಂದು ಕರೆಯಲಾಗುತ್ತಿತ್ತು. ಅದು ಉತ್ತರ ಭಾರತದಲ್ಲಿ 'ಮಹತ' 'ಮಹಂತ' ಎಂಬ

ರೂಪ ಪಡೆದು ದಕ್ಷಿಣಕ್ಕೂ ಹರಿದು 'ಮಹಾಂತ' ಆಗಿ 'ಇಗ' ಎಂಬ ಪ್ರತ್ಯಯವನ್ನು ಸೇರಿಸಲ್ಪಟ್ಟು ಈಗ 'ಮಾದಿಗ' ತನದಲ್ಲಿ ಮೆರೆಯುತ್ತಿದೆ. ಇದರಿಂದಾಗಿ ಮಾದಿಗರು ಬೌದ್ಧ ಪರಂಪರೆಯವರು ಎಂಬುದಕ್ಕೆ ಇದು ಪೂರಕವಾದ ಅಂಶವಾಗಿದೆ.[೫೪] ಈ ಹಿನ್ನೆಲೆಯಲ್ಲಿ ನೋಡಿದಾಗ ಮಾದಿಗ ಮತ್ತು ಬುದ್ಧ ಹಾಗೂ ಬೌದ್ಧ ಧರ್ಮದೊಂದಿಗೆ ನಿಕಟ ಸಂಬಂಧ ಹೊಂದಿದ್ದರು ಎಂಬುದು ತಿಳಿಯುತ್ತದೆ. ಇದರಿಂದಾಗಿ ಮಾದಿಗರು ಬೌದ್ಧಧರ್ಮದ ಪೂರ್ವ ಮತ್ತು ನಂತರದಲ್ಲಿ ರಾಜರಾಗಿ ಆಳ್ವಿಕೆ ಮಾಡಿದ್ದರೆಂದು ತಿಳಿಯಬಹುದಾಗಿದೆ. ಬೌದ್ಧಧರ್ಮದ ಅನುಯಾಯಿಗಳಾಗಿದ್ದ ಮಾದಿಗರು ಬೌದ್ಧಧರ್ಮದ ಅವನತಿಯ ನಂತರದಲ್ಲಿ ತಮ್ಮ ಸ್ಥಾನಗಳನ್ನು ಕಳೆದುಕೊಂಡಿದ್ದಾರೆ.

ಆರನೆಯ ಶತಮಾನದ ಬಾಣಭಟ್ಟನ ಕಾದಂಬರಿಯಲ್ಲಿ ಸಬರರ ನಾಯಕ ಮತಂಗನನ್ನು ಕುರಿತು ಹೇಳಲಾಗಿದೆ. ತಾರುಣ್ಯ ತುಂಬಿ ತುಳುಕುತ್ತಿದ್ದ ಈ ಮತಂಗ ನಾಯಕನ ದೇಹವನ್ನು ಕಬ್ಬಿಣದಿಂದ ಮಾಡಿದ ಹಾಗೆ ಭಾಸವಾಗುತ್ತಿತ್ತಂತೆ. ಇಂಥ ಮತಂಗ ನಾಯಕ ತನ್ನ ಸಹಸ್ರಾರು ಸಹಚರರೊಂದಿಗೆ ಬರುತ್ತಿರುವುದು ಬೆಳಕಿನ ಕಿರಣಗಳು ಕಲುಕಿದ ಕಾನನದಂತೆ, ಸುಳಿದಾಡುವ ಸಾವಿನಂತೆ, ಕೇಡು ಕೃತ್ಯಗಳ ಪಡೆಯಂತೆ ತೋರುತ್ತಿತ್ತೆಂದು ಬಾಣ ವರ್ಣಿಸುತ್ತಾನೆ.[೫೫] ಮತ್ತೊಂದು ಕಡೆ ಕ್ರಿ.ಶ.೬೩೪ರ ಸುಮಾರಿಗೆ ಚಾಲುಕ್ಯ ಸಾಮ್ರಾಜ್ಯದ ಮಂಗಳೇಶನೊಂದಿಗೆ 'ಮತಂಗ' ಪದದ ಪ್ರಸ್ತಾಪ ಬರುತ್ತದೆ. ಮಂಗಳೀಸ ಪುರಾತನ ದ್ರಾವಿಡ ಸಾಮ್ರಾಜ್ಯಗಳಲ್ಲಿ ಒಂದಾದ ಕಳಚೂರಿಗಳ ಮೇಲೆ ಯುದ್ಧ ಮಾಡಿ ಗೆಲ್ಲುತ್ತಾನೆ. ಆ ಯುದ್ಧದಲ್ಲಿ ಮತಂಗ ಸೈನಿಕರು ಭಾಗವಹಿಸಿದ್ದಾಗಿ, ಅವರೊಂದಿಗೆ ಕಾದಾಡಿ ಮಂಗಳೇಶ ಗೆದ್ದುದಾಗಿ ಉಲ್ಲೇಖವಿದೆ.[೫೬] ಇದಲ್ಲದೇ ಆಂಧ್ರಪ್ರದೇಶದ ಜಿಲ್ಲೆಯೊಂದರಲ್ಲಿ ಮಾದಿಗರಲ್ಲಿ ಪ್ರಚಲಿತವಿರುವ ದಂತಕತೆಯನ್ನು ಥರಸ್ಟನ್ ದಾಖಲಿಸಿದ್ದಾರೆ. ಆ ಕತೆಯಲ್ಲಿ ಈ ರೀತಿ ಇದೆ: ಒಂದು ಸಾವಿರ ವರುಷದ ಹಿಂದೆ ರಾಜನೊಬ್ಬನು ಕೊಳ ಒಂದರ ತೀರದಲ್ಲಿ ಅರಮನೆಯನ್ನು ನಿರ್ಮಿಸಿಕೊಂಡು ಈ ಭಾಗದ ಪ್ರಾಂತ್ಯವನ್ನು ಆಳ್ವಿಕೆ ಮಾಡುತ್ತಿದ್ದನು. ರಾಜನು ಶಕ್ತಿಶಾಲಿ ಮತ್ತು ಸ್ವತಂತ್ರನಾದ ಮಾದಿಗನೊಬ್ಬನನ್ನು ತನ್ನ ದಂಡನಾಯಕನಾಗಿ ನೇಮಕ ಮಾಡಿಕೊಂಡಿದ್ದನು. ಆತನು ತಾನೇ ಸ್ವತಃ ಗುಡ್ಡಗಾಡಿನಲ್ಲಿ ನಿರ್ಮಿಸಿಕೊಂಡಿರುವ ಪ್ರದೇಶದಲ್ಲಿ ವಾಸವಾಗಿದ್ದನು. ಪ್ರದೇಶಕ್ಕೆ 'ಮಾದಿಗ ವನದುರ್ಗಮ್' ಎಂದು ಕರೆಯಲಾಗುತ್ತಿತ್ತು. ಕೊನೆಗೆ ಈತನು ರಾಜನ ವಿರುದ್ಧ ದಂಗೆ ಎದ್ದು ಆತನನ್ನು ಸೋಲಿಸಿ ಅರಮನೆ ಪ್ರವೇಶಿಸುತ್ತಾನೆ. ಆಗ ಅಲ್ಲಿ ರಾಜನಿಗೆ ಇನ್ನೂ ಮದುವೆಯಾಗದೆ ಇರುವ ಏಳು ಸುಂದರಿಯರಾದ ಹೆಣ್ಣು ಮಕ್ಕಳು ಇರುತ್ತಾರೆ. ಅವರನ್ನು ಮದುವೆಯಾಗಲು ಪ್ರಸ್ತಾಪ ಮಾಡುತ್ತಾನೆ. ಆಗ ಅವರು ಈತನು ಬಲವಂತವಾಗಿಯಾದರೂ ನಮ್ಮನ್ನು ಮದುವೆಯಾಗುತ್ತಾನೆಂದು ತಿಳಿದು ತಮ್ಮ ಗೌರವವನ್ನು ಕಾಪಾಡಿಕೊಳ್ಳಲು ಅಲ್ಲಿರುವ ಕೊಳದಲ್ಲಿ ಬಿಳುತ್ತಾರೆ[೫೭] ಎಂದು ತಿಳಿಸುತ್ತದೆ. ಈ ಮೇಲಿನ ಎಲ್ಲ ಸಂದರ್ಭಗಳಲ್ಲಿಯೂ ಮಾದಿಗರು ಸೈನ್ಯದ ಮುಖಂಡರು, ಸೈನಿಕರು ಆಗಿದ್ದರೆಂಬ ಅಂಶವು ವ್ಯಕ್ತವಾಗುತ್ತದೆ.

ಕ್ರಿ.ಶ.೧೧೨೫ರ ಸುಮಾರಿಗಿದ್ದ ಸೋಮದೇವಭಟ್ಟನ 'ಕಥಸರಿತ್ಸಾಗರ'ದಲ್ಲಿ ದುರ್ಗಾ ಪಿಶಾಚನೆಂಬ ಮತಂಗ ನಾಯಕ ಬರುತ್ತಾನೆ. ಈ ಆದಿವಾಸಿ ಮತಂಗ ನಾಯಕನ ಬಳಿ ನೂರು ಸಹಸ್ರ ಬಿಲ್ಲು ಪ್ರವೀಣರಾದ ಮತಂಗ ಕುಲದ ಸೈನಿಕರಿದ್ದು ದುರ್ಗಾ ಪಿಶಾಚ ರಾಜರಿಂದಲೂ ಜಯಿಸಲಾಗದ ಅಜೇಯನೆಂದೇ ಖ್ಯಾತಿ ಹೊಂದಿದವನಾಗಿರುತ್ತಾನೆ[೫೮] ಎಂದು ತಿಳಿಸುತ್ತದೆ. ಇಲ್ಲಿ ಆದಿವಾಸಿಗಳಾದ ಮಾದಿಗರು ಬಿಲ್ವಿದ್ಯೆ ಪ್ರವೀಣರಾಗಿದ್ದು ಸೈನಿಕರಾಗಿ ಸೇವೆಸಲ್ಲಿಸಿರುವ ಅಂಶ ಕಂಡುಬರುತ್ತದೆ.

ನಂಜುಂಡ ಕವಿಯು ರಾಮನಾಥ ಚರಿತದಲ್ಲಿ ಮಾತಂಗಿಯ ಸೈನ್ಯದ ವರ್ಣನೆ ಮಾಡಿದ್ದಾನೆ ಮಾತಂಗಿ ಎಂಬುವಳು ಸೇನೆಯ ಮುಖ್ಯಸ್ಥೆಯಾಗಿ ಬಂದು ಕುಮಾರರಾಮನನ್ನು ಸೋಲಿಸುತ್ತಾಳೆ. ಈಕೆ ಕೊಂಕಣದೇಶದ ಮಾದಾರ ಜಾತಿಯವಳು ಎನ್ನುವುದು ಪಂಚಾಳಗಂಗನ ಕೃತಿಯಲ್ಲಿ ಸ್ಪಷ್ಟವಾಗಿದೆ. ಈಕೆ ಹರಳಯ್ಯರ ಕುಲದವಳೆಂದೂ ಸಹ ಹೇಳಲಾಗಿದೆ.[೫೯] ಈ ಹೇಳಿಕೆಯ ಹಿನ್ನೆಲೆಯಲ್ಲಿ ಮಾದಿಗ ಜಾತಿಯ ಪುರುಷರಷ್ಟೆ ಅಲ್ಲ ಮಹಿಳೆಯರು ಕೂಡ ಸೈನ್ಯದ ಮುಖಂಡರಾಗಿದ್ದುದು ತಿಳಿದುಬರುತ್ತದೆ.

ಈ ರೀತಿ 'ಮಾತಂಗ' 'ಮತಂಗ' 'ಮಾತಂಗಿ' ಪದ ಬಳಕೆಯ ಉಲ್ಲೇಖಿಸಿರುವ ಹಿನ್ನೆಲೆಯಲ್ಲಿ ಇತಿಹಾಸಕಾರರ ಅಭಿಪ್ರಾಯ, ಸಾಹಿತ್ಯ, ಐತಿಹ್ಯಗಳಲ್ಲಿ ಅಡಗಿರುವ ಚಾರಿತ್ರಿಕ ಅಂಶಗಳು ಮಾದಿಗರು ರಾಜರು, ಮುಖಂಡರು ಹಾಗೂ ಸೈನಿಕರು ಆಗಿಹೋಗಿದ್ದಾರೆ ಎಂಬ ಅಂಶವನ್ನು ಖಚಿತಪಡಿಸುತ್ತವೆ.

**೨. ಶಾಸನ, ಮಹಾಸತಿ ಹಾಗೂ ವೀರಗಲ್ಲುಗಳು**

ಚರಿತ್ರೆಯ ರಚನೆ ಸಂದರ್ಭದಲ್ಲಿ ಶಾಸನ, ಮಹಾಸತಿ ಮತ್ತು ವೀರಗಲ್ಲುಗಳು ಅನೇಕ ಮಾಹಿತಿ ಯನ್ನು ಒದಗಿಸುವ ಆಕರಗಳಾಗಿವೆ. ಅದರಲ್ಲೂ ಸಾಂಸ್ಕೃತಿಕ ಅಧ್ಯಯನಕ್ಕೆ ಶಾಸನಗಳು ತುಂಬಾ ಸಹಕಾರಿ. ಇಂಥವುಗಳಲ್ಲಿ ಮಾದಿಗರ ಕುರಿತ ಮಾಹಿತಿ ದೊರಕಲಾರದೆಂದೆ ಹೇಳಬಹುದಾಗಿದೆ. ದಾನ, ದೇವಾಲಯ ನಿರ್ಮಾಣ, ಕ್ಷಾತ್ರ ತೇಜಸ್ಸು, ಕೀರ್ತಿ, ಪ್ರಶಸ್ತಿ, ಸಾಮಾಜಿಕ ಕಾರ್ಯ ಈ ಸಮಾಜೋ ಸಾಂಸ್ಕೃತಿಕ ಚಟುವಟಿಕೆಳು ಮೇಲ್ಜಾತಿಯವರಿಗೆ ಮೀಸಲಾಗಿರುವಾಗ[೬೦] ಮಾದಿಗರ ಬಗ್ಗೆ ನಿರೀಕ್ಷಿಸುವಂತಿಲ್ಲ ವಾದರೂ ಕೆಲವೊಂದು ಶಾಸನಗಳಲ್ಲಿ ಮಾದಿಗ ಕುರಿತ ಸಂಗತಿಗಳಿವೆ. ಇವುಗಳೇ ಅಲ್ಲದೇ ಮಾದಿಗರ ಪುರುಷ ಮತ್ತು ಮಹಿಳೆಯರು ತಾವು ಮಾಡಿರುವ ತ್ಯಾಗ ಬಲಿದಾನದ ಬಗ್ಗೆ ಅವರ ಹೆಸರಲ್ಲಿ ಹಾಕಿಸಿರುವಂಥ ವೀರಗಲ್ಲುಗಳು ಮಾಹಿತಿ ಒದಗಿಸುತ್ತವೆ. ಇಂದಿಗೂ ಅವರು ಪೂಜೆಗೊಳ್ಳುತ್ತಿರುವುದು ಕಂಡುಬರುತ್ತದೆ. ಈ ಬಗೆಯ ಮಾದಿಗರನ್ನು ಕುರಿತ ಮಾಹಿತಿಯನ್ನು ನೀಡುವ ಶಾಸನಗಳು, ವೀರಗಲ್ಲು, ಐತಿಹ್ಯಗಳಲ್ಲಿ ಅಡಗಿರುವ ಚಾರಿತ್ರಿಕ ಅಂಶಗಳನ್ನು ಇಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಭಾರತೀಯ ಸಾಮಾಜಿಕ ವ್ಯವಸ್ಥೆಯ ಇತಿಹಾಸವನ್ನು ಅರಿಯಲು ನಮಗೆ, ಮೊದಲು ಸಿಗುವ ಆಕರಗಳೆಂದರೆ ವೇದಗಳು. ಋಗ್ವೇದದಲ್ಲಿ ಜಾತಿಗಳ ಉಲ್ಲೇಖವಿಲ್ಲವಾದರೂ, ವೃತ್ತಿಕಾರರ ಹೆಸರಿನಲ್ಲಿ ಚಮ್ಮಾರ ವೃತ್ತಿಯನ್ನು ಹೆಸರಿಸಿರುವುದು[೬೧] ಕಂಡುಬರುತ್ತದೆ. ಆನಂತರದಲ್ಲಿ ವೃತ್ತಿಗಳೇ

ಜಾತಿಗಳಾಗಿ ಪರಿವರ್ತಿತಗೊಂಡಿವೆ ಎನ್ನಬಹುದು. ಕ್ರಿ.ಶ.೯೬೪ರಲ್ಲಿ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಹುನವಳ್ಳಿ ಗ್ರಾಮದ ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿ ಹಾಕಿಸಿರುವ ಶಾಸನವೊಂದರಲ್ಲಿ 'ಮಾದಿಗ' ಪದ ಬಳಕೆಯಾಗಿರುವುದು ಕಂಡುಬರುತ್ತದೆ. ''....ಹುನವಳ್ಳಿಯ ಮಾದಗರ ಕಮ್ಮಯ್ಯನಂ ಮಗಂ ನರಿವನ್ಮ ಗಾವುಣ್ಡಡಾಗೆಯ್ಯೆ ಆತನ ತಮ್ಮೆಂ ನಾಣ್ಣೆಯಂ ಗಾಸಪೇಳ್ದ ತಾಣಗುನ್ನೂರ ಮಹಾ ಜನಂ ಪರಸಿದರ್ ಅರಿವತ್ತ ಕಟ್ಟಿದ್ದಕ್ಕೆ ಮಂಗಳಂ[೬೨] ಎಂದಿದೆ. ಈ ಶಾಸನವು ಮಾದಿಗರ ಕಮ್ಮಯ್ಯನ ಮಗ ಅರಿವಮ್ಮನ ತಮ್ಮನಾದ ನಾಣೆಯೆಂಬುವನು 'ಮಹಾಜನಂ'ಗಳಿಗೆ ಗೋವುಗಳನ್ನು ದಾನಕೊಟ್ಟಿರುವುದನ್ನು ತಿಳಿಸುತ್ತದೆ. ಅದೇ ಊರಿನ ಮತ್ತೊಂದು ಶಾಸನದಲ್ಲಿ (ಕ್ರಿ.ಶ.೯೭೭ನೆಯ ಶಾಸನ) .....ಪುನುವಾಲವಳ್ಳಿಯ ಗಾಯಿಗಂ ಮಾದಗರರಿವಾಮ್ಮರ್ತಟುಗೊಳೊಟ್ಟಿತ್ತಂ ಬಿಟ್ಟಿಗನನೆಪೆರ್ಗ್ಗಡೆ ದಾಸೆಯ್ಯನ ಮಗಂ ಗಂಭೀಮಯ್ಯಂ ಬರೆದ ಕನ್ನಯಂ ಕಲ್ಲನಿಟುಸಿದ[೬೩] ಎಂದು ತಿಳಿಸಿದೆ. ಇಲ್ಲಿಯೂ ಅದೇ ಗ್ರಾಮದ ಅರಿವರ್ಮ ಎಂಬಾತನು ತನ್ನ ಊರಿನ ದನಗಳನ್ನು ಕಳ್ಳರು ಅಪಹರಿಸಿದಾಗ ಅವರೊಂದಿಗೆ ಹೋರಾಡಿ ಸತ್ತಿದ್ದಕ್ಕೆ ಅವನಿಗಾಗಿ ಕನ್ನಯ್ಯ ವೀರಗಲ್ಲನ್ನು ನಿಲ್ಲಿಸುತ್ತಾನೆ. ಈ ಶಾಸನಗಳು ಒಳಗೊಂಡಿರುವ ಸಂಗತಿಗಳು ಮಾದಿಗರು ಊರಿನ ದನಗಳನ್ನು ಕಾಯುವ ಕೆಲಸವನ್ನು ನಿರ್ವಹಿಸುತ್ತಿದ್ದ ಮತ್ತು ಗೋವುಗಳನ್ನು ಮಾದಿಗರು ದಾನವಾಗಿ ಕೊಟ್ಟಿರುವುದನ್ನು ಖಚಿತಪಡಿಸುತ್ತವೆ.

ಶಾಸನವೊಂದರಲ್ಲಿ ಮಾದಿಗರು ತಾವು ಕೈಗೊಂಡಿದ್ದ ಪ್ರಧಾನ ವೃತ್ತಿಯಾದ ಚರ್ಮಗಾರಿಕೆಗೂ ತೆರಿಗೆಗಳನ್ನು ಸಲ್ಲಿಸುತ್ತಿದ್ದುದು ಕಂಡುಬರುತ್ತದೆ. ಬಾದಾಮಿಯ ಮಹಾಜನರು ಊರಿನ ಚರ್ಮಕಾರರ ತೆರಿಗೆಗಳನ್ನು ತೆಗೆದು ಹಾಕಿದರಂತೆ.[೬೪] ಈ ಹಿನ್ನೆಲೆಯಲ್ಲಿ ರಾಜ್ಯದ ಬೊಕ್ಕಸಕ್ಕೆ ಬರುತ್ತಿದ್ದ ಆದಾಯಗಳಲ್ಲಿ ಚರ್ಮಗಾರಿಕೆಯ ತೆರಿಗೆ ಒಂದಾಗಿತ್ತು ಎನ್ನಬಹುದು. ಇದಲ್ಲದೆ 'ಮಾದಾರಿಕೆ' ಎಂಬುದು ಒಂದು ಮಾದಿಗರು ಕೊಡುವ ಸುಂಕದ ಹೆಸರಾಗಿ ಅನೇಕ ಶಾಸನಗಳಲ್ಲಿದೆ[೬೫] ಶ್ರವಣಬೆಳಗೊಳದಲ್ಲಿ ಹದಿನಾಲ್ಕನೆಯ ಶತಮಾನದ ಶಾಸನವೊಂದರಲ್ಲಿ ಸಾತ್ವಿಕರು, ಬೋಷ್ಟಿಕರು ತಿರುಪಣೆ ತಿರುವಡಿ ತಂಣ್ಣೀರವರು ನಾಲ್ವತ್ತೆಂಟು ಜನಂಗಳು ಸಾವಂತ ಬೋವಕ್ಕಳು, ತಿರಿಕುಲ 'ಜಾಂಬವ' ಕುಲವೊಳಗಾದ ಹದಿನೆಂಟು ನಾಡ[೬೬] ಎಂದಿದೆ. ಇದರಲ್ಲಿ ಪ್ರಸ್ತಾಪಗೊಂಡಿರುವ 'ಜಾಂಬವ' ಕುಲ ಬೇರಾವುದಾಗಿರದೆ ಮಾದಿಗ ಜಾತಿಯೇ ಆಗಿದೆ. ಏಕೆಂದರೆ ಮಾದಿಗರು ತಮ್ಮ ಮೂಲಪುರುಷನಾದ ಆದಿಜಾಂಬವನ ಹೆಸರಲ್ಲಿ ಮತ್ತು ಜಾಂಬವ ಎಂತಲೂ ಗುರುತಿಸಿಕೊಳ್ಳುತ್ತಾರೆ.

ಸುಮಾರು ೧೭ನೇ ಶತಮಾನದ ಶಾಸನವೊಂದರ ದಾನದ ಶಾಪಾಶಯ ಭಾಗದಲ್ಲಿ ದಾನವನ್ನು ಅಪಹರಿಸಿದ ವ್ಯಕ್ತಿಗೆ ಒದಗಬಹುದಾದ ಕೆಡುಕನ್ನು ಹೇಳುವಾಗ ಹೊಲೆಯ-ಮಾದಿಗರ ಉಲ್ಲೇಖಗಳು ಬರುತ್ತವೆ. ''ದಾನ ಅಪಹರಿಸುವುದು ತನ್ನ ಹೆಂಡತಿಯನ್ನು ಹೊಲೆಯ ಮಾದಿಗರಿಗೆ ಕೊಟ್ಟುದ್ದಕ್ಕೆ ಸಮಾನವೆನ್ನುತ್ತದೆ.''[೬೭] ಮತ್ತು ದಕ್ಷಿಣ ಕರ್ನಾಟಕದ ಶಾಸನವೊಂದರಲ್ಲಿ ಬರುವ ಬಲಗೈ ಎಡಗೈ

ಅಸ್ಪೃಶ್ಯರು ಉಳಿದ ಶಾಸನಗಳಲ್ಲಿ ಮತ್ತು ಸಾಹಿತ್ಯದಲ್ಲಿ ಬರುವ ಹೊಲೆಯ-ಮಾದಿಗರು ಎಂಬುದು ಸ್ಪಷ್ಟ.[೧೮] ಹೀಗೆ ಹೊಲೆ-ಮಾದಿಗರನ್ನು ಅತ್ಯಂತ ಕೀಳು ಭಾವನೆಯಿಂದ ಕಾಣುತ್ತಿದ್ದರೆಂಬುದನ್ನು ಈ ಶಾಸನಗಳಲ್ಲಿ ಪ್ರಸ್ತಾಪಗೊಂಡಿರುವ ಸಂಗತಿಗಳು ಖಚಿತಪಡಿಸುತ್ತವೆ.

ಆರ್. ಶೇಷಶಾಸ್ತ್ರಿಯವರು ಮಾದಿಗರಿಗಿಂತಲೂ ಮೇಲಿನ ಸ್ಥಾನವನ್ನು ಹೊಂದಿರುವ ಗೊಲ್ಲ ಜನಾಂಗದವರಿಂದ ಮಾದಿಗ ವೀರರು ಆರಾಧನೆಗೊಳ್ಳುತ್ತಿರುವ, ಸಂಗತಿಯೊಂದು (ಆಂಧ್ರ ಪ್ರದೇಶ) ತಮ್ಮ ಗ್ರಂಥದಲ್ಲಿ ದಾಖಲಿಸಿದ್ದಾರೆ. ಅದರ ಸಂಕ್ಷಿಪ್ತ ಭಾಗ ಹೀಗಿದೆ : ಚನ್ನಯ್ಯ ಬಾಲುಡು(ರಾಜ) ಯುದ್ಧವೊಂದಕ್ಕೆ ಮಾದಿಗರ ಸಹಾಯ ಬೇಡುತ್ತಾನೆ. ಈ ಕೋರಿಕೆ ಮೇರೆಗೆ ಮಾದಿಗರು ಯುದ್ಧದಲ್ಲಿ ಇವರೊಂದಿಗೆ ಭಾಗವಹಿಸಿ ಆ ದಿನ ಗೆಲ್ಲಲು ಸಹಕರಿಸುತ್ತಾರೆ. ಇದರಿಂದ ಸಂತೋಷಗೊಂಡ ರಾಜ ಚನ್ನಯ್ಯಬಾಲುಡು ಅವರೊಂದಿಗೆ ಊಟ ಮಾಡಲು ನಿರ್ಧರಿಸಿ ಅವರನ್ನು ಊಟಕ್ಕೆ ಬರುವಂತೆ ತಿಳಿಸಿರುತ್ತಾನೆ. ಅಡಿಗೆ ತಯಾರಾದ ನಂತರ ಮಂತ್ರಿಗೆ ಅವರನ್ನು ಕರೆತರಲು ತಿಳಿಸುತ್ತಾನೆ. ಆದರೆ ಜಾತಿಹೀನರ ಜೊತೆ ಊಟ ಮಾಡಲು ಇಷ್ಟಪಡದ ಮಂತ್ರಿ ಈ ವಿಷಯ ತಿಳಿಸದೆಯೇ ಅವರಿಗೆ ತಿಳಿಸಿದರು. ಇನ್ನೂ ಬಂದಿಲ್ಲವೆಂದು ಸುಳ್ಳು ಹೇಳಿದ. ಆದರೆ ಅವರು ಬಾರದೆ ಇದ್ದುದನ್ನು ಕಂಡು ಬೇಸರವಾದ ರಾಜನು ಅವರ ಪಾಲಿನ ಅಡುಗೆಯನ್ನು ಎತ್ತಿಟ್ಟು ಉಳಿದ ಸೈನಿಕರೊಂದಿಗೆ ಊಟ ಮಾಡುತ್ತಾನೆ. ಆಗ ಅಲ್ಲಿಗೆ ಬಂದ ಮಾದಿಗರು ಜೊತೆಗೆ ಊಟಕ್ಕೆ ಕರೆದು ನಮ್ಮನ್ನು ಅವಮಾನಿಸಲು ಈ ರೀತಿ ಮಾಡಿದ್ದಾರೆಂದು ತಿಳಿದು ಅಂದು ಊಟ ಮಾಡದೆಯೇ ಯುದ್ಧ ಮಾಡಲು ನಿರ್ಧರಿಸುತ್ತಾರೆ. ಊಟ ಮಾಡದೆ ಯುದ್ಧ ಮಾಡುವುದನ್ನು ರಾಜನು ವಿರೋಧಿಸಿ ವಾಪಸ್ಸು ಕಳುಹಿಸುತ್ತಾನೆ. ಅವರು ಅಲ್ಲಿಂದ ಹೊರಟು ರಾಜನ ಅಣ್ಣನಾದ ಕಾಟಮರಾಜು ಬಳಿಗೆ ಬರುತ್ತಾರೆ. ಆತನು ಕೂಡ ಇವರ ಮೇಲೆ ಬೇಸರ ಮಾಡಿಕೊಂಡು ಮಾತನಾಡಿಸದೆ ಸುಮ್ಮನಿರುತ್ತಾನೆ. ಇದರಿಂದ ಇನ್ನೂ ಹೆಚ್ಚು ಅವಮಾನವಾದಂತಾಗಿ ಯುದ್ಧದಲ್ಲಿ ಭಾಗವಹಿಸಲು ಸಾಧ್ಯವಾಗದಿದ್ದಕ್ಕೆ ಎಲ್ಲರೂ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ.[೧೯] ಈ ರೀತಿ ಆತ್ಮಹತ್ಯೆ ಮಾಡಿಕೊಂಡ ವೀರರ, ನೆನಪಿಗಾಗಿ ವೀರಗಲ್ಲನ್ನು ಹಾಕಿಸಿ ಪೂಜೆ ಮಾಡುವುದು ಆರಂಭಗೊಂಡು ಇಂದಿಗೂ ಮುಂದುವರಿಯುತ್ತಿರುವುದು ತಿಳಿದುಬರುತ್ತದೆ. ಕೋಲಾರ ಜಿಲ್ಲೆಯಲ್ಲಿ ಮಾದಿಗರು ಆಚರಿಸುವ 'ಭಾರತ ಹುಣ್ಣಿಮೆ'ಯ ದಿನ ಊರ ಮುಂದಿನ ಗಂಗಮ್ಮನ ಗುಡಿಯ ಮುಂದೆ ಒಂದು ಹೊಸ ಮಡಕೆಯ ತುಂಬ ನೀರು, ಹೊಸದಾರ ಮತ್ತು ಸೂಜಿಯೊಂದನ್ನು ಇಟ್ಟಿರುತ್ತಾರೆ. ಅವರ ಪ್ರಕಾರ ಮಹಾಭಾರತದ ಯುದ್ಧದಲ್ಲಿ ಹೋದ ತಮ್ಮ ವೀರರು ಆದಿನ ಹಿಂತಿರುಗುತ್ತಾರೆಂಬುದು ನಂಬಿಕೆ. ಆ ದಿನ ರಾತ್ರಿಯಿಡೀ ಹಾಡುಗಳನ್ನು ಹಾಡುತ್ತಾ ಕಾಲ ಕಳೆಯುವರು.[೨೦] ಹೀಗೆ ಮಾದಿಗ ವೀರರನ್ನು ಆಂಧ್ರದಲ್ಲಿ ಮಾತ್ರವಲ್ಲದೆ ಕರ್ನಾಟಕ ರಾಜ್ಯದಲ್ಲಿ ಹಲವಾರು ಕಡೆ ಆರಾಧನೆ ಮಾಡುವುದು ಕಂಡುಬರುತ್ತದೆ.

ವಿಜಯನಗರ ಅರಸರ ಕಾಲದಲ್ಲಿ ಮಾದಿಗರು ಸೈನ್ಯದ ಮುಖಂಡ ಮತ್ತು ಸೈನಿಕರಾಗಿದ್ದರೆಂಬುದನ್ನು ಕಾವ್ಯ ಮತ್ತು ಶಾಸನಗಳು ದೃಢಪಡಿಸುತ್ತವೆ. ಸಂಗಮನ ಮಕ್ಕಳ ಕಾಲದಿಂದಲೂ ಸಾಮ್ರಾಜ್ಯದ ಸುಭದ್ರತೆಯ ದೃಷ್ಟಿಯಿಂದ ಸೈನ್ಯದಲ್ಲಿ ಎಲ್ಲಾ ವರ್ಗದವರ ಪ್ರಾತಿನಿಧ್ಯವನ್ನು ಪಡೆಯಲಾಗಿತ್ತು. ಈ ವಿಷಯದಲ್ಲಿ ಮುಂಚಿನ ಕೆಲವು ಶಾಸನಗಳು ನೀಡಿರುವ ಅಭಿಪ್ರಾಯವನ್ನು ಬಾರ್ಬೋಸ ಮುಂತಾದ ಪ್ರವಾಸಿಗರು ನೀಡಿರುವ ಹೇಳಿಕೆಗಳು ಸಮರ್ಥಿಸುತ್ತವೆ.''[೨೧] ಈ ಹೇಳಿಕೆಗಳ ಹಿನ್ನೆಲೆಯಲ್ಲಿ ಸಂಗಮನ ಮಕ್ಕಳ ಕಾಲದಿಂದಲ್ಲೂ ಪ್ರತಿಯೊಂದು ವರ್ಗದ ಸೈನಿಕರು ಇದ್ದರೆಂಬುದು ತಿಳಿಯುವುದರಿಂದ ಕೆಳವರ್ಗದಲ್ಲಿ ಬರುವ ಮಾದಿಗರು ಸಹ ಪ್ರಾತಿನಿಧ್ಯ ಹೊಂದಿದ್ದರು ಎಂದು ಇಲ್ಲಿ ಊಹಿಸಬಹುದಾಗಿದೆ. ಈ ಅಂಶವನ್ನು ನಂಜುಂಡ ಕವಿ ರಚಿಸಿದ ಕಾವ್ಯಗಳಂದ ಖಚಿತಪಡಿಸಿಕೊಳ್ಳಬಹುದು. ಅವರು ಕೊಡುವ ಸೈನಿಕರ ವರ್ಣನೆಯಲ್ಲಿ ಕೇವಲ ಬೇರೆ ಬೇರೆ ಪ್ರದೇಶಕ್ಕೆ ಸೇರಿದವರು ಮಾತ್ರವೇ ಅಲ್ಲದೆ ಹೊಲೆಯರ ಹಳ್ಳ, ಮಾದಿಗರ ಹಂಪ[೨೨]ರನ್ನು ಹೆಸರಿಸಿದ್ದಾರೆ. ಮಾದಿಗರ ಹಂಪನನ್ನು ಹೆಸರಿಸಿರುವುದು ನೋಡಿದರೆ ಬಹುಶಃ ಅವನೊಬ್ಬ ಶೂರನಾಗಿದ್ದರಿಬಹುದು. ಇಂದಿಗೂ ಕಮ್ಮಟದುರ್ಗದ ಸಮೀಪ ದಲ್ಲಿರುವ ಒಂದು ಗುಡ್ಡವನ್ನು 'ಮಾದಿಗರ ಹಂಪಯ್ಯನ ಗುಡ್ಡ'ವೆಂದು ಕರೆಯುತ್ತಿರುವುದನ್ನು[೨೩] ಕಾಣಬಹುದು. ಆ ಗುಡ್ಡದಲ್ಲಿ ಈತ ವಾಸಿಸಿರಬೇಕು ಇಲ್ಲವೇ ಆತನ ಪರಾಕ್ರಮದ ನೆನಪಿಗಾಗಿ ಆತನ ಹೆಸರನ್ನು ಗುಡ್ಡಕ್ಕೆ ಕರೆದಿರಬಹುದು ಅಥವಾ ಆತನ ಮರಣ ಹೊಂದಿದ ಸ್ಥಳ ಅದಾಗಿರಬೇಕೆಂದು ಉಹಿಸಲು ಸಾಧ್ಯವಿದೆ. ಈ ರೀತಿ ಮಾದಿಗರು ಸೈನಿಕರಾಗಿದ್ದ ಅಂಶವನ್ನು ಶಾಸನ ಮತ್ತು ಕಾವ್ಯಗಳು ಪ್ರಸ್ತಾಪಿಸಿದ್ದರೆ ಮತ್ತೊಂದು ಕಡೆ ನಂಜುಂಡ ಕವಿಯು ರಾಮನಾಥ ಚರಿತದಲ್ಲಿ ಮಾತಂಗಿಯ ಸೈನ್ಯದ ಬಗ್ಗೆ ವರ್ಣನೆ ಮಾಡಿದ್ದಾರೆ: ಮಾತಂಗಿ ಎಂಬುವಳು ಸೇನೆಯ ಮುಖ್ಯಸ್ಥೆಯಾಗಿ ಬಂದು ಕುಮಾರ ರಾಮನನ್ನು ಸೋಲಿಸುತ್ತಾಳೆ.[೨೪]ಎಂಬುದು ಕಂಡುಬರುತ್ತದೆ. ಹೀಗೆ ಅನೇಕ ಅಂಶಗಳು ಮಾದಿಗರು ಸೈನ್ಯದ ಮುಖಂಡರು ಹಾಗೂ ಸೈನಿಕರಾಗಿ ಸೇವೆ ಸಲ್ಲಿಸಿರುವುದನ್ನು ಖಚಿತಪಡಿಸುತ್ತವೆ.

### ಬಂಧಮ್ಮ

ಮಾದಿಗರ(ಬೊಗೆಲರ ಬೆಡುಗು) ಹೆಣ್ಣು ಮಗಳಾದ ಬಂಧಮ್ಮ ಗ್ರಾಮದ ಒಳಿತಿಗಾಗಿ ಕೆರೆಗೆ ಬಲಿಯಾದವಳು. ಆ ಸ್ಥಳವು ಕರ್ನಾಟಕ ಮತ್ತು ಆಂಧ್ರ ಪ್ರದೇಶದ ಗಡಿಭಾಗವಾದ ಎರಡು ಕೆರೆ ಗ್ರಾಮವಾಗಿದೆ. ಇದು ಚಿತ್ರದುರ್ಗ ಜಿಲ್ಲೆಗೆ ಹೊಂದಿಕೊಂಡಿದೆ. ಈ ಹೆಣ್ಣು ಮಗಳ ಸಂಬಂಧಿಕರು ಚಿತ್ರದುರ್ಗ ಜಿಲ್ಲೆಯಲ್ಲಿ ನೆಲೆಸಿದ್ದಾರೆ. ಬಂಧಮ್ಮ ಹೇಗೆ ಕೆರೆಗೆ ಹಾರವಾದಳು ಎಂಬುದರ ಬಗ್ಗೆ ಐತಿಹ್ಯವೊಂದು ಹೀಗಿದೆ : ಎರಡು ಕೆರೆ ಗ್ರಾಮದ ಗೌಡ ಕೆರೆಯೊಂದನ್ನು ಕಟ್ಟಿಸಿದ್ದ. ಅದರ ಏರಿ ಮತ್ತೆ ಮತ್ತೆ ಒಡೆದು ಹೋಗುತ್ತಲೇ ಇತ್ತು. ಇದರ ಬಗ್ಗೆ ಚಿಂತಕ್ರಾಂತನಾದ ಗೌಡನಿಗೆ ಕನಸಲ್ಲಿ ಮನೆದೇವತೆ ಗರ್ಭವತಿಯಾದ ನಿನ್ನ ಹಿರಿಯ ಸೊಸೆಯನ್ನು ಬಲಿಕೊಟ್ಟರೆ ಏರಿ ಒಡೆದು ಹೋಗದೆ

ನಿಲ್ಲುತ್ತದೆ ಎಂದಿತಂತೆ. ಇದರಿಂದಾಗಿ ಗೌಡ ತನ್ನ ಮುದ್ದಿನ ಮಗನ ಹೆಂಡತಿಯನ್ನು ಬಲಿಕೊಡಲು ಇಷ್ಟಪಡದೆ ತನ್ನ ಮನೆಯ ಆಳಿನ ಹೆಂಡತಿಯನ್ನು ಬಲಿಕೊಡಲು ನಿರ್ಧರಿಸುತ್ತಾನೆ. ಏಕೆಂದರೆ ಮನೆಯ ಆಳು ಮಗನ ಸಮಾನನಾಗಿದ್ದರಿಂದ ಆತನ ಹೆಂಡತಿ ಸೊಸೆಯಾಗಬೇಕಲ್ಲವೇ, ಆಕೆ ತುಂಬಿದ ಗರ್ಭಿಣಿಯಾಗಿದ್ದಳು. ಇದನ್ನು ತಿಳಿದು ಆಕೆ ತನ್ನ ತವರು ಮನೆಯಾದ(ಆಂಧ್ರ) ಪಬ್ಬೋರನಹಳ್ಳಿಗೆ ಹೋಗಿದ್ದಳು. ಆದರೆ ಊರಿನ ಗೌಡ ನಿರ್ಧರಿಸಿದ್ದನ್ನು ಆಕೆಯ ಗಂಡನಾಗಲಿ ಅತ್ತೆ ಮಾವರಾಗಲಿ ತಡೆಯಲು ಸಾಧ್ಯವಾಗಲಿಲ್ಲ. ಇದರಿಂದಾಗಿ ಬಂಧಮ್ಮ ಕೆರೆಗೆ ಬಲಿಯಾಗುವುದು ಅನಿವಾರ್ಯವಾಗಿತ್ತು. ಆ ದಿನ ಗ್ರಾಮದವರು ಬಂಧಮ್ಮಳನ್ನು ಅಲಂಕರಿಸಿ ಮಂಗಳ ವಾದ್ಯದೊಂದಿಗೆ ಕೆರೆಗೆ ಬಲಿಕೊಡಲು ಬರುತ್ತಾರೆ. ಬಲಿಯಾಗುವುದಕ್ಕೆ ಮುಂಚೆ ತನ್ನ ತವರು ಮನೆಯವರು ತನ್ನನ್ನು ರಕ್ಷಣೆ ಮಾಡದೆ ಹೋಗಿದ್ದಕ್ಕೆ 'ತನ್ನ ತವರು ಮನೆಯವರಿಗೆ ಇನ್ನು ಮುಂದೆ ಹೆಣ್ಣು ಮಕ್ಕಳು ಆಗದಿರಲಿ ಎಂದು ಶಪಿಸಿ ಕೆರೆಯಲ್ಲಿ ದುಮಿಕಿದಳು. ಆಗ ಕೆರೆಯ ಏರಿ ಒಡೆಯುವುದು ನಿಂತಿತ್ತಂತೆ. ಈ ರೀತಿ ಕೆರೆಗೆ ಹಾರವಾದ ಬಂಧಮ್ಮಳ ತ್ಯಾಗಕ್ಕೆ ಮೆಚ್ಚಿ ಅದರ ಪ್ರತಿಫಲವಾಗಿ ಊರಿನ ಗೌಡ ಆ ಕೆರೆಯ ಹಿಂಭಾಗದಲ್ಲಿ ಎರಡು ಎಕರೆ ಜಮೀನನ್ನು ಉಂಬಳಿಯಾಗಿ ಆಕೆಯ ತವರುಮನೆಯವರಿಗೆ ನೀಡಿದನು. ಆದರೆ ಇಂದು ಬಂಧಮ್ಮಳ ಸಂಬಂಧಿಕರು ಚಿತ್ರದುರ್ಗ ಜಿಲ್ಲೆಯ ಬೆಣೆಹಳ್ಳಿ ಮತ್ತು ಸಿಂಗಾಪುರ ಗ್ರಾಮಗಳಲ್ಲಿ ನೆಲೆಸಿದ್ದಾರೆ.[೨೫] ಬಂಧಮ್ಮಳ ಹೆಸರಲ್ಲಿ ಕೆರೆಯ ಏರಿ ಮೇಲೆ ಇಂದಿಗೂ ಕಲ್ಲು ಚಪ್ಪಡಿಯ ಗುಡಿಯೊಂದು ಇದ್ದು ಅದು ಅವರ ವಂಶಸ್ಥರಿಂದ ವರ್ಷಕ್ಕೊಂದು ಬಾರಿ ಪೂಜೆಗೊಳ್ಳುತ್ತಿದೆ. ಈ ರೀತಿ ಮಾದಿಗರಲ್ಲಿ ಗ್ರಾಮದ ಒಳಿತಿಗಾಗಿ ತಮ್ಮ ಪ್ರಾಣವನ್ನು ತ್ಯಾಗ ಮಾಡಿರುವಂಥ ಮಹಿಳೆಯರು ಇದ್ದರೆಂಬ ಸಂಗತಿ ತಿಳಿದುಬರುತ್ತದೆ.

**ವೀರಗಾರ(ಈರಗಾರ)**

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಕಸ್ತೂರಿ ರಂಗಪ್ಪನಹಳ್ಳಿ ಗ್ರಾಮದಲ್ಲಿ ಹಿಂದೆ ಕೋಟೆಯ ಕಾವಲುಗಾರನಾಗಿ ಸೇವೆ ಸಲ್ಲಿಸುತ್ತಿದ್ದ ಮಾದಿಗರ(ಏನುಮಲೊರು ಬೆಡಗು) ವ್ಯಕ್ತಿಯೊಬ್ಬ ಬಲಿಯಾಗಿ ಇಂದಿಗೂ ಆ ಗ್ರಾಮದಲ್ಲಿ ಮಾದಿಗರಿಂದ ಈರಗಾರ ಹೆಸರಿನಲ್ಲಿ ಪೂಜೆಗೊಳ್ಳುತ್ತಿರುವುದು ಕಂಡುಬರುತ್ತದೆ. ಈ ಸಂಬಂಧ ಪೂಜಾರಿಕೆ ಸ್ಥಾನ ಪಡೆದಿರುವ ಮನೆತನದ ಕರಿಯಪ್ಪನವರು ಕೊಟ್ಟ ಮಾಹಿತಿ ಹೀಗಿದೆ : ಹಿರಿಯೂರು ತಾಲ್ಲೂಕಿನ ಬಗ್ಗನಡು ಗ್ರಾಮದಲ್ಲಿ ಕೋಟೆಯ ಕಾವಲುಗಾರನಾಗಿ ಸೇವೆ ಸಲ್ಲಿಸುತ್ತಿದ್ದ ಮಾದಿಗರ ಈರಣ್ಣ ಪ್ರತಿದಿನ ರಾತ್ರಿಯಾದ ತಕ್ಷಣ ಕೋಟೆಯ ಬಾಗಿಲು ಮುಚ್ಚಿ ಬೀಗ ಹಾಕಿ ಮುಂಜಾನೆ ತೆರೆಯುತ್ತಿದ್ದನು. ಈ ಕರ್ತವ್ಯದಲ್ಲಿ ತೊಡಗಿದ್ದ ಈತ ಆ ಗ್ರಾಮಕ್ಕೆ ಬಂದಿದ್ದ ತಾವರೆಕೆರೆಯ ಹೆಣ್ಣನ್ನು ಪ್ರೇಮಿಸಿದ್ದ. ಆಕೆ ತನ್ನ ಊರಿಗೆ ಹಿಂದುರುಗಿದಳು. ಆ ನಂತರದಲ್ಲಿ ಆತನು ದಿನಾಲು ಸಂಜೆಯಾದ ತಕ್ಷಣ ಕೋಟೆಯ ಬಾಗಿಲು ರಾತ್ರಿ ವೇಳೆಯಲ್ಲಿ ತಾವರೆಕೆರೆಗೆ ಹೋಗಿ ಮತ್ತೆ ಬೆಳಕು ಹರಿಯುವ ಮೊದಲು ಬಂದು ಬಾಗಿಲು ತೆರೆಯುತ್ತಿದ್ದನು. ಒಂದು ದಿನ ಹಬ್ಬದ

ಸಂದರ್ಭದಲ್ಲಿ ಎಂದಿನಂತೆ ಬಾಗಿಲು ಹಾಕಿ ತನ್ನ ಪ್ರೇಯಸಿಯನ್ನು ನೋಡಲು ಅವರ ಊರಿಗೆ ತೆರಳಿದ್ದ(ಆತನು ತನ್ನೊಂದಿಗೆ ಒಂದು ಆಯುಧವನ್ನು ತೆಗೆದುಕೊಂಡು ಹೋಗುತ್ತಿದ್ದನು. ಜೊತೆಗೆ ಒಂದು ನಾಯಿ ಸಹ ಇರುತ್ತಿತ್ತು.) ಅಂದು ದುರಾದೃಷ್ಟವಶಾತ್ ಆಕೆಯ ಅಣ್ಣಂದಿರಿಗೆ ಈ ವಿಚಾರ ತಿಳಿಯಿತು. ಬೇರೆ ಗ್ರಾಮದ ಅದರಲ್ಲೂ ಮಾದಿಗರ ಜಾತಿಗೆ ಸೇರಿದವನೊಬ್ಬನು ಈ ರೀತಿ ಮಾಡುತ್ತಿದ್ದಾನೆಂಬುದು ತಿಳಿದ ತಕ್ಷಣವೆ ಊರಿನ ಇತರೆಯವರೊಂದಿಗೆ ಆತನನ್ನು ಒಡೆಯಲು ಅಟ್ಟಿಸಿಕೊಂಡು ಬರುತ್ತಾರೆ. ಅಲ್ಲಿಂದ ಓಡಿದ ಈರಣ್ಣ ತನ್ನ ಊರಿನ ಗಡಿ ಭಾಗದಲ್ಲಿ(ಜವನಗೊಂಡನಹಳ್ಳಿ ಗ್ರಾಮದ ಹತ್ತಿರ) ಬಂದು ನಿಲ್ಲುತ್ತಾನೆ. ಅಲ್ಲಿ ತನ್ನ ಸಹಾಯಕ್ಕೆ ಬರುವಂತೆ ಹೊಲದಲ್ಲಿ ಕೆಲಸ ಮಾಡುವವರನ್ನು ಕೇಳಿಕೊಳ್ಳುತ್ತಾನೆ. ಆದರೆ ಅವರು ಆತನಿಗೆ ಸಹಾಯ ಮಾಡಲು ಹಿಂಜರಿಯುತ್ತಾರೆ. ತಾನು ಇಂದು ಅವರಿಂದ ಕೊಲೆಯಾಗುವುದು ಖಚಿತವೆಂದು ತಿಳಿದು ತನ್ನ ಆಯುಧ(ದೊಡ್ಡಮಚ್ಚು)ದಿಂದ ತನ್ನ ಸಾಕು ನಾಯಿಯನ್ನು ಕತ್ತರಿಸಿ ಹಾಕಿ ತಾನು ಸಹ ಅದರಿಂದ ಹತ್ಯೆಮಾಡಿಕೊಳ್ಳುತ್ತಾನೆ. ಇದನ್ನು ಕಂಡ ತಾವರೆಕೆರೆಯ ಜನರು ಆತನಿಗೆ ಕೈಮುಗಿದು ತಮ್ಮ ಅಳಿಯನೆಂದು ಒಪ್ಪಿಕೊಳ್ಳುತ್ತಾರೆ. ಅಲ್ಲಿಂದ ಆತನನ್ನು ಪೂಜಿಸುವುದು ಆರಂಭಗೊಂಡಿತು.

ಇಂದಿಗೂ ಆತನ ಆಯುಧವನ್ನು ಈರಗಾರ ಹೆಸರಲ್ಲಿ ಮಾದಿಗರು ಪೂಜೆ ಮಾಡುತ್ತಿರುವುದು ಕಸ್ತೂರಿರಂಗಪ್ಪನಹಳ್ಳಿ ಗ್ರಾಮದಲ್ಲಿ ಕಂಡುಬರುತ್ತದೆ. ಈ ರೀತಿ ದೈವತ್ವಕ್ಕೆ ಏರಿದ ಈರಣ್ಣನು ಇಂದು ಮಾದಿಗರಿಂದ ಪೂಜಿಸಲ್ಪಡುತ್ತಿದ್ದಾನೆ. ಈಗ ಈ ದೇವರ ಹೆಸರಲ್ಲಿ ಒಂದು ಗುಡಿ ಸ್ಥಾಪನೆಯಾಗುತ್ತಿದೆ. ಪ್ರತಿವರ್ಷವು ಈ ದೇವರ ಹಬ್ಬವನ್ನು ಮಾಡುತ್ತಾರೆ. ಆಗ ಇಲ್ಲಿಂದ ದೇವರನ್ನು ಹೊರಡಿಸಿಕೊಂಡು (ಈರಣ್ಣ) ಕೊಲೆಯಾದ ಸ್ಥಳಕ್ಕೆ ಬಂದು ಪೂಜಿಸಿ ಪಕ್ಕದಲ್ಲಿ ಹರಿಯುವ ನದಿಯಲ್ಲಿ ಗಂಗೆ ಪೂಜೆಮಾಡಿ ಕೊಂಡು ಹಿಂದಿರುಗುತ್ತಾರೆ. ಈ ರೀತಿ ಆರಾಧನೆಗೊಳ್ಳುತ್ತಿರುವ ಈರಣ್ಣ ಕೋಟೆಯ ಬಾಗಿಲು ಕಾಯುವ ಕರ್ತವ್ಯ ಮಾಡುತ್ತಿದ್ದನೆಂಬ ಅಂಶ ಬೆಳಕಿಗೆ ಬರುತ್ತದೆ. ಬಹುಶಃ ಈ ಘಟನೆಯು ಪಾಳೆಯಗಾರರ ಕಾಲದಲ್ಲಿ ನಡೆದಿರಬಹುದೆಂದು ಕಾಣುತ್ತದೆ.

### ಮಾದಿಗರ ಶ್ರವಣಪ್ಪ

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಧರ್ಮಪುರ ಗ್ರಾಮದ ಹತ್ತಿರ ಇರುವ ಕೆರೆಗೆ ಬಲಿಯಾದ ವ್ಯಕ್ತಿಯಾಗಿದ್ದಾನೆ. ಡಾ.ಮೈಲಹಳ್ಳಿ ರೇವಣ್ಣನವರು ಧರ್ಮಪುರದ ಗ್ರಾಮದ ನಿವೃತ್ತ ಶಿಕ್ಷಕ ಆರ್. ಶುಕುನಪ್ಪ ಎಂಬುವರಿಂದ ಐತಿಹ್ಯ ವೊಂದನ್ನು ದಾಖಲಿಸಿರುವುದು ಕಂಡುಬರುತ್ತದೆ. ಶ್ರವಣಪ್ಪನು ಧರ್ಮಪುರ ಕೆರೆಯ ನೀರುಗಂಟಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ. ಒಂದು ದಿನ ಇದ್ದಕ್ಕಿದ್ದಂತೆ ಜೋರಾಗಿ ಮಳೆ ಬಂದು ಕೆರೆ ತುಂಬಿ ನೀರು ಏರಿಯ ಮೇಲೆ ಹರಿಯಲಾರಂಭಿಸಿತು. ಆತ ಇದನ್ನು ಗಮನಿಸಿ ಭಯಪಟ್ಟ. ಆಗ ಗಂಗಾದೇವತೆ ಪ್ರತ್ಯೇಕ್ಷವಾಗಿ ನೀನು ಯಾರೆಂದು ಕೇಳಿದಳು. ನಾನು ಈ ಕೆರೆಯ ಕಾವಲುಗಾರನೆಂದು ತಿಳಿಸಿದನು. ನಾನು ಹರಿದು ಮುಂದೆ ಹೋಗಬೇಕು ಇಲ್ಲಿಯೇ

ನಿಲ್ಲಬೇಕಾದರೆ ಯಾರಾದರೂ ಒಬ್ಬರನ್ನು ಅಹುತಿ ಕೊಡಬೇಕೆಂದೂ ಊರಿನ ಗೌಡ, ಗೊಂಚಿಗಾರ, ತೋಟಿ ತಳವಾರರನ್ನು ಕರೆದುಕೊಂಡು ಬಾ ಎಂದು ಹೇಳಿದಳು. ಆಗ ಶ್ರವಣಪ್ಪನು ನಾನು ಅವರನ್ನು ಕರೆದುಕೊಂಡು ಬರುವವರೆಗೂ ಇಲ್ಲಿಯೇ ಇರಬೇಕೆಂದು ಭಾಷೆ ತೆಗೆದುಕೊಂಡು ಹೊರಡುತ್ತಾನೆ. ಗ್ರಾಮಕ್ಕೆ ಬಂದು ಈ ವಿಚಾರವನ್ನು ಗ್ರಾಮದ ಮುಖ್ಯಸ್ಥರಿಗೆ ತಿಳಿಸುತ್ತಾನೆ. ಗ್ರಾಮದ ಮುಖಂಡರು ಜನರು ಮತ್ತು ಹೊಲಗಳ ರಕ್ಷಣೆ ಮಾಡಲು ಆಲೋಚಿಸಿ ಈತನನ್ನು ಅಲ್ಲಿಗೆ ಕಳುಹಿಸುವಂತೆ ನಿರ್ಧರಿಸಿ ಆತನನ್ನೆ ಬಲಿಕೊಡುತ್ತಾರೆ. ಈ ರೀತಿ ತ್ಯಾಗ ಮಾಡಿದ ಶ್ರವಣಪ್ಪನ ಕುಟುಂಬಕ್ಕೆ ಹತ್ತು ಎಕರೆ ಜಮೀನನ್ನು ಗ್ರಾಮದವರು ನೀಡಿರುತ್ತಾರೆ ಮತ್ತು ಆತನು ವಾಸಮಾಡುತ್ತಿದ್ದ ಗ್ರಾಮಕ್ಕೆ 'ಶ್ರವಣಗೆರೆ' ಎಂತಲೂ ಕರೆದಿರುತ್ತಾರೆ. ಇಂದಿಗೂ ಆ ಹೆಸರಿನ ಗ್ರಾಮವು (ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನಲ್ಲಿ) ಇದೆ. ಈತನ ವಂಶಸ್ಥರು ಸಹ ಅಲ್ಲಿ ಇದ್ದಾರೆ. ಮಕ್ಕಳಾಗದೆ ಇರುವ ಹೆಂಗಸರು ಅಮವಾಸ್ಯೆಯ ರಾತ್ರಿ ಬೆತ್ತಲೆ ಹೋಗಿ ಕೆರೆಯ ಪಶ್ಚಿಮ ಭಾಗದಲ್ಲಿರುವ ಶ್ರವಣಪ್ಪನ ವಿಗ್ರಹವನ್ನು ತಬ್ಬಿಕೊಂಡು ಬಂದರೆ ಮಕ್ಕಳಾಗುತ್ತವೆ ಎಂಬ ನಂಬಿಕೆಯಿದೆ. ಮಳೆಯಾಗದೆ ಇದ್ದಾಗ ಪ್ರತಿಮೆಗೆ ೧೦೧ ಕೊಡ ನೀರು ಹಾಕಿ ಅನ್ನದ ಎಡೆಯನ್ನು ಇಟ್ಟು ಪೂಜಿಸುವ ಸಂಪ್ರದಾಯವಿದೆ.[೨೬] ಹೀಗೆ ಬಲಿಯಾದ ಮಾದಿಗರ ಶ್ರವಣಪ್ಪ ನೀರಗಂಟಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದನಲ್ಲದೇ ಗ್ರಾಮದ ಒಳತಿಗಾಗಿ ಬಲಿಯಾಗಿರುವ ಅಂಶವು ತಿಳಿದುಬರುತ್ತದೆ.

ಇತ್ತೀಚೆಗೆ ಹೊಸ ವಿಚಾರವೊಂದು ಸಂಶೋಧನೆಯಿಂದ ಹೊರಬಿದ್ದಿದೆ. ಮಾದಿಗರು ತಳವಾರಿಕೆಯಂಥ ಗೌರವಯುತವಾದ ಸ್ಥಾನ ಪಡೆದಿದ್ದರೆಂಬುದು. ಚಿತ್ರದುರ್ಗ ಜಿಲ್ಲೆಯ ಜಗಳೂರು ತಾಲ್ಲೂಕಿನಲ್ಲಿ ದೊರಕಿರುವ ೧೯೫೪ರ ಅಪ್ರಕಟಿತ ದಾನ ಶಾಸನವೊಂದರಲ್ಲಿ 'ಮಾದಿಗರ ಸಿದ್ಧ' ಎಂಬುವನು ತಳವಾರಿಕೆಯನ್ನು ಪಡೆದಿದ್ದನು.[22] ಹಿಂದೆ ಯಾವ ಶಾಸನಗಳಲ್ಲೂ ಈ ಬಗೆಯ ಉಲ್ಲೇಖ ದೊರಕುವುದಿಲ್ಲ. ಆದರೆ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ತಳವಾರಿಕೆಯಂತಹ ಸ್ಥಾನ ಪಡೆದಿದ್ದರೆಂಬುದು ಅಪರೂಪವಾದ ಸಂಗತಿಯಾಗಿದೆ.

ಈ ರೀತಿಯಾಗಿ ಶಾಸನ ಮತ್ತು ಐತಿಹ್ಯ ಮುಂತಾದವುಗಳು ಮಾದಿಗರು ರಾಜ, ಮುಖಂಡರು, ಸೈನಿಕರು, ವೀರರು, ತ್ಯಾಗಜೀವಿಗಳಾಗಿರುವುದನ್ನು ಖಚಿತಪಡಿಸುತ್ತವೆ. ಈ ಹಿನ್ನೆಲೆಯಲ್ಲಿ ಮಾದಿಗರು ಚರಿತ್ರೆಯಲ್ಲಿ ದಾಖಲಾಗದೆ ಹೋದರೂ ಮಹತ್ವದ ಪಾತ್ರವನ್ನು ವಹಿಸಿದ್ದರೆಂಬುದನ್ನು ಅಲ್ಲಗಳೆಯಲಾಗದು.

### ಕಾವ್ಯ ಹಾಗೂ ಜಾನಪದದ ಹಿನ್ನೆಲೆ

ಈಗಾಗಲೇ ಸಾಹಿತ್ಯ ಕೃತಿಗಳಲ್ಲಿ, ಶಾಸನ ಹಾಗೂ ವೀರಗಲ್ಲುಗಳ ಹಿನ್ನೆಲೆಯಲ್ಲಿ ಮಾದಿಗರ ಕುರಿತಾದ ಚಾರಿತ್ರಿಕ ಅಂಶಗಳ ಬಗ್ಗೆ ಚರ್ಚೆ ಮಾಡಲಾಗಿದೆ. ಕೆಲವು ಪದ ಬಳಕೆಯ ಹಿನ್ನೆಲೆಯಲ್ಲಿ

ಪ್ರತ್ಯೇಕವಾಗಿ ನೋಡಲಾಗಿದ್ದು ಅವು ಅನೇಕ ಕೃತಿಗಳಲ್ಲಿ ವ್ಯಕ್ತವಾಗಿವೆ. ಈಗಾಗಲೇ ಬಳಸಿಕೊಂಡಿರುವ ಅಂಶಗಳನ್ನು ಹೊರತುಪಡಿಸಿ ಉಳಿದಂತೆ ಸಾಹಿತ್ಯ ಕೃತಿಗಳಲ್ಲಿ ಕಂಡುಬರುವ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಮೊದಲನೆಯದಾಗಿ ಜೈನ ಭವಾವಳಿಯಲ್ಲಿ ಉಲ್ಲೇಖಿತವಾಗಿರುವಂತೆ ''ಮಾದಿಗ ಕುಲದಲ್ಲಿ ಹುಟ್ಟುವುದು ಪಾಪದ ಪ್ರಮಾಣವನ್ನು ಅವಲಂಬಿಸಿದೆ. ಘೋರವಾದ ಪಾಪವನ್ನು ಮಾಡಿದವರು ಹೊಲೆಯ ಮಾದಿಗ ಜಾತಿಯಲ್ಲಿ ಹುಟ್ಟುತ್ತಾರೆ''[೭೮] ಎನ್ನಲಾಗಿದೆ. ವಡ್ಡಾರಾಧನೆಯ ಸುಕುಮಾರಸ್ವಾಮಿಯ ಕಥೆಯಲ್ಲಿ ವಾಯುಭೂತಿಯ ಪಾಪಕರ್ಮದ ಫಲವಾಗಿ ಅನೇಕ ಜನ್ಮಗಳೆತ್ತಿ ಅಂತ್ಯದಲ್ಲಿ ಹೆಣ್ಣು ಕತ್ತೆಯಾಗಿ, ಹಂದಿಯಾಗಿ, ಪೆಣ್ಣಾಗಿ ಪುಟ್ಟಿ ಸತ್ತು ಮತ್ತೆ ಚಂಪಾನಗರದೊಳೆ ಮಾದಿಗರಿಗೆ ಪ್ರಧಾನಪ ನೀಳನೆಂಬ ಮಾದೆಗಂಗಂ ಕೇಳಿಯೆಂಬ ಮಾದೆಗಿಗಂ[೭೯] ಎಂಬ ಅಂಶವು ಜೈನರು ಕೂಡ ಜಾತಿ ವ್ಯವಸ್ಥೆಯನ್ನು ಒಪ್ಪಿಕೊಂಡಿರುವುದು ವ್ಯಕ್ತವಾಗುತ್ತದೆ. ಚಾತುರ್ವಣದವರು ಜೈನಧರ್ಮಕ್ಕೆ ಮಾರುಹೋಗಿ ಮತಾಂತರಗೊಳ್ಳುತ್ತಿದ್ದರೂ ತಮ್ಮ ವರ್ಣಗಳನ್ನು ಬಿಡುತ್ತಿರಲಿಲ್ಲವೆಂದು ಕಾಣುತ್ತದೆ. ಏಕೆಂದರೆ ಅವರು ಜಾತಿವ್ಯವಸ್ಥೆಯನ್ನು ಒಪ್ಪಿ ವೈದಿಕ ಧರ್ಮದ ಕರ್ಮಸಿದ್ಧಾಂತದ ಪ್ರಭಾವಕ್ಕೆ ಸಿಲುಕಿರುವುದು ಎದ್ದು ಕಾಣುತ್ತದೆ. ಜಾತಿವ್ಯವಸ್ಥೆಯಲ್ಲಿ ವೈದಿಕ ಧರ್ಮದ ಪ್ರಕಾರ ಮಾದಿಗರನ್ನು ಅತ್ಯಂತ ಕೀಳೆಂಬುದನ್ನು ಹೇಳ ಹೊರಟ ಅಂಶವೊಂದು ಕ್ರಿ.ಶ.೧೭ನೆಯ ಶತಮಾನದ ಶಾಸನ ಪ್ರಸ್ತಾಪವಾಗಿದೆ. ''ದಾನವನ್ನು ಅಪಹರಿಸುವಾಗ ತನ್ನ ಹೆಂಡತಿಯನ್ನು ಹೊಲೆ ಮಾದಿಗರಿಗೆ ಕೊಟ್ಟದ್ದಕ್ಕೆ ಸಮಾನ''[೮೦] ಎನ್ನಲಾಗಿದೆ. ಈ ಎಲ್ಲಾ ಅಂಶಗಳು ಅಂದಿನಿಂದಲೂ ಮಾದಿಗ ಮತ್ತು ಹೊಲೆಯರನ್ನು ಅತ್ಯಂತ ಕೀಳಾಗಿ ನಡೆಸಿಕೊಂಡು ಬಂದಿರುವ ಮೇಲು ಜಾತಿಗಳ ಹುನ್ನಾರವನ್ನು ಬಯಲುಗೊಳಿಸುತ್ತವೆ.

ಕ್ರಿ.ಶ.೯೯೦ರ ನಾಗವರ್ಮನ ಕರ್ಣಾಟಕ ಕಾದಂಬರಿ(ಮೂಲಬಾಣನ ಕಾದಂಬರಿ)ಯಲ್ಲಿ 'ಚಂಡಾಲ' ಪಾತ್ರದ ಬೆಳವಣಿಗೆ ದ್ವಂದ್ವಾರ್ಥಗಳಿಂದ ಕೂಡಿದೆ. ಒಂದೆಡೆ ಲಕ್ಷ್ಮೀಯನ್ನು ಇನ್ನೊಂದೆಡೆ ಚಾಂಡಾಲಿಯನ್ನು ಏಕಕಾಲಕ್ಕೆ ಸಮೀಕರಿಸಿ ವರ್ಣಿಸುವ ಗುಣ ಅದ್ಭುತವಾದದು. ನಪುಂಸಕನ ಬಾಯಲ್ಲಿ ಜೊಲ್ಲು ಸುರಿಯುವಂತೆ ಚಾಂಡಾಲಿಯನ್ನು ವರ್ಣಿಸಿದ್ದಾನೆ.[೮೧] ಇವರು ವಾಸಿಸುವ ಸ್ಥಳವನ್ನು 'ಮಾತಂಗರ ಪಳ್ಳಿ' ಎಂದು ನಾಗವರ್ಮನು ಕರೆದಿದ್ದಾನೆ. ಈ ಚಾಂಡಾಲ ಕನ್ಯೆ ಬೇರಾರೂ ಆಗಿರದೆ ಮಾದಿಗರು ವಾಸಿಸುತ್ತಿದ್ದ ಸ್ಥಳವಾಗಿರುವುದರಿಂದ ಆಕೆ ಮಾದಿಗರವಳೆ ಎಂದು ಹೇಳಬಹುದಾಗಿದೆ.

'ದುರ್ಗಸಿಂಹನ ಪಂಚತಂತ್ರ(ಕ್ರಿ.ಶ.೧೦೩೧) ಕಥೆಗಳಲ್ಲಿ ವರ್ಣವ್ಯವಸ್ಥೆಯ ನಾಲ್ಕು ವರ್ಗದ ಪಾತ್ರಗಳೂ ದಾಖಲಾಗಿರುವುದಲ್ಲದೇ ದಲಿತ ಜಾತಿಯ(ಚಾಂಡಲ, ಶ್ವಪಚ, ಹೊಲೆಯ ಮತ್ತು ಮ್ಲೇಚ್ಛ) ಪಾತ್ರಗಳು ಬಂದಿರುವುದು ವಿಶೇಷವಾಗಿದೆ.[೮೨] ಈ ಅಂಶದಿಂದ ಮಾದಿಗ ಮತ್ತು ಹೊಲೆಯ

ಜಾತಿಗಳು ಅಸ್ತಿತ್ವ ಪಡೆದುಕೊಂಡಿದ್ದವು ಎನ್ನಬಹುದು.

ನಯಸೇನನ ಕೃತಿಯಲ್ಲಿ ಪ್ರಸ್ತಾಪವಾಗಿರುವ ಮಾದೆಗನಂತೆ ಮೆಟ್ಟನುತ್ತ ಮಾದಗನಂತೆ ಬಾರೆತ್ತುಮ ಹಾಗೂ ಕಿರಿದಪ್ಪ ವ್ರತವಿಂಗೆ ಎರಗಿ ಸಂತರಿರ್ಗೆ ಎರೆಯನಾದ ಮಾದಿಗ[೬೩] ಎಂಬುದು ಮಾದಿಗರು ಮಾಡುವ ಕೆಲಸಗಳಾದ ಮೆಟ್ಟು ಹೊಲಿಯುವ, ಚರ್ಮದಲ್ಲಿ ಬಾರುಕೋಲನ್ನು ಮಾಡಿಕೊಡುವ ಅಂಶವನ್ನು ಪ್ರಸ್ತಾಪಿಸಿರುವುದು ಕಂಡುಬರುತ್ತದೆ. ಇನ್ನೊಂದೆಡ ಪೇಸಿಕೆಯಿಲ್ಲದಾ ಪೊಲೆಯ ಮಾದೆಗ ಮತ್ತು ಸುಡು ಸುಡು ಡೊಂಬಡೋಹ ಪೊಲೆ ಮಾದೆಗ ಕೀಲಿಗತೊನ್ನರಾದವರ[೬೪] ಎಂದಿದೆ. ಇಲ್ಲಿ ಹೊಲೆಯ ಮಾದಿಗರನ್ನು ಹೀಯಾಳಿಸಿರುವ ಅಂದಿನ ಸ್ಥಾನಮಾನಗಳನ್ನು ಅರಿಯಲು ಸಹಾಯವಾಗುತ್ತದೆ. ಈ ಮೂಲಕ ಮಾದಿಗ ಜನಾಂಗ ಅಸ್ತಿತ್ವದಲ್ಲಿದ್ದುದನ್ನು ಅರಿಯಬಹುದಾಗಿದೆ.

ಪದ್ಮಾಣಾಂಕ ಕವಿಯ(ಸು.೧೪೦೦) 'ಪದ್ಮರಾಜ ಪುರಾಣ'ದಲ್ಲಿ 'ತವಿಸನೇ ಮತ್ತೆ ಮಾದರದೂಡಿ ದೇವನೆಂಬ, ಜನ್ನನ 'ಯಶೋಧರ ಚರಿತೆ'ಯಲ್ಲಿ ಯಶೋಧರ-ಚಂದ್ರಮತಿಯರು ತಮ್ಮ ಪಾಪಕರ್ಮಗಳಿಂದಾಗಿ ಬೇರೆ ಬೇರೆ ಪ್ರಾಣಿಗಳಾಗಿ ಹುಟ್ಟಿ ತಮ್ಮ ಅಂತ್ಯ ಜನ್ಮದಲ್ಲಿ ಪೊಲಗೇರಿಯ ಮಾದಿಗನ ಮನೆಯ ಕೋಳಿಯ ಬಸಿರಲ್ಲಿ ಕೋಳಿಗಳಾಗಿ ಹುಟ್ಟುವ[೬೫] ಪ್ರಸ್ತಾಪವಿದೆ. ಇಲ್ಲಿಯೂ ಕೂಡ ಮಾದಿಗರು ಕೀಳು ಜಾತಿಯವರಾಗಿ ಹುಟ್ಟಲು ಅವರ ಪಾಪಕರ್ಮಗಳೇ ಕಾರಣಗಳೆಂಬ ಅಂಶವನ್ನು ಉದಾಹರಣೆಗಳ ಮೂಲಕ ಪರೋಕ್ಷವಾಗಿ ನೀಡಲಾಗಿದೆ.

ಈ ರೀತಿ ಪ್ರಾಚೀನ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗೂ ಸಿಗುವ ಅನೇಕ ಸಾಹಿತ್ಯ ಕೃತಿಗಳು, ಶಾಸನ ಹಾಗೂ ವೀರಗಲ್ಲುಗಳಲ್ಲಿ ಮಾದಿಗರ ಬಗ್ಗೆ ಉಲ್ಲೇಖಿತವಾಗಿರುವ ಅಂಶಗಳ ಹಿನ್ನೆಲೆಯಲ್ಲಿ ಮಾದಿಗರ ಕುರಿತು ತಿಳಿಯಲು ಸಾಧ್ಯವಾಗಿದೆ. ಪ್ರತಿಯೊಂದು ಕೃತಿಗಳಲ್ಲಿ ಅಂದಿನ ಸಾಮಾಜಿಕ ಪರಿಸ್ಥಿತಿಗಳಲ್ಲಿ ಮಾದಿಗರು ಅತ್ಯಂತ ಕೀಳು ಜಾತಿಯವರೆಂದೇ ಬಿಂಬಿತವಾಗಿದೆ. ಅವರನ್ನು ಶೋಷಣೆಗೆ ಈಡು ಮಾಡಿರುವುದರಲ್ಲಿ ಎರಡು ಮಾತಿಲ್ಲಾ. ಅಲ್ಲದೆ ಮಾದಿಗರ ಕೇರಿಯನ್ನು ಹೊಲಗೇರಿಯೆಂದೆ ಕರೆಯುತ್ತಿದ್ದರೆಂಬ ಅಂಶವು ತಿಳಿದುಬರುತ್ತದೆ.

### ಎಡಗೈ-ಬಲಗೈ ಭಿನ್ನತೆ

ಮೀಸಲಾತಿಯ ಹಿನ್ನೆಲೆಯಲ್ಲಿ ಮಾದಿಗ-ಹೊಲೆಯರಲ್ಲಿ ಇಂದು ಸಂಘರ್ಷ ನಡೆಯುತ್ತಿರುವುದು ಕಂಡುಬರುತ್ತದೆ. ಸಾಮಾಜಿಕ ನ್ಯಾಯದ ಹೆಸರಿನಲ್ಲಿ ನೀಡುವ ಮೀಸಲಾತಿ ಸೌಲಭ್ಯವನ್ನು ಬಲಗೈನವರು ಹೆಚ್ಚಾಗಿ ಪಡೆದುಕೊಂಡಿದ್ದಾರೆ. ಇದರಿಂದ ಎಡಗೈನವರಿಗೆ ಅನ್ಯಾಯವಾಗಿದೆ ಎಂದು ಮಾದಿಗರು ಎಡಗೈಗೆ ಮೀಸಲಾತಿಯಲ್ಲಿ ಹೆಚ್ಚು ಸಿಕ್ಕಿದೆ ಎಂದು ಹೊಲೆಯರು ಒಬ್ಬರಿಗೊಬ್ಬರು ಆರೋಪಿಸುತ್ತಾ ನಡೆದಿದ್ದಾರೆ. ಮಾದಿಗ-ಹೊಲೆಯರಲ್ಲಿ ಮಾತ್ರವೆ ಎಡಗೈ - ಬಲಗೈ ಭಿನ್ನತೆ ಏಕೆ ಎಂಬಂಥ ಪ್ರಶ್ನೆಗಳು

ಕಾಡುತ್ತವೆ. ಈ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಬೇಕಾದರೆ ಪ್ರಾಚೀನ ಕಾಲದ ಆಕರಗಳನ್ನು ಗಮನಿಸಬೇಕಾಗುತ್ತದೆ. ಈ ಸಂಬಂಧ ಕೊಟಗಾನಹಳ್ಳಿ ರಾಮಯ್ಯನವರು 'ಸಿಂದ್ ಮಾದಿಗರು ಸಂಸ್ಕೃತಿ'ಕೃತಿಯಲ್ಲಿ ಸಾಕಷ್ಟು ಮಾಹಿತಿ ಒದಗಿಸಿರುವರು. ಈ ಎಡಗೈ-ಬಲಗೈ ಭಿನ್ನತೆಯ ಹುಟ್ಟಿನ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಕಾರಣಗಳು ಪ್ರಮುಖ ಪಾತ್ರವಹಿಸಿವೆ. ಒಂದು ಕಾಲಕ್ಕೆ ಇಡೀ ಸಮಾಜ ಎಡ-ಬಲ ಎಂದು ವಿಂಗಡಣೆಯಾಗಿದ್ದು, ಈ ಭಿನ್ನತೆಯ ಸಂಬಂಧ 'ಕಂಚಿಯ ಫರ್ಮಾನು ಅಥವಾ ಕಂಚಿಶಾಸನ ಎಡಗೈ-ಬಲಗೈ ಗುಂಪುಗಳ ನಡುವಿನ ತೀವ್ರ ಸಂಘರ್ಷದ ತೀರ್ಪಿನಂತಿದ್ದು ಅದನ್ನು ಮಾದಿಗರ ಮಕ್ಕಳೆಂದು ಕರೆದುಕೊಳ್ಳುವ ದಕ್ಕಲರು, ಸಾಂಸ್ಕೃತಿಕ ಸೇನಾನಿಗಳಾದ ಸಿಂದ್ ಮಾದಿಗರು ಹಾಗೂ ಮಾಸ್ಟೀಕರು ಸದಾ ಹೊತ್ತುಕೊಂಡು ಹೋಗುತ್ತಿದ್ದು ಅಗತ್ಯ ಬಿದ್ದಾಗ ಅದನ್ನು ಹಾಜರುಪಡಿಸಿ ತಮ್ಮ ಕುಲ ಗೌರವಗಳನ್ನು ಎತ್ತಿ ಹಿಡಿಯುತ್ತಿದ್ದರು'[೮೬] ಎಂಬ ಅಂಶವು ತಿಳಿದುಬರುತ್ತದೆ. ಈ ತೀರ್ಪಿನ ಪ್ರತಿಯನ್ನು ಮಾದಿಗ ಸಂಬಂಧಿತ ಜಾತಿಗಳು ಮಾತ್ರವೇ ಏಕೆ ಹೊಂದಿದ್ದಾರೆಂಬುದು ಸ್ವಾರಸ್ಯಕರವಾದರೂ ಅದಕ್ಕೆ ಕಾರಣಗಳು ಇಲ್ಲದಿಲ್ಲ. ಮದುವೆಯ ಸಂದರ್ಭದಲ್ಲಿ ಮಾದಿಗರ ಬಸವನಿಗೂ ಚಲವಾದಿ ವೆಂಕಟರಾಮನಿಗೂ ನಡೆದ ಜಗಳದಿಂದಾಗಿ ನ್ಯಾಯ ಪಡೆಯಲು ಕಂಚಿಗೆ ಹೋಗಿ ತೀರ್ಮಾನ ಪಡೆದ ಮಾದಿಗ-ಹೊಲೆಯರು ಈ ತೀರ್ಪಿನ ಪ್ರತಿ ಹೊಂದಿದ್ದಾರೆನ್ನಬಹುದು. ಮಾದಿಗ-ಹೊಲೆಯರ ನಡುವೆ ನಡೆದ ಜಗಳ ಬಗೆಹರಿಸಲು ಇವರು ಸಮಾಜದಲ್ಲಿರುವ ಇತರೆ ಜಾತಿಗಳನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಕಂಚಿಗೆ ಹೋಗಿ ತೀರ್ಮಾನ ಪಡೆದುಕೊಂಡಿದ್ದಾರೆ. ಅಲ್ಲಿ ನೀಡಿದ ತೀರ್ಪಿನಲ್ಲಿ ಎಡಗೈ-ಬಲಗೈ ಪಂಗಡಕ್ಕೆ ಸೇರಿದ ಜಾತಿಗಳಾವುವು ಎಂಬುದನ್ನು ಸ್ಪಷ್ಟಪಡಿಸಿದೆ. ಅದರ ಪ್ರಕಾರ 'ಎಡಗೈ ಗುಂಪಿನ ಪಣಗಳು ಮತ್ತು ಬಲಗೈ ಗುಂಪಿನ ಪಣಗಳು ಈ ರೀತಿ ಇವೆ.

ಅ. ಎಡಗೈ ಗುಂಪಿನ ಜಾತಿಗಳು

೧ ಮಾದಿಗರು
೨ ಜ್ಯೋತಿ ನಗರ ಶೆಟ್ಟಿ
೩ ಗೊಲ್ಲಗೌಡ ವಂಶ
೪ ವಿಶ್ವ ಬ್ರಾಹ್ಮಣ ಪಾಂಚಾಲ ಆಚಾರಿಗಳು
೫ ವಾಲ್ಮೀಕಿ ಕುಲಸ್ಥರು
೬ ನಗರ್ತರು ವಶಿಷ್ಠರು
೭ ಏಕಲಿಯವರು
೮ ಕಮ್ಮಾ ಕಾಪುದೊರೆಗಳು
೯ ಚಂದ್ರವಂಶ ಕ್ಷತ್ರಿಯ ಏಷ್ನಿ ಕುಲದವರು.

ಆ. ಬಲಗೈ ಗುಂಪಿನ ಜಾತಿಗಳು

೦೧ ಬಣಜಿಗ

೦೨ ಒಕ್ಕಲಿಗ

೦೩ ಗಾಣಿಗ (ಒಂಟೆತ್ತು)

೦೪ ರಂಗಾರೆ (ಬಣ್ಣ ಹಾಕುವವರು)

೦೫ ಲಾಡ (ಮರಾಠಿ ವ್ಯಾಪಾರಸ್ಥರು)

೦೬ ಗುಜರಾತಿ (ಗುಜರಾತಿ ವ್ಯಾಪಾರಸ್ಥರು)

೦೭ ಕಾಮಾಟಿ (ಕೂಲಿಗಾರರು)

೦೮ ಜೈನ ಅಥವಾ ಕೋಮಟಿ

೦೯ ಕುರುಬ

೧೦ ಕುಂಬಾರ

೧೧ ಅಗಸ

೧೨ ಬೆಸ್ತ

೧೩ ಪದ್ಮಸಾಲೆ

೧೪ ನಾಯಿಂದ

೧೫ ಉಪ್ಪಾರ

೧೬ ಚಿತ್ರಗಾರ

೧೭ ಗೊಲ್ಲ

೧೮ ಹೊಲೆಯ ಎಂಬುದಾಗಿದೆ[೬೭]

ಈ ರೀತಿಯ ವಿಂಗಡಣೆ ಮಾಡಿರುವುದು ನೋಡಿದರೆ ಆ ವೇಳೆಗಾಗಲೇ ಸಮಾಜದಲ್ಲಿ ಎಡ-ಬಲ ಭಿನ್ನತೆ ಪಡೆದುಕೊಂಡಿತ್ತೆಂದು ತಿಳಿದುಬರುತ್ತದೆ. ಈ ರೀತಿ ವಿಂಗಡಣೆ ಹೊಂದಿದ ಸಮಾಜದಲ್ಲಿ ಅತ್ಯಂತ ಶೋಷಣೆಗೆ ಒಳಗಾಗಿರುವ ಮಾದಿಗರು ಮತ್ತು ಹೊಲೆಯರು ಪ್ರತ್ಯೇಕವಾಗಿ ನಿಲ್ಲಬೇಕಾಯಿತು. ಈ ತೀರ್ಪಿನಲ್ಲಿ ಅವರ ಪಣ ಆಚರಣೆಗಳ ವಿಧಿ-ವಿಧಾನಗಳನ್ನು ಸ್ಪಷ್ಟಪಡಿಸಿದೆ. ಈ ಘಟನೆಯು ಎಡಗೈ-ಬಲಗೈ ಭಿನ್ನತೆಗೆ ಸಂಬಂಧಿಸಿದ ಘಟನೆಗಳಲ್ಲಿ ಮೊಟ್ಟ ಮೊದಲಿಗೆ ದಾಖಲಾಗಿರುವ ಸಂಗತಿಯೆಂದು ಕಾಣುತ್ತದೆ. ಬಹುಶಃ ಅಲ್ಲಿಂದ ಮೊದಲುಗೊಂಡು ಇಲ್ಲಿಯತನಕ ಎಡಗೈ-ಬಲಗೈ ಭಿನ್ನತೆಯಲ್ಲಿ ಅನೇಕ ಘಟನೆಗಳು ಘಟಿಸಿರುವುದು ಕಂಡುಬರುತ್ತವೆ. ಇಲ್ಲಿ ಮುಖ್ಯವಾಗಿ ಮಾದಿಗರ ಪಾತ್ರ ಎಲ್ಲೆಲ್ಲಿ ಕಂಡು ಬಂದಿದೆಯೋ ಅವುಗಳನ್ನು ಮಾತ್ರವೇ ಚರ್ಚೆಗೆ ತೆಗೆದುಕೊಳ್ಳಲಾಗಿದೆ.

ಡಾ.ಕೆ.ಆರ್.ಹನುಮಂತನ್ ತಮ್ಮ ಗ್ರಂಥವಾದ ಅನ್‌ಟಚಬಲಿಟಿ ಇನ್ ಮಿಡೈವಲ್ ತಮಿಳು ಸೊಸೈಟಿಯಲ್ಲಿ ಎಡಗೈ-ಬಲಗೈ ಪಂಗಡದವರ ಆಚರಣೆಗಳಿಗೆ ಸಂಬಂಧಿಸಿದ ಕೆಲವು ಘಟನೆಗಳನ್ನು ಪ್ರಸ್ತಾಪಿಸಿದ್ದಾರೆ. ಮೊದಲನೆಯದಾಗಿ ಘಟನೆಯೊಂದರ ಪರಿಣಾಮ ಈ ರೀತಿ ಇದೆ: ಚೋಳರ

ಕಾಲದಲ್ಲಿ ಯುದ್ಧದಲ್ಲಿ ಗೆದ್ದಾಗ ಸೋತ ಪ್ರದೇಶಗಳಿಂದ ಸೈನಿಕ ತರಬೇತಿಗೆ ಆಯ್ಕೆಯಾದವರನ್ನು ಎಡಗೈ ಸೈನಿಕ ಪಡೆಗಳೆಂದು ಕರೆಯುತ್ತಿದ್ದರು.[೮೮] ಮತ್ತೊಂದು ಕಡೆ ಒಂದನೆಯ ಕುಲೋತ್ತುಂಗ ಚೋಳನ ಕಾಲದ(ಕ್ರಿ.ಶ.೧೦೮೦) ಶಾಸನವೊಂದು ಎಡಗೈ-ಬಲಗೈ ಪಣದ್ವೇಷಕ್ಕೆ ಸಿಕ್ಕ ಹಳ್ಳಿಯೊಂದು ಸಂಪೂರ್ಣ ನಾಶವಾದ ಚಿತ್ರಣವನ್ನು ಕೊಡುತ್ತದೆ. ೨೮ ಹಳ್ಳಿಗಳ ಹೊಲೆಯರು ಮತ್ತು ೨೮ ಹಳ್ಳಿಗಳ ಇತರೆ ಜಾತಿಗಳ ನಡುವೆ ಕೆಲವೊಂದು ಕುಲ ಸೌಲಭ್ಯಗಳಿಗಾಗಿ ನಡೆದ ಹೋರಾಟ ರಕ್ತಪಾತದಲ್ಲಿ ಕೊನೆಗೊಂಡಿತು.[೮೯] ಈ ಎರಡು ಘಟನೆಗಳ ಹಿನ್ನೆಲೆಯನ್ನು ನೋಡಿದಾಗ ಎಡಗೈ ಬಲಗೈಯ ಭಿನ್ನತೆ ಚೋಳರ ಕಾಲದಲ್ಲಿ ಪ್ರಬಲವಾಗಿದ್ದುದು ತಿಳಿದುಬರುತ್ತದೆ. ಪಣಗಳ ವ್ಯಾಜ್ಯದಲ್ಲಿ ಎಂತಹ ಹಿಂಸಾಕೃತ್ಯದಲ್ಲೂ ಪಾಲ್ಗೊಳ್ಳಲ್ಲು ಹಿಂಜರಿಯುತ್ತಿರಲಿಲ್ಲ ಎಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಕಂಚಿಯು ಎಲ್ಲಾ ಅವೈದಿಕ ಧರ್ಮಗಳಿಗೆ ಸಾಂಸ್ಕೃತಿಕ ನೆಲೆಯಾಗಿತ್ತು. ಹಿಂದೂ ಧರ್ಮದ ಪುನರುದ್ಧಾರಕನಾದ ಶಂಕರಚಾರ್ಯ ಅರ್ಯೀಕರಣದ ಅಸ್ತಿಭಾರಕ್ಕಾಗಿ ಮಾಡಿದ ಮಹತ್ವದ ಕೆಲಸವೆಂದರೆ ಕಂಚಿಯ ಕಾಳಿಯ ಉಗ್ರಶಾಕ್ತೇಯ ರೂಪವನ್ನು ಸೌಮ್ಯೀಕರಿಸಿ ಕಾಮಾಕ್ಷಿಯಾಗಿಸಿದ್ದು ಹಾಗೂ ಈ ಕಾಮಕ್ಷಿಯ ಪೂಜಾವಿಧಾನಗಳನ್ನು ತಂತ್ರ ಶೈಲಿಯಿಂದ ವೈದಿಕ ಶೈಲಿಗೆ ಬದಲಾಯಿತೆಂದು ಭಾವಿಸಲಡ್ಡಿಯಿಲ್ಲ. [೯೦] ಈ ಅಂಶದಲ್ಲಿ ಎಡಗೈ-ಬಲಗೈ ಭಿನ್ನತೆಯಲ್ಲಿ ಪುರೋಹಿತಶಾಹಿಯ ತಂತ್ರ ಇದೆಯೆಂಬುದು ಸ್ಪಷ್ಟವಾಗುತ್ತದೆ. ಕಂಚಿಯನ್ನು ಸ್ವಾಧಿನಪಡಿಸಿಕೊಂಡು ತಮ್ಮ ತಾಯಿಯಾದ ಕಾಳಿಯನ್ನು ಕಾಮಾಕ್ಷಿಯಾಗಿಸಿದ್ದು ಅರಗಿಸಿಕೊಳ್ಳಲಾಗದೆ. ಪಂಚಾಲರಲ್ಲಿ ಜಾಗೃತ ಪ್ರಜ್ಞೆಯ ಭಾಗವಾಯಿತು. ಮುಂದಿನ ದಿನಗಳಲ್ಲಿ ಬ್ರಾಹ್ಮಣರು ಪ್ರಬಲರಾಗುತ್ತಿದ್ದಂತೆಯೇ ಪಾಂಚಾಳರಲ್ಲಿ ಪ್ರತಿರೋಧದ ಪ್ರಜ್ಞೆ ಅಂತರ್ಗತವಾಗಿ ಕಂಡೂ ಕಾಣದಂತೆ ದೃಢಗೊಳ್ಳುತ್ತಿದ್ದ ಎಡಗೈ-ಬಲಗೈ ಪಣದ್ವೇಷವು ಹೊಗೆಯಾಡತೊಡಗಿತು.[೯೧] ಅನಂತರ ಪಾಂಚಾಳರು ಕಾಳಿಯನ್ನು ವಾಮಚಾರದ ಮೂಲಕ ಆರಾಧಿಸುತ್ತಿದ್ದ ಇತರ ಕುಶಲಕರ್ಮಿ ಜಾತಿಗಳನ್ನು ಎಡಗೈ ವೇದಿಕೆಯಡಿ ಸಂಘಟಿಸಿ ನಾಯಕತ್ವವಹಿಸಿದರೆ ಬ್ರಾಹ್ಮಣರು ಕೃಷಿ ಮೂಲದ ಬಲಿಷ್ಠ ಜಾತಿಗಳನ್ನು ಬಲಗೈ ಬ್ಯಾನ್‌ರ್ ಅಡಿಯಲ್ಲಿ ಯುದ್ಧಕ್ಕೆ ಬಿಟ್ಟರು[೯೨] ಈ ರೀತಿಯಲ್ಲಿ ಒಂದು ಕಡೆ ಪಾಂಚಾಳರನ್ನು ಮೇಲೆತ್ತಲೂ ತನ್ನೆಲ್ಲ ಸೃಜನಶೀಲತೆಯನ್ನು ಧಾರೆ ಎರೆದ ಮಾದಿಗರು, ಇನ್ನೊಂದು ಕಡೆ ಬ್ರಾಹ್ಮಣರನ್ನು ಬೆಂಬಲಿಸಿ ನಿಂತ ಹೊಲೆಯರು ಹೀಗೆ ಪರಸ್ಪರರನ್ನು ಬೇರೆ ಮಾಡಿ ಹೊಲೆಯರು ಮತ್ತು ಮಾದಿಗರ ನಡುವಿನ ಅಂತರವನ್ನು ಹೆಚ್ಚಿಸಿ ಅವರೆಂದೂ ಒಗ್ಗೂಡದಂತಹ ದಾಯಾದಿ ದ್ವೇಷದ ಕಿಚ್ಚು ಹೆಚ್ಚಿಸಿತು[೯೩] ಎಂಬ ವಿಚಾರದಿಂದ ಅವೈದಿಕ ನೆಲೆಗಳನ್ನು ವೈದಿಕ ನೆಲೆಗಳನ್ನಾಗಿ ಪರಿವರ್ತಿಸಿದಾಗ ಹುಟ್ಟಿಕೊಂಡ ದ್ವೇಷದ ಬೆಂಕಿಯಲ್ಲಿ ಅಸ್ಪೃಶ್ಯರಾದ ಮಾದಿಗ ಮತ್ತು ಹೊಲೆಯರು ಬಲಿಯಾಗಿರುವುದು ಸ್ಪಷ್ಟವಾಗುತ್ತದೆ.

ಈ ಮೇಲಿನ ಘಟನೆಯಲ್ಲಿ ಬ್ರಾಹ್ಮಣರ ಪರವಾಗಿ ನಿಂತ ಬಲಗೈ ಗುಂಪಿಗೆ ಸಂಬಂಧಿಸಿದಂತೆ

ಡಾ.ಕೆ.ಆರ್ .ಹನುಮಂತನ್ ತಮ್ಮ ಗ್ರಂಥದಲ್ಲಿ ಬಲಗೈ ಗುಂಪುಗಳು ಯಾವಾಗಲೂ ರಾಜರನ್ನು ಅವರ ಪುರೋಹಿತರಾಗಿದ್ದ ಬ್ರಾಹ್ಮಣರನ್ನು ಬೆಂಬಲಿಸುತ್ತಿದ್ದು ಸೈನ್ಯದಲ್ಲಿ ಉನ್ನತ ಸ್ಥಾನಗಳನ್ನು ಅಲಂಕರಿಸಿದ್ದು ಒಂದನೇ ರಾಜರಾಜನ ಸೈನ್ಯದಲ್ಲಿ ಇಂಥ ೧೪ ಬಲಗೈ ಪಡೆಗಳಿದ್ದವೆಂದು ಉಲ್ಲೇಖಿಸುತ್ತಾರೆ.[೯೪] ಅಂಶವು ಬಲಗೈ ಗುಂಪಿನ ಅಂತರಾಳದಲ್ಲಡಗಿದ್ದ ಸ್ವಾರ್ಥಭಿಲಾಶೆಯನ್ನು ಪ್ರತಿಬಿಂಬಿಸುತ್ತದೆ. ಈ ಸಂಬಂಧ ಅವರು ಬ್ರಾಹ್ಮಣರಿಗೆ ಬೆಂಬಲಿಸಿರಬಹುದಾದ ಸಾಧ್ಯತೆಯನ್ನು ಅಲ್ಲಗಳೆಯಲಾಗದು.

ಕ್ರಿ.ಶ.೧೬೦೦ರ ಶಾಸನವೊಂದರಲ್ಲಿ ಉಲ್ಲೇಖಿತವಾಗಿರುವಂತೆ ದಕ್ಷಿಣ ಭಾರತದಲ್ಲಿನ ಬಲಗೈ ಎಡಗೈಯ ಅಸ್ಪೃಶ್ಯರು ಮತ್ತು ಉತ್ತರ ಕರ್ನಾಟಕದ ಹೊಲೆ-ಮಾದಿಗರು ಒಂದೇ ಶ್ರೇಣಿಯ ಅಸ್ಪೃಶ್ಯರು ಹಾಗೂ ಸಾಹಿತ್ಯದಲ್ಲಿ ಬರುವ ಹೊಲೆ-ಮಾದಿಗರು ಭಿನ್ನ ಜಾತಿಗಳೆಂಬುದನ್ನು ಸ್ಪಷ್ಟಗೊಳಿಸಿದೆ.[೯೫] ಮಾದಿಗ ಮತ್ತು ಹೊಲೆಯರ ನಡುವಿನ ಜಗಳದ ಘಟನೆಯಿಂದ ಹಿಡಿದು ಇಂದಿನವರೆಗೂ ಇವರೆಡು ಜಾತಿಗಳು ಬೇರೆ ಬೇರೆ ಎಂಬುದನ್ನು ಸಾಬೀತುಪಡಿಸುತ್ತವೆ. ಇವು ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಹಾಗೂ ರಾಜಕೀಯವಾಗಿ ಶೋಷಣೆಗೆ ಒಳಗಾಗಿರುವ ಜಾತಿಗಳಾಗಿದ್ದು ಒಂದೇ ಶ್ರೇಣಿಯಲ್ಲಿದ್ದರೂ ಇವೆರಡು ಸಾಂಸ್ಕೃತಿಕವಾಗಿ ಪ್ರತ್ಯೇಕ ಘಟಕಗಳಾಗಿವೆ. ಇಂದು ಕೂಡ ಸರ್ಕಾರದಿಂದ ಸಿಗುವ ಸವಲತ್ತುಗಳು ಸರಿಯಾಗಿ ನಮಗೆ ಸಿಕ್ಕಿಲ್ಲ ಎಂಬ ಆರೋಪದ ಮೇಲೆ ಪ್ರತ್ಯೇಕವಾಗಿ ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿ ಹಂಚಿಕೆಯಾಗಲೆಂದು ಪ್ರತ್ಯೇಕ ಜಾತಿ ಸಂಘಟನೆಗೆ ಮಾದಿಗರು ತೊಡಗಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಮುಂದಿನ ಆರನೆ ಅಧ್ಯಾಯದಲ್ಲಿ ಪ್ರತ್ಯೇಕವಾಗಿ ಚರ್ಚಿಸಲಾಗುವುದು.

### ೪. ಮಧ್ಯಕಾಲ ಮತ್ತು ನಂತರದ ಸಾಹಿತ್ಯ ಮತ್ತು ಚಳವಳಿಗಳಲ್ಲಿ ಮಾದಿಗರು

ಕರ್ನಾಟಕ ಇತಿಹಾಸದಲ್ಲಿ ೧೨ನೇ ಶತಮಾನ ತುಂಬಾ ಮಹತ್ವಪಡೆದಿದೆ. ಅಂದು ಬಸವಾದಿ ಶರಣರು ನಡೆಸಿದ ಆಂದೋಲನ ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಆಗಾಧವಾದ ಬದಲಾವಣೆಯನ್ನು ತಂದಿತು. ಆ ಮೂಲಕ ವಚನ ಸಾಹಿತ್ಯದ ರಚನೆಗೆ ಕಾರಣವಾಯಿತು. ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸಿ ಸಮಾನತೆಯನ್ನು ಸಾಧಿಸುವ ನಿಟ್ಟಿನಲ್ಲಿ ಇದರ ಪ್ರಯತ್ನ ಗಮನಾರ್ಹ. ಇದು ಸಾವಿರಾರು ವರ್ಷಗಳಿಂದ ವಿವಿಧ ರೀತಿಯ ಶೋಷಣೆಗೆ ಒಳಗಾಗಿದ್ದ ಕೆಳಜಾತಿ ಮತ್ತು ಮಹಿಳೆಯರಲ್ಲಿ ಜಾಗೃತಿಯನ್ನು ಮೂಡಿಸಿತಲ್ಲದೇ ಶರಣರ ವೈಚಾರಿಕ ಕ್ರಾಂತಿಯ ಫಲವಾಗಿ ಅನೇಕರು ಈ ಹೋರಾಟದಲ್ಲಿ ಪಾಲ್ಗೊಳ್ಳಲು ಪ್ರೇರಣೆ ನೀಡಿದೆ. ಇದರಿಂದಾಗಿ ಕೆಳಜಾತಿ ಮತ್ತು ಮಹಿಳೆಯರು ಭಾಗವಹಿಸಿ ಚಳವಳಿಯನ್ನು ಯಶಸ್ಸುಗೊಳಿಸಿದ್ದಾರೆ. ಹಾಗೆಯೇ ತಮ್ಮ ಅನುಭಾವಿಕ ನೆಲೆಯಲ್ಲಿ ಅನೇಕ ವಚನಗಳನ್ನು ರಚಿಸುವುದರ ಮೂಲಕ ವಚನ ಸಾಹಿತ್ಯವನ್ನು ಶ್ರೀಮಂತಗೊಳಿಸಲು

ನೆರವಾಗಿದ್ದಾರೆ. ಈ ಬಗೆಯ ಸಾಹಿತ್ಯ ರಚನೆ ಮತ್ತು ಆಂದೋಲನದಲ್ಲಿ ಮಾದಿಗರು ಭಾಗವಹಿಸಿರುವುದು ಪ್ರಮುಖವಾಗಿ ಎದ್ದು ಕಾಣುತ್ತದೆ. ಅಂಥವರಲ್ಲಿ ಪ್ರಮುಖರೆಂದರೆ ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ಮಾದಾರ ದೂಳಯ್ಯ, ಸಮಗಾರ ಹರಳಯ್ಯ ಮುಂತಾದವರು. ಇವರಲ್ಲದೇ ೧೨ನೇ ಶತಮಾನ ಮತ್ತು ನಂತರದ ಕಾಲದಲ್ಲಿ ಈ ಜನಾಂಗದಲ್ಲಿ ಸಾಮಾನ್ಯರಾಗಿ ಹುಟ್ಟಿ ಅನೇಕ ಪವಾಡಗಳನ್ನು ಮಾಡಿ ತೋರಿಸಿ ದೈವತ್ವಕ್ಕೆ ಏರಿದವರು ಇದ್ದಾರೆ. ಅಂಥವರಲ್ಲಿ ಮುಖ್ಯರು ಮರುಳಸಿದ್ದ, ತಿಪ್ಪೇಸ್ವಾಮಿ ಹಾಗೂ ಮಲೆಮಾದೇಶ್ವರರು. ಈ ರೀತಿ ೧೦ನೇ ಶತಮಾನ ಮತ್ತು ನಂತರದಲ್ಲಿ ಸಾಹಿತ್ಯ, ಸಾಮಾಜಿಕ ಹಾಗೂ ಧಾರ್ಮಿಕ ಆಂದೋಲನದಲ್ಲಿ ಮಾದಿಗರು ವಹಿಸಿರುವ ಪಾತ್ರವನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

**ಮಾದಾರ ಚನ್ನಯ್ಯ**

೧೨ನೇ ಶತಮಾನದ ಸಾಂಸ್ಕೃತಿಕ ಕ್ರಾಂತಿಯ ಪ್ರಮುಖರಲ್ಲಿ ಒಬ್ಬ ಮಾದಾರ ಚನ್ನಯ್ಯ. ಆತನ ಹೆಸರೆ ಸೂಚಿಸುವಂತೆ 'ಮಾದಿಗ' ಜನ್ಾಂಗಕ್ಕೆ ಸೇರಿದವನು. ಈತ ದಲಿತರಲ್ಲೇ ಮೊಟ್ಟ ಮೊದಲನೆಯ ಶರಣ. ಮಾದಾರ ಚನ್ನಯ್ಯ ಅನೇಕ ವಚನಗಳನ್ನು ರಚನೆ ಮಾಡುವುದರ ಮೂಲಕ ಜಾತಿ ವ್ಯವಸ್ಥೆಯನ್ನು ಪ್ರತಿಭಟಿಸಿರುವುದಲ್ಲದೆ ಅನೇಕ ಮೌಲ್ಯಗಳನ್ನು ಎತ್ತಿ ಹಿಡಿದಿದ್ದಾನೆ. ಆ ಕಾಲದ ವಚನಗಳಲ್ಲಿ ಮಾದಾರ ಚನ್ನಯ್ಯನ ಹತ್ತು ವಚನಗಳು ದೊರಕಿವೆ. ಮನುಷ್ಯರನ್ನು ನಾಲ್ಕು ವರ್ಣಗಳಾಗಿ ವಿಂಗಡಿಸುವುದು ತಪ್ಪೆಂದೂ ನೀಚ ಶ್ರೇಷ್ಠವೆಂಬ ಎರಡು ಕುಲಗಳ ಹೊರತು ಹದಿನೆಂಟು ಜಾತಿಗಳಿಲ್ಲವೆಂದೂ ಹೇಳುತ್ತಾನೆ.[೬] ಅಲ್ಲದೆ ಮಾತಿಗಿಂತ ವ್ಯಕ್ತಿಯ ನಡತೆಯೇ ನಿಜವಾದ ಕುಲ[೭] ಎಂದೂ ತಿಳಿಸುತ್ತಾನೆ. ಹೀಗೆ ಮಾದಾರ ಚನ್ನಯ್ಯನ ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿದ್ದ ಜಾತಿವ್ಯವಸ್ಥೆಯನ್ನು ಧಿಕ್ಕರಿಸುವುದಲ್ಲದೆ ವ್ಯಕ್ತಿಯ ನಡತೆಯ ಮೇಲೆ ಆತನ ಕುಲವನ್ನು ಅಳೆಯಬೇಕೆನ್ನುತ್ತಾನೆ. ಮಾದಾರ ಚನ್ನಯ್ಯನನ್ನು ಕುರಿತು ಹರಿಹರನ ರಗಳೆಯೊಂದು ಈ ರೀತಿ ತಿಳಿಸುತ್ತದೆ: ಇವನು ಕರಿಕಾಲ ಚೋಳನಲ್ಲಿ(ರಾಜೇಂದ್ರ ಚೋಳ ೧೦೭೦-೧೧೨೦?) ಕುದುರೆಗಳಿಗೆ ಹುಲ್ಲು ತರುವ ಕಾಯಕವನ್ನು ಮಾಡುತ್ತಿದ್ದ ಅಸ್ಪೃಶ್ಯ ಕುಲದ(ಮಾದಾರ) ಗುಪ್ತಭಕ್ತನಾಗಿದ್ದ. ಇವನ ಮನೆಯಲ್ಲಿ ಅಂಬಲಿ ಕುಡಿದ ಶಿವನಿಗೆ ಚೋಳ ಚಕ್ರವರ್ತಿಯ ಮೃಷ್ಟಾನ್ನ ಹಿಡಿಸದೇ ಹೋಯಿತು. ಶಿವನಿಂದ ಚನ್ನಯ್ಯನ ಭಕ್ತಿಯು ಚೋಳನಿಗೆ ತಿಳಿದಾಗ, ಅವನು ಸಕಲ ಸಂಭ್ರಮದೊಡನೆ ಚನ್ನಯ್ಯನ ಕೇರಿಗೆ ಬಂದು ಸಾಷ್ಟಾಂಗವೆರಗುತ್ತಾನೆ. ನನ್ನ ಕುಲವನ್ನು ನೋಡದೆ ನೀವು ಹೀಗೆ ಮಾಡುವುದು ಸರಿಯೇ ಎಂದು ಚಕಿತವಾದ ಚನ್ನಯ್ಯ ಅಕ್ಷೇಪಿಸಲು ಚೋಳ ರಾಜನು ಹೀಗೆ ಉತ್ತರ ಕೊಟ್ಟನೆಂದು ಹರಿಹರ ವರ್ಣಿಸಿದ್ದಾನೆ. ಅದರಲ್ಲಿ 'ನೀವು ಧರಿಸಿರುವ ಕೆರ ನನ್ನ ಶಿರಸ್ಸಿಗಿಂತ ಶ್ರೇಷ್ಠ[೮] ಎಂಬಂಥ ಮಾತುಗಳು ಭಕ್ತಿಗೆ ಮೆಚ್ಚಿಕೊಂಡ ರಾಜನೊಬ್ಬನ ಈ ಶ್ಲಾಘನೆಯು ಮಾದಾರ ಚನ್ನಯ್ಯನ ಭಕ್ತಿ ಮತ್ತು ವ್ಯಕ್ತಿತ್ವವನ್ನು ಎತ್ತಿಹಿಡಿಯುವಂತವು ಗಳಾಗಿವೆ.

ಶರಣ ಚಳವಳಿಯ ಹರಿಕಾರ ಬಸವಣ್ಣ ತನ್ನ ಅನೇಕ ವಚನಗಳಲ್ಲಿ ಮಾದಾರ ಚನ್ನಯ್ಯನನ್ನು ಸ್ಮರಿಸಿದ್ದಾನೆ. ಈ ಸ್ಮರಣೆಯ ಹಿನ್ನೆಲೆಯಲ್ಲಿ ಮಾದಾರ ಚನ್ನಯ್ಯನು ಬಸವಣ್ಣಗೆ ಹಿರಿಯ ಸಮಕಾಲೀನನು ಎಂದು ತಿಳಿಯಬಹುದಾಗಿದೆ. ಬಸವಣ್ಣ ಚನ್ನಯ್ಯನನ್ನು ತನ್ನ ವಚನಗಳಲ್ಲಿ ಇಪ್ಪತ್ತೊಂದು ಬಾರಿ ನೆನೆದಿದ್ದಾನೆ[೯೯] "ಚನ್ನಯ್ಯ ನೆಮ್ಮಯ್ಯನು, ಚನ್ನಯ್ಯನ ಮಗ ನಾನು, ಚೆನ್ನಯ್ಯನ ಮನೆಯ ದಾಸನ ಮಗನಾನು, ಚನ್ನಯ್ಯ ನೆನ್ನ ಮುತ್ತಯ್ಯನಜ್ಜಪಯ್ಯ, ಅಯ್ಯಗಳ ಅಯ್ಯ ನಮ್ಮ ಮಾದಾರ ಚನ್ನಯ್ಯ, ಕುಲತಿಲಕ ನಮ್ಮ ಮಾದಾರ ಚನ್ನಯ ಉನ್ನತ ಮಹಿಮ ಉಮೇಶ ನಿಂದಧಿಕ, ಚಿಕ್ಕಯ್ಯ ಚನ್ನಯ ಗೆಳತ್ತಿ ಮುದ್ದಾಡಿದರೆನ್ನ ಮಹಾದಾಗಿ ಕೂಡಲ ಸಂಗಮದೇವ, ಮಾದಾರ ಚನ್ನಯ್ಯನ ಮಗ ನಾನಯ್ಯ"[೧೦೦] ಮುಂತಾಗಿ ಬಸವಣ್ಣನವರ ವಚನಗಳಲ್ಲಿ ಕಾಣಬಹುದಾಗಿದೆ. ಈ ರೀತಿಯಾಗಿ ಬಸವಣ್ಣ ಕೆಳಜಾತಿಯ ಮಾದಾರ ಚನ್ನಯ್ಯನ ಬಗ್ಗೆ ಇಟ್ಟಿರುವ ಪರಿ ಅವರ ವ್ಯಕ್ತಿತ್ವವನ್ನು ಎತ್ತರಕ್ಕೆ ಕೊಂಡೊಯ್ಯುತ್ತದೆ.

ಈ ರೀತಿ ಮಾದಾರ ಮಾದಾರ ಚನ್ನಯ್ಯನು ೧೨ನೇ ಶತಮಾನದ ಮಾದಿಗರ ಶರಣರಲ್ಲಿ ಪ್ರಥಮ ಶರಣನಾಗಿ, ಹಿರಿಯನಾಗಿ, ತನ್ನ ಅನುಭಾವಿಕ ನೆಲೆಯಲ್ಲಿ ಅನೇಕ ವಚನಗಳನ್ನು ರಚನೆ ಮಾಡಿ ವಚನ ಸಾಹಿತ್ಯ ಶ್ರೀಮಂತಗೊಳ್ಳುವಲ್ಲಿ ಸಹಕರಿಸಿದ್ದಾನೆ.

**ಡೋಹರ ಕಕ್ಕಯ್ಯ**

೧೨ನೇ ಶತಮಾನದ ಹಿರಿಯ ಶರಣರಲ್ಲಿ ಡೋಹರ ಕಕ್ಕಯ್ಯನು ಒಬ್ಬ. ಈತನು ಮಾದಿಗ ಸಂಬಂಧಿತ ಜಾತಿಯಾದ ಡೋಹರ ಜನಾಂಗಕ್ಕೆ ಸೇರಿದವನು. ಚರ್ಮ ಹದ ಮಾಡುವ ವೃತ್ತಿಯಲ್ಲಿ ತೊಡಗಿದ್ದು ತನ್ನ ವೃತ್ತಿಯ ಬಗ್ಗೆ ನಿಷ್ಠೆ ಹೊಂದಿದ್ದವ. ಇದಲ್ಲದೇ ಅನೇಕ ವಚನಗಳನ್ನು ರಚನೆ ಮಾಡಿ ವಚನ ಸಾಹಿತ್ಯಕ್ಕೆ ತನ್ನ ಕೊಡುಗೆಯನ್ನು ನೀಡಿದ್ದಾನೆ. ಈತನ ಕಾಲ ಕುರಿತು ಡೋಹರ ಕಕ್ಕಯ್ಯನ ಬಗ್ಗೆ ಪ್ರಚಲಿತವಿರುವ ಕತೆಗಳ ಪ್ರಕಾರ ಅವನು ಬಸವಣ್ಣನ ಸಮಕಾಲೀನ ಮತ್ತು ಪ್ರಸಾದದ ಬಲದಿಂದ ಅಕ್ಕನಾಗಮ್ಮನ ಗರ್ಭದಿಂದ ಚನ್ನಬಸವಣ್ಣ ಜನಿಸಿದ. ಬಸವಣ್ಣ ತನ್ನ ಅನೇಕ ವಚನಗಳಲ್ಲಿ ಕಕ್ಕಯ್ಯನನ್ನು ಕೊಂಡಾಡಿದ್ದಾನೆ. ಕಕ್ಕಯ್ಯ ಹಿರಿಯಯ್ಯ, ಚಿಕ್ಕಯ್ಯ ಚನ್ನಯ್ಯ ಎತ್ತಿ ಮುದ್ದಾಡಿಸಿದರು ಎಂದಿದ್ದಾನೆ. ತಾನು ಉತ್ತಮ ಕುಲದಲ್ಲಿ ಹುಟ್ಟಿದವನೆಂದು ಯಾರಾದರೂ ಅಹಂಕಾರಪಟ್ಟರೆ, ಕಕ್ಕಯ್ಯನಾಗಲಿ, ದಾಸಿಮಯ್ಯ ಚನ್ನಯ್ಯರಾಗಲಿ ಅಂಥವನನ್ನು ಅಲಕ್ಷಿಸುತ್ತಾರೆ ಎಂದು ಒಂದೆಡೆ ನುಡಿದಿದ್ದಾನೆ. ಈ ಮೂವರು ಬಸವಣ್ಣನ ಹಿರಿಯ ಸಮಕಾಲೀನರೆಂದು ಇದರಿಂದ ಸ್ಪಷ್ಟವಾಗುತ್ತದೆ.[೧೦೧] ಈ ಅಂಶವು ಬಸವಣ್ಣನು ಕಕ್ಕಯ್ಯನ್ನೊಳಗೊಂಡಂತೆ ಚನ್ನಯ್ಯನನ್ನು ಗೌರವಿಸಿರುವುದನ್ನು ತಿಳಿಸುತ್ತದೆ. ಹೀಗಾಗಿ ಡೋಹರ ಕಕ್ಕಯ್ಯನು ಬಸವಣ್ಣನ ಹಿರಿಯ ಸಮಕಾಲೀನನೆಂದು ತಿಳಿಯಬಹುದಾಗಿದೆ.

ಡೋಹರ ಕಕ್ಕಯ್ಯನು ರಚಿಸಿರುವ ವಚನಗಳ ಬಗ್ಗೆ ಗಮನಹರಿಸಿದರೆ ಜೇಡರ ದಾಸಿಮಯ್ಯ ಹೇಳುವ ಹಾಗೇ ಡೋಹರ ಕಕ್ಕಯ್ಯನ ಹೆಸರಲ್ಲಿ ನಾಲ್ಕು ವಚನಗಳು ಸಿಕ್ಕಿವೆ.[೧೦೨] ತನ್ನ ವೃತ್ತಿಯಲ್ಲಿ ತೊಡಗಿಕೊಂಡಿದ್ದು ಮಾತ್ರವಲ್ಲದೆ ವಚನಗಳ ರಚನೆಯಲ್ಲಿ ಸಹತೊಡಗಿ ವಚನ ಸಾಹಿತ್ಯಕ್ಕೆ ತನ್ನ ಸೇವೆ ಸಲ್ಲಿಸಿದ್ದಾನೆ. ಇದಲ್ಲದೇ ವೀರನಾಗಿಯೂ ಯುದ್ಧದಲ್ಲಿ ಭಾಗವಹಿಸಿರುವುದು ಸಹ ಕಂಡುಬರುತ್ತದೆ. ಡೋಹರ ಕಕ್ಕಯ್ಯ ತೊಗಲನ್ನು ಹದ ಮಾಡುವ ಕಾಯಕವನ್ನು ಮಾಡುತ್ತಿದ್ದರಾದರೂ ಅವಕಾಶ ಬಂದಾಗ ಕತ್ತಿ ಹಿಡಿದು ಕಾಳಗ ಮಾಡಲು ಕಕ್ಕಯ್ಯ ಹಿಂಜರಿಯಲಿಲ್ಲ. ಅಳಿಯ ಬಿಜ್ಜಳನೊಂದಿಗೆ ನಡೆದ ಕಾಳಗದಲ್ಲಿ ಕಕ್ಕಯ್ಯ ವೀರರಂತೆ ಕಾದಿ ಶರಣರನ್ನೂ ರಕ್ಷಿಸಿದ್ದಾರೆ. ಕಾತರವಳ್ಳಿಯ ಯುದ್ಧದಲ್ಲಿ ತಮ್ಮ ಪೌರುಷದಿಂದ ಶತ್ರುವನ್ನು ಹೊಡೆದಟ್ಟಿದ ಮೇಲೆ ಕೆಲವು ಕಾಲ ಅಲ್ಲಿಯೇ ನೆಲಸಿರಬೇಕು. ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಕಕ್ಕೇರಿಯಲ್ಲಿ 'ಕಕ್ಕಯ್ಯನ ಕೆರೆ' 'ಕಕ್ಕಯ್ಯನ ಬಾವಿ' ಗಳಲ್ಲದೆ 'ಕಕ್ಕಯ್ಯನ ದೇವಾಲಯ' ಮತ್ತು ಅವರ 'ಸಮಾಧಿ'ಯೂ ಇವೆ. ಇದರಿಂದ ಕಕ್ಕಯ್ಯನವರು ಲಿಂಗೈಕ್ಯರಾಗಿರುವುದು ಆ ಊರಿನಲ್ಲಿಯೇ ಇರಬೇಕು.[೧೦೩] ಈ ಅಂಶವು ಕಕ್ಕಯ್ಯ ಯುದ್ಧದಲ್ಲಿ ಸಹ ಭಾಗವಹಿಸಿದ್ದು ದೃಢಗೊಳಿಸುತ್ತದೆ.

ಡೋಹರ ಕಕ್ಕಯ್ಯನು ವೃತ್ತಿಯಲ್ಲಿ ಚರ್ಮ ಹದ ಮಾಡುವವನಾಗಿದ್ದರೂ ವಚನ ಸಾಹಿತ್ಯ ರಚನೆಯಲ್ಲಿ ಮತ್ತು ಯುದ್ಧಗಳಲ್ಲಿ ತೊಡಗಿಕೊಂಡಿರುವುದು ಸಹ ದಾಖಲಾಗಿರುವುದು ತಿಳಿದು ಬರುತ್ತದೆ. ೧೨ನೇ ಶತಮಾನದ ಪ್ರಮುಖ ಶರಣರಲ್ಲಿ ಒಬ್ಬನಾಗಿ ಈತನನ್ನು ಗುರುತಿಸಲಾಗುತ್ತಿದೆ.

**ಮಾದಾರ ದೂಳಯ್ಯ**

ಬಸವಣ್ಣನ ಸಮಕಾಲೀನ ಶರಣರಲ್ಲಿ ಮಾದಾರ ದೂಳಯ್ಯ ಒಬ್ಬ. ಚಪ್ಪಲಿ ತಯಾರಿಸುವ ಕಾಯಕದಲ್ಲಿ ತೊಡಗಿಕೊಂಡಿದ್ದ ಈತನು ವಚನಗಳನ್ನು ರಚಿಸಿ ವಚನ ಸಾಹಿತ್ಯ ಶ್ರೀಮಂತಗೊಳಿಸುವಲ್ಲಿ ಸಹಕರಿಸಿದ್ದಾನೆ. ದಲಿತ ವಚನಗಾರರಲ್ಲಿ ಅತಿ ಹೆಚ್ಚಿನ ವಚನಗಳನ್ನು ರಚಿಸಿದ ಖ್ಯಾತಿಯು ಈತನದು. "ಅಸ್ಪೃಶ್ಯ ವಚನಕಾರರಲ್ಲೆ ಉರಿಲಿಂಗ ಪೆದ್ದಿಯನ್ನು ಬಿಟ್ಟರೆ ಬಹು ಹೆಚ್ಚಿನ ಸಂಖ್ಯೆಯ ವಚನಗಳನ್ನು ಒಟ್ಟು ನೂರಾ ಎರಡು ಬರೆದಿರುವನು."[೧೦೪] ಇಷ್ಟೊಂದು ಸಂಖ್ಯೆ ವಚನಗಳನ್ನು ಮಾದಾರ ದೂಳಯ್ಯ ರಚಿಸಿರುವುದು ಗಮನಾರ್ಹ. ಇವೆಲ್ಲವೂ ಸಮಾಜದ ಓರೆಕೋರೆಗಳನ್ನು ತಿದ್ದುವ ಆಶಯವನ್ನು ಒಳಗೊಂಡಿರುವಂಥವು. ಪಾದರಕ್ಷೆ ಹೊಲಿಯುವ ಕಾಯಕದ ಮಾದಿಗ ಜಾತಿಯ ದೂಳಯ್ಯ ತನ್ನ ಕಾಯಕವನ್ನು ಅನುಭಾವದೊಡನೆ ಸಮನ್ವಯಗೊಳಿಸಿ ವಚನಗಳನ್ನು ರಚಿಸಿದ್ದಾನೆ.

ಉಳಿದವರೆಲ್ಲ ದನದ ಚರ್ಮ ಕೊಯ್ಯುತ್ತಾರೆ.
ಸತ್ತ ಜೀವ ದನದ ಚರ್ಮ ಕೊಯ್ಯುತ್ತೇನೆ
ಅಟ್ಟೆಯ ಕೊಯ್ದು ಮೆಟ್ಟಿಸಿದೆ ಸತ್ಯರಿಗೆಲ್ಲಕ್ಕೂ
ಹೊತ್ತು ಹೋದಿರಿಂತಣ್ಣಾ, ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ[೧೦೫]

ಈ ವಚನದ ಹಿನ್ನೆಲೆಯಲ್ಲಿ ಅತನು ತನ್ನ ವೃತ್ತಿಯ ಬಗ್ಗೆ ಹೊಂದಿರುವ ಗೌರವ ಎಂತಹ ಬಗೆಯದೆಂದು ತಿಳಿದುಬರುತ್ತದೆ. ತಾನು ಮಾಡಿರುವ ಚಪ್ಪಲಿಯನ್ನು ಕೊಂಡು ಹಣವನ್ನು ನೀಡಿ ಎಂದು ಕೇಳಿಕೊಳ್ಳುವ ಅಂಶವನ್ನು ವಚನದ ಮೂಲಕ ವ್ಯಕ್ತಪಡಿಸಿದ್ದಾನೆ.

ಮಾದಾರ ದೂಳಯ್ಯ ತನ್ನ ಕಾಯಕದಲ್ಲಿ ತೊಡಗಿದನೆಂದರೆ ಸುತ್ತಮುತ್ತ ಯಾರು ಸುಳಿದಾಡಿದರೂ ಗಮನ ಹರಿಸುತ್ತಿರಲಿಲ್ಲ. ಏಕಾಗ್ರತೆಯಿಂದ ಚಪ್ಪಲಿ ತಯಾರುಮಾಡಲು ತೊಡಗುತ್ತಿದ್ದನಂತೆ. ಈ ಬಗೆಯ ಅವರ ಕಾಯಕ ನಿಷ್ಠೆಯನ್ನು ಮೆಚ್ಚಿಕೊಂಡು ಶಿವನು ಧೂಳಯ್ಯ ನವರಿಗೆ ದರ್ಶನ ಕೊಡಬೇಕೆಂದು ಎಷ್ಟೋ ಬಾರಿ ಬಂದರೂ ಧೂಳಯ್ಯನವರು ಕತ್ತೆತ್ತಿ ನೋಡಲೇ ಇಲ್ಲ. ಅನ್ಯ ಮಾರ್ಗವಿಲ್ಲದೆ ಶಿವನು ಧೂಳಯ್ಯನವರು ಮೆಟ್ಟಿನ ಅಟ್ಟೆಯನ್ನು ಚುಚ್ಚುವ ಕಾಲದಲ್ಲಿ ಅವರು ಹಿಡಿದಿದ್ದ ಉಳಿಯ ಕೊನೆಯಲ್ಲಿ ಪ್ರತ್ಯಕ್ಷನಾದ[೧೦೬] ಎಂದೂ ಸಹ ಹೇಳಲಾಗುತ್ತದೆ. ಇದಲ್ಲದೇ ದೂಳಯ್ಯನ ಮನೆಯ ಬಚ್ಚಲು ನೀರಿನಿಂದ ಕುಷ್ಠ ರೋಗವು ವಾಸಿಯಾಗಿರುವ ಘಟನೆಗಳು ಸಹ ಇರುವುದು ಕಂಡುಬರುತ್ತದೆ. ಹೀಗೆ ಮಾದಾರ ಧೂಳಯ್ಯ ೧೨ನೇ ಶತಮಾನದ ಕಾಲದ ಶರಣರಲ್ಲಿ ಒಬ್ಬನಾಗಿ ವಿಶೇಷ ಮಾನ್ಯತೆ ಪಡೆದಿರುತ್ತಾನೆ.



**ಸಮಗಾರ ಹರಳಯ್ಯ**



ಮಧ್ಯಕಾಲೀನ ಶರಣರಲ್ಲಿ ಅತ್ಯಂತ ಹೆಚ್ಚು ಪ್ರಖ್ಯಾತಿ ಗಳಿಸಿರುವವರಲ್ಲಿ ಸಮಗಾರ ಹರಳಯ್ಯ ಪ್ರಮುಖ. ಈತನು ಮಾದಿಗ ಸಂಬಂಧಿತ ಸಮಗಾರ ಜಾತಿಗೆ ಸೇರಿದವನಾಗಿದ್ದು ವೃತ್ತಿಯಲ್ಲಿ ಚಪ್ಪಲಿ ತಯಾರಿಕೆಯಲ್ಲಿ ತೊಡಗಿಕೊಂಡಿದ್ದನು. ತನ್ನ ಹೆಂಡತಿಯಾದ ಕಲ್ಯಾಣಮ್ಮ ಹಾಗೂ ಶೀಲವಂತರೊಂದಿಗೆ ಜೀವನ ಸಾಗಿಸುತ್ತ ತನ್ನ ಕಾಯಕದಲ್ಲಿ ನಿಷ್ಠೆಯಿಂದಿದ್ದ. ಅಂದಿನ ಸಾಮಾಜಿಕ-ಧಾರ್ಮಿಕ ಕ್ರಾಂತಿಯ ಮುಖಂಡರಾಗಿದ್ದ ಬಸವಣ್ಣನವರ ವೈಚಾರಿಕ ಮತ್ತು ಆಧ್ಯಾತ್ಮಿಕ ವಿಚಾರಗಳಿಂದ ಪ್ರೇರಿತನಾಗಿ ತನ್ನ ಕುಟುಂಬ ಸಮೇತ ಸಮಾನತೆ ವೇದಿಕೆಯಂತಿದ್ದ 'ಅನುಭವ ಮಂಟಪ'ದ ಸದಸ್ಯರಾದರು. ಅಲ್ಲಿ ಅವರದು ಶಿವಾನುಭವ ಮಂಟಪದ ಶರಣರೆಲ್ಲರಿಗೂ ಪಾದರಕ್ಷೆಗಳನ್ನು ಮಾಡಿಕೊಡುವುದು ಕಾಯಕವಾಗಿತ್ತು. ಯಾರಿಗೆ ಪಾದರಕ್ಷೆಗಳನ್ನು ಮಾಡಿಕೊಟ್ಟರೂ ಪ್ರಾಮಾಣಿಕವಾದ, ನ್ಯಾಯವಾದ ಬೆಲೆಯನ್ನು ಮಾತ್ರ ಸ್ವೀಕರಿಸಿ ಬಂದುದರಲ್ಲಿ ದಾಸೋಹ ಮಾಡಿ ಉಳಿದುದರಲ್ಲಿ ತೃಪ್ತಿಪಟ್ಟು ಸಂಸಾರವನ್ನು ಆನಂದದಿಂದ ಸುಗಮವಾಗಿ ಸಾಗಿಸುತ್ತಿದ್ದರು.[೧೦೭] ಈ ರೀತಿಯಾಗಿ ಹರಳಯ್ಯ ತನ್ನ ವೃತ್ತಿಯನ್ನು ನಿಷ್ಠೆಯಿಂದ ಮಾಡಿ ಬಂದ ಲಾಭದಲ್ಲಿ ದಾಸೋಹ ಮಾಡುತ್ತಿದ್ದರೆಂದು ತಿಳಿಯುತ್ತದೆ.

೧೨ನೇ ಶತಮಾನದ ಚರಿತ್ರೆಯಲ್ಲಿ ಹರಳಯ್ಯನವರು ಎರಡು ಘಟನೆಗಳಿಂದ ವಿಶೇಷ ಮಹತ್ವ ಪಡೆದಿದ್ದಾರೆ. ಒಂದು ಬಸವಣ್ಣನವರಿಗೆ ತಮ್ಮ ತೊಡೆಯ ಚರ್ಮದಿಂದ ಚಪ್ಪಲಿ ಮಾಡಿಕೊಟ್ಟಿದ್ದುದ್ದ ರಿಂದ, ಎರಡನೆಯದು ಕಲ್ಯಾಣದಲ್ಲಿನ ದಂಗೆಗೆ ಕಾರಣವಾದ ತನ್ನ ಮಗನ ಮದುವೆಯಿಂದಾಗಿ.

ಒಂದು ದಿನ ಹರಳಯ್ಯನವರ ಎದುರು ಬಸವಣ್ಣ ಎದುರು ಬಂದಾಗ ಶರಣು ಬಸವಣ್ಣ ಎಂದರಂತೆ ಅದಕ್ಕೆ ಪ್ರತಿಯಾಗಿ ಅವರು 'ಶರಣು ಶರಣಾರ್ಥಿಗಳು ಹರಳಯ್ಯ'ನವರೆ ಎಂದು ವಂದಿಸಿದರಂತೆ. ಇದರಿಂದ ಗಾಬರಿಗೊಂಡ ಹರಳಯ್ಯ ಒಂದು ಶರಣುಗೆ ಎರಡು ಶರಣು ಹೇಳುವ ಬಸವಣ್ಣನ ಬಗೆಗೆ ಇನ್ನಷ್ಟು ಗೌರವ ಹೆಚ್ಚಾಗಿ ತನ್ನ ಹೆಂಡತಿಯ ಸಹಕಾರದಿಂದ ದಂಪತಿಗಳಿಬ್ಬರು ತಮ್ಮ ತೊಡೆಯ ಚರ್ಮವನ್ನು ತೆಗೆದು ಚಪ್ಪಲಿ ಹೊಲಿದು ಕೊಡುತ್ತಾರೆ. ಆದರೆ ಅವುಗಳನ್ನು ತೊಡಲು ನಿರಾಕರಿಸಿದ ಬಸವಣ್ಣ ತನ್ನ ತಲೆಯ ಮೇಲಿಟ್ಟು ಗೌರವಿಸಿ ಇಂತಹ ಪಾದರಕ್ಷೆಗಳು ನಿಮ್ಮ ಬಳಿಯೇ ಇರಲಿ ಎಂದು ತಿಳಿಸುತ್ತಾನೆ. ಈ ಪಾದರಕ್ಷೆಗಳನ್ನು ವಾಪಸ್ಸು ತರುತ್ತಿದ್ದಾಗ ಎದುರಾದ ಮಂತ್ರಿ ಮಧುವರಸನು ಅವುಗಳನ್ನು ಕೊಡುವಂತೆ ಕೇಳುತ್ತಾನೆ. ಆದರೆ ಅವುಗಳನ್ನು ಕೊಡಲೊಪ್ಪದ ಹರಳಯ್ಯನಿಂದ ಬಲವಂತವಾಗಿ(ತನ್ನ ಸೇವಕರಿಂದ) ಪಡೆದು ಮೆಟ್ಟುತ್ತಾನೆ. ಮಧುವರಸನು ಅವುಗಳನ್ನು ಮೆಟ್ಟಿದಾಕ್ಷಣ ಏನು ಆಶ್ಚರ್ಯವೋ ಬೆಂಕಿಯಲ್ಲಿ ಬಿದ್ದಂತಾಯಿತು. ಸಣ್ಣ ಕುದಿಗುಣೆಯೊಳಗೆ ಹಣ್ಣಾಗಿ ಬೆಂದಂತೆ ಎಣ್ಣೆ ಬಲು ಕಾಸಿ ಕಣ್ಣೊಳಗೆ ಸುರಿದಂತೆ ಡೊಣ್ಣೆಮುಳ್ಳುಗಳು ನೆಟ್ಟಂತೆ ಮೈಯೆಲ್ಲಾ ಉರಿ ಉರಿ ಅಯ್ಯೊ ಸತ್ತೆ ನನ್ನ ಕಾಪಾಡಿ ಎಂದು ಕೂಗಿಕೊಂಡನಂತೆ.[೧೦೮] ಈ ಉರಿಯು ಹರಳಯ್ಯನ ಮನೆಯ ಕರಿಬಾನಿಯ ನೀರನ್ನು ಸೋಕಿಸಿದಾಗ ಕಡಿಮೆಯಾಯಿತಂತೆ. ಇದರಿಂದ ಹರಳಯ್ಯನ ಬಗ್ಗೆ ಹೆಚ್ಚು ಗೌರವ ಮೂಡಿ ಹರಳಯ್ಯನನ್ನು ಕುರಿತು ಈ ರೀತಿ ಹೇಳುತ್ತಾನೆ: ನಿಮ್ಮ ಮಗ ಶೀಲವಂತಯ್ಯನಿಗೆ ನನ್ನ ಮಗಳು ಲಾವಣ್ಯವತಿಯನ್ನು ಮದುವೆ ಮಾಡಿಕೊಂಡು ಉಪಕಾರ ಮಾಡಿ[೧೦೯] ಎಂದು ಬೇಡಿಕೊಂಡನು. ಇದು ಅನುಭವ ಮಂಟಪದಲ್ಲಿ ಚರ್ಚೆಯಾಗಿ ಬ್ರಾಹ್ಮಣನಾದ ಮಧುವರಸನ ಮಗಳು ಲಾವಣ್ಯವತಿಯನ್ನು ಮಾದಿಗರ ಹರಳಯ್ಯನ ಮಗನಾದ ಶೀಲವಂತನೊಂದಿಗೆ ವಿವಾಹ ಮಾಡುವುದು ಸರಿ ಎಂದು ತೀರ್ಮಾನಿಸಲಾಯಿತು. ಏಕೆಂದರೆ "ನಮ್ಮದು ಜಾತಿಯಿಲ್ಲದ ಶರಣಧರ್ಮ"[೧೧೦] ಎಂದು ವಿವಾಹ ಮಾಡಲಾಯಿತು. ಈ ಘಟನೆ ಸಂಪ್ರದಾಯಸ್ಥರ ಹೊಟ್ಟೆಗೆ ಬೆಂಕಿ ಇಟ್ಟಂತಾಯಿತು. ಪರಿಣಾಮವಾಗಿ ಬಸವಣ್ಣನವರು ಕಲ್ಯಾಣ ಬಿಡುವಂತಾಯಿತು. "ಹರಳಯ್ಯ, ಮಧುವರಸ ಮತ್ತು ಶೀಲವಂತಯ್ಯನವರನ್ನು ನಿಲ್ಲಿಸಿ ಕಾದ ಕಬ್ಬಿಣದಿಂದ ಕಣ್ಣುಗಳಿಗೆ ಚುಚ್ಚಲಾಯಿತು."[೧೧೧] ಹೀಗೆ ಅಂತರ್ ಜಾತಿ ವಿವಾಹದ ಘಟನೆಯು ರಾಜ್ಯದಲ್ಲಿ ದಂಗೆ ಏಳಲು ಕಾರಣವಾಯಿತು. ಆಗ ಶರಣ ಸಮೂಹದ ಮೇಲೆ ದಾಳಿ ಕೂಡ ನಡೆಯಿತು.

ಈ ಬಗೆಯಲ್ಲಿ ಹರಳಯ್ಯನವರು ತಾವು ಕೈಗೊಂಡ ವೃತ್ತಿ ಹಾಗೂ ಶರಣ ಚಳವಳಿಯಲ್ಲಿ ಭಾಗವಹಿಸಿ ಪ್ರಮುಖ ಪಾತ್ರವಹಿಸಿದ್ದರಿಂದಾಗಿ ೧೨ನೇ ಶತಮಾನದ ಚರಿತ್ರೆಯಲ್ಲಿ ಮಹತ್ವದ ಸ್ಥಾನ ಪಡೆದಿದ್ದಾರೆ. ಇವರಲ್ಲದೇ ಇನ್ನು ಅನೇಕ ಅಸ್ಪೃಶ್ಯವರ್ಗಕ್ಕೆ ಸೇರಿರುವ ಶರಣರ ಕೊಡುಗೆಯೂ ಅಮೂಲ್ಯವಾಗಿದೆ.

**ಮರುಳಸಿದ್ಧ**

ಮಾನವನಾಗಿ ಹುಟ್ಟಿ ದೈವತ್ವಕ್ಕೆ ಏರಿ ಆರಾಧಿಸಲ್ಪಡುತ್ತಿರುವವರಲ್ಲಿ ಮರುಳ ಸಿದ್ದರೂ ಒಬ್ಬರು. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಉಜ್ಜನಿಯು ಅವರ ಪುಣ್ಯ ಕ್ಷೇತ್ರವಾಗಿದೆ. ಮಾದಿಗರಾಗಿ ಹುಟ್ಟಿದ ಮರುಳಸಿದ್ಧರು ಮುಂದೆ ವೀರಶೈವ ಗುರುಪರಂಪರೆಯನ್ನು ಹುಟ್ಟು ಹಾಕಿದ ಕೀರ್ತಿ ಇವರದು. ಈ ಕುರಿತು ಮರುಳಸಿದ್ಧರ ಬಗ್ಗೆ ರಚಿತವಾದ ಅನೇಕ ಸಾಹಿತ್ಯ ಕೃತಿಗಳು ಖಚಿತಪಡಿಸುತ್ತವೆ. ಈ ಹಿನ್ನೆಲೆಯಲ್ಲಿ ಅವರ ಜೀವನ ಚರಿತ್ರೆಯನ್ನು ಇಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

ಮರುಳಸಿದ್ಧರು ಜನಿಸಿದ್ದು ಕಗ್ಗಲ್ಲುಪುರದಲ್ಲಿ ಎಂಬ ಅಂಶವನ್ನು ಅವರ ಜೀವನ ಚರಿತ್ರೆಯಿಂದ ತಿಳಿಯಬಹುದಾಗಿದೆ. ಹಿಂದೆ ಬಾಚಣ್ಣನು ಕಗ್ಗಲ ಪ್ರಭುವಾಗಿದ್ದನು. ಇವನ ಬಳಿ ಕೂಗಿಮಾರನೆಂಬ ಭೃತ್ಯನಿದ್ದನು. ಅವನ ಸತಿ ಸುಪ್ರಭೆ, ಸತಿಪತಿಯರು ಭೇದವಿಲ್ಲದೆ ಶಿವಭಕ್ತಿಯಲ್ಲಿ ನಿರತರಾಗಿ ಹಗ್ಗ, ಹುರಿ, ನೇಣು, ಮಿಣಿ, ಪಾದುಕೆ ಮುಂತಾದವುಗಳನ್ನು ಮಾಡುವ ಕಾಯಕದಿಂದ ದ್ರವ್ಯ ಸಂಪಾದಿಸುತ್ತಾ ಸುಖದಿಂದಿರುತ್ತಿದ್ದರು. ಆದರೆ ಮಕ್ಕಳಿಲ್ಲವೆಂಬ ಚಿಂತೆ ಬಾಧಿಸುತ್ತಿತ್ತು. ಹರಪ್ರಸಾದದಿಂದ ಕಾಲಕ್ರಮದಲ್ಲಿ ಒಂದು ಗಂಡು ಮಗುವು ಜನಿಸಿತು. ಜಾತಕ ಫಲವಾಗಿ ತಂದೆ ತಾಯಿಗಳು ಕೂಡಲೇ ನುಡಿದರು[೧೧೨] ಎಂಬುದರಲ್ಲಿ ಮರುಳಸಿದ್ದನು ಚರ್ಮವೃತ್ತಿಯಲ್ಲಿ ತೊಡಗಿಕೊಂಡಿದ್ದ ಮಾದಿಗ ಜನಾಂಗಕ್ಕೆ ಸೇರಿದವನೆಂಬುದನ್ನು ಖಚಿತವಾಗಿ ತಿಳಿಯುತ್ತದೆ. ಈ ರೀತಿ ಹುಟ್ಟಿ ಅನಾಥವಾದ ಮರುಳಸಿದ್ಧನು ಬಾಚಣ್ಣನಿಗೆ ದೊರಕುತ್ತದೆ. ಬಾಚಣ್ಣನು ಮಗುವನ್ನು ತಂದು ಮಕ್ಕಳಿಲ್ಲದ ತನ್ನ ಮಡದಿ ಮಲ್ಲಮ್ಮನ ಮಡಿಲಲ್ಲಿ ಮಲಗಿಸಿದನು. ಮಲ್ಲಮ್ಮನ ಮನೋರೋಗ ಮಾಯವಾಗಿ ಮಾತೆಯಾದಳು. ಕತ್ತಲೆಯ ಮನೆಗೆ ಮಣಿದೀಪದಂತಾಯಿತು. ಗೋಪಿಯು ಕೃಷ್ಣನನ್ನು ಸಲಹಿದಂತೆ ಮಲ್ಲಮ್ಮನು ಮಾತೃವಾತ್ಸಲ್ಯದಿಂದ ಆ ಮಗುವನ್ನು ಸಾಕಿ ಸಲಹಿದಳು. ಆ ಮಗುವಿನ ಮರುಳಾಟದ ಬಾಲಲೀಲೆಗಳನ್ನು ಕಂಡು ಮುದ್ದಿನಿಂದ 'ಮರುಳ' ಎಂದು ಕರೆದಳು[೧೧೩] ಹೀಗೆ ಬೆಳೆಯುತ್ತಾ ಹೋದ ಮರುಳಸಿದ್ಧನು ಬಾಲ್ಯದಲ್ಲಿ ಗೌಡನ ಕರುಗಳನ್ನು ಕಾಯಲು ಕಾಡಿಗೆ ಹೋಗುತ್ತಿದ್ದು ಅನೇಕ ಪವಾಡಗಳನ್ನು ತೋರಿಸಿದನು. ಒಂದು ಸಾರಿ ಕಗ್ಗಲ್ಲುಪುರದಲ್ಲಿ ಬರಗಾಲ ಬರುತ್ತಿದ್ದು ಮಾರಿಯನ್ನು ಪೂಜಿಸಿ ಪ್ರಾಣಿ ಬಲಿಗಳನ್ನಿತ್ತರೆ ಬಂದ ಸಂಕಟವು ಪರಿಹಾರವಾಗುತ್ತದೆಂದು ಪುರೋಹಿತರು ಜನಗಳಿಗೆ ಸೂಚನೆಕೊಟ್ಟರು. ಮರುಳಸಿದ್ದರಿಗೆ ಇದು ಒಂದು ಪಾಪಕಾರ್ಯ. ದೇವರ ಪೂಜೆಯಲ್ಲಿ ಪ್ರಾಣಿ ವಧೆ ಮತ್ತು ಸುರೆ ಕುಡಿಯುವುದು ಮುಂತಾದ ಅನಾಚಾರಗಳನ್ನು ನಿಲ್ಲಿಸಲು ಸರ್ವಪ್ರಯತ್ನ ಮಾಡುತ್ತಾನೆ. ತಾನು ಎಷ್ಟು ಕೇಳಿದರೂ ಬಾಚೇಗೌಡನು ಊರಿನ ಪುರೋಹಿತರ ಅಭಿಪ್ರಾಯವನ್ನೇ ಅನುಮೋದಿಸಿದ್ದರಿಂದ ಆ ಊರನ್ನು ಬಿಟ್ಟು ಚಿನ್ಮೂಲಾದ್ರಿ(ಚಿತ್ರದುರ್ಗದ) ಕಡೆ ಬರುತ್ತಾರೆ.[೧೧೪]

ಮರುಳಸಿದ್ಧರು ರೇವಣಸಿದ್ಧರ ಶಿಷ್ಯರಾಗಿ ದೀಕ್ಷೆ ತೆಗೆದುಕೊಂಡು ಅವರಿಂದ ಜ್ಞಾನ ಸಂಪಾದಿಸುತ್ತಾರೆ.

ಆನಂತರ ಅವರು ಸಂಚಾರದಲ್ಲಿ ತೊಡಗುತ್ತಾರೆ. 'ಸಂಚಾರದಲ್ಲಿ ಅವರು ಕಂಡದ್ದು ಬೇತೂರು ಅಗ್ರಹಾರದಲ್ಲಿ ನಡೆಯುತ್ತಿದ್ದ ಬ್ರಾಹ್ಮಣರ ಮಹಾಯಾಗವನ್ನು ಕುಲ ಹದಿನೆಂಟೂ ಜಾತಿಗೂ ಯಜ್ಞದ ಬ್ರಾಹ್ಮಣರೊಂದಿಗೆ ಪ್ರಸಾದ ದೊರಕಿಸಲು ಪ್ರಯತ್ನಿಸಿದನು. ಹುಡುಗರ ತಂಡವು ಅವನನ್ನು ಹಿಂಬಾಲಿಸಿತು. ಸಂಪ್ರದಾಯಸ್ಥರು ಅವನ ಹಾವಳಿಯನ್ನು ತಪ್ಪಿಸಲು ಪ್ರಯತ್ನಿಸಿದರು. ಅಣಜಿ ಕೆರೆಯಲ್ಲಿ ಮುಳುಗಿಸಿದರು, ಸುಣ್ಣದ ಗುಮ್ಮಿಯಲ್ಲಿ ಕೂಡಿದರು, ಎಡೆಮುರಿಗೆ ಕಟ್ಟಿದರು.[೧೧೫] ಆದರೆ 'ಈ ಎಲ್ಲಾ ತೊಡಕುಗಳನ್ನು ನಿವಾರಸಿಕೊಂಡು ಮರುಳಸಿದ್ಧರು ಹೊಸಪೇಟೆ ಹತ್ತಿರದ ತೆಲುಗುಬಾಳು ಎಂಬ ಊರಿಗೆ ಬರುತ್ತಾರೆ. ಅಲ್ಲಿ ಮೂಕನಾಗಿದ್ದ ಸಿದ್ಧನೆಂಬ ಬಾಲಕನನ್ನು ಮಾತನಾಡುವಂತೆ ಮಾಡಿ ಅವನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಳ್ಳುತ್ತಾರೆ. ಅಲ್ಲಿಂದ ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರದ ಕೆಲವು ಭಾಗಗಳಲ್ಲಿ ಪ್ರವಾಸ ಮಾಡಿ ಕೊಲ್ಲಾಪುರಕ್ಕೆ ಬರುತ್ತಾರೆ. ಅಲ್ಲಿಯ ದೊರೆಯ ಮಗಳಾದ ಮಾಯದೇವಿಯನ್ನು ವಾದದಲ್ಲಿ ಗೆದ್ದು ಶಿಷ್ಯಳಾಗಿ ಮಾಡಿಕೊಂಡು, ಅವಳು ಬಂಧಿಸಿಟ್ಟಿದ್ದ ಶಿವಭಕ್ತರನ್ನು ಬಿಡಿಸಿ ಅವರೆಲ್ಲರನ್ನು ಜೊತೆಗೂಡಿನ್ನೂ ತಾವು ಹುಟ್ಟಿದ ಊರಾದ ಕಗ್ಗಲ್ಲುಪುರಕ್ಕೆ ಬರುತ್ತಾರೆ. ಅಲ್ಲಿ ಒಂದು ಸದ್ಧರ್ಮಪೀಠ ಸ್ಥಾಪನೆ ಮಾಡಬೇಕೆಂದು ಗೌಡನಿಂದ ಜಮೀನು ಪಡೆದು ತಾವು ಗಳಿಸಿದ ದಿಗ್ವಿಜಯದ ಸಂಕೇತವಾಗಿ 'ಉಜ್ಜಯಿನಿ' ಎಂಬ ಕ್ಷೇತ್ರವನ್ನು ನಿರ್ಮಿಸುತ್ತಾರೆ.[೧೧೬] ಅಲ್ಲಿ ಮಠಸ್ಥಾಪಿಸಿಕೊಂಡು ತಮ್ಮ ಶಿಷ್ಯರೊಂದಿಗೆ ಕಾಲಕಳೆಯುತ್ತಾರೆ. ತಮ್ಮ ಅಂತ್ಯಕಾಲವು ಸಮೀಪಿಸಲು ತಮ್ಮ ಶಿಷ್ಯನಾದ ತೆಲುಗುಬಾಳು ಸಿದ್ಧಯ್ಯನನ್ನು 'ತರಳಬಾಳು' ಎಂದು ಹರಸಿ ಮಠದ ಉತ್ತರಾಧಿಕಾರವನ್ನು ಮಾಪೌರ್ಣಮಿ ಶುದ್ಧ ದಿನದಂದು ವಹಿಸಿ ಶಿವಲಿಂಗೈಕ್ಯರಾದರು. ಈ ಗುರುಪರಂಪರೆಯವರಲ್ಲಿ ಒರ್ವರು ಉಜ್ಜಯಿನಿಯಿಂದ ಹೊರಟು ಸಿರಿಗೆರೆಗೆ ಬಂದು ಅಲ್ಲಿಯೇ ಮಠವನ್ನು ಸ್ಥಾಪಿಸಿದರು.[೧೧೭] ಈ ರೀತಿಯಾಗಿ ಮರುಳಸಿದ್ಧರು ಸಾಂಪ್ರದಾಯಿಕ ಪದ್ಧತಿಗಳನ್ನು ಖಂಡಿಸಿ ಅನೇಕ ಪವಾಡ ಮತ್ತು ಸಾಧನೆಗಳನ್ನು ಮಾಡಿ ತೋರಿಸುವುದರ ಮೂಲಕ ಶಿಷ್ಯವೃಂದ ಮತ್ತು ಮಠವನ್ನು ಸ್ಥಾಪಿಸಿದರು. ಮರುಳಸಿದ್ಧರು ತಮ್ಮ ಗುರು ರೇವಣ್ಣನವರ ಆಶೀರ್ವಾದ ಪಡೆದು ಅವರ ಅಪ್ಪಣೆಯಂತೆ ಆನಗೋಡು, ಬೇತೂರು, ಕುಮತಿ, ಬಲ್ಲೂರು, ಕುಂಬಳೂರು, ಬಸರಗೋಡು ಮುಂತಾದ ಸ್ಥಳಗಳಲ್ಲಿ ಸಂಚರಿಸಿ ದೇವಾಲಯಗಳನ್ನು ನಿರ್ಮಿಸಿ ಲಿಂಗಗಳನ್ನು ಪ್ರತಿಷ್ಠಾಪಿಸಿದರು.[೧೧೮] ಹೀಗಾಗಿ ಲಿಂಗಾಯಿತ(ಸಾದರು)ರ ಆರಾಧ್ಯ ದೈವವಾಗಿದ್ದಾರೆ. ಅವರ ಪರಂಪರೆ ಮುಂದೆ ಚಿತ್ರದುರ್ಗ ಜಿಲ್ಲೆಯ ಸಿರಿಗೆರೆ ಗ್ರಾಮದಲ್ಲಿ ಮಠವೊಂದನ್ನು ಸ್ಥಾಪಿಸಲು ಕಾರಣವಾಯಿತು. ಇಂದು ವೀರಶೈವ ಸಾದರ ಆರಾಧ್ಯಗುರುವಾದ ಮರುಳಸಿದ್ಧ ಮೂಲತಃ ಮಾದಿಗರವನೆಂಬುದು ಎಲ್ಲರಿಗೂ ತಿಳಿದಿರುವ ಸತ್ಯ. ಈ ಕಾರಣದಿಂದಾಗಿ 'ಸಾದರು ಮಾದರು' ಇಬ್ಬರು ಒಂದೇ ಎನ್ನುವ ಅಭಿಪ್ರಾಯವಿದೆ.

ಮರುಳಸಿದ್ಧರ ಕಾಲವನ್ನು ಕುರಿತು ಕ್ರಿ.ಶ.೧೧೮೭ ನೇಯ ಸಂವತ್ಸರದ ಸಿರಿವಾಳ ಶಾಸನದಲ್ಲಿ ವ್ಯಕ್ತವಾಗಿರುವ ದಾನವನ್ನು ಸ್ವೀಕರಿಸಿದ ರೇವಣಸಿದ್ಧರು ಮರುಳಸಿದ್ಧನ ಗುರುವಾಗಿರುವನು.

ಮರುಳಸಿದ್ಧನು ರೇವಣಸಿದ್ಧನಿಗಿಂತಲೂ ವಯಸ್ಸಿನಲ್ಲಿ ಬಹಳ ಚಿಕ್ಕವನಾಗಿಯೇ ಇರಬೇಕು ಎಂದು ಸ್ವಯಂ ವ್ಯಕ್ತವಾಗುವುದು. ಮರುಳಸಿದ್ಧರು ಕ್ರಿ.ಶ.೧೧೪೦ರಲ್ಲಿ ಜನಿಸಿರಬಹುದು. ಗಣಪತಿಯ ಕಾಲದಲ್ಲಿ ಓರಗಲ್ಲನ್ನು ಸಂದರ್ಶಿಸಿದನೆಂದು ಹೇಳಿರುವುದರಿಂದಲೂ ನಂತರ ಕೆಲವು ವರ್ಷಗಳ ಕಾಲ ಮರುಳಸಿದ್ಧನು ಜೀವಿಸಿದ್ದರಿಂದಲೂ ಕ್ರಿ.ಶ.೧೨೧೦ರವರೆಗೆ ಬದುಕಿದ್ದನೆಂದು ಸದ್ಯಕ್ಕೆ ಹೇಳಬಹುದು[೧೯] ಎಂದು ಹುಲ್ಲೂರು ಶ್ರೀನಿವಾಸ ಜೋಯಿಸರು ಅಭಿಪ್ರಾಯಿಸಿದ್ದಾರೆ.

ಮರುಳಸಿದ್ಧರು ಮಾದಿಗ ಎಂಬುದನ್ನು ನಿರೂಪಿಸುವ ಗುರುತಾಗಿ ಉಜ್ಜಿನಿ ಕ್ಷೇತ್ರದಲ್ಲಿ ಮಾದಿಗರ ಕೇರಿಯಲ್ಲಿ ಮರುಳಸಿದ್ಧರ ದೇವಾಲಯವಿದೆ. ಈ ದೇವಸ್ಥಾನದ ಪೂಜೆಯನ್ನು ಮಾದಿಗರ ಪೂಜಾರಿ ಮಾಡುತ್ತಾನೆ. ಇವನಿಗೆ ಪಟ್ಟವಾಗಿರಬೇಕು, ಆ ಪಟ್ಟವನ್ನು ಉಜ್ಜಯಿನಿ ಮಠದವರು ಕಟ್ಟುತ್ತಾರೆ. ಪಟ್ಟವನ್ನು ಕಟ್ಟುವ ಕಾಲದಲ್ಲಿ ಈ ಪೂಜಾರಿಗೆ ಕಾವಿ ಮತ್ತು ಬೆತ್ತಗಳನ್ನು ಕೊಡಲಾಗುವುದು. ಈ ಪೂಜಾರಿ ಮಾಂಸಹಾರವನ್ನು ಸ್ವೀಕರಿಸುವುದಿಲ್ಲ. ಎಲ್ಲ ಮಾದಿಗರು ಮರುಳಸಿದ್ಧ ದೇವರಲ್ಲಿ ಬಹಳಷ್ಟು ಭಕ್ತಿಯುಳ್ಳವರಾಗಿದ್ದಾರೆ. ಮರುಳಸಿದ್ಧ ಉತ್ಸವ ಕಾರ್ಯದಲ್ಲಿ ಹೆಚ್ಚಿನ ಹಕ್ಕುಗಳನ್ನು ಪಡೆದಿರುತ್ತಾರೆ. ಭರತ ಹುಣ್ಣಿಮೆ ಜಾತ್ರೆಯಲ್ಲಿ ಮರುಳಸಿದ್ಧರ ಪಲ್ಲಕ್ಕಿ ಉತ್ಸವದಲ್ಲಿ ಮೊದಲನೇ ಆರತಿ ಎತ್ತುವವರು ಮಾದಿಗರೇ ಆಗಿರುತ್ತಾರೆ. ರಥೋತ್ಸವದಲ್ಲಿ ರಥದ ಗಾಲಿಗಳಿಗೆ ಎಡೆಹಾಕುವುದು, ರಥದ ಗಾಲಿಗಳ ಮೇಲೆ ಒಡೆದ ತೆಂಗಿನ ಕಾಯಿಗಳ ಹಕ್ಕು ಮಾದಿಗರಿಗೆ ಸೇರಿರುತ್ತದೆ.[೧೨೦]

ಹೀಗೆ ಮರುಳಸಿದ್ಧರು ಮೂಲತಃ ಮಾದಿಗರಾಗಿದ್ದು ಶೈವೀಕರಣಗೊಂಡ ನಂತರದಲ್ಲಿ ಗುರುವಾಗಿ ಅನೇಕ ದೇವಾಲಯ ಮತ್ತು ಮಠಗಳನ್ನು ನಿರ್ಮಿಸಲು ಕಾರಣರಾದರು. ಅವರ ಅವಧಿಯಲ್ಲಿ ಮಾಡಿದ ಸಾಧನೆಗಳು ಚಾರಿತ್ರಿಕ ಮಹತ್ವ ಪಡೆದವುಗಳಾಗಿವೆ.

### ತಿಪ್ಪೇಸ್ವಾಮಿ

'ಮಾನವನಾಗಿ ಹುಟ್ಟಿ ದೈವತ್ವಕ್ಕೆ ಏರಿದವರಲ್ಲಿ ತಿಪ್ಪೇಸ್ವಾಮಿಯೂ ಒಬ್ಬ. ಈತನಿಗೆ ಸಂಬಂಧಿಸಿದ ದೇವಾಲಯ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿ ಗ್ರಾಮದಲ್ಲಿದೆ. ಇಲ್ಲಿ ಹೋಳಿಹುಣ್ಣಿಮೆಯ ದಿನಗಳಲ್ಲಿ ತಿಪ್ಪೇಸ್ವಾಮಿ ಜಾತ್ರೆ ನಡೆಯುತ್ತದೆ. ತಿಪ್ಪೇಸ್ವಾಮಿಯನ್ನು ಪಂಚಾಗಣಾಧೀಶರಲ್ಲಿ ಒಬ್ಬನೆಂದು ಹೇಳಲಾಗುತ್ತಿದ್ದು' ನಾಯ್ಕನ ಹಟ್ಟಿಯ ಘಣಿಯಪ್ಪನೆಂಬ ವರ್ತಕ ರಾಯದುರ್ಗಕ್ಕೆ ವ್ಯಾಪಾರಕ್ಕಾಗಿ ಹೋಗಿ ಬರುತ್ತಿರುವಾಗ ತಿಪ್ಪೇಸ್ವಾಮಿ ಆತನ ಹಿಂದೆ ನಾಯಕನಹಟ್ಟಿಗೆ ಬಂದನೆಂಬುದು ಪ್ರತೀತಿ. ಈತನಿಗೆ ಈ ಹೆಸರು ಬಂದುದರ ಬಗ್ಗೆ ಐತಿಹ್ಯವೊಂದು ಈ ರೀತಿ ಹೇಳುತ್ತದೆ. ಈತ ಮೊದಲು ಹಟ್ಟಿಗೆ ಬಂದಾಗ ತಿಪ್ಪೇಗುಂಡಿಗಳಲ್ಲಿ ಇರುತ್ತಿದ್ದನಂತೆ. ಅನೇಕ ಅವಧೂತರು ಹೀಗೆ ಕೊಳಕಾಗಿ ಇರುತ್ತಿದ್ದ ಕತೆಗಳೊಂದಿಗೆ ಈತನ ಕತೆಯನ್ನೂ ಹೋಲಿಸಿ ನೋಡಬಹುದು. ಹೀಗಾಗಿ 'ತಿಪ್ಪೆ'ಯಲ್ಲಿ ಇರುತ್ತಿದ್ದ ಈ 'ಸ್ವಾಮಿ'ಯನ್ನು ಅವರು ಸಹಜವಾಗಿ 'ತಿಪ್ಪೇಸ್ವಾಮಿ' ಎಂದು ಕರೆದಿದ್ದರೆ ಆಶ್ಚರ್ಯವೇನಿಲ್ಲ. ತಿಪ್ಪೇರುದ್ರಸ್ವಾಮಿ ಶಿಷ್ಟ ಹೆಸರು ಶೈವೀಕರಣದ

ಕತೆಯನ್ನು ಹೇಳುವಂತಿದೆ.”[೧೨೧] ಈ ರೀತಿ ತಿಪ್ಪಯ್ಯ ತಿಪ್ಪೇಸ್ವಾಮಿಯಾಗಿ ಅನೇಕ ಪವಾಡಗಳನ್ನು ಮಾಡಿ ದೈವತ್ವಕ್ಕೆ ಏರಿದ. ಆದರೆ ಈತನ ಮೂಲದ ಬಗೆಗೆ ಅನೇಕ ಅಭಿಪ್ರಾಯಗಳಿವೆ. ಒಂದು ಮೂಲದ ಪ್ರಕಾರ ಈತ ಬೇಡ ಮೂಲದವನೆಂದರೆ ಮತ್ತೊಂದು ಬೇರೆ ಮೂಲವನ್ನು ಹೇಳುತ್ತದೆ. ಆದರೆ ಒಂದು ಮೂಲದ ಪ್ರಕಾರ ಈತನನ್ನು ಮಾದಿಗರು ಎಂದು ಊಹಿಸುತ್ತಾರೆ. ಇದನ್ನು ಸಮರ್ಥಿಸುವಂತೆ ಈತನ ರಥೋತ್ಸವದಲ್ಲಿ ಮಾದಿಗರು ಬಂದು ‘ಗಿಣ್ಣದ ಎಡೆ’ ಹಾಕಿದ ನಂತರವೇ ತೇರು ಮುಂದೆ ಹರಿಯುವುದು.[೧೨೨] ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ ತಿಪ್ಪೇಸ್ವಾಮಿಯು ಮಾದಿಗರನಾಗಿದ್ದು ಶೈವೀಕರಣಗೊಂಡು ತಿಪ್ಪೇರುದ್ರಸ್ವಾಮಿ ಆಗಿರಬಹುದು. ಅಲ್ಲದೆ ಮಾದಿಗರನೇಕರು ಆರಾಧಿಸುವುದು ತಿಪ್ಪೇಸ್ವಾಮಿಯನ್ನೆ ಅಲ್ಲದೆ ಈ ಜನಾಂಗದಲ್ಲಿ ‘ತಿಪ್ಪೇಸ್ವಾಮಿ’ ‘ತಿಪ್ಪಕ್ಕ’ ‘ತಿಪ್ಪಮ್ಮ’ ‘ತಿಪ್ಪಯ್ಯ’ ಹೆಸರುಗಳು ಹೆಚ್ಚಾಗಿ ಕಂಡುಬರುತ್ತವೆ. ಈ ಬಗೆಯ ಹೆಸರುಗಳು ಮಾದಿಗರಲ್ಲಿರುವುದು ಮತ್ತು ರಥೊತ್ಸವ ಸಂದರ್ಭದಲ್ಲಿ ಮಾದಿಗರಿಗೆ ನೀಡಿರುವಂತಹ ಮಹತ್ವ ಹಾಗೂ ಅನಾದರಕ್ಕೆ ಒಳಗಾಗಿದ್ದ ತಿಪ್ಪೇಸ್ವಾಮಿ ಈ ಮೂರು ಅಂಶಗಳ ಹಿನ್ನೆಲೆಯಲ್ಲಿ ತಿಪ್ಪೇಸ್ವಾಮಿ ಮಾದಿಗ ಮೂಲದವನಾಗಿರುವ ಸಂಶಯವನ್ನು ಮೂಡಿಸುತ್ತವೆ.

### ಮಲೆ ಮಾದೇಶ್ವರ

‘ಮಾನವನಾಗಿ ಹುಟ್ಟಿ ಅನೇಕ ಸಾಧನೆ ಮತ್ತು ಪವಾಡಗಳಿಂದ ದೈವತ್ವಕ್ಕೆ ಏರಿ ಪೂಜಿಸಲ್ಪಡುತ್ತಿರುವವರಲ್ಲಿ ಮಾದೇಶ್ವರರೂ ಒಬ್ಬರು. ಇವರು ಪೂಜಿಸಲ್ಪಡುತ್ತಿರುವುದು ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಕೌದಳ್ಳಿ ಗ್ರಾಮದಿಂದ ಸುಮಾರು ೧೫ ಕಿ.ಮೀ. ದೂರದ ಗುಡ್ಡ ಅಥವಾ ಬೆಟ್ಟದಲ್ಲಿ. ಯುಗಾದಿ, ಶಿವರಾತ್ರಿ, ದೀಪಾವಳಿ ಮುಂತಾದ ದಿನಗಳಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಮಾದೇಶ್ವರರ ಭಕ್ತರು ಕೇವಲ ಈ ರಾಜ್ಯದಲ್ಲಿ ಮಾತ್ರವಲ್ಲದೇ ಇತರೆ ರಾಜ್ಯಗಳಲ್ಲಿಯೂ ಇರುವರು. ಅವರು ವಿವಿಧ ಧರ್ಮ ಮತ್ತು ಜಾತಿಗೆ ಸೇರಿದವರಾಗಿದ್ದಾರೆ. ಈ ರೀತಿ ಎಲ್ಲರಿಂದಲೂ ಪೂಜಿಸಲ್ಪಡುತ್ತಿರುವ ಮಾದೇಶ್ವರರು ಮಾದಿಗರು ಎಂಬುದು ಗಮನಾರ್ಹ ಸಂಗತಿಯಾಗಿದೆ.

ಮಾದೇಶ್ವರನ ಜೀವನ ಚರಿತ್ರೆಗೆ ಸಂಬಂಧಿಸಿದ ಅನೇಕ ಮಾಹಿತಿಗಳನ್ನು ಸಾಹಿತ್ಯ, ಶಾಸನ ಹಾಗೂ ಐತಿಹ್ಯಗಳಿಂದ ತಿಳಿಯಬಹುದು. ಜಾನಪದ ಮಹಾಕಾವ್ಯಗಳೆಂದೇ ಪರಿಗಣಿಸಲಾಗಿರುವ ಕಾವ್ಯಗಳಲ್ಲಿ ಮಲೆ ಮಾದೇಶ್ವರ ಮತ್ತು ಮಂಟೆಸ್ವಾಮಿ ಕಾವ್ಯಗಳು ಮುಖ್ಯವಾಗಿವೆ. ಕಾವ್ಯಗಳ ಇವರಿಬ್ಬರ ಬಗೆಗೆ ಸ್ವಾರಸ್ಯಕರವಾದ ಸಂಗತಿಗಳನ್ನು ಕಾಣಬಹುದು. “ಶರಣರ ಜನಪದ ಚಳವಳಿಯ ಮೂಲಕ ಚರಿತ್ರೆಯಲ್ಲಿಯೇ ಮೊದಲಬಾರಿಗೆ ಬೀದಿಗೆ ಬಂದ ಕೆಳವರ್ಗದ ಜನ ನಂತರದ ಅನಿರೀಕ್ಷಿತ ಸೋಲಿನಿಂದ ಹತಾಶರಾಗಿ ತಮ್ಮ ತಮ್ಮ ದಾರಿಗಳನ್ನು ತಾವು ಹಿಡಿದಂತೆ ಕಾಣುತ್ತದೆ.”[೧೨೩] ಪರಿಣಾಮವಾಗಿ ಮಾದೇಶ್ವರ ಮತ್ತು ಮಂಟೆಸ್ವಾಮಿಗಳು ಪ್ರತ್ಯೇಕ ಅಸ್ತಿತ್ವ ಹೊಂದಲು ಕಾರಣವಾಗಿದೆ.

ಮಾದೇಶ್ವರರ ಜೀವನ ಚರಿತ್ರೆಗೆ ಸಂಬಂಧಿಸಿದಂತೆ ಕೆಲವೊಂದು ಮಾಹಿತಿಗಳು ಕ್ರಿ.ಶ.೧೮೩೮ರಲ್ಲಿ ರಚನೆಗೊಂಡ ದೇವಚಂದ್ರನ 'ರಾಜಾವಳಿ ಕಥೆ'ಯಲ್ಲಿವೆ. ಅದರಲ್ಲಿ ''ಹದಿನಾಡು ಮುಂತಾದ ಆರುನಾಡಗಳಂ, ಸೋಮವಂಶದ ಸಮ್ಯಗ್ದೃಷ್ಟಿ ಅಭಿಚಂದ್ರನಾಳುತ್ತಿರೆ. ಕುಂತೂರು ಮಠದೊಳು ನಂಜಯ್ಯನೆಂಬ ಜೋಳಿಗೆ ಒಡೆಯರಿರಲಲ್ಲಿಗೆ ಬಡಗು ಸೀಮೆಯಿಂದೋರ್ವ ಮಾದಿಗರ ಹುಡುಗ ಪೂರ್ವ ಜನ್ಮದ ಸಂಸ್ಕಾರದೊಳ್ ವ್ಯಂತರದೇವತಾ ಒಲುಮೆಯಂ ದೇಶಂತರಂ ಬಂದಾಮಠಮಂ ಸೇರಿ ದನಮಂ ಕಾಯ್ದುಕೊಂಡಿರ್ದು ತಾನು ಗುಡ್ಡನಾಗಿರ್ದು ಪರ್ವತದ ಬೊಳರೆಯೊಳು ಯೋಗದೊಳಿರ್ದು''[೧೨೪] ಎಂಬುದು ಮಾದೇಶ್ವರನು ಮಾದಿಗನೆಂದು ಖಚಿತವಾಗಿ ತಿಳಿಸುತ್ತದೆ. ಮಾದೇಶ್ವರನ ಕಾವ್ಯದಲ್ಲಿ 'ಮಾದಪ್ಪ ನಮಗೆ ಹಸಿವಿನಿಂದ ಬಳಲುವ ಅನಾಥನಾಗಿ, ಅಸ್ತಿತ್ವಕ್ಕಾಗಿ ಪರದಾಡುವ ಶರಣನಾಗಿ ಕಾಣಿಸುತ್ತಾನೆ. ತನ್ನ ಉದ್ದೇಶ ಸಾಧನೆಯ ಉತ್ತಮ ಸ್ಥಳಕ್ಕಾಗಿ ಪರದಾಡುವ ಶರಣನಾಗಿ ತೊಡಗುವ ಹುಡುಕಾಟದಲ್ಲಿ ಅನೇಕ ಗುರುಮಠಗಳು ಕಾಣಿಸಿಕೊಳ್ಳುತ್ತವೆ. ಹೀಗೆ ಅರಸಿ ಹೊರಡುವ ಮಠಗಳಲ್ಲಿ ಮೊದಲನೆಯದು ಸುತ್ತೂರು ಮಠ. ಕೈಲಾಸದ ಶಿವನ ಜಡೆಯಿಂದ ಉದ್ಭವವಾದ ಮಾದೇವನೇ ಆಗಿದ್ದರೆ ಅವನು ಹೀಗೆ ಮಠಮಾನ್ಯಗಳನ್ನು ಹೂಡಿಹೊರಡಬೇಕಾದ ಅಗತ್ಯವಿರಲಿಲ್ಲವೇನೋ. ಆದರೆ ಮಂಟೇಸ್ವಾಮಿಯಂತೆ ಮಾದಪ್ಪ ಕೂಡ 'ಉತ್ತರ ದೇಸ'ದಿಂದ ದಕ್ಷಿಣಕ್ಕೆ ಬಂದ ಶರಣ. ಹಾಗೆಯೇ ಇವನ ಉದ್ದೇಶ ಕೂಡ ಯಾವುದೋ ಒಂದು ಮಠದಲ್ಲಿ ಕುಂತು ಕೂಳೀನ ಕಾಯಕ ತೀರಿಸಿಕೊಳ್ಳುವುದಾಗಿರಲಿಲ್ಲ. ಸ್ಥಾಪಿತ ಮೌಲ್ಯದ ವಿರುದ್ಧವಾದ ಸಂಘಟನೆ ಇವನ ಧ್ಯೆಯವಾಗಿತ್ತು. ಅಂಥ ಒಂದು ಸಂಘಟನೆಯ ಪಯಣದಲ್ಲಿ ಈ ಮಠಗಳು ಬಂದು ಹೋಗುತ್ತವೆ. ಹಾಗೆ ಹುಡುಕಿ ಬರುವ ಮಠಗಳಲ್ಲಿ ಸುತ್ತೂರು ಕೂಡ ಒಂದು. ಅಲ್ಲಿ ಮಾದಪ್ಪನಿಗೆ 'ರಾಗಿ ಬೀಸುವ' ಕೆಲಸ ನೀಡಲಾಗುತ್ತದೆ. ಕೆಲವು ದಿನ ಈ ಕಾಯಕವನ್ನು ಮಾಡಿ 'ಸುತ್ತೂರು ಮಠದಲ್ಲಿ ಸುಖ ಅಂತ ಬಂದೆ, ಕುಕ್ಕೇಲ ರಾಗಿ ತುಂಬಿ ಮಡಗಿದ್ದೀರಿ' ಎಂದು ಹಂಗಿಸಿ ಮಠಕ್ಕೆ ಶಾಪಕೊಟ್ಟು ಹೊರಡುತ್ತಾನೆ. ಅಲ್ಲಿಂದ ಕುಂತೂರು ಮಠಕ್ಕೆ ಬರುತ್ತಾನೆ. ಕುಂತೂರು ಮಠದಲ್ಲಿ ಲಿಂಗಪೂಜೆಗೆ ಪುಷ್ಪಗಳನ್ನು ತರುವ ಕಾಯಕಕ್ಕೆ ನೇಮಿಸಲಾಗುತ್ತದೆ. ಪುಷ್ಪಗಳನ್ನು ತರಲು ಹೋದವನು ಹಾವ್ರಾಣಿ, ಗೊದ್ದ, ಗೋಸಂಬೆ, ಹಾವು, ಚೇಳುಗಳನ್ನು ಹಿಡಿದು 'ನರಮನ್ಸರ ಕೈಲಿ ಸಿಕ್ಕಿದರೆ ನಿಮ್ಮನ್ನು ಹೊಡ್ದು ನರಕದ ಗುಂಡಲಿ ಮಣ್ಣ ಮಾಡ್ತಾರೆ' ಅಂತೇಳಿ ಅವುಗಳನ್ನು ನೀರಿಗೆ ಅದ್ದಿ ಪುಷ್ಪಗಳನ್ನಾಗಿ ಪರಿವರ್ತಿಸುತ್ತಾನೆ. ಇದನ್ನು ನೋಡಿದ ಆ ಮಠದವರು ಅವನನ್ನು ಅಲ್ಲಿಂದ ಸಾಗಹಾಕುತ್ತಾರೆ. ಅಲ್ಲಿಂದ ಅರ್ದ್ನಳ್ಳಿ ಮಠಕ್ಕೆ ಬಂದು ಅಲ್ಲಿಯೂ ಒಪ್ಪದೆ, ನೂರಾರು ಹಳ್ಳಿ ಹಾದಿಗಳನ್ನು ಹಾದು, ಪರ್ಯಟನೆ ಮಾಡಿ ಕಡೆಗೆ ಅವನು ಬಂದು ಸೇರುವುದು ಎಪ್ಪತೇಳು ಮನೆಯ ನಡುವೆ ಸೀಗೆ ಸಿರುಗಂಧ ಬೆಳೆಯುವ ದಟ್ಟ ಕಾನನದ ತಾಟಕ್ಕೆ.[೧೨೫] ಈ ರೀತಿ ಮಾದಪ್ಪನು ಜೀವನ ನಿರ್ವಹಣೆ ಮತ್ತು ಸಾಧನೆಗಾಗಿ ಊರಿಂದ ಊರಿಗೆ ಅಲೆಯುತ್ತಾ ನಾನಾ ಕೆಲಸಗಳನ್ನು ಮಾಡಿ ಕೊನೆಗೆ

ಬಂದು ಸೇರುವುದು ದಟ್ಟ ಅರಣ್ಯಕ್ಕೆ. ಅಲ್ಲಿ ಬಂದ ನಂತರದಲ್ಲಿ ಅನೇಕ ಪವಾಡ ಸಂದರ್ಭಗಳು ಅವನ ಬಗ್ಗೆ ಗೌರವ, ಭಕ್ತಿಗಳನ್ನು ಬುಡಕಟ್ಟು ಜನರಲ್ಲಿ ಮೂಡಿಸಲು ಕಾರಣವಾಗುತ್ತವೆ.

'ಶಿವಶರಣ ರತ್ನಕೋಶದಲ್ಲಿ' ಮಾದೇಶ್ವರರ ಲೀಲೆಗಳನ್ನು ಚಿತ್ರಿಸುತ್ತಾ ಮಾದೇಶ್ವರರು ಹಾವು ಕಡಿದವರನ್ನು ಬದುಕಿಸುವುದು, ಬರಡು ಹಸುಗಳನ್ನು ಆಶೀರ್ವದಿಸಿ ಹಾಲು ಹಿಂಡುವಂತೆ ಮಾಡುವುದು. ದನಕರುಗಳನ್ನು ರೋಗ-ರುಜಿನಗಳಿಂದ ಪಾರು ಮಾಡುವುದು, ಕಲ್ಲುಗಳನ್ನು ಪುಷ್ಪ ಮಾಡುವುದು.[೧೨೬] ಹೀಗೆ ಅನೇಕ ಪವಾಡ ಮತ್ತು ಸೇವೆಗಳನ್ನು ಮಾದಪ್ಪ ಮಾಡುತ್ತಿದ್ದನೆಂದು ಹೇಳಲಾಗುತ್ತದೆ. ಈ ಬಗೆಯಲ್ಲಿ ಮಾದಪ್ಪ ಸೇವೆ, ಪವಾಡಗಳಿಂದಾಗಿ ದೈವತ್ವಕ್ಕೆ ಏರಿಸಲ್ಪಟ್ಟು ಪೂಜೆಗೊಳಪಟ್ಟಿದ್ದಾನೆ.

ಮಾದಪ್ಪನ ಕಾಲಕ್ಕೆ ಸಂಬಂಧಿಸಿದಂತೆ ವಿವಿಧ ಅಭಿಪ್ರಾಯಗಳಿದ್ದು ಅವು ೧೨ನೇ ಶತಮಾನದಿಂದ ೧೬ನೇ ಶತನಮಾನದ ಅವಧಿಯ ಕಾಲವನ್ನು ತಿಳಿಸುತ್ತವೆ. ಮಾದೇಶ್ವರ ಮತ್ತು ಮಂಟೆಸ್ವಾಮಿ ಕಾವ್ಯಗಳಲ್ಲಿ ಅನೇಕ ಕಡೆ ಬಸವಣ್ಣನವರ ಜೊತೆಗೂ ಸಂಬಂಧ ಕಲ್ಪಿಸುವ ಕಥಾ ಭಾಗಗಳು ಸಿಗುತ್ತವೆ. ಆದರೆ ಮಾದೇಶ್ವರ ಮತ್ತು ಮಂಟೆಸ್ವಾಮಿ ಆ ಚಳವಳಿಯ ಒಂದು ಭಾಗವಾಗಿದ್ದರೆಂಬುದಾಗಲಿ ಅಥವಾ ಇವರು ಬಸವಣ್ಣ ಅಲ್ಲಮಾದಿಗಳ ಸಮಕಾಲೀನರಾಗಿ ದ್ದರು ಎಂಬುದಕ್ಕೆ ಯಾವುದೇ ಆಧಾರಗಳು ಸಿಕ್ಕುವುದಿಲ್ಲ. ಆದರೆ ಈ ಎರಡು ಮಹಾಕಾವ್ಯಗಳ ನಾಯಕರು ಆ ಮಹಾನ್ ಚಳುವಳಿಯ ನಂತರದ ಕಾಲಘಟ್ಟಗಳಲ್ಲಿ ಇದ್ದವರೆಂಬುದಕ್ಕೆ ಸಾಕಷ್ಟು ಆಧಾರಗಳಿವೆ.[೧೨೭] ಶಾಸನ ಮತ್ತು ಜನಪದ ಸಾಹಿತ್ಯದ ಹಿನ್ನೆಲೆಯಲ್ಲಿ ನೋಡಿದರೆ ಮಾದಪ್ಪನು ಕುಂತೂರು ಮಠಕ್ಕೆ ಬಂದಿದ್ದನೆಂಬುದು ಹೈದರಾಲಿಯ ಶಾಸನ ಹಾಗೂ ಜನಪದ ಸಾಹಿತ್ಯಗಳಿಂದ ತಿಳಿದುಬರುವುದ ಕುಂತೂರು ಮಠದ ಪ್ರಾಚೀನತೆ ಕ್ರಿ.ಶ.೧೫೧೨ ಎಂದು ತಿಳಿದು ಬಂದಿರುವುದರಿಂದ[೧೨೮] ಆತನ ಕಾಲವನ್ನು ೧೬ನೇ ಶತಮಾನವೆಂತಲೂ, ಜನಪದ ಸಾಹಿತ್ಯವೊಂದರ ಪ್ರಕಾರ ''ಹದಿನಾಡು ಗ್ರಾಮಗಳನ್ನಾಳುತ್ತಿದ್ದ ನಂಜರಾಜ ಒಡೆಯರು ತಮ್ಮ ಚತುರಂಗ ಬಲ ಸಮೇತ ಹರದನಹಳ್ಳಿಗೆ ಮೂಗ್ಗೂರು ಮಾರ್ಗವಾಗಿ ಹೋಗುವಾಗ ಸೈನಿಕರಿಗೆ ಬಾಯರಿಕೆಯಾಗಲು ರಾಜನು ಬಂದು ಮಾದೇಶ್ವರರಲ್ಲಿ ಬೇಡಲು ಸೊರೆಬುರುಡೆಯಲ್ಲಿರುವ ನೀರನ್ನು ಎಲ್ಲರಿಗೂ ನೀಡಿ ತೃಪ್ತಿಪಡಿಸಿದರು.[೧೨೯] ಈ ಅಂಶವನ್ನು ನೋಡಿದಾಗ ನಂಜರಾಜರ ಕಾಲ ೧೪೮೨-೧೫೦೪ರ ಅವಧಿಯಾಗಿರುವುದರಿಂದ ಮಾದಪ್ಪನವರ ಕಾಲವನ್ನು ೧೬ನೇ ಶತಮಾನ ಎನ್ನಬಹುದಾಗಿದೆ.

ಮಾದೇಶ್ವರರ ಬಗ್ಗೆ ಏನೇ ಇರಲಿ ಅತನೊಬ್ಬ ಮಾದಿಗ ಜನಾಂಗದ ವ್ಯಕ್ತಿ ಎಂಬುದು ಆಶ್ಚರ್ಯವನ್ನುಂಟು ಮಾಡುವ ಸಂಗತಿ. ಕೆಳಜಾತಿಯವನೊಬ್ಬ ಈ ರೀತಿ ದೈವವಾಗಿ ರೂಪುಗೊಂಡು ಆರಾಧಿಸಲ್ಪಡುತ್ತಿರುವುದು ಈ ರಾಜ್ಯದಲ್ಲಿ ಕಂಡುಬರುತ್ತದೆ. ಮಾದೇಶ್ವರನ ಹೆಸರಿನಿಂದ ಅನೇಕ ಸ್ಥಳಗಳಲ್ಲಿ ಪೂಜೆ ಮಾಡಲಾಗುತ್ತಿದೆ. ಕುಂತೂರು ಪಕ್ಕದಲ್ಲಿ ಪ್ರಭುಸ್ವಾಮಿ ಬೆಟ್ಟದ ಬುಡದಲ್ಲಿ

ಮಾದೇಶ್ವರರು ಮಂಡಿ ಊರಿದ ಸ್ಥಳವಿದೆ. ಬೆಂಗಳೂರು ಜಿಲ್ಲೆಯ ಶ್ರೀ ರೇವಣ್ಣಸಿದ್ದೇಶ್ವರ ಬೆಟ್ಟದ ಸಮೀಪದಲ್ಲಿ ಒಂದು ಮಾದೇಶ್ವರ ಬೆಟ್ಟವಿದೆ. ಮಂಡ್ಯ, ಮೈಸೂರು, ಬೆಂಗಳೂರು, ಸೇಲಂ, ನೀಲಗಿರಿ ಮತ್ತು ಕೊಯಮತ್ತೂರು ಜಿಲ್ಲೆಗಳಲ್ಲಿ ಮಾದೇಶ್ವರರ ದೇವಸ್ಥಾನಗಳಿರುವುದು ತಿಳಿಯುತ್ತದೆ.[೧೩೦] ಅಲ್ಲದೇ ಮಾದೇಶ್ವರ ಸಂಪ್ರದಾಯಕ್ಕೆ ಸೇರಿದ 'ದೇವರ ಗುಡ್ಡ'ರೆಂದು ಕರೆಯಲ್ಪಡುವವರು ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಕಾಣಸಿಗುತ್ತಾರೆ. ಇವರು(ದೇವರ ಗುಡ್ಡರು) ಹೊಲೆಯ, ಮಾದಿಗ, ಪರಿವಾರ ಹೀಗೆ ಎಲ್ಲಾ ಜಾತಿಗಳಲ್ಲೂ ಇರುವರು.[೧೩೧]

ಈ ರೀತಿ ಮಾದಿಗ ಜನಾಂಗಕ್ಕೆ ಸೇರಿದ ಮರುಳಸಿದ್ಧ, ತಿಪ್ಪೇಸ್ವಾಮಿ ಹಾಗೂ ಮಾದಪ್ಪ ಮಾನವರಾಗಿ ಹುಟ್ಟಿ ದೈವತ್ವಕ್ಕೆ ಏರಿ ಪೂಜಿಸಲ್ಪಡುತ್ತಿದ್ದಾರೆ. ಇವರಲ್ಲದೇ ಅದವಾನಿ ತಿಪ್ಪೇಲಕ್ಷಮ್ಮ, ಸಂತರವಿದಾಸ್, ಘಾಸಿರಾಮ್ ಮುಂತಾದವರು ಈ ಜನಾಂಗಕ್ಕೆ ಸೇರಿದ್ದು ಅವರು ಸಹ ಆರಾಧಿಸಲ್ಪಡುತ್ತಿದ್ದಾರೆ.

## ೨.೬ ಸ್ವಾತಂತ್ರ್ಯ ಮತ್ತು ಮೈಸೂರು ಸಂಸ್ಥಾನ ಚಳವಳಿಗಳಲ್ಲಿ ಮಾದಿಗರ ಪಾತ್ರ

ಬ್ರಿಟಿಷರ ದಾಸ್ಯಕ್ಕೆ ಒಳಗಾಗಿ 'ಸ್ವಾತಂತ್ರ್ಯ'ವನ್ನು ಕಳೆದುಕೊಂಡು ಗುಲಾಮಗಿರಿಯಲ್ಲಿ ನರಳುತ್ತಿದ್ದ ಭಾರತ ದೇಶವನ್ನು ವಿಮೋಚನೆಗೊಳಿಸಿ ಸ್ವಾತಂತ್ರ್ಯ ಪಡೆಯಲು ಬ್ರಿಟಿಷರ ವಿರುದ್ಧ ಭಾರತೀಯರು ದೇಶದಾದ್ಯಂತ ನಡೆಸಿದ ಬೃಹತ್ ಆಂದೋಲನವೇ 'ಸ್ವಾತಂತ್ರ್ಯ ಹೋರಾಟ'ವಾಗಿದೆ. ಗುಲಾಮಗಿರಿಗೆ ಒಳಗಾಗಿರುವ ಯಾವುದೇ ದೇಶದಲ್ಲಿ ಈ ಬಗೆಯ ಹೋರಾಟ ಅನಿವಾರ್ಯ. ಭಾರತದಂತಹ ದೇಶದಲ್ಲಿ ಪರಕೀಯರ ಪ್ರವೇಶವು ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೂ ನಡೆದಿರುವುದು ಚಾರಿತ್ರಿಕ ದಾಖಲೆಗಳಿಂದ ಖಚಿತಗೊಳ್ಳುತ್ತದೆ. ಆದರೆ ಪ್ರಬಲವಾಗಿ ಹಾಗೂ ವಿಸ್ತಾರವಾಗಿ ದೇಶದಾದ್ಯಂತ ತಮ್ಮ ಪ್ರಭುತ್ವವನ್ನು ಸ್ಥಾಪನೆ ಮಾಡಿಕೊಂಡು ಆಳ್ವಿಕೆ ನಡೆಸಿದವರೆಂದರೆ ಬ್ರಿಟಿಷರು ಮಾತ್ರ. ಸುಮಾರು ಮೂರು ನೂರ ಐವತ್ತು ವರ್ಷಗಳ ಕಾಲ ಈ ದೇಶದಲ್ಲಿ ನೆಲೆಯೂರಿದ್ದರು. ಇದರಿಂದಾಗಿ ಬ್ರಿಟಿಷರ ಪ್ರಭುತ್ವದ ಬೇರುಗಳು ಈ ನೆಲದಲ್ಲಿ ಪ್ರಬಲವಾಗಿ ಬೇರೂರಿದ್ದವು. ಇಂತಹ ಪ್ರಬಲವಾದ ಪ್ರಭುತ್ವದ ವಿರುದ್ಧ ಹೋರಾಟ ಮಾಡಲು ಅಣಿಯಾಗುವುದು ಸುಲಭ ಕೆಲಸವಾಗಿರಲಿಲ್ಲ. ಅದರಲ್ಲೂ ವಿವಿಧ ಧರ್ಮ, ಭಾಷೆ, ಜನಾಂಗಗಳಿಗೆ ಸೇರಿರುವ ಜನ ಸಮುದಾಯಗಳ ನಡುವೆ ಏಕತೆಯನ್ನು ತಂದು ಬ್ರಿಟಿಷರ ವಿರುದ್ಧ ಹೋರಾಟ ಮಾಡಲು ಅಸಾಧ್ಯ. ಅದನ್ನು ಸಾಧ್ಯಗೊಳಿಸಿದ್ದು ಈ ಸ್ವಾತಂತ್ರ್ಯ ಹೋರಾಟ. ಈ ಆಂದೋಲನದಲ್ಲಿ ವಿವಿಧ ಧರ್ಮ, ಭಾಷೆ, ಜನಾಂಗ ಹಾಗೂ ಲಿಂಗಬೇಧ ತಾರತಮ್ಯವಿಲ್ಲದೆ ಭಾರತವನ್ನು ಸ್ವಾತಂತ್ರ್ಯಗೊಳಿಸಲು ಏಕತೆಯಿಂದ ಹೋರಾಡಿರು ವುದು ಗಮನಾರ್ಹ. ಹಿಂದೆ ಪರಕೀಯ ವಿರುದ್ಧ ಹೋರಾಟ ಮಾಡಿರುವದು. ಬ್ರಿಟಿಷರ ವಿರುದ್ಧ ಮಾಡಿದಂತಹ ಪ್ರತಿಭಟನೆಗಳು ನಡೆದಿರುವುದು ಚರಿತ್ರೆಯಲ್ಲಿ ಕಂಡು ಬಂದರೂ ಕೇವಲ ವೈಯಕ್ತಿಕ

ಮತ್ತು ಪ್ರಾದೇಶಿಕ ನೆಲೆಯಲ್ಲಿ ಮಾತ್ರವೇ. ಈ ಕಾರಣದಿಂದಾಗಿ ಅಂತಹ ಪ್ರತಿಭಟನೆ, ಹೋರಾಟಗಳನ್ನು ಹತ್ತಿಕ್ಕುವಲ್ಲಿ ಬ್ರಿಟಿಷರು ಯಶಸ್ವಿಯಾದರು. ಆದರೆ ಸ್ವಾತಂತ್ರ್ಯ ಹೋರಾಟ ರಾಷ್ಟ್ರೀಯ ಏಕತೆಯ ದೃಷ್ಟಿಯಿಂದ ಸಾಮೂಹಿಕ ನೆಲೆಯಲ್ಲಿ ದೇಶದಾದ್ಯಂತ ನಡೆಸಿದ ಹೋರಾಟವಾಗಿದೆ. ಈ ಹಿನ್ನೆಲೆಯಲ್ಲಿ ಭಾರತದ ಚರಿತ್ರೆಯಲ್ಲಿ 'ಸ್ವಾತಂತ್ರ್ಯ ಹೋರಾಟ' ಒಂದು ಪ್ರಮುಖ ಸ್ಥಾನ ಪಡೆದುಕೊಂಡಿದೆ.

ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕ ರಾಜ್ಯದ ಜನತೆಯ ಪಾತ್ರವು ಸಹ ಪ್ರಮುಖವಾದದ್ದು. ಬ್ರಿಟಿಷರ ದಾಸ್ಯಕ್ಕೆ ಒಂದು ಕಡೆ ಒಳಗಾಗಿದ್ದರೇ ಮತ್ತೊಂದು ಕಡೆ ಇಲ್ಲಿ ದೇಶಿಯ ರಾಜರ ಪ್ರಭುತ್ವ ದಾಸ್ಯಕ್ಕೂ ಒಳಗಾಗಿದ್ದರು. ಹೀಗೆ ಕರ್ನಾಟಕದ ಜನತೆ ಎರಡು ಬಗೆಯ ಗುಲಾಮಗಿರಿಯಲ್ಲಿ ತೊಳಲಾಡುತ್ತಿದ್ದರು. ಮೊದಲು ದೇಶವ್ಯಾಪ್ತಿ ಹರಡಿಕೊಂಡಿರುವ ಬ್ರಿಟಿಷರ ಪ್ರಭುತ್ವದ ವಿರುದ್ಧ ಹೋರಾಟಕ್ಕೆ ತೊಡಗಿಕೊಂಡರೂ ಆನಂತರದಲ್ಲಿ ಅದರ ಜೊತೆಯಲ್ಲಿಯೇ ದೇಶಿಯ ಪ್ರಭುತ್ವದ ವಿರುದ್ಧ 'ಜವಬ್ದಾರಿ ಸರ್ಕಾರ ರಚನೆ'ಗಾಗಿ ಹೋರಾಡಿದರು. ಈ ಬಗೆಯ ಚಾರಿತ್ರಿಕ ಮಹತ್ವ ಪಡೆದಿರುವ ಹೋರಾಟಗಳಲ್ಲಿ ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದಿರುವ ಸಮಾಜದ ಮೇಲು ಜಾತಿಗಳ ತಿರಸ್ಕಾರಕ್ಕೆ ಗುರಿಯಾಗಿದ್ದ ಕೆಳಜಾತಿಗಳು ಅಥವಾ ಶೋಷಿತ ಜಾತಿಗಳು ಕಂಡುಬರುತ್ತಿರುವುದು ಗಮನಾರ್ಹ. ಪುರೋಹಿತಶಾಹಿ, ರಾಜಶಾಹಿ ಹಾಗೂ ಜಾತಿಪದ್ಧತಿ ವ್ಯವಸ್ಥೆಗಳಿಂದಾಗಿ ಕೆಳಜಾತಿಗಳು ಮೇಲುಜಾತಿಗಳಿಂದ ವಿವಿಧ ಬಗೆಯ ಶೋಷಣೆಗೆ ಒಳಗಾಗಿ ತಮ್ಮ ಮೂಲಭೂತ ಹಕ್ಕುಗಳೆಲ್ಲವನ್ನು ಕಳೆದುಕೊಂಡು ಗುಲಾಮರಂತೆ ಜೀವನ ಮಾಡುತ್ತಿದ್ದರು. ಈ ರೀತಿ ನಿಕೃಷ್ಟ ಬದುಕನ್ನು ನಡೆಸುತ್ತಿದ್ದ ಈ ಜಾತಿಗಳು, ತಮ್ಮ ವೈಯಕ್ತಿಕ ಸ್ವಾತಂತ್ರ್ಯಕ್ಕಿಂತಲೂ ದೇಶವನ್ನು ಬ್ರಿಟಿಷರಿಂದ ವಿಮೋಚನೆ ಗೊಳಿಸಿ ಸ್ವಾತಂತ್ರ್ಯಗೊಳಿಸಲು ನಡೆಸಿದ ಹೋರಾಟಗಳಲ್ಲಿ ತೊಡಗಿಕೊಂಡಿರುವುದು ಚಾರಿತ್ರಿಕ ದಾಖಲೆ. ಈ ಹಿನ್ನೆಲೆಯಲ್ಲಿ ಕೆಳಜಾತಿಗಳಲ್ಲಿ ಒಂದಾಗ ಮಾದಿಗ ಜನಾಂಗವು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ 'ಸ್ವಾತಂತ್ರ್ಯ ಚಳವಳಿ' ಹಾಗೂ 'ಜವಬ್ದಾರಿ ಸರ್ಕಾರ ರಚನೆ'ಗಾಗಿ ನಡೆಸಿದ ಹೋರಾಟದಲ್ಲಿ ತೊಡಗಿಕೊಂಡಿರುವುದನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ನಡೆದ ಸ್ವಾತಂತ್ರ್ಯ ಹೋರಾಟಗಳು :** ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಆರಂಭಗೊಂಡ 'ಸತ್ಯಾಗ್ರಹ ಶಿಬಿರ'ಗಳು ಚಳವಳಿ ಯಶಸ್ವಿಗೊಳ್ಳುವಲ್ಲಿ ಪ್ರಮುಖ ಪಾತ್ರವಹಿಸಿವೆ. ಇವು ಒಂದು ರೀತಿಯಲ್ಲಿ ಸತ್ಯಾಗ್ರಹಿಗಳು ಅಥವಾ ಹೋರಾಟ ಗಾರರರನ್ನು ತಯಾರು ಮಾಡುವ ಕಾರ್ಖಾನೆಗಳಾಗಿದ್ದವು. ಅನೇಕ ವಿಚಾರಗಳನ್ನು ಸತ್ಯಾಗ್ರಹಿಗಳಿಗೆ ತಿಳಿಸಿಕೊಟ್ಟು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಪ್ರೇರೆಪಿಸುವುದರ ಜೊತೆಗೆ ಇವು ಕಾರ್ಯಕ್ರಮಗಳನ್ನು ರೂಪಿಸುವ ಮುಖ್ಯಕೇಂದ್ರಗಳು ಕೂಡ. ಇಂತಹ ಶಿಬಿರಗಳು ರಾಷ್ಟ್ರದಾದ್ಯಂತ ಅನೇಕ ಸ್ಥಳಗಳಲ್ಲಿ ತೆರೆಯಲಾಗಿತ್ತು, ಅವುಗಳಲ್ಲಿ ಕೆಲವು ಗ್ರಾಮೀಣ ಪ್ರದೇಶಗಳಿಗೂ ವಿಸ್ತರಿಸಿಕೊಂಡಿದ್ದವು. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಸತ್ಯಾಗ್ರಹ ಶಿಬಿರಗಳು ಇಲ್ಲದಿಲ್ಲ. ಚಿತ್ರದುರ್ಗ ಜಿಲ್ಲೆಯಲ್ಲಿ

ಹಿರಿಯೂರು ತಾಲ್ಲೂಕಿನ ಕಸ್ತೂರಿರಂಗಪ್ಪನಹಳ್ಳಿ, ಮರಡಿಹಳ್ಳಿ, ಗೋರ್ಲಡಕು, ಮದಕರಿಪುರ[೧೩೨] ಮುಂತಾದ ಕಡೆ ಈ ಶಿಬಿರಗಳು ಕೆಲಸ ಮಾಡುತ್ತಿದ್ದವು. ಗ್ರಾಮೀಣ ಜನರು ಸಹ ಈ ಹೋರಾಟದಲ್ಲಿ ಪಾಲ್ಗೊಳ್ಳಲು ಇವು ಪ್ರೇರಣೆ ನೀಡಿವೆ. ಬಳ್ಳಾರಿ ಜಿಲ್ಲೆಯಲ್ಲಿ ಸತ್ಯಾಗ್ರಹ ಶಿಬಿರಗಳು ಇಲ್ಲ ಎನ್ನಲಾಗದು. ಈ ರೀತಿ ಪರಕೀಯ ಪ್ರಭುತ್ವದ ವಿರುದ್ಧ ಹೋರಾಟಕ್ಕೆ ತಯಾರು ಮಾಡುವ ಸತ್ಯಾಗ್ರಹ ಶಿಬಿರಗಳು ಮತ್ತು ಹಲವು ನಾಯಕರ ಪ್ರಭಾವ ಎಲ್ಲಾ ಜಾತಿಗಳ ಜನರ ಮೇಲೆ ಆಗಿದ್ದುದರಿಂದ ಎಲ್ಲ ವರ್ಗದ ಜನರು ಭಾಗವಹಿಸುವಂತಾಯಿತು. "೧೯೨೪ರ ಬೆಳಗಾವಿ ಅಧಿವೇಶನ ಕಾಲಕ್ಕೆ ಅನೇಕ ಜಾತಿವರ್ಗಗಳು ಕಾಂಗ್ರೆಸ್‌ನ ಹತ್ತಿರ ಬಂದವು."[೧೩೩] ಹೀಗೆ ಪ್ರತಿಯೊಂದು ವರ್ಗದ ಜನರು ಈ ಚಳವಳಿಯಲ್ಲಿ ಭಾಗವಹಿಸತೊಡಗಿದರು. ಸಮಾಜದ ಎಲ್ಲಾ ವರ್ಗಗಳನ್ನು ೧೯೪೦ರ ಹೊತ್ತಿಗೆ ಚಳುವಳಿಯು ತನ್ನ ತೆಕ್ಕೆಗೆ ತೆಗೆದುಕೊಂಡಿತು. ಸಮಾಜದಲ್ಲಿದ್ದ ಕೆಳವರ್ಗ, ಕೆಳಜಾತಿ, ಮಹಿಳೆ, ಗ್ರಾಮೀಣ ರೈತರು, ಕಾರ್ಮಿಕರು ಮುಂತಾದವರು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳ ತೊಡಗಿದ್ದರು.[೧೩೪] ಈ ಹೋರಾಟದಲ್ಲಿ ಕೆಳವರ್ಗದ ಮಾದಿಗ ಜನಾಂಗದ ಅನೇಕರು ಅಲ್ಲದೆ "೧೯೩೦ರ ಕಾಲಘಟ್ಟದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಹರಿಜನರು ಕೂಡ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸತೊಡಗಿದರು."[೧೩೫] ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಮಾದಿಗ ಜನಾಂಗದ ವ್ಯಕ್ತಿಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ. ಅವರು ಭಾಗವಹಿಸಿದ ಘಟನೆಗಳ ವಿವರಗಳನ್ನು ತಿಳಿಸಲೆತ್ನಿಸಿದೆ. ಸ್ವಾತಂತ್ರ್ಯ ಚಳವಳಿಯ ಜೊತೆಯಲ್ಲಿ ಮೈಸೂರು ಸಂಸ್ಥಾನ ಚಳವಳಿಯು ನಡೆಯುತ್ತಿದ್ದುದರಿಂದ ಇವೆರಡರಲ್ಲಿ ಭಾಗವಹಿಸಿರುವ ಮಾದಿಗರನ್ನು ಪ್ರತ್ಯೇಕವಾಗಿ ಗುರುತಿಸಲು ಪ್ರಯತ್ನಿಸಿಲ್ಲ. ಸ್ವಾತಂತ್ರ್ಯ ಚಳವಳಿಯ ಕಾಲಕ್ಕೆ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿದ್ದ ಎಲ್ಲಾ ತಾಲ್ಲೂಕುಗಳನ್ನು ಗಮನಿಸಲಾಗಿದೆ.

**ಎ.ಕೆ.ಯರ‍್ರಪ್ಪ**

ಮಾದಿಗ ಜನಾಂಗದವರಾದ ಇವರು ಚಿತ್ರದುರ್ಗ ತಾಲ್ಲೂಕಿನ ತುರುವನೂರು ಗ್ರಾಮದವರು. ಇವರು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿರುವುದಕ್ಕೆ ಅನೇಕ ದಾಖಲೆಗಳಿದ್ದು ಇಂದಿಗೂ ರಾಜ್ಯ ಸರ್ಕಾರ ಸ್ವಾತಂತ್ರ್ಯ ಹೋರಾಟಗಾರರಿಗೆ ನೀಡುವ ಪಿಂಚಣಿ ಪಡೆಯುತ್ತಿದ್ದಾರೆ. ಹೋರಾಟದಲ್ಲಿ ಭಾಗವಹಿಸಿದಾಗ ಚಿಕ್ಕ ವಯಸ್ಸಿನವರಾಗಿದ್ದು ಜೈಲುವಾಸ ಅನುಭವಿಸಿದ್ದಾರೆ. ಇವರು ಭಾಗವಹಿಸಿರುವ ಘಟನೆ ಮತ್ತು ಈ ಜನಾಂಗದ ಕೆಲವರ ಭಾಗವಹಿಸುವಿಕೆ ಯನ್ನು ಸಹ ಅವರು ಖಚಿತಪಡಿಸುತ್ತಾರೆ.

ಚಿತ್ರದುರ್ಗ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟಗಳಲ್ಲಿ ತುರುವನೂರು ಗ್ರಾಮದಲ್ಲಿ ನಡೆದ 'ಅರಣ್ಯ ಸತ್ಯಾಗ್ರಹ' ಅತ್ಯಂತ ಮಹತ್ವದ್ದು. ಈ ಹೋರಾಟ ಅನೇಕರನ್ನು ಭಾಗವಹಿಸಲು ಪ್ರೇರಣೆ

ನೀಡಿದೆ. ಚಿಕ್ಕ ವಯಸ್ಸಿನಲ್ಲಿಯೇ ಈ ಹೋರಾಟವನ್ನು ಕಣ್ಣಾರೆ ಕಂಡಿದ್ದ ಎ.ಕೆ.ಯರ‍್ರಪ್ಪ ತನ್ನಲ್ಲಿ ಹೊರಟದ ಕೆಚ್ಚನ್ನು ಬೆಳಸಿಕೊಂಡಿದ್ದರು. ಚಿತ್ರದುರ್ಗದಲ್ಲಿ ಸ್ವಾತಂತ್ರ್ಯ ಹೋರಾಟದ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ನಿರ್ಧರಿಸಿದ ತುರುವನೂರು ಗ್ರಾಮದ ಮುಖಂಡರು ಮಾದಿಗರ ಕೇರಿಗೂ ಬರುತ್ತಾರೆ. ಅಲ್ಲಿ ಮಾದಿಗರನ್ನೆಲ್ಲಾ ಒಂದು ಕಡೆ ಸೇರಿಸಿ ಹೋರಾಟದಲ್ಲಿ ಪಾಲ್ಗೊಳ್ಳಲು ನಿಮ್ಮಲ್ಲಿ ಯಾರು ಬರುತ್ತಿರಾ ಎಂದು ಕೇಳಿದಾಗ ಈ ಅವಕಾಶಕ್ಕಾಗಿಯೇ ಕಾತರಿಸುತ್ತಿದ್ದ ಎ.ಕೆ.ಯರ‍್ರಪ್ಪ ಮತ್ತು ತಿಪ್ಪಯ್ಯ ಎಂಬುವರು ನಾವು ಬರುತ್ತೇವೆಂದು ಕೈ ಎತ್ತುತ್ತಾರೆ. ಅವರನ್ನು ಕರೆದುಕೊಂಡು ಹೊರಟ ಮುಖಂಡರ ಮೆರವಣಿಗೆ ಆ ಗ್ರಾಮದ ಆಂಜನೇಯ ಗುಡಿ ಹತ್ತಿರ ಬರುವ ವೇಳೆಗೆ ಹೆದರಿದಂತಾದ ತಿಪ್ಪಯ್ಯ ಹಿಂದೆ ಸರಿದರೂ ಯರ‍್ರಪ್ಪ ಮಾತ್ರ ದೃತಿಗೆಡಲಿಲ್ಲ. ಈ ರೀತಿ ಚಿತ್ರದುರ್ಗದಲ್ಲಿ ಹೋರಾಟ ಚಟುವಟಿಕೆಗಳಲ್ಲಿ ಭಾಗವಹಿಸಲು ಹೊರಟ ಈ ಹೋರಾಟಗಾರರಿಗೆ ಗ್ರಾಮದವರು ಆರತಿ ಎತ್ತಿ ಹೂವಿನ ಹಾರ ಹಾಕಿ ಮೆರವಣಿಗೆ ಮಾಡಿ ಕಳುಹಿಸಿಕೊಟ್ಟರು. ಅವರು ಬಸ್ ಹತ್ತಿಕೊಂಡು ರಾತ್ರಿವೇಳೆಗೆ ಚಿತ್ರದುರ್ಗ ತಲುಪಿ ಹೋಟೆಲ್‌ನಲ್ಲಿ ಊಟ ಮಾಡಿ ಕಾಂಗ್ರೆಸ್ ಕಛೇರಿಯಲ್ಲಿ ಮಲಗಿಕೊಂಡರು. ಆ ರಾತ್ರಿ ಬೆಳಿಗ್ಗೆ ಧ್ವಜ ಹಾರಿಸುವ ಕಾರ್ಯಕ್ರಮವಿತ್ತು. ಮಾರನೆ ದಿನ ಮುಂಜಾನೆ ಬಾವುಟ ಹಾರಿಸಲು ತಂಡಗಳು ಸಿದ್ಧಗೊಂಡವು. ಈ ರೀತಿ ಸಿದ್ಧಗೊಂಡ ಮೂವರನ್ನೊಳಗೊಂಡ ಮೊದಲನೆ ತಂಡದಲ್ಲಿ ಯರ‍್ರಪ್ಪ ಒಬ್ಬರಾಗಿದ್ದರು. ಇವರು ಧ್ವಜ ಹಾರಿಸಲು ಬರುತ್ತಿದ್ದಂತೆಯೇ ಈ ವಿಷಯ ತಿಳಿದ ಪೋಲೀಸರು ತಮ್ಮ ವ್ಯಾನ್‌ನೊಂದಿಗೆ ಇವರನ್ನು ಬಂಧಿಸಲು ಸಾಲುಗಟ್ಟಿ ನಿಂತಿದ್ದರು. ಧ್ವಜ ಹಾರಿಸಲು ಮೆಟ್ಟಿಲೇರುತ್ತಿದ್ದಂತೆ ಯರ‍್ರಪ್ಪರನ್ನೊಳಗೊಂಡ (ಗಾರೆಮನೆ ರಾಮರೆಡ್ಡಿ ಮತ್ತು ಬುಡ್ಡಪ್ಪ) ಮೂವರನ್ನು ಬಂಧಿಸಿದರು. ಇದೇ ರೀತಿ ಬಂಧನಕ್ಕೊಳಗಾದ ಎಲ್ಲರನ್ನು ಕಸಬಾ ಠಾಣೆಗೆ ಕರೆದುಕೊಂಡು ಹೋಗಿ ಆನಂತರ ಬೆಂಗಳೂರು ಸೆರಮನೆಗೆ ಹಾಕಿದರು. ಸ್ವಾತಂತ್ರ್ಯ ನಂತರದಲ್ಲಿ ಅವರನ್ನು ಕೈ ಬಿಡಲಾಯಿತಂತೆ. ಈ ರೀತಿಯಲ್ಲಿ ಎ.ಕೆ.ಯರ‍್ರಪ್ಪನವರು ಹೋರಾಟದಲ್ಲಿ ಪಾಲ್ಗೊಂಡು ಜೈಲು ಶಿಕ್ಷೆ ಅನುಭವಿಸಿ ಸ್ವಾತಂತ್ರ್ಯ ಹೋರಾಟಗಾರನೆಂದು ಖ್ಯಾತಿ ಪಡೆದರು. ಮಾದಿಗರು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಏಕೆ ಭಾಗವಹಿಸಲಿಲ್ಲ ಎಂದು ಕೇಳಿದ್ದಕ್ಕೆ ಅವರು ಕೊಟ್ಟ ಉತ್ತರ 'ಭಯ' ಎಂಬುದಾಗಿತ್ತು. ಸಾಮಾಜಿಕ ಕೆಳಸ್ತರದಲ್ಲಿರುವ ಜನರು ಪ್ರಭುತ್ವದ ವಿರುದ್ಧ ಹೋರಾಟಕ್ಕೆ ತೊಡಗಲು ಹಿಂದೇಟು ಹಾಕಿದ ಪ್ರಮುಖ ಕಾರಣ ಭಯವೆಂದರೆ ಅದು ಉತ್ಪ್ರೇಕ್ಷೆಯಾಗ ಲಾರದು. ತಮ್ಮ ಗ್ರಾಮದಲ್ಲಿಯೇ ಮಾದಿಗ ಜನಾಂಗದ ಪೆನ್ನಪ್ಪ ಮತ್ತು ತಿಪ್ಪೇಸ್ವಾಮಿ ಎಂಬುವರು ಸಹ ಸ್ವಾತಂತ್ರ ಹೋರಾಟದ ಚಟುವಟಿಕೆಗಳಲ್ಲಿ ಭಾಗವಹಿಸಿರುವುದನ್ನು ಖಚಿತ ಖಚಿತಪಡಿಸಿದರು.

**ಟಿ.ಮಾರಪ್ಪ**

ಚಿತ್ರದುರ್ಗ ತಾಲ್ಲೂಕಿನ ಮಠದ ಕುರುಬರ ಹಟ್ಟಿಯ ಟಿ.ಮಾರಪ್ಪ ಸಹ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಒಬ್ಬರು. ಇವರು ಸ್ವಾತಂತ್ರ್ಯ ಹೋರಾಟದಲ್ಲಿ ಸ್ವಯಂ ಪ್ರೇರಿತರಾಗಿ

ಭಾಗವಹಿಸಿ ಶಿಕ್ಷೆಯನ್ನು ಅನುಭವಿಸಿದವರು. ಚಿತ್ರದುರ್ಗ ಜಿಲ್ಲೆಯಲ್ಲೆ ಪ್ರಸಿದ್ಧವಾದ ತುರುವನೂರು ಅರಣ್ಯ ಸತ್ಯಾಗ್ರಹದಲ್ಲಿ ಬಳ್ಳಾರಿ ಸಿದ್ಧಮ್ಮ ಅವರೊಂದಿಗೆ ಭಾಗವಿಸಿದ್ದಾರೆ. ಆನಂತರ ಚಿತ್ರದುರ್ಗದಲ್ಲಿ ಹೆಂಡವನ್ನು ಹೊತ್ತು ತರುತ್ತಿದ್ದ ಲಾರಿಗಳನ್ನು ನಿಲ್ಲಿಸಿ ಅದರಲ್ಲಿರುವ ಹೆಂಡದ ಚೀಲಗಳನ್ನು ಕೊಯ್ದು ಹಾಕುವಲ್ಲಿ ಇವರು ಪ್ರಮುಖರಾಗಿದ್ದಾರೆ. ಆಗ ಅಲ್ಲಿಗೆ ಬಂದ ಪೋಲಿಸರ ಕೈಗೆ ಸಿಗದೇ ಓಡಿ ಹೋಗಿದ್ದರು.

ಸ್ವಾತಂತ್ರ್ಯ ಹೋರಾಟದ ಪ್ರಮುಖ ಘಟ್ಟವಾದ ಕ್ವಿಟ್ ಇಂಡಿಯ ಚಳವಳಿ ಕಾಲಕ್ಕೆ ನಡೆದ ಚಟುವಟಿಕೆಗಳಲ್ಲಿ ಇವರು ಭಾಗವಹಿಸಿದ್ದಾರೆ. ಆ ಕಾಲಕ್ಕೆ ದಾವಣಗೆರೆಯಲ್ಲಿ ನಡೆಯುತ್ತಿದ್ದ ಹೋರಾಟಗಳಲ್ಲಿ ಭಾಗವಹಿಸಲು ಟಿ.ಮಾರಪ್ಪ ಮತ್ತು ಆತನ ಚಿಕ್ಕಪ್ಪನ ಮಗನಾದ ದುರ್ಗಪ್ಪ ಅನೇಕರೊಂದಿಗೆ ದಾವಣಗೆರೆಗೆ ಹೋಗಿ ಅಲ್ಲಿ ರೈಲ್ವೆ ಕಂಬಿ ಕಿತ್ತು ಹಾಕುವ ಕೃತ್ಯಗಳಲ್ಲಿ ಭಾಗವಹಿಸಿದರು. ಆಗ ಅಲ್ಲಿಗೆ ಪೋಲಿಸ್ ಬಂದು ಅವರನ್ನು ಬಂಧಿಸಿತು. ಇವರೊಂದಿಗೆ ಹರಿಹರದ ಚಂದ್ರಶೇಖರಯ್ಯ ಕೂಡ ಇದ್ದರು. ಆದರೆ ಬಂದ ಪೋಲಿಸ್ ತಕ್ಷಣ ದುರ್ಗಪ್ಪ ಓಡಿ ಹೋಗಿದ್ದರಿಂದ ಆತನನ್ನು ಬಂಧಿಸಲಾಗಲಿಲ್ಲ. ಹೀಗೆ ಬಂಧಿಸಿದ ಟಿ.ಮಾರಣ್ಣ ಮತ್ತು ಇತರರಿಗೆ ಶಿಕ್ಷೆ ವಿಧಿಸಲಾಗಿ ಆರು ತಿಂಗಳುಗಳ ಕಾಲ ಬಳ್ಳಾರಿ ಜೈಲಿನಲ್ಲಿರಬೇಕಾಯಿತು. ಇವರು ಇಂದು ಪಿಂಚಣಿ ಪಡೆಯುತ್ತಿ ರುವವರು.

**ಕಾಂಗ್ರೆಸ್ ರಂಗಪ್ಪ**

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿರುವ ಮತ್ತೊಬ್ಬರೆಂದರೆ ಕಾಂಗ್ರೆಸ್ ರಂಗಪ್ಪನವರು. ಇವರು ಹೊಳಲ್ಕೆರೆ ತಾಲ್ಲೂಕಿನ ಚಿಕ್ಕಜಾಜೂರು ಗ್ರಾಮದವರು. ಕಾಂಗ್ರೆಸ್ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದರಿಂದಾಗಿ ಇವರಿಗೆ ಕಾಂಗ್ರೆಸ್ ರಂಗಪ್ಪರೆಂದೇ ಜನ ಗುರುತಿಸುತ್ತಾರೆ. ರಾಜ್ಯ ಸರ್ಕಾರದಿಂದ ಪಿಂಚಣಿ ಪಡೆಯುತ್ತಿದ್ದಾರೆ.

ಕ್ವಿಟ್ ಇಂಡಿಯಾ ಚಳವಳಿಗೆ ಕರೆಕೊಟ್ಟಾಗ ಗಾಂಧೀಜಿಯವರನ್ನು ಆಗ ಬಂಧಿಸಲಾಗಿತ್ತು. ಆ ಸಂದರ್ಭದಲ್ಲಿ ಮಾಯಕೊಂಡದಿಂದ ಅನೇಕರು ಧ್ವಜ ಹಿಡಿದುಕೊಂಡ(ವಿವಿಧ ಚಟುವಟಿಕೆಗಳಲ್ಲಿ ತೊಡಗಲು) ಗುಂಪೊಂದು ಬಂದಾಗ ಇವರು ಸಹ ಬಾವುಟವನ್ನು ಹಿಡಿದುಕೊಂಡು ಅವರೊಂದಿಗೆ ನಡೆದರು. ಮೊದಲು ಅಲ್ಲಿಯೇ ಇದ್ದ ಪೋಲಿಸ್ ಠಾಣೆಗೆ ನುಗ್ಗಿ ಧ್ವಜ ಹಾರಿಸಿದರು. ಅನಂತರ ರೈಲ್ವೆ ಸ್ಟೇಷನ್‌ಗೆ ನುಗ್ಗಿ ಅಲ್ಲಿಯೂ ಧ್ವಜ ಹಾರಿಸಿದರು. ಹಾರೆ ಮತ್ತು ಕಬ್ಬಿಣದ ಇತರೆ ಸಲಕರಣೆಗಳನ್ನು ತೆಗೆದುಕೊಂಡು ಹೋಗಿ ರೈಲ್ವೆ ಹಳಿಗಳನ್ನು ಕಿತ್ತು ಹಾಕಿದರು. ರೈಲ್ವೆ ಸ್ಟೇಷನ್ ಹತ್ತಿರವೇ ಇದ್ದ ಮರದ ಪೆಟ್ಟಿಗೆಗೆ ಬೆಂಕಿಯನ್ನು ಹಚ್ಚಲಾಯಿತು. ಈ ಎಲ್ಲಾ ಕೃತ್ಯಗಳನ್ನು ಮಾಡುವಾಗ ಗಮನಿಸಿದ್ದ ಒಬ್ಬ ಪೊಲೀಸ್ ಮಾಹಿತಿಯಂತೆ ಅನೇಕರನ್ನು ಬಂಧಿಸಲಾಯಿತು. ಆ ಬಂಧಿತ ಗುಂಪಿನಲ್ಲಿ ರಂಗಪ್ಪನವರು ಒಬ್ಬರು. ದಾವಣಗೆರೆಯಲ್ಲಿ ವಿಚಾರಣೆ ನಡೆದು ಶಿಕ್ಷೆ

ವಿಧಿಸಲಾಯಿತು. ಈ ಶಿಕ್ಷೆಯನ್ನು ಅನುಭವಿಸಿದ ರಂಗಪ್ಪನವರು ಇಂದು ತನ್ನ ಮಡದಿಯೊಂದಿಗೆ ಇಂದು ಚಿಕ್ಕಜಾಜೂರಿನ ಗ್ರಾಮದಲ್ಲಿ ಪುಟ್ಟ ಗುಡಿಸಲಿನೊಂದರಲ್ಲಿ ಪಿಂಚಣಿಯಲ್ಲಿಯೇ ಜೀವನ ಸಾಗಿಸುತ್ತಿದ್ದಾರೆ. ಇವರನ್ನು ಮಾದಿಗ ಜನಾಂಗದ ಇತರರು ಸ್ವಾತಂತ್ರ್ಯ ಹೋರಾಟದಲ್ಲಿ ಎಷ್ಟು ಜನರು ಭಾಗವಹಿಸಿದ್ದರೆಂದು ಕೇಳಿದ್ದಕ್ಕೆ ಅವರು ಸುತ್ತಮುತ್ತಲಿನ ಗ್ರಾಮದ ಅನೇಕರ ಹೆಸರನ್ನು ತಿಳಿಸಿದರು. ಎಮ್ಮಿಗನೂರು ಅಡಿವಪ್ಪ, ಮತಿಘಟ್ಟದ ದೊಡ್ಡತಿಮ್ಮಪ್ಪ, ಲಕ್ಕಪ್ಪ, ಕಲ್ಲಪ್ಪ, ಲಕ್ಕಪ್ಪ, ಕುರನೂರು ಕಟ್ಟೆರಂಗಪ್ಪ, ಮಾಳೇನಹಳ್ಳಿ ಹಳ್ಳಪ್ಪ, ಬುಸೇನಹಳ್ಳಿ ರಂಗಪ್ಪ, ದೊಗ್ಗನಾಳ್ ಕೆಂಚಪ್ಪ, ಬಡಗಿ ತಿಮ್ಮಪ್ಪ, ರಂಗಾಪುರದಲ್ಲಿ ಓದೊರಂಗಪ್ಪ ಎಂಬುವರು ಸ್ವಾತಂತ್ರ್ಯ ಚಳವಳಿಯ ವಿವಿಧ ಚಟುವಟಿಕೆಗಳಲ್ಲಿ ಭಾಗವಹಿಸಿದ್ದರೆಂದು ತಿಳಿಸಿದರು.

**ಹನುಮಂತಯ್ಯ**

ಸ್ವಾತಂತ್ರ್ಯ ಹೋರಾಟದ ವಿವಿಧ ಚಟುವಟಿಕೆಗಳಲ್ಲಿ ಭಾಗವಹಿಸಿ ಶಿಕ್ಷೆ ಅನುಭವಿಸಿದವರಲ್ಲಿ ಹನುಮಂತಪ್ಪನವರು ಒಬ್ಬರು. ಇವರು ಹೊಳಲ್ಕೆರೆ ತಾಲ್ಲೂಕಿನ ದೊಗ್ಗನಾಳ್ ಗ್ರಾಮದವರು. ರಾಜ್ಯ ಮತ್ತು ಕೇಂದ್ರ ಸರ್ಕಾರಗಳೆರಡರಿಂದಲೂ ಪಿಂಚಣಿ ಪಡೆಯುತ್ತಿದ್ದಾರೆ.

ಸ್ವಾತಂತ್ರ್ಯ ಹೋರಾಟದ ಒಂದು ಪ್ರಮುಖ ಭಾಗವೇ ಆಗಿದ್ದ ಅರಣ್ಯ ಸತ್ಯಾಗ್ರಹ ಕೈಗೊಳ್ಳಲು ಈ ಗ್ರಾಮದ ಮುಖಂಡರು ನಿರ್ಧರಿಸಿದಾಗ ಕೊಟ್ರೆ ನಂಜಪ್ಪನವರ ಪ್ರೇರಣೆಯಿಂದ ಹನುಮಂತಪ್ಪನವರು ಸಹ ಈ ಹೋರಾಟದಲ್ಲಿ ತೊಡಗಿಕೊಂಡರು. ಹನ್ನೆರಡು ಜನರ ತಂಡವೊಂದು ಈಚಲು ಮರಗಳನ್ನು ಕಡಿಯುತ್ತಿದ್ದಂತೆ ಇವರೆಲ್ಲರನ್ನೂ ಬಂಧಿಸಿ ದಾವಣಗೆರೆಗೆ ತರಲಾಯಿತು. ಅಲ್ಲಿ ವಿಚಾರಣೆ ನಡೆದು ಶಿಕ್ಷೆ ವಿಧಿಸಿದರು. ಅಲ್ಲಿಂದ ಬೆಂಗಳೂರು ಜೈಲಿಗೆ ಅವರನ್ನು ಕರೆದುಕೊಂಡು ಹೋದರು. ಅಲ್ಲಿಂದ ಬೈಲಹೊಂಗಲದಲ್ಲಿ ಹೊಸದಾಗಿ ನಿರ್ಮಾಣವಾಗಿದ್ದ ಜೈಲಿಗೆ ಹಾಕಿದರು. ಅಲ್ಲಿ ಇವರು ಶಿಕ್ಷೆ ಅನುಭವಿಸಿದರು. ಶಿಕ್ಷೆಯ ಅವಧಿ ಮುಗಿಯುವ ಮೊದಲೇ ಅವರನ್ನು ಬಿಡುಗಡೆ ಮಾಡಲಾಯಿತು. ಮಾದಿಗ ಜನಾಂಗಕ್ಕೆ ಸೇರಿದ ಇತರೆ ಹೋರಾಟಗಾರರ ಬಗ್ಗೆ ಕೇಳಿದಾಗ ರಂಗಾಪುರದಲ್ಲಿ ಎ.ಕೆ.ತಿಮ್ಮಪ್ಪ ಎಂಬುವರು ಇದ್ದರೆಂದು ತಿಳಿಸಿದರು. ಅದೇ ಗ್ರಾಮದಲ್ಲಿ ಇವರ ಸಮಕಾಲೀನನವರೆ ಆದ ರಂಗಪ್ಪ ಎಂಬುವರು ತಾವು ಸಹ ಪಾಲ್ಗೊಂಡಿದ್ದುದಾಗಿ ತಿಳಿಸಿದರು. ಕೊಟ್ರನಂಜಪ್ಪನವರ ಜೊತೆ ಕಾಂಗ್ರೆಸ್ ಪ್ರಚಾರ ಮಾಡಲು ಮಾಯಕೊಂಡ, ಬಾಗೂರು ಮುಂತಾದ ಕಡೆ ಹೋಗಿದ್ದರು. ಆದರೆ ತಮ್ಮ ತಾಯಿಗೆ ಆರೋಗ್ಯ ಸರಿಯಿಲ್ಲದ ಪ್ರಯುಕ್ತ ಮುಂದೆ ಯಾವುದೇ ಚಟುವಟಿಕೆಗಳಲ್ಲಿ ಭಾಗವಹಿಸಲಿಲ್ಲವೆಂದರು.

**ಎ.ಕೆ.ತಿಮ್ಮಪ್ಪ**

ಎ.ಕೆ.ತಿಮ್ಮಪ್ಪನವರು ಹೊಳಲ್ಕೆರೆ ತಾಲ್ಲೂಕಿನ ರಂಗಾಪುರ ಗ್ರಾಮದವರು. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದ ಇವರು ಇಂದು ಜೀವಂತವಾಗಿಲ್ಲ. ಆ ಗ್ರಾಮಕ್ಕೆ ಹೋಗಿ ಅವರ ಕುಟುಂಬದವರನ್ನು

ಈ ಬಗ್ಗೆ ವಿಚಾರಿಸಿದಾಗ ಅವರು ಭಾಗವಹಿಸಿದ ಘಟನೆಗಳ ಹೆಚ್ಚಿನ ವಿವರ ತಿಳಿಯಲಿಲ್ಲವಾದರೂ ಒಂದು ವರ್ಷಕ್ಕೂ ಹೆಚ್ಚು ಕಾಲ ಜೈಲುಶಿಕ್ಷೆ ಅನುಭವಿಸಿದ್ದುದು ತಿಳಿಯುತ್ತದೆ. ಸರ್ಕಾರ ನೀಡಿರುವ ಕಂಚಿನ ಪದಕ ಇಂದಿಗೂ ಅವರ ಮನೆಯಲ್ಲಿದೆ. ಇದರಿಂದಾಗಿ ಎ.ಕೆ.ತಿಮ್ಮಪ್ಪನವರು ಒಬ್ಬ ಸ್ವಾತಂತ್ರ್ಯ ಹೋರಾಟಗಾರರಾಗಿದ್ದುದು ಸ್ಪಷ್ಟವಾಗುತ್ತದೆ.

**ಶಿವಳ್ಳಿ ಸಿದ್ದಪ್ಪ**

ಹಿಂದೆ ಚಿತ್ರದುರ್ಗ ಜಿಲ್ಲೆಯಲ್ಲಿದ್ದ ದಾವಣಗೆರೆ ತಾಲ್ಲೂಕಿನಲ್ಲಿಯೂ ಸ್ವಾತಂತ್ರ್ಯ ಹೋರಾಟಗಾರರು ಕಂಡುಬರುತ್ತಾರೆ. ಅಂಥವರಲ್ಲಿ ದಾವಣಗೆರೆ ನಗರದ ಗಾಂಧಿನಗರದಲ್ಲಿ ವಾಸವಾಗಿರುವ ಶಿವಳ್ಳಿಸಿದ್ದಪ್ಪ ಒಬ್ಬರಾಗಿದ್ದಾರೆ. ಇವರು ಕುಡಿತ ಚಟಕ್ಕೆ ಬಲಿಯಾಗಿದ್ದು ಗಾಂಧೀಜಿಯವರು ದಾವಣಗೆರೆಗೆ ಬಂದು(ಗಾಂಧಿನಗರ) ಮಾದಿಗರ ಕೇರಿಗೆ ಭೇಟಿಕೊಟ್ಟಾಗ ಅವರಿಂದ ಪ್ರೇರಿತರಾಗಿ ಕುಡಿಯುವುದನ್ನು ಬಿಟ್ಟು ಸ್ವಾತಂತ್ರ ಚಳವಳಿಯ ಚಟುವಟಿಕೆಗಳಲ್ಲಿ ತೊಡಗಿಕೊಂಡರು. ಅನೇಕ ಕಾರ್ಯಕ್ರಮಗಳಲ್ಲಿ ಇವರ ಪಾತ್ರ ಪ್ರಮುಖವಾಗಿ ಇರುತ್ತಿತ್ತು. ದಾವಣಗೆರೆಯಲ್ಲಿ ಶ್ರೀನಿವಾಸಶೆಟ್ಟಿಯವರ ಮನೆಯ ಮುಂದೆ ಪ್ರತಿದಿನ ಪ್ರಭಾತ್ ಫೇರಿ ನಡೆಯುತ್ತಿತ್ತು. ಆಗ ಶಿವಳ್ಳಿ ಸಿದ್ದಪ್ಪ ಅವರ ಮಾವನವರಾದ ಶಿದ್ಲಪ್ಪನವರೊಂದಿಗೆ ಪಾಲ್ಗೊಂಡಿದ್ದಾರೆ. ಆ ಸ್ಥಳಕ್ಕೆ ಹೋಗುವಾಗ ಸ್ವಾತಂತ್ರ್ಯ ಚಳವಳಿಯ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಪ್ರೇರಣೆ ನೀಡುವ ಹಾಡೊಂದನ್ನು ಇವರು ಹಾಡುತ್ತಿದ್ದರು. ಆ ಹಾಡು ಹೀಗಿದೆ :

ಏಳೀರಿ ಏಳೀರಿ ಭಾರತ ಜನಗಳೇ
ತಾಳುತ ಪ್ರೇಮದಿ ಹೃದಯದೊಳು
ಹೇಳುವ ಮಾತನು ಯೋಚಿಸಿ ನೋಡಿರಿ
ಬೇಡುವುದಲ್ಲದ ಮಾರ್ಗವಿದು
ಹೊನ್ನಿನ ಈ ದೇಶದ ನಾಡು
ಮಣ್ಣಿನ ಪಾಲಾಗಿ ಹೋಗುತಿದೆ
ಮನ್ನಣೆ ಇಲ್ಲವೋ ಎನ್ನಯ ಸುತರಿಗೆ
ಎನ್ನುತಾ ಭಾರತಿ ಕೂಗುತಿದೆ.
ಎಲೇ ಶ್ರೀಮಂತರೆ ಈ ಜನ ಸಂಗ್ರಾಮಕೆ
ಧನ ಸಹಾಯವ ಮಾಡಿಕೊಡಿ
ದಿನವೆರಡಾಗಲು ಘನ ಶಿರವಲ್ಲವೋ
ಘನ ಕೀರ್ತಿಯ ಕಡೆ ಗಮನ ಕೊಡಿ

ಓೀಗೆ ಈ ಹಾಡನ್ನು ಹಾಡುತ್ತ ಜನರನ್ನು ಎಚ್ಚರಿಸಿ ವಿವಿಧ ಚಟುವಟಿಕೆಗಳಲ್ಲಿ ತೊಡಗಲು ಪ್ರೇರಣೆ ನೀಡುತ್ತಿದ್ದರು. ಕಾಂಗ್ರೆಸ್ ಮುಖಂಡರು ಪ್ರಚಾರಕ್ಕೆ ಬಂದಾಗ ಸಭೆ ಸೇರುವ ಸ್ಥಳವನ್ನು

ಗುಡಿಸಿ, ಸಾರಿಸಿ ಮಾವಿನ ಸೊಪ್ಪು ಕಟ್ಟಿ ಸಿಂಗರಿಸುತ್ತಿದ್ದರು. ಕ್ವಿಟ್ ಇಂಡಿಯಾ ಚಳವಳಿ ಸಂದರ್ಭದಲ್ಲಿ ಭಾಗವಹಿಸಿದ್ದಾಗ ಅಲ್ಲಿದ್ದ ಪೋಲಿಸರಿಂದ ಗುಂಡು ಹಾರಿದೊಡನೆ ಅಲ್ಲಿಂದ ಓಡಿಹೋಗಿದ್ದರು. ಇನ್ನೊಂದು ಬೇರೆ ಸಂದರ್ಭ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದಾಗ ಬಂಧನಕ್ಕೊಳಗಾಗಿ ಶಿಕ್ಷೆ ಅನುಭವಿಸಿದರು. ಸತ್ಯಾಗ್ರಹಿಗಳಿಂದ ಜೈಲುಗಳು ತುಂಬುತ್ತಿದ್ದಂತೆಯೇ ಬಿಡುಗಡೆಗೊಳಿಸಲಾಗುತ್ತಿತ್ತು. ಈ ರೀತಿ ಶಿವಳ್ಳಿ ಸಿದ್ದಪ್ಪನವರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದರು. ಮಾದಿಗ ಜನಾಂಗದ ಇತರರು ಭಾಗವಹಿಸಿದ ಬಗ್ಗೆ ಕೇಳಿದಾಗ ಸುಮಾರು ಹತ್ತರಿಂದ ಹನ್ನೆರಡು ಜನರು ಸಭೆ ನಡೆಯುವಾಗ ಬರುತ್ತಿದ್ದರು. ಭಯದಿಂದ ಇನ್ನಿತರೆ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರಲಿಲ್ಲ. ಆದರೆ ಬಿ.ಶ್ಯಾಮಪ್ಪ ಎಂಬುವರು ಇನ್ನೂ ವಿದ್ಯಾರ್ಥಿಯಾಗಿರುವಾಗಲೇ ಕಾಂಗ್ರೆಸ್ ಮುಖಂಡರು ಬರುವ ವಿಚಾರವನ್ನು ತುತ್ತೂರಿ ಊದಿಕೊಂಡು ಎಲ್ಲರಿಗೂ ತಿಳಿಯುವಂತೆ ಮಾಡುತ್ತಿದ್ದನೆಂದರು.

ಬಿ.ಶ್ಯಾಮಪ್ಪ

ದಾವಣಗೆರೆಯ ಮತ್ತೊಬ್ಬ ಸ್ವಾತಂತ್ರ್ಯ ಹೋರಾಟಗಾರರೆಂದರೆ ಬಿ.ಶ್ಯಾಮಪ್ಪನವರು. ಇವರು ಆಗಿನ್ನು ವಿದ್ಯಾರ್ಥಿಯಾಗಿದ್ದರು. ಗಾಂಧೀಜಿಯವರು ದಾವಣಗೆರೆಗೆ ಬಂದಾಗ ಮಾದಿಗರ ಕೇರಿಗೆ ಭೇಟಿಕೊಟ್ಟ ಪರಿಣಾಮವಾಗಿ ಪ್ರೇರಿತರಾದ ಇವರು ಅನಂತಶರ್ಮರ ಪ್ರೋತ್ಸಾಹದಿಂದ ಸ್ವಾತಂತ್ರ್ಯ ಚಳವಳಿಯಲ್ಲಿ ತೊಡಗಿಕೊಂಡರು. ಆ ಸಂದರ್ಭದಲ್ಲಿ ಇವರ ಮುಖ್ಯ ಕೆಲಸವೆಂದರೆ ಕಾಂಗ್ರೆಸ್ ಮುಖಂಡರು ಬರುವ ದಿನವನ್ನು ಮೊದಲೇ ಎಲ್ಲರಿಗೂ ತಿಳಿಸಿ ಜನ ಸೇರುವಂತೆ ಮಾಡುವುದಾಗಿತ್ತು. ಹೀಗಾಗಿ ಅವರು ತುತ್ತೂರಿ ಊದಿಕೊಂಡು ಪ್ರಚಾರ ಮಾಡುತ್ತಿದ್ದರು. ಇವರ ಪ್ರಚಾರದ ಪರಿಣಾಮವಾಗಿಯೇ ಅನೇಕ ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆದಿವೆ ಎನ್ನಬಹುದು. ಅನೇಕ ಪ್ರಮುಖರು ದಾವಣಗೆರೆಗೆ ಬಂದಾಗಲೆಲ್ಲ ಪ್ರಚಾರ ಮಾಡಿದ್ದಾರೆ. ಈ ಕೆಲಸವನ್ನು ಇವರಿಗಿಂತಲೂ ಹಿಂದೆ ಮಾಡುತ್ತಿದ್ದವರೆಂದರೆ ಈ ಜನಾಂಗಕ್ಕೆ ಸೇರಿದ ಕೆರೆಯಾಗಳ ಹಳ್ಳಿ ಸಿದ್ದಪ್ಪ ಎಂಬುವರು.

ಅರಣ್ಯ ಸತ್ಯಾಗ್ರಹದ ಸಂದರ್ಭದಲ್ಲಿ ಪ್ರಚಾರ ಕಾರ್ಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾ ಬಂದಿದ್ದಾರೆ. ಶಿರಾ ತಾಲ್ಲೂಕಿನಿಂದ ಬಂದ ಸಿ.ಟಿ.ಹನುಮಂತಯ್ಯ ಅವರೊಂದಿಗೆ ಕಾಂಗ್ರೆಸ್ ಪ್ರಚಾರಕ್ಕಾಗಿ ರಾಣೆಬೆನ್ನೂರಿನ ತನಕ ಹೋಗಿದ್ದಾರೆ. ಈ ರೀತಿ ಪ್ರಚಾರ ಮಾಡಲು ಹೊರಟ ಹನ್ನೆರಡು ಜನರ ತಂಡದಲ್ಲಿ ಬಿ.ಶ್ಯಾಮಪ್ಪ ಮತ್ತು ಆರ್. ಹನುಮಯ್ಯ ಎಂಬುವವರು ಮಾತ್ರವೇ ಮಾದಿಗ ಜನಾಂಗದವರಾಗಿದ್ದರು. ಅಲ್ಲಿಂದ ಹೊನ್ನತಿಯವರೆಗೆ ಪ್ರಚಾರದಲ್ಲಿ ತೊಡಗಿದ್ದಾರೆ. ೧೯೪೦ರಲ್ಲಿ ಹರಿಹರದಲ್ಲಿ ನಡೆದ ಕಾಂಗ್ರೆಸ್ ಸಮಾವೇಶದಲ್ಲಿ ಇವರು ಸ್ವಯಂ ಸೇವಕರಾಗಿ ದುಡಿದಿದ್ದಾರೆ.

೧೯೪೨ರ ಪ್ರಮುಖ ಹೋರಾಟವಾದ 'ಬ್ರಿಟಿಷರೆ ಭಾರತ ಬಿಟ್ಟು ತೊಲಗಿ' ಕರೆಗೆ ಗಾಂಧೀಜಿಯವರನ್ನು ಬಂಧಿಸುತ್ತಿದ್ದಂತೆಯೇ ಜಿಲ್ಲೆಯಾದ್ಯಂತ ಹೋರಾಟ ತೀವ್ರಗೊಂಡಿತು. ಅನೇಕ ಹೋರಾಟಗಾರರೊಂದಿಗೆ

ಬಿ.ಶ್ಯಾಮಪ್ಪನವರು ರೈಲ್ವೆ ಸ್ಟೇಷನ್‌ಗೆ ನುಗ್ಗಿದರು. ಅಲ್ಲಿಗೆ ಮಿಲಿಟರಿ ಪಡೆಯು ಸಹ ಬಂದಿತ್ತು. ಆಗ ಮಿಲಿಟರಿಯವನ ಕೈಯಲ್ಲಿದ್ದ ಟೋಪಿಗಳನ್ನು ಶ್ಯಾಮಪ್ಪ ಕಸಿದುಕೊಂಡು 'ಬಲೋ ಭಾರತ್ ಮಾತಾಕೀ ಜೈ' ಎಂದು ಜೈಕಾರ ಹಾಕಿದಾಗ ಬಂಧನಕ್ಕೊಳಗಾದರು. ಆನಂತರದಲ್ಲಿ ರೈಲ್ವೆ ಸ್ಟೇಷನ್‌ಗೆ ಬೆಂಕಿ ಇಟ್ಟ ಪರಿಣಾಮ ಗೋಲಿಬಾರ್ ಆಯಿತು.

ಮತ್ತೊಂದು ಸಂದರ್ಭದಲ್ಲಿ ಬಿ.ಶ್ಯಾಮಪ್ಪನವರು ಹೋರಾಟದಲ್ಲಿ ತೊಡಗಿಕೊಂಡು ಬಂಧಿತರಾಗಿದ್ದಾರೆ. ಇಟಗಿ ವೇದಮೂರ್ತಿ ಮತ್ತು ಬಾಲಾಜಿ ಮುಂತಾದವರ ಸಲಹೆಯಂತೆ ಹರಿಹರದಲ್ಲಿದ್ದ ಮಿಲಿಟರಿ ಪಡೆ ದಾವಣಗೆರೆಗೆ ಬರುವುದನ್ನು ತಡೆಗಟ್ಟಲು ಮಧ್ಯೆ ಇದ್ದ ಬಾತಿಕೆರೆಯನ್ನು ಒಡೆದು ಹಾಕಲು ತಯಾರಾದರು. ಆ ಕಾರ್ಯದಲ್ಲಿ ತೊಡಗಲು ನಿರ್ಧರಿಸಿ ಹಾಸ್ಟಲ್‌ನಲ್ಲಿ ಮಲಗಿದ್ದಾಗ ರಾತ್ರಿ ವೇಳೆ ಪೋಲಿಸ್‌ನವರು ಹಾಸ್ಟಲ್‌ಗೆ ನುಗ್ಗಿ ಶ್ಯಾಮಪ್ಪನವರನ್ನು ಬಂಧಿಸಿದರು. ವಿಚಾರಣೆ ನಡೆಸಿ ಶಿಕ್ಷೆ ವಿಧಿಸಿ ಚಿತ್ರದುರ್ಗ ಜೈಲಲ್ಲಿ ಹಾಕಿದರು. ಅವರೊಂದಿಗೆ ಇನ್ನೂ ನಾಲ್ಕು ಜನ ವಿದ್ಯಾರ್ಥಿಗಳನ್ನು ಬಂಧಿಸಿದ್ದರೂ ಅವರು ಚಿಕ್ಕವರೆಂದು ಬಿಟ್ಟರು. ಆನಂತರ ಪರೀಕ್ಷೆ ಬಂತೆಂಬ ಕಾರಣಕ್ಕೆ ಸ್ವಾತಂತ್ರ್ಯ ಹೋರಾಟದ ಚಟುವಟಿಕೆಗಳಲ್ಲಿ ಭಾಗವಹಿಸಲಿಲ್ಲ.

### ಮಣ್ಣಪ್ಪ ಮತ್ತು ಇತರರು

ಸ್ವಾತಂತ್ರ್ಯ ಹೋರಾಟಗಾರರಲ್ಲಿ ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ಮರಡಿಹಳ್ಳಿ ಗ್ರಾಮದಲ್ಲಿ ಮಣ್ಣಪ್ಪ ಸೇರಿದಂತೆ ಒಟ್ಟು ಹನ್ನೆರಡು ಜನರು ಇದ್ದಾರೆ. ಅವರೆಂದರೆ ಮುದ್ದಪ್ಪ, ಸಣ್ಣಪ್ಪ, ತಿಮ್ಮಪ್ಪ, ಕೃಷ್ಣಪ್ಪ, ರಾಮಪ್ಪ, ಚಂದ್ರಪ್ಪ, ರಾಮಜ್ಜ ಹಾಗೂ ದೊಡ್ಡೀರಪ್ಪರ ಸಿದ್ದಪ್ಪ ಎಂಬುವರು. ಇವರು ರಾಜ್ಯ ಸರ್ಕಾರದಿಂದ ಪಿಂಚಣಿ ಪಡೆದುಕೊಳ್ಳುತ್ತಿದ್ದಾರೆ. ಇವರಲ್ಲಿ ಕೆಲವರು ಮರಣ ಹೊಂದಿರುವರು.

ಮಣ್ಣಪ್ಪ ಸೇರಿದಂತೆ ಒಂಬತ್ತು ಜನರು ಸ್ವಾತಂತ್ರ್ಯ ಚಳವಳಿಯ ಕಾಲಕ್ಕೆ ಅನೇಕ ಕಡೆ ಭಾಗವಹಿಸಿದ್ದಾರೆ. ಮರಡಿಹಳ್ಳಿ ಗ್ರಾಮದಲ್ಲಿ ಸ್ವಾತಂತ್ರ್ಯ ಚಳವಳಿಯ ಕಾಲಕ್ಕೆ ಸಂಘವೊಂದು ಸ್ಥಾಪಿತಗೊಂಡು ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಾಗುತ್ತಿದ ಘಟನೆಗಳ ಬಗ್ಗೆ ತಿಳಿಯಲು ಮತ್ತು ಚರ್ಚಿಸಲು ಅವಕಾಶ ನೀಡಿತ್ತು. ಇದರಿಂದ ಪ್ರೇರಣೆಗೆ ಒಳಗಾದ ಅನೇಕರು ಹೋರಾಟದಲ್ಲಿ ತೊಡಗಿಕೊಂಡರು. ಅರಣ್ಯ ಸತ್ಯಾಗ್ರಹದ ಸಂದರ್ಭದಲ್ಲಿ ಗ್ರಾಮದ ಅನೇಕರು ಈಚಲು ಮರಗಳನ್ನು ಕಡಿಯಲು ನಿರ್ಧರಿಸಿದಾಗಲೆಲ್ಲ ಆ ಕಾರ್ಯ ಮಾಡಲು ಹೊರಟವರಿಗೆ ಶುಭ ಹಾರೈಸಲು ಮಣ್ಣಪ್ಪ ಮತ್ತು ಇತರರು ವಾದ್ಯ(ಬ್ಯಾಂಡ್ ಸೆಟ್) ಮಾಡುತ್ತಿದ್ದರು. ಹೋರಾಟಗಾರರನ್ನು ಮೆರವಣಿಗೆಯ ಮೂಲಕ ಸತ್ಯಾಗ್ರಹ ಮಾಡುವ ಸ್ಥಳಕ್ಕೆ ತಂದು ಬಿಡಲಾಗುತ್ತಿತ್ತು. ಅಲ್ಲಿಯವರೆಗೆ ಇವರು ವಾದ್ಯ

ಮಾಡುತ್ತಿದ್ದರು. ಆ ಸ್ಥಳಕ್ಕೆ ಆಗಮಿಸಿದ ಪೋಲಿಸರು ಸತ್ಯಾಗ್ರಹಿಗಳನ್ನು ಬಂಧಿಸುತ್ತಿದ್ದರೆ ವಿನಃ ವಾದ್ಯ ಮಾಡುವವರನ್ನು ಬಂಧಿಸುತ್ತಿರಲಿಲ್ಲ. ಆದರೆ ಕ್ವಿಟ್ ಇಂಡಿಯ ಚಳುವಳಿಯ ಕಾಲಕ್ಕೆ ಹೋರಾಟದ ಚಟುವಟಿಕೆಗಳಲ್ಲಿ ವಾದ್ಯ ಮಾಡಲು ಹೋಗಿದ್ದ ಇವರನ್ನು ಸಹ ಬಂಧಿಸಿ ಚಿತ್ರದುರ್ಗ ಜೈಲಿಗೆ ಹಾಕಿದರು.

**ದೊಡ್ಡಸಿದ್ದವನಹಳ್ಳಿ ಆಟದ ಪೆನ್ನಯ್ಯ**

ಸ್ವಾತಂತ್ರ್ಯ ಹೋರಾಟಗಾರರಾಗಿ ಭಾಗವಹಿಸಿದ್ದ ಪ್ರಮುಖರಲ್ಲಿ ಚಿತ್ರದುರ್ಗ ತಾಲ್ಲೂಕಿನ ದೊಡ್ಡಸಿದ್ದವನಹಳ್ಳಿ ಆಟದ ಪೆನ್ನಯ್ಯನವರು ಒಬ್ಬರು. ಇವರು ಸಾರ್ವಜನಿಕ ರಂಗದಲ್ಲಿ ಮಾಡಿರುವ ಸೇವೆ ಶ್ಲಾಘನೀಯ. ಇವರು ೧೯೨೪ರಲ್ಲಿ ಬೆಳಗಾವಿ ಕಾಂಗ್ರೆಸಿಗೆ ಹೋಗಿ ಗಾಂಧೀಜಿಯ ದರ್ಶನ ಪಡೆದರು. ಮುಂದೆ ೧೯೨೭ರಲ್ಲಿ ದಾವಣಗೆರೆಯಲ್ಲೂ ಗಾಂಧೀಜಿಯವರನ್ನು ಭೇಟಿ ಆದರು. ೧೯೪೨ರಲ್ಲಿ ಚಿತ್ರದುರ್ಗದಲ್ಲಿ ೧೯೪೭ರಲ್ಲಿ ದಾವಣಗೆರೆಯಲ್ಲೂ ಇವರು ಸ್ವಾತಂತ್ರ್ಯ ಚಳವಳಿಯಲ್ಲಿ ಬಂಧಿತರಾಗಿ ಜೈಲುವಾಸ ಅನುಭವಿಸಿದರು ಇವರು[೧೩೬] ಹೀಗೆ ಪೆನ್ನಯ್ಯನವರು ಸಹ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿರುವರೆಂದು ತಿಳಿದು ಬರುತ್ತದೆ. ಮರಣ ಹೊಂದಿರುವುದರಿಂದ ಹೆಚ್ಚಿನ ಮಾಹಿತಿ ದೊರೆಯಲಿಲ್ಲ.

ಇವರಲ್ಲದೇ ಹಿರಿಯೂರು ತಾಲ್ಲೂಕಿನ ಕಸ್ತೂರಿ ರಂಗಪ್ಪನ ಹಳ್ಳಿಯಲ್ಲಿ ಅಂಜಿನಪ್ಪ ಎಂಬುವರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರೆಂದು ಅದೇ ಗ್ರಾಮದ ಸ್ವಾತಂತ್ರ್ಯ ಹೋರಾಟಗಾರ ಕಾಸಿಂ ಸಾಬ್ ತಿಳಿಸುತ್ತಾರೆ. ಇದೇ ತಾಲ್ಲೂಕಿನ ಬ್ಯಾರಮಡು ಗ್ರಾಮದ ಎ.ಕೆ.ತಿಮ್ಮಣ್ಣ ಎಂಬುವರು ಸ್ವಾತಂತ್ರ್ಯ ಹೋರಾಟಗಾರರಾಗಿದ್ದಾರೆ. ಪಟ್ರೆಹಳ್ಳಿಯಲ್ಲಿ ಚಿನ್ನಗಂಗಪ್ಪ ಮತ್ತು ಮಲ್ಲಯ್ಯ ಎಂಬುವರು ಸಹ ಇದ್ದರೆಂದು ಅಧ್ಯಯನ ಸಂದರ್ಭದಲ್ಲಿ ತಿಳಿದುಬಂದಿತು. ೧೯೩೦ರ ಕಾಲಘಟ್ಟದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಹರಿಜನರು ಕೂಡ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದುದು.''[೧೩೭] ತಿಳಿಬಂದಿದೆ.

ಸ್ವಾತಂತ್ರ್ಯ ಚಳವಳಿಯ ಚಟುವಟಿಕೆಗಳೆಲ್ಲವು ಮುಖ್ಯವಾಗಿ ರಾಷ್ಟ್ರೀಯ ಹೆದ್ದಾರಿ ಭಾಗದ ಪ್ರದೇಶಗಳಲ್ಲಿ ಹೆಚ್ಚಾಗಿ ನಡೆದಿವೆ. ಉಳಿದಂತೆ ಇತರೆ ಭಾಗಗಳಲ್ಲಿ ಅದು ವಿಸ್ತರಿಸಿಕೊಂಡಿದ್ದರೂ ತೀವ್ರವಾಗಿರಲಿಲ್ಲ ಎನ್ನಬಹುದು. ಈ ರೀತಿ ಈ ಎರಡು ಜಿಲ್ಲೆಗಳಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದಲ್ಲಿ ಮಾದಿಗ ಜನಾಂಗದ ಅನೇಕರು ಭಾಗವಹಿಸಿ ವಿವಿಧ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದಾರೆ. ಇನ್ನೂ ಅನೇಕರು ಭಾಗವಹಿಸಿದ್ದರೂ ಯಾವುದೇ ದಾಖಲೆಗಳು ಹೊಂದಿಲ್ಲದಿರುವುದರಿಂದ ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ಯಾವುದೇ ಪಿಂಚಣಿ ದೊರೆತಿರುವುದಿಲ್ಲ. ಈ ರೀತಿ ಚಳುವಳಿಯಲ್ಲಿ ಮಾದಿಗರು ಸ್ವಾತಂತ್ರ್ಯ ಭಾಗವಹಿಸಿರುವುದು ಗಮನಾರ್ಹ.

## ೨.೭ ಏಕೀಕರಣ ಮತ್ತು ಸಂಡೂರು ಹೋರಾಟಗಳಲ್ಲಿ ಮಾದಿಗರ ಪಾತ್ರ

ಬ್ರಿಟಿಷರ ಆಡಳಿತದ ಸಂದರ್ಭದಲ್ಲಿ ಕನ್ನಡನಾಡು ವಿವಿಧ ಪ್ರಾಂತ್ಯಗಳ ಆಡಳಿತಕ್ಕೆ ಒಳಗಾಗಿ ಹರಿದು ಹಂಚಿಹೋಗಿತ್ತು. ಇದರಿಂದಾಗಿ ಕನ್ನಡ ಭಾಷಿಕರಲ್ಲಿ ಕನ್ನಡನಾಡು ಎಂಬ ಕಲ್ಪನೆಯಾಗಲಿ, ಅಭಿಮಾನ ಮೂಡುವುದಾಗಲಿ ಸಾಧ್ಯವಾಗಲಿಲ್ಲ. ಹೀಗಿರುವಾಗ ಕನ್ನಡ ಭಾಷೆಯನ್ನು ಪ್ರಧಾನವಾಗಿ ಮಾತನಾಡುವ ಪ್ರದೇಶಗಳನ್ನು ಒಟ್ಟುಗೂಡಿಸುವ ನಿಟ್ಟಿನಲ್ಲಿ ಏಕೀಕರಣ ಚಳವಳಿಯು ಆರಂಭಗೊಂಡಿತು. ಈ ಹೋರಾಟದ ಮುಂಚೂಣಿಯಲ್ಲಿ ಅನೇಕ ಸಾಹಿತಿಗಳು, ಕಲಾವಿದರು ಇದ್ದರು. ಇವರ ಮುಖಂಡತ್ವದಲ್ಲಿ ನಡೆದ ಚಳವಳಿಯು ಪ್ರಧಾನವಾಗಿ ಕನ್ನಡ ಭಾಷೆಯನ್ನಾಡುವ ಜನರನ್ನು ಆಕರ್ಷಿಸಿ ಪಾಲ್ಗೊಳ್ಳುವಂತೆ ಮಾಡಿತು. ಇದರಿಂದಾಗಿ ಏಕೀಕರಣ ಚಳವಳಿ ತೀವ್ರಗೊಂಡಿತು. ಇಂತಹ ಹೋರಾಟದಲ್ಲಿ ಪ್ರಧಾನವಾಗಿ ಕನ್ನಡ ಭಾಷೆಯನ್ನು ಮಾತನಾಡುವ ಈ ಭಾಗದ ಮಾದಿಗರು ಭಾಗವಹಿಸಿರುವುದೂ ಉಂಟು. ಏಕೆಂದರೆ ಸ್ವಾತಂತ್ರ್ಯಪೂರ್ವದಲ್ಲಿ ಬಳ್ಳಾರಿ ಪ್ರದೇಶವು ಮದ್ರಾಸ್ ಪ್ರಾಂತ್ಯಕ್ಕೆ ಒಳಗಾಗಿತ್ತು. ಚಿತ್ರದುರ್ಗ ಜಿಲ್ಲೆಯು ಮಾತ್ರ ಕನ್ನಡ ಭಾಷೆ ಮಾತನಾಡುವ ಮೈಸೂರು ರಾಜ್ಯದಲ್ಲಿ ಇದ್ದುದರಿಂದ ಇಲ್ಲಿ ಅದು ಅಷ್ಟಾಗಿ ಪರಿಣಾಮ ಬೀರಲಿಲ್ಲವಾದರೂ ಈ ಭಾಗದ ಅನೇಕರು ಹೋರಾಟದಲ್ಲಿ ಪಾಲ್ಗೊಂಡಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ೧೯೪೬ರ ಆಗಸ್ಟ್‌ನಲ್ಲಿ ಏಕೀಕರಣ ಸಮಾವೇಶವೊಂದು ನಡೆದು ಈ ಅಧಿವೇಶನದಲ್ಲಿ ವಿವಿಧ ರಾಜಕೀಯ ಪಕ್ಷಗಳ ಜಾತಿ ಸಂಘಟನೆಗಳ ಪ್ರತಿನಿಧಿಗಳು, ಸ್ಥಳೀಯ ಪೌರಾಡಳಿತ ಸಂಸ್ಥೆಗಳ ಸದಸ್ಯರು, ಸಾಹಿತ್ಯ ಹಾಗೂ ಸಾಂಸ್ಕೃತಿಕ ಸಂಘಟನೆಗಳ ಪ್ರತಿನಿಧಿಗಳು ಹೆಚ್ಚಿನ ಸಂಖ್ಯೆಯಲ್ಲಿ ಬಂದಿದ್ದರು[೨೪] ಎಂಬ ಹೇಳಿಕೆಯಲ್ಲಿ ಜಾತಿ ಸಂಘನೆಗಳ ಪ್ರತಿನಿಧಿಗಳು ಭಾಗವಹಿಸಿದ್ದರೆಂದು ತಿಳಿಯುತ್ತದೆ. ಆ ವೇಳೆಗೆ ಮಾದಿಗರು ಈ ಜಿಲ್ಲೆಯಲ್ಲಿ ಸಂಘಟಿತರಾಗಿದ್ದು ಅದರ ಪ್ರತಿನಿಧಿಗಳು ಸಹ ಭಾಗವಹಿಸಿರುವರು. ಈ ಹಿನ್ನೆಲೆಯಲ್ಲಿ ಈ ಎರಡು ಜಿಲ್ಲೆಗಳಲ್ಲಿ ಪ್ರಧಾನವಾಗಿ ಕನ್ನಡ ಭಾಷೆಯನ್ನು ಮಾತನಾಡುವ ಮಾದಿಗರು ಭಾಗವಹಿಸಿದ್ದಾರೆಂದು ಹೇಳಬಹುದಾಗಿದೆ.

ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆಯ ಹೋರಾಟಗಳಲ್ಲಿ ಸಮಾಜವಾದಿ ಪಕ್ಷದ ಹೋರಾಟವೂ ಒಂದು. ಈ ಪಕ್ಷದ ಮುಖಂಡತ್ವದಲ್ಲಿ ಸಂಡೂರು ರಾಜ ಮನೆತನದವರು ಲಪಟಾಯಿಸಿದ್ದ ನಂದಿಹಳ್ಳಿ, ರಾಘವಪುರ ಮತ್ತು ಸಿದ್ದಾಪುರ ಹಳ್ಳಿಗಳ ಜಮೀನುಗಳನ್ನು ಬಿಡಿಸಿಕೊಳ್ಳಲು ಹೋರಾಟ ಮಾಡಲಾಗಿದೆ. ದಿನಾಂಕ ೧೦ನೇ ಸೆಪ್ಟೆಂಬರ್ ೧೯೭೩ರಂದು ಪ್ರಾರಂಭವಾಗಿ ಅಕ್ಟೋಬರ್ ೨೪, ೧೯೭೩ರವರೆಗೆ ಸತತವಾಗಿ ಹೋರಾಟ ಮಾಡಲಾಯಿತು. ಈ ಆಂದೋಲನದಲ್ಲಿ ಅನೇಕ ಮಹಿಳೆಯರು ತಮ್ಮ ಕೂಸುಗಳ ಸಮೇತ ಪಿಕೆಟಿಂಗ್, ಭೂ ಆಕ್ರಮ ಜಾಗಗಳಲ್ಲಿ ಭಾಗವಹಿಸಿ ಬಂಧಿತರಾದದ್ದು ಗಮನಾರ್ಹ. ಈ ಸತ್ಯಾಗ್ರಹದಲ್ಲಿ ಸಮಾಜವಾದಿ ಪಕ್ಷದ ಹರಿಜನ ನಾಯಕಿ

ಶ್ರೀಮತಿ ಬುಡ್ಡಮ್ಮ ಹಾಗೂ ಮಾರಮ್ಮ ಭಾಗವಹಿಸಿದ್ದರು.[೧೩೯] ಇದೂ ಮಾದಿಗ ಜನಾಂಗದ ಸ್ತ್ರೀಯರು ಸಹ ಸಂಡೂರು ಹೋರಾಟಗಳಲ್ಲಿ ಭಾಗವಹಿಸಿರುವುದನ್ನು ಖಚಿತಪಡಿಸುತ್ತದೆ.

## ೨.೮ ದಲಿತ ಚಳವಳಿಯಲ್ಲಿ ಮಾದಿಗರ ಪಾತ್ರ

ಕರ್ನಾಟಕ ರಾಜ್ಯದ ದಲಿತರ ಚರಿತ್ರೆಯಲ್ಲಿ ೭೦ ರ ದಶಕವು ಅತ್ಯಂತ ಮಹತ್ವವಾದುದು. ಈ ಅವಧಿಯಲ್ಲಿ ಶೋಷಿತಜಾತಿಗಳು ಸಂಘಟಿತರಾಗಿ 'ದಲಿತ ಸಂಘರ್ಷ ಸಮಿತಿ' ಎಂಬ ಸಾಂಸ್ಕೃತಿಕ ಸಂಘಟನೆಯನ್ನು ಹುಟ್ಟು ಹಾಕಿದರು. ಇದು ದಲಿತರಲ್ಲಿ ಎಚ್ಚರ ಮತ್ತು ಸ್ವಾಭಿಮಾನವನ್ನು ಮೂಡಿಸಿತು. ಪರಿಣಾಮವಾಗಿ ಕೆಳಜಾತಿಗಳು ತಮ್ಮ ಮೇಲೆ ನಿರಂತರವಾಗಿ ನಡೆದುಕೊಂಡು ಬಂದ ಶೋಷಣೆ, ಅನ್ಯಾಯಗಳ ವಿರುದ್ಧ ಸಂಘಟನಾತ್ಮಕ ನೆಲೆಯಲ್ಲಿ ಹೋರಾಟ ಆರಂಭಗೊಳಿಸಿದರು. ಇದರಿಂದಾಗಿ ದಲಿತರಲ್ಲಿ ಧೈರ್ಯ ಬಂದಂತಾಗಿ ಅನ್ಯಾಯಗಳ ವಿರುದ್ಧ ಎದ್ದು ನಿಂತದ್ದು ಮಹತ್ವದ ಸಂಗತಿಯಾಗಿದೆ. ಈ ಕಾರಣಕ್ಕೆ ೭೦ ರ ದಶಕವು ದಲಿತರ ಚರಿತ್ರೆಯಲ್ಲಿ ಅತ್ಯಂತ ಮಹತ್ವದ ಘಟ್ಟ. ದಲಿತರು ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯವಾಗಿ ಹಿಂದುಳಿದಿದ್ದು, ಸಾಮಾಜಿಕ ಸ್ವಾತಂತ್ರ್ಯದಿಂದ ವಂಚಿತರಾಗಿದ್ದರು. ಈ ಕಾರಣದಿಂದಾಗಿ ಸಂಘಟನೆ ಮೊದಲು ಹೋರಾಟ ಮಾಡಲು ತೊಡಗಿದ್ದು ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ಆನಂತರದಲ್ಲಿ ಇತರೆ ಸಮಸ್ಯೆಗಳತ್ತ ಗಮನಹರಿಸಿತು. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ನಡೆದ ಈ ಹೋರಾಟ 'ದಲಿತರ ಸ್ವಾತಂತ್ರ್ಯ' ಹೋರಾಟವೆಂದೇ ಪರಿಗಣಿಸಬಹುದಾಗಿದೆ. ಇಂತಹ ಹೋರಾಟದಲ್ಲಿ ಮಾದಿಗ ಜನಾಂಗದ ಪಾತ್ರ ಪ್ರಮುಖವಾದುದು.

ಕರ್ನಾಟಕದಲ್ಲಿ "ಡಾ.ಅಂಬೇಡ್ಕರ್ ವಿಚಾರಧಾರೆಯನ್ನು ಸರಿಯಾಗಿ ಗ್ರಹಿಸಿದ ಹಾಗೂ ಅಂದಿನ ಜೆ.ಪಿ. ಚಳವಳಿ ಮತ್ತು ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಚಳವಳಿಗಳಿಂದ ಪ್ರಭಾವಿತರಾದ ಕೆಲವು ದಲಿತ ವಿದ್ಯಾವಂತರು ಪ್ರೊ.ಬಿ.ಕೃಷ್ಣಪ್ಪನವರ ಮಾರ್ಗದರ್ಶನದಲ್ಲಿ ದಲಿತ ಸಂಘರ್ಷ ಸಮಿತಿಯನ್ನು ಪ್ರಾರಂಭಿಸಿದರು. ಈ ಚಾರಿತ್ರಿಕ ಘಟನೆ ಸಂಭವಿಸಿದುದು ಭದ್ರಾವತಿಯಲ್ಲಿ-೧೯೭೪ರಲ್ಲಿ"[೧೪೦] ಈ ರೀತಿ ಆರಂಭಗೊಂಡ ಸಂಘಟನೆ ೧೯೭೮ ರ ಹೊತ್ತಿಗೆ ಎಲ್ಲ ಜಿಲ್ಲೆಗಳಲ್ಲಿ ತನ್ನ ಶಾಖೆಗಳನ್ನು ತೆರೆದು ದಲಿತರ ಮೇಲೆ ನಡೆಯುತ್ತಿದ್ದ ದೌರ್ಜನ್ಯ, ಹಲ್ಲೆ, ಅತ್ಯಾಚಾರ, ಕೊಲೆ ಮುಂತಾದ ಶೋಷಣೆಗಳ ವಿರುದ್ಧ ಹೋರಾಟವನ್ನು ತೀವ್ರಗೊಳಿಸಲಾಯಿತು. ಇದರಿಂದಾಗಿ ಸಂಘಟನೆ ಬಲಗೊಂಡಿತು. ಈ ರೀತಿ ಸಂಘಟನೆಯನ್ನು ಕಟ್ಟಿ ಬೆಳಸಿದವರಲ್ಲಿ ಪ್ರಮುಖರು ಪ್ರೊ.ಬಿ.ಕೃಷ್ಣಪ್ಪನವರು. ಮಾದಿಗ ಜನಾಂಗಕ್ಕೆ ಸೇರಿರುವ ಇವರು ದಲಿತ ಸಂಘರ್ಷ ಸಮಿತಿಯ ಮೊದಲ ಸಂಚಾಲಕರು. ಸುಮಾರು ೧೦ ವರ್ಷಗಳ ಕಾಲ ಇವರ ನಾಯಕತ್ವದಲ್ಲಿ ಬೆಳೆದ ಸಂಘಟನೆ ಕರ್ನಾಟಕದಲ್ಲಿ ಒಂದು ದೊಡ್ಡ ಶಕ್ತಿಯಾಗಿ ಬೆಳೆಯುವಂತಾಯಿತು.

ದಲಿತ ಎನ್ನುವ ಪದವು ದಮನಕ್ಕೊಳಗಾದವರನ್ನು ಸೂಚಿಸುತ್ತದೆ. ಡಾ.ಅಂಬೇಡ್ಕರ್ ಈ

ಶಬ್ದವನ್ನು ಪರಿಶಿಷ್ಟ ಜಾತಿ ಸಮುದಾಯದ ಜಾತಿ ನೆಲೆಯಲ್ಲಿ ಸ್ಪಷ್ಟವಾಗಿ ಗುರುತಿಸುವ ನಿಟ್ಟಿನಲ್ಲಿ 'ದಲಿತ' ಶಬ್ದವನ್ನು ಮೊದಲಿಗೆ ಹುಟ್ಟು ಹಾಕಿದರು. ನಂತರದಲ್ಲಿ ಈ ಪದವನ್ನು ಹೆಚ್ಚು ಬಳಸಲು ಆರಂಭಗೊಂಡಿದ್ದು ಮಹಾರಾಷ್ಟ್ರದಲ್ಲಿ ಉದಯಿಸಿದ 'ದಲಿತ ಪ್ಯಾಂಥರ್ಸ್' ನಿಂದ ಎನ್ನಬಹುದಾಗಿದೆ. ಆನಂತರ, ಈ ರಾಜ್ಯದಲ್ಲಿ ಹುಟ್ಟಿಕೊಂಡ 'ದಲಿತ ಸಂಘರ್ಷ ಸಮಿತಿ' ಮತ್ತು ಬರಹಗಾರರು ಈ ಪದವನ್ನು ಹೆಚ್ಚು ಚಾಲ್ತಿಗೆ ತಂದರು. ಅನೇಕ ಬರಹಗಾರರು ಈ ಪದವನ್ನು ವಿವಿಧ ರೀತಿಯಲ್ಲಿ ಅರ್ಥೈಸಲು ಪ್ರಯತ್ನಿಸಿದ್ದಾರೆ. ಇದುವರೆಗೂ ಈ ಸಂಘಟನೆಯಲ್ಲಿ ಹೆಚ್ಚು ತೊಡಗಿಕೊಂಡವರೆಂದರೆ ಮಾದಿಗರು ಮತ್ತು ಹೊಲೆಯರು ಮಾತ್ರ. ಈ ಕಾರಣದಿಂದಾಗಿ ಸಂಘಟನೆಯ ನಾಯಕತ್ವ ಈ ಎರಡು ಜನಾಂಗಗಳಲ್ಲಿ ಕೇಂದ್ರಕೃತಗೊಂಡಿದೆ. ಪ್ರೊ.ಬಿ.ಕೃಷ್ಣಪ್ಪನವರ ನಂತರ ನೇತೃತ್ವ ವಹಿಸಿದವರಲ್ಲಿ ಮಾದಿಗ ಜನಾಂಗದ ಮುನಿಸ್ವಾಮಿ ಮತ್ತು ಎಂ. ಜಯಣ್ಣ ವಿವಿಧ ಕಾಲಘಟ್ಟಗಳಲ್ಲಿ ಸಂಘಟನೆಯ ನೇತೃತ್ವ (ಸಂಚಾಲಕ) ವಹಿಸಿದ್ದರು. ಇಂದು ಪ್ರೊ.ಬಿ.ಕೆ.ಬಣದ ಸಂಚಾಲಕತ್ವ ದೊರಕಿರುವುದು ಮಾದಿಗ ಜನಾಂಗಕ್ಕೆ ಸೇರಿರುವ ಎಂ.ಶಿವಣ್ಣನವರಿಗೆ. ಇವರಲ್ಲಿ ಪ್ರೊ.ಬಿ.ಕೃಷ್ಣಪ್ಪ ಮತ್ತು ಎಂ.ಜಯಣ್ಣ ಚಿತ್ರದುರ್ಗ ಜಿಲ್ಲೆಗೆ ಸೇರಿದವರಾಗಿದ್ದಾರೆ. ರಾಜ್ಯಮಟ್ಟದಲ್ಲಿ ಈ ಜನಾಂಗಕ್ಕೆ ನಾಯಕತ್ವ ದೊರಕಿರುವುದರ ಮೂಲ ಕಾರಣ ಅಸಂಖ್ಯಾತ ಮಾದಿಗ ಜನಾಂಗದ ಕಾರ್ಯಕರ್ತರನ್ನು ಒಳಗೊಂಡಿರುವುದು. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ 'ದಲಿತ ಚಳವಳಿ'ಯಲ್ಲಿ ಶೇ ೭೫ ಕ್ಕೂ ಹೆಚ್ಚಿನ ಪ್ರಮಾಣದಲ್ಲಿ ತೊಡಗಿಕೊಂಡಿರುವವರು ಮಾದಿಗರು ಎಂದರೆ ತಪ್ಪಾಗಲಾರದು.

ಚಿತ್ರದುರ್ಗದಲ್ಲಿ ೧೯೭೬ರಲ್ಲಿ ಜಿಲ್ಲಾ ಶಾಖೆ ಆರಂಭಗೊಂಡರೆ ಬಳ್ಳಾರಿ ಜಿಲ್ಲೆಯಲ್ಲಿ ಅದು ತಡವಾಗಿ ಆರಂಭಗೊಂಡಿದೆ. ಹೀಗೆ ಪ್ರಾರಂಭಗೊಂಡ ಸಂಘಟನೆಯಲ್ಲಿ ಶೋಷಿತ ಜಾತಿಗಳು ಸಕ್ರೀಯವಾಗಿ ತೊಡಗಿಕೊಂಡವು. ಮಾದಿಗ, ಹೊಲೆಯ, ಬೋವಿ, ಲಂಬಾಣಿ ಮುಂತಾದ ಜಾತಿಯ ಕಾರ್ಯಕರ್ತರು ಹುಟ್ಟಿಕೊಂಡರು. ಆದರೆ ಶೇ ೭೫ಕ್ಕೂ ಹೆಚ್ಚು ಕಾರ್ಯಕರ್ತರು ಮಾದಿಗ ಜನಾಂಗದವರೆ ಆಗಿದ್ದರು. ಅದಕ್ಕೆ ಕಾರಣ ಇಲ್ಲದಿಲ್ಲ. ಈ ಭಾಗಗಳಲ್ಲಿ ಹೆಚ್ಚು ಶೋಷಣೆಗೆ ಒಳಗಾಗಿರುವವರು ಮಾದಿಗರು ಮಾತ್ರ. ಹೀಗಾಗಿ ಇವರು ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಳ್ಳಲು ಕಾರಣರಾಗಿದ್ದು ಮಾತ್ರವಲ್ಲದೇ ಸಂಘಟನೆಯ ಜಿಲ್ಲಾ ನಾಯಕತ್ವವು ಕೂಡ ಮಾದಿಗರಲ್ಲಿ ಕೇಂದ್ರೀಕೃತಗೊಳ್ಳುವಂತಾಯಿತು.

ಚಿತ್ರದುರ್ಗ ಜಿಲ್ಲೆಯಲ್ಲಿ ಶಾಖೆ ಆರಂಭಗೊಳ್ಳುವಂತೆ ಮಾಡುವಲ್ಲಿ ಪ್ರೊ.ಬಿ.ಕೃಷ್ಣಪ್ಪನವರ ಪಾತ್ರ ಪ್ರಮುಖವಾದುದು. ಇವರಿಂದ ಪ್ರೇರಣೆಗೊಂಡದೇ ಜಿಲ್ಲಾ ಕಾಂಗ್ರೆಸ್ ಪಕ್ಷದ ಕಾರ್ಯದರ್ಶಿಯಾಗಿದ್ದ ಎಂ.ಜಯಣ್ಣನವರು ಅದನ್ನು ಬಿಟ್ಟು ಜಿಲ್ಲೆಯಲ್ಲಿ ದಲಿತ ಸಂಘರ್ಷ ಸಮಿತಿಯನ್ನು ಕಟ್ಟಿ ಬೆಳೆಸಲು ಅನೇಕರೊಂದಿಗೆ ತೊಡಗಿಕೊಂಡರು. ಅಂದು ಅವರು ಹಾಕಿದ ಶ್ರಮ ಜಿಲ್ಲಾ ಸಂಘಟನೆಯು ರಾಜ್ಯಮಟ್ಟದಲ್ಲಿ ಪ್ರಭಾವ ಬೀರಲು ಕಾರಣವಾಯಿತು. ಅವರು ಮೊದಲ ಜಿಲ್ಲಾ ಸಂಚಾಲಕರಾಗಿದ್ದು

ನಂತರ ಬಿ.ಎಂ.ಹನುಮಂತಪ್ಪ, ಬಿ.ಪಿ.ತಿಪ್ಪೇಸ್ವಾಮಿ, ಡಿ.ದುರುಗೇಶ್, ಟಿ.ರಾಮು ಸಂಚಾಲಕರಾಗಿದ್ದರು. ಇಂದು ಕೆ.ಮಾಯಣ್ಣನವರು ಸಂಘಟನೆಯ ಸಂಚಾಲಕ(ಮುಖಂಡ)ರಾಗಿದ್ದಾರೆ. ಇವರೆಲ್ಲರೂ ಜಿಲ್ಲೆಯಲ್ಲಿ ದಲಿತ ಸಂಘರ್ಷ ಸಮಿತಿ ಬಲವಾಗಿ ಕಟ್ಟಿ ಬೆಳಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಇವರ ನಾಯಕತ್ವದಲ್ಲಿ ಸಂಘಟನೆ ಬೆಳೆಸಲು ನೆರವಾಗಿರುವವರಲ್ಲಿ ವಿವಿಧ ಜಾತಿಯ ಜನರು ಸಹಕರಿಸಿದ್ದಾರೆ. ಇವರಲ್ಲಿ ಮಾದಿಗ ಜನಾಂಗಕ್ಕೆ ಸೇರಿದವರಲ್ಲಿ ದುರುಗೇಶಪ್ಪ(ಗ್ರಾಮೀಣ ಬ್ಯಾಂಕ್), ಶಿವಮೂರ್ತಿ, ಕಂಪಾಲಿ ತಿಪ್ಪೇಸ್ವಾಮಿ, ಹುಲ್ಲೂರು ಕುಮಾರ್, ಸಿ.ಎ.ಚಿಕ್ಕಣ್ಣ, ಟಿ.ಡಿ.ರಾಜಗಿರಿ, ಪರಮೇಶ್ವರ, ಜಾಲಿಕಟ್ಟೆ ಹನುಮಂತಪ್ಪ, ಕುಮಾರ, ಶ್ರೀನಿವಾಸ, ಮಾಳಪ್ಪ, ವೀರಭದ್ರಪ್ಪ, ಕೆ.ರಾಜು, ಜಗದೀಶ್, ಎಂ.ಚಿತ್ರಲಿಂಗಸ್ವಾಮಿ, ಕೈನಾಡು ಚಂದ್ರಪ್ಪ, ಬೀಸನಹಳ್ಳಿ ಜಯಪ್ಪ ಮುಂತಾದವರ ಪಾತ್ರವು ಮುಖ್ಯವಾಗಿದೆ. ಈ ರೀತಿ ಮುಖಂಡರು ಮಾತ್ರವಲ್ಲದೆ ಈ ಜಿಲ್ಲೆಯ ತುಂಬೆಲ್ಲಾ ಹೆಚ್ಚಿನ ಪ್ರಮಾಣದಲ್ಲಿ ಈ ಜನಾಂಗದ ಕಾರ್ಯಕರ್ತರೆ ತುಂಬಿದ್ದಾರೆ. ಅವರೆಲ್ಲರ ಪ್ರಾಮಾಣಿಕ ಪ್ರಯತ್ನ ಈ ಜಿಲ್ಲೆಯಲ್ಲಿ ದಸಂಸ ಪ್ರಮುಖ ದಲಿತ ಸಂಘಟನೆಯಾಗಿ ಗುರುತಿಸಿಕೊಳ್ಳಲು ಕಾರಣವಾಗಿದೆ. ಸಂಘಟನೆ ಬೆಳೆಯುವಲ್ಲಿ ಸರ್ಕಾರಿ ನೌಕರರು ಮತ್ತು ವಿದ್ಯಾರ್ಥಿಗಳ ಪಾತ್ರವು ಗಮನಾರ್ಹ. ನೌಕರರಲ್ಲಿ ಎಚ್.ಲಿಂಗಪ್ಪ, ಬಿ.ಆರ್.ಶಿವಕುಮಾರ್, ಎಸ್.ಆರ್.ಗುರುನಾಥ್, ಬಾನುಮೂರ್ತಿ ಮುಂತಾದವರ ಪಾತ್ರವು ಇದೆ. ಇವರಲ್ಲದೇ ಈ ಜಿಲ್ಲೆಯಲ್ಲಿ ದಲಿತ ಸಂಘರ್ಷ ಸಮಿತಿಯ ಬೌದ್ಧಿಕ ಶಕ್ತಿಯ ಕೇಂದ್ರ ಬಿಂದು ಮಾದಿಗ ಜನಾಂಗಕ್ಕೆ ಸೇರಿದ ಪ್ರೊ.ಸಿ.ಕೆ.ಮಹೇಶ್ ಅವರು. ಸಂಘಟನೆಯು ನಿರಂತರವಾಗಿ ಚಟುವಟಿಕೆಯಿಂದ ಕೂಡಿರುವಂತೆ ಮಾಡಿದವರು, ಇವರ ಪಾತ್ರವು ಸಹ ಕೇವಲ ಜಿಲ್ಲೆಯಲ್ಲಿ ಮಾತ್ರವಲ್ಲದೆ ರಾಜ್ಯಮಟ್ಟದ ಸಂದರ್ಭದಲ್ಲೂ ಮುಖ್ಯವಾಗಿ ಕಂಡುಬರುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ದಲಿತ ಸಂಘರ್ಷ ಸಮಿತಿಯ ಜಿಲ್ಲಾ ಶಾಖೆ ಆರಂಭಗೊಂಡಿದ್ದು, ಚಿತ್ರದುರ್ಗದ ಜಿಲ್ಲಾ ಶಾಖೆ ಆರಂಭಗೊಂಡ ನಂತರದಲ್ಲಿ. ಈ ಜಿಲ್ಲೆಯಲ್ಲಿ ಸಂಘಟನೆಗೆ ತೊಡಗಿಕೊಂಡವರಲ್ಲಿ ಹೆಚ್ಚಿನ ಪ್ರಮಾಣ ಮಾದಿಗರೆ ಆಗಿದ್ದಾರೆ. ಹೀಗಾಗಿ ಅದರ ನಾಯಕತ್ವವು ಮಾದಿಗರಲ್ಲೆ ಕೇಂದ್ರೀಕೃತಗೊಂಡಿದೆ. ಅನೇಕರ ಪ್ರಯತ್ನದಿಂದ ಆರಂಭಗೊಂಡ ಸಂಘಟನೆಯ ನಾಯಕತ್ವವಹಿಸಿದವರಲ್ಲಿ ಎಲ್ಲರೂ ಮಾದಿಗ ಜನಾಂಗಕ್ಕೆ ಸೇರಿದವರೆ ಆಗಿದ್ದಾರೆ. ಅವರೆಂದರೆ ದಾನಪ್ಪ, ಕಂಪ್ಲಿ ನಾಗರಾಜ್, ಶ್ರೀನಿವಾಸಮೂರ್ತಿ, ಮುಂಡರಗಿ ನಾಗರಾಜ್, ಮಾನಯ್ಯ. ಇಂದು ಮುಂಡರಗಿ ನಾಗರಾಜ್ ಸಂಚಾಲಕರಾಗಿದ್ದಾರೆ. ಈ ಭಾಗದಲ್ಲಿ ಸಂಘಟನೆ ಬೆಳಸುವಲ್ಲಿ ಇವರೆಲ್ಲರ ಪಾತ್ರವು ಪ್ರಮುಖವಾದುದು. ಇಲ್ಲಿಯೂ ಮಾದಿಗ ಜನಾಂಗದ ನೌಕರರು ಮತ್ತು ವಿದ್ಯಾರ್ಥಿಗಳ ಪಾತ್ರ ಗಮನಾರ್ಹ. ಮೇಲ್ಕಾಣಿಸಿದ ಮುಖಂಡರಲ್ಲದೆ ವಿವಿಧ ತಾಲ್ಲೂಕಿಗೆ ಸೇರಿರುವ ಲಂಬಣ್ಣ, ದುರ್ಗಪ್ಪ, ವಿಘ್ನೇಶ್, ಕೊಡ್ಲಿ ಮಲ್ಲಿಕಾರ್ಜುನ, ಹುಲುಗಪ್ಪ, ಹನುಮಂತಪ್ಪ, ಲಕ್ಷ್ಮಯ್ಯ ಮುಂತಾದವರ ಪಾತ್ರವೂ ಇದೆ.

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ದಲಿತ ಸಂಘರ್ಷ ಸಮಿತಿ ಆರಂಭಗೊಂಡು ಪ್ರಮುಖ ಸಂಘಟನೆಯಾಗಿ ಬೆಳಸುವಲ್ಲಿ ಮಾದಿಗ ಜನಾಂಗದ ಪಾತ್ರ ಮಹತ್ವವಾದುದು. ಈ ಸಂಘಟನೆಯು ಕೈಗೊಂಡ ಹೋರಾಟಗಳು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯ ಕ್ಷೇತ್ರಗಳಿಗೆ ಸಂಬಂಧಪಟ್ಟಂಥವು. ಕೇವಲ ತಮ್ಮ ಜಿಲ್ಲೆಗಳಲ್ಲಿ ಮಾತ್ರವಲ್ಲದೇ ಇತರೆ ರಾಜ್ಯಗಳಲ್ಲಿಯೂ ದಲಿತರ ಮೇಲೆ ನಡೆಯುವ ಎಲ್ಲಾ ಶೋಷಣೆಗಳ ವಿರುದ್ಧ ಪ್ರತಿಭಟನೆ ಮಾಡಿದ್ದಾರೆ. ಕೇವಲ ದಲಿತ ಪರ ಮಾತ್ರವಲ್ಲದೇ ಹಿಂದುಳಿದ ಮತ್ತು ಅಲ್ಪಸಂಖ್ಯಾತರ ಪರವಾದ ಹೋರಾಟಗಳನ್ನು ಸಹ ಮಾಡಿರುವುದು ಉಂಟು. ಜಿಲ್ಲಾ ಮಟ್ಟದಲ್ಲಿ ಮಾತ್ರವಲ್ಲದೇ ರಾಜ್ಯಮಟ್ಟದ ಹೋರಾಟ, ರ್‍ಯಾಲಿ, ಸಮಾವೇಶಗಳ ಯಶಸ್ವಿಗೆ ಈ ಎರಡು ಜಿಲ್ಲೆಗಳ ಮಾದಿಗ ಜನಾಂಗದ ಅನೇಕ ಮುಖಂಡರು ಹಾಗೂ ಸಾವಿರಾರು ಕಾರ್ಯಕರ್ತರ ಶ್ರಮ ಶ್ಲಾಘನೀಯ. ಇಂದು ದಲಿತರ ಮಧ್ಯೆ ಒಡಕು ಮಾಡಿರುವಂಥ ಮೀಸಲಾತಿಯ ಅಸಮಾನ ಹಂಚಿಕೆಯನ್ನು ಸರಿಪಡಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳುವಂತೆ ಅನೇಕ ಕಾರ್ಯಕ್ರಮಗಳನ್ನೂ ಕೈಗೊಂಡಿದೆ. ರಾಜ್ಯಮಟ್ಟದಲ್ಲಿ ಎರಡು ಬೃಹತ್ ಸಮಾವೇಶಗಳನ್ನೂ ಯಶಸ್ವಿಯಾಗಿ ಮಾಡಿದೆ. ಇಂತಹ ಸಂದರ್ಭಗಳಲ್ಲಿಯೂ ಮಾದಿಗರ ಪಾತ್ರ ಪ್ರಮುಖವಾದುದು.

## ೨.೯ ಪ್ರತ್ಯೇಕ ಮೀಸಲಾತಿ ಹೋರಾಟ

ಇಂದು ಹೆಚ್ಚು ಪ್ರಚಲಿತವಿರುವ ಹೋರಾಟವೆಂದರೆ ಅದು ಪ್ರತ್ಯೇಕ ಮೀಸಲಾತಿ ಹೋರಾಟ ಎನ್ನಬಹುದಾಗಿದೆ. ಸಾಮಾಜಿಕ ನ್ಯಾಯ ನೀಡುವ ಹಿನ್ನೆಲೆಯಲ್ಲಿ ರಾಜಕೀಯ, ಶೈಕ್ಷಣಿಕ ಹಾಗೂ ಆರ್ಥಿಕ ಕ್ಷೇತ್ರಗಳಿಗೆ ಅನ್ವಯವಾಗುವ ಮೀಸಲಾತಿ ಸೌಲಭ್ಯವು ಜನಸಂಖ್ಯಾ ಪ್ರಮಾಣದಲ್ಲಿ ಹಂಚಿಕೆಯಾಗುತ್ತಿಲ್ಲ. ಇದರಿಂದಾಗಿ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿರುವ ಮಾದಿಗರಿಗೆ ಅನ್ಯಾಯವಾಗುತ್ತಿದೆ. ಸಿಗುವಂತಹ ಅವಕಾಶಗಳು ಹೆಚ್ಚಿನ ಪ್ರಮಾಣದಲ್ಲಿ ಜನಸಂಖ್ಯೆ ಕಡಿಮೆ ಇರುವಂತವರಿಗೆ ಸಿಗುತ್ತಿವೆ. ಈ ಅಸಮಾನತೆಯನ್ನು ಹೊಗಲಾಡಿಸಿ ಜನಸಂಖ್ಯಾ ಪ್ರಮಾಣದಲ್ಲಿ ಮಾದಿಗರಿಗೆ ಪ್ರತ್ಯೇಕ ಮೀಸಲಾತಿ ನೀಡಬೇಕೆಂದು ಮಾದಿಗರು ಹೋರಾಟ ಆರಂಭಿಸಿದ್ದಾರೆ. ಈಗಾಗಲೇ ಈ ಬಗೆಯ ಮೀಸಲಾತಿ ಹಂಚಿಕೆಯು ಪಂಜಾಬ್, ಹರ್‍ಯಾಣಗಳಲ್ಲಿ ಆಗಿಹೋಗಿದ್ದು ಆಂಧ್ರದಲ್ಲಿ ಮಾದಿಗರು ನಡೆಸಿದ ಪ್ರಬಲ ಹೋರಾಟದಿಂದ ಅಲ್ಲಿಯೂ ಮೀಸಲಾತಿ ಹಂಚಿಕೆಯಾಗಿದೆ. ಇದರಿಂದ ಪ್ರೇರಿತರಾದ ಕರ್ನಾಟಕದ ಮಾದಿಗರು ಇಲ್ಲಿ ಹೋರಾಟ ಅರಂಭಿಸಿದರು. ಈಗಾಗಲೇ ಇರುವ ಸಂಘಟನೆಗಳ ಹೆಸರುಗಳಿಗಿಂತ ಭಿನ್ನವಾದ ಮತ್ತು ನೇರವಾಗಿ ಇವರನ್ನೇ ಸೂಚಿಸುವ ಪದ 'ಮಾದಿಗ' ಹೆಸರಲ್ಲಿ ಸಂಘಟನೆಯನ್ನು ಆಂಧ್ರ ಮಾದರಿಯಲ್ಲಿ ಇಲ್ಲಿಯೂ ಕಟ್ಟಿದರು. ಅದೇ ಮಾದಿಗ ದಂಡೋರವಾಗಿದೆ. ಈ ಹಿಂದೆ ಮಾದಿಗರು ತಮ್ಮ ಜಾತಿಯನ್ನು ಹೇಳಿಕೊಳ್ಳುವುದು ಅವಮಾನಕರ, ಕೀಳು ಎಂದು ಭಾವಿಸಿದ್ದರೂ ಅಂತವರು ಇಂದು ನೇರವಾಗಿ ತಮ್ಮ ಜಾತಿಯ

ಹೆಸರಿನಲ್ಲಿ ಸಂಘಟನೆಯನ್ನು ಹುಟ್ಟುಹಾಕಿ ಅಭಿಮಾನ, ಗೌರವದಿಂದ ನಾವು ಮಾದಿಗರು ಎಂದು ಹೇಳಲು ಮುಂದಾದುದು ಚರಿತ್ರಾರ್ಹ ಘಟನೆಯಾಗಿದೆ. ಇಂತಹ ಸಂಘಟನೆಯ ಶಾಖೆಗಳು ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಎರಡು ಜಿಲ್ಲೆಗಳಲ್ಲಿಯೂ ಸ್ಥಾಪನೆಗೊಂಡು ಹೋರಾಟ ಮಾಡುತ್ತಿರುವುದು ಕಂಡುಬರುತ್ತದೆ.

ಕರ್ನಾಟಕ ರಾಜ್ಯದಲ್ಲಿ ಮಾದಿಗ ದಂಡೋರ ಸಂಘಟನೆಯನ್ನು ಹುಟ್ಟು ಹಾಕುವಲ್ಲಿ ಅನೇಕರ ಪಾತ್ರ ಪ್ರಮುಖವಾದುದು. ಆಂಧ್ರದ ಮಾದಿಗರ ಆರಾಧ್ಯ ದೈವವಾಗಿ ಹೋಗಿರುವ ಮಂದಾಕೃಷ್ಣ ಮಾದಿಗರನ್ನು ರಾಜ್ಯಕ್ಕೆ ಕರೆಸಿ ಮಾದಿಗ ದಂಡೋರ ಸಂಘಟನೆಯನ್ನು ರಾಜ್ಯದಲ್ಲಿ ಹುಟ್ಟು ಹಾಕಲಾಯಿತು. ಈ ಸಂಘಟನೆಯ ಅಧ್ಯಕ್ಷ ಮಾಪಣ್ಣಹದನೂರು, ಉಪಾಧ್ಯಕ್ಷ ಸಿ.ಕೆ.ಜಯರಾಮ್ ಹಾಗೂ ಪ್ರಧಾನ ಕಾರ್ಯದರ್ಶಿಯಾಗಿದ್ದ ಎಂ.ಶಂಕರಪ್ಪನವರು ರಾಜ್ಯದಾದ್ಯಂತ ಅನೇಕ ಜಿಲ್ಲೆಗಳಲ್ಲಿ ಶಾಖೆಗಳನ್ನು ತೆರೆಯಲು ಪ್ರಯತ್ನಿಸಿದ್ದು ಶ್ಲಾಘನೀಯ. ಇವರ ಪ್ರಯತ್ನದಿಂದಾಗಿಯೇ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಶಾಖೆಗಳು ಆರಂಭಗೊಂಡಿವೆ. ಹೆಚ್ಚು ಕಡಿಮೆ ಎರಡು ಜಿಲ್ಲೆಗಳಲ್ಲಿ ಸುಮಾರು ೧೯೯೭-೯೮ರ ಹೊತ್ತಿಗೆ ಜಿಲ್ಲಾ ಶಾಖೆಗಳು ಆರಂಭಗೊಂಡು ತ್ವರಿತಗತಿಯಲ್ಲಿ ಎಲ್ಲಾ ತಾಲೂಕುಗಳಲ್ಲಿ ಶಾಖೆಗಳನ್ನು ಹುಟ್ಟು ಹಾಕಲಾಗಿದೆ. ಇಂತಹ ಸಂಘಟನೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿರುವ ಮುಖಂಡರ ಹೆಸರು ಹೀಗಿವೆ. ಚಿತ್ರದುರ್ಗ ಜಿಲ್ಲೆಯಲ್ಲಿ ಬಿ.ಪಿ.ಪ್ರಕಾಶ್‌ಮೂರ್ತಿ, ಶರಣಪ್ಪ, ಹುಲ್ಲೂರು ಕುಮಾರ್, ಕುಮಾರ್, ಚಂದ್ರಪ್ಪ, ಭೀಮರಾಜ್, ರುದ್ರಮುನಿ, ಕಾಂತಪ್ಪ, ಮಾಡನಾಯಕನಹಳ್ಳಿ ತಿಪ್ಪೇಸ್ವಾಮಿ, ಹಿರಿಯೂರು ತಾಲೂಕಿನಲ್ಲಿ ಪರಮೇಶ್ವರ್, ಸ್ವಾಮಿಜಿದಾಸ್, ಗುರುಸ್ವಾಮಿ, ವೈ.ರಾಮಪ್ಪ, ಕರಿಯಪ್ಪ ಮುಂತಾದವರು. ಬಳ್ಳಾರಿ ಜಿಲ್ಲೆಯಲ್ಲಿ ಜೆ.ಜಗನ್ನಾಥ್, ಶ್ರೀನಿವಾಸಲು, ಅರುಣ್‌ಕುಮಾರ್, ಎಲ್.ಆರ್.ಪ್ರಸಾದ್, ನಾಗೇಂದ್ರ, ಕೆ.ರಾಮಕೃಷ್ಣ, ವೆಂಕಟೇಶಲು, ಚಲಪತಿ, ಪರುಶುರಾಮ್, ಈರಣ್ಣ, ಸಂಡೂರಿನಲ್ಲಿ ಮಾರೆಪ್ಪ, ಕುಮಾರಸ್ವಾಮಿ ಹರಪನಹಳ್ಳಿ ತಾಲೂಕಿನಲ್ಲಿ ಹಾಲೇಶ್, ಶ್ರೀಹರ್ಷ, ಕೊಟ್ಟೂರಿನಲ್ಲಿ ದುರ್ಗೇಶ್, ಬಸಪ್ಪಖದ್ದಿ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಎಚ್.ಬಸಪ್ಪ, ಎಂ.ಮೈಲಪ್ಪ, ಹೊಸಪೇಟೆ ತಾಲೂಕಿನಲ್ಲಿ ಹನುಮಂತಪ್ಪ, ಪೆನ್ನಯ್ಯ ಮುಂತಾದವರು. ಈ ಜಿಲ್ಲೆಯಲ್ಲಿಮಾದಿಗ ದಂಡೋರ ಸಂಘಟನೆಯನ್ನು ಕಟ್ಟಿ ಬೆಳೆಸುತ್ತಿರುವರಲ್ಲಿ ಇವರು ಪ್ರಮುಖರೆನ್ನಬಹುದು. ಇವರಲ್ಲದೆ ನೌಕರರು ಹಾಗೂ ವಿದ್ಯಾರ್ಥಿಗಳ ಪಾತ್ರವು ಇದೆ. ಪ್ರತ್ಯೇಕ ಮೀಸಲಾತಿ ಹೋರಾಟವನ್ನು ಮಾದಿಗ ದಂಡೋರ ಮಾತ್ರವಲ್ಲದೆ ರಾಜಕಾರಣಿಗಳ ನೇತೃತ್ವ ಹೊಂದಿರುವ ಮಾದಿಗ ಮೀಸಲಾತಿ ಹೋರಾಟದ ಶಾಖೆಗಳು ಎರಡು ಜಿಲ್ಲೆಯಲ್ಲಿವೆ. ಈ ಸಂಘಟನೆಗಳ ಹೋರಾಟ ಕುರಿತಂತೆ ಅಧ್ಯಾಯ ೭ರಲ್ಲಿ ಸಮಗ್ರವಾಗಿ ದಾಖಲಿಸಲು ಪ್ರಯತ್ನಿಸಲಾಗಿದೆ. ಇಲ್ಲಿ ಕೇವಲ ಈ ಹೋರಾಟದಲ್ಲಿ ಪಾಲ್ಗೊಂಡ ಮುಖಂಡರ ಹೆಸರುಗಳನ್ನಷ್ಟೇ ದಾಖಲಿಸಲಾಗಿದೆ. ಎರಡು ಜಿಲ್ಲೆಯ ಎಲ್ಲ ತಾಲೂಕುಗಳೂ ಮಾದಿಗ ದಂಡೋರ ಶಾಖೆಗಳನ್ನು ಹೊಂದಿದ್ದು ಮಾಹಿತಿ

ಲಭ್ಯವಿಲ್ಲದ ಪ್ರಯುಕ್ತ ಎಲ್ಲರನ್ನು ಹೆಸರಿಸಲಾಗಿಲ್ಲ. ಈ ಬಗೆಯ ಹೋರಾಟಕ್ಕೆ ಬೆನ್ನೆಲುಬಾಗಿ ನಿಂತವರು ಈ ಜನಾಂಗದ ನೌಕರರು. ಅವರಂತೆ ಸಂಘಟನೆಯನ್ನು ಬೆಳೆಯುವಲ್ಲಿ ಸಹಕರಿಸುತ್ತಿರುವವರು ಅಸಂಖ್ಯಾತ ಮಾದಿಗ ಬಂಧುಗಳಾಗಿದ್ದಾರೆ.

**ಅಡಿ ಟಿಪ್ಪಣಿಗಳು**

೧. ರೆವರೆಂಡ್ ಎಫ್.ಕಿಟಲ್ ಕನ್ನಡ-ಇಂಗ್ಲೀಷ್ ಡಿಕ್ಷನರಿ, ೧೯೯೪,ಪು.೧೨೩೭

೨. ಕನ್ನಡ ನಿಘಂಟು, ಏಳನೆಯ ಸಂಪುಟ, ಕನ್ನಡ ಸಾಹಿತ್ಯ ಪರಿಷತ್, ೧೯೯೩, ಪು.೭೦೬೧

೩. ಇಂಡಿಯಾಸ್ ಕಮ್ಯುನಿಟಿಸ್, vol-v,, ಕೆ.ಎಸ್.ಸಿಂಗ್, ಪು.೨೦೫೨

೪. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ಮೈಲಹಳ್ಳಿ ರೇವಣ್ಣ, ೧೯೯೬, ಪು.೫೦

೫. ಅದೇ, ಪು.೪೯-೫೦

೬. ಅದೇ, ಪು.೫೨

೭. ಸಿಂದ್ ಮಾದಿಗರ ಸಂಸ್ಕೃತಿ, ಕೊಟಗಾನಹಳ್ಳಿ ರಾಮಯ್ಯ, ೧೯೯೩, ಪು.೧೬-೧೭

೮. ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ, ಸಂ.೪, ಥರಸ್ಟನ್, ೧೯೮೭, ಪು.೩೨೫

೯. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ಎಸ್.ಚಂದ್ರಶೇಖರ್, ೧೯೮೩, ಪು.

೧೦. ಸಿಂದ್ ಮಾದಿಗರ ಸಂಸ್ಕೃತಿ, ೧೯೯೩, ಕೊಟಗಾನಹಳ್ಳಿ ರಾಮಯ್ಯ, ಪು.೩೦-೩೧

೧೧. ದಲಿತರು ಮತ್ತು ದಾರ್ಶನಿಕರು, ಪ್ರೊ.ಟಿ.ಯಲ್ಲಪ್ಪ ಬೂತಯ್ಯ, ೨೦೦೦, ಪು.೧೨೬

೧೨. ಅದೇ, ಪು.೧೩೬

೧೩. ಅದೇ, ಪು.೧೨೭

೧೪. ವೇದಾಂತ ರೆಜಿಮೆಂಟ್, ಬಿ.ವಿ.ವೀರಭದ್ರಪ್ಪ, ಪು.೨೩೩

೧೫. ಅದೇ, ಪು. ೨೨೯

೧೬. ದಾರ್ಶನಿಕರು ಮತ್ತು ದಲಿತರು, ಪ್ರೊ.ಟಿ.ಯಲ್ಲಪ್ಪ ಬೂತಯ್ಯ, ೨೦೦೦, ಪು.೨೨೮

೧೭. ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ಬಿ.ಎಂ.ಎಂ.ಆರಾಧ್ಯ, ೧೯೯೫, ಪು.೧೯೪

೧೮. ಸಿಂದ್ ಮಾದಿಗರ ಸಂಸ್ಕೃತಿ, ಕೊಟಗಾನಹಳ್ಳಿ ರಾಮಯ್ಯ, ೧೯೯೩, ಪು.೦೭

೧೯. ಅದೇ, ಪು.೦೯

೨೦. ಕರ್ನಾಟಕ ಜನಪದ ಕಲೆಗಳ ಕೋಶ, ಹಿ.ಚಿ.ಬೋರಲಿಂಗಯ್ಯ(ಸಂ), ೧೯೭೯, ಪು.೨೦೭

೨೧. ಸಿಂದ್ ಮಾದಿಗರ ಸಂಸ್ಕೃತಿ, ಕೊಟಗಾನಹಳ್ಳಿ ರಾಮಯ್ಯ, ೧೯೯೩, ಪು.೪೧

೨೨. ಅದೇ, ಪು.೧೦

೨೩. ಅದೇ, ಪು.೦೮

೨೪. ದಕ್ಕಲರ ಸಂಸ್ಕೃತಿ, ಚಲುವರಾಜು, ೧೯೯೩, ಪು.೩೭

೨೫. ಅದೇ, ಪು.೧೮-೧೯

೨೬. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ಮೈಲಹಳ್ಳಿ ರೇವಣ್ಣ, ೧೯೯೬, ಪು.೫೭

೨೭. ಮಾಸ್ತೀಕರ ಸಂಸ್ಕೃತಿ, ಲಕ್ಷ್ಮೀಪತಿ ಕೋಲಾರ, ೧೯೯೩, ಪು.೧೯-೨೦

೨೮. ಅದೇ, ಪು.೧೯-೨೦

೨೯. ಅದೇ, ಪು.೧೩

೩೦. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ೧೯೯೬, ಪು.೫೮

೩೧. ದಲಿತರ ಬದುಕು ಮತ್ತು ಸಂಸ್ಕೃತಿ, ಡಾ.ಅರ್ಜುನ ಗೊಳಸಂಗಿ, ೨೦೦೦, ಪು.೧೬೦

೩೨. ಕರ್ನಾಟಕ ರಾಜ್ಯ ಮಟ್ಟದ ಮಚಿಗಾರ ಸಮಾಜದ ಮಹಾ ಅಧಿವೇಶನ, ಸಂಸ್ಮಾರಣ ಸಂಚಿಕೆ, ೧೯೯೪

೩೩. ಕರ್ನಾಟಕ ಕನ್ನಡಿ, ೧೯೯೯, ಪು. ೫೭

೩೪. ಗ್ರಾಮ ದೇವತೆಗಳು, ಸಿದ್ದಲಿಂಗಯ್ಯ, ಪು.೪೧

೩೫. ಹರತಿಸಿರಿ, ಲಕ್ಷ್ಮಣ್ ತೆಲಗಾವಿ, ೧೯೮೭, ಪು.೭೯೯

೩೬. ದುರುಗ ಜಾನಪದ, ಡಾ.ಮೀರಾಸಾಬಿಹಳ್ಳಿ ಶಿವಣ್ಣ, ೧೯೯೯, ಪು.

೩೭. ಸಿಂದ್ ಮಾದಿಗರ ಸಂಸ್ಕೃತಿ, ೧೯೯೩, ಪು.೧೫

೩೮. ಅದೇ ಪು.೧೫

೩೯. ಅದೇ ಪು.೧೬-೧೭

೪೦. ಅದೇ ಪು.೧೭-೧೮

೪೧. ಅದೇ ಪು.೧೮

೪೨. ಅದೇ ಪು.೧೯

೪೩. ಕನ್ನಡ ಜಾನಪದ ವಿಶ್ವಕೋಶ, ಡಾ.ಚಂದ್ರಶೇಖರ ಕಂಬಾರ, ೧೯೮೫, ಪು.೮೫೬-೮೫೭

೪೪. ಅದೇ, ಪು.೮೫೭

೪೫. ಅದೇ, ಪು.೮೫೭

೪೬. ಅದೇ, ಪು.೮೫೭

೪೭. ಅದೇ, ಪು.೮೫೮

೪೮. ಸಿಂದ್ ಮಾದಿಗರ ಸಂಸ್ಕೃತಿ, ೧೯೯೩, ಪು. ೨೫

೪೯. ಇಂಡಿಯಾಸ್ ಕಮ್ಯುನಿಟಿಸ್, ವ್ಯಾಲುಮ್ ೫, ಕೆ.ಎಸ್.ಸಿಂಗ್, ೧೯೯೮

೫೦. ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ, ಸಂ.೪, ಥರಸ್ಟನ್, ೧೯೮೭, ಪು.೩೧೭

೫೧. ಅದೇ, ಪು.೩೨೫

೫೨. ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್

೫೩. ದಾರ್ಶನಿಕರು ಮತ್ತು ದಲಿತರು, ಪ್ರೊ.ಟಿ.ಯಲ್ಲಪ್ಪ ಬೂತಯ್ಯ, ೨೦೦೦, ಪು.೧೩

೫೪. ಗಟ್ಟಿ ಹೊಸಹಳ್ಳಿ ಗಟ್ಟಿಗ, (ಸಂ.ಹರ್ತಿಕೋಟೆ ಧೀರೇಂದ್ರ ಸಿಂಹ, ತೇಜಸ್ವಿ ಕಟ್ಟಿಮನಿ, ೨೦೦೨, ಪು. ೧೨೮

೫೫. ಸಿಂದ್ ಮಾದಿಗರ ಸಂಸ್ಕೃತಿ, ಕೊಟಗಾನಹಳ್ಳಿ ರಾಮಯ್ಯ, ೧೯೯೩, ಪು.

೫೬. ಅದೇ ಪು.೨೬

೫೭. ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ, ಸಂ.೪, ಥರಸ್ಟನ್, ೧೯೮೭, ಪು.೩೧೮

೫೮. ಸಿಂದ್ ಮಾದಿಗರ ಸಂಸ್ಕೃತಿ, ೧೯೯೩, ಪು.೨೭

೫೯. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ೧೯೯೬, ಪು.

೬೦. ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಎಂ.ಚಿದಾನಂದಮೂರ್ತಿ, ೧೯೮೫, ಪು.೪

೬೧. ಅದೇ, ಪು.೬

೬೨. ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ೧೯೯೩, ಪು.೨೪

೬೩. ಅದೇ, ಪು.೨೭

೬೪. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ಮೈಲಹಳ್ಳಿ ರೇವಣ್ಣ, ೧೯೯೬, ಪು.೩೩

೬೫. ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಎಂ. ಚಿದಾನಂದಮೂರ್ತಿ, ೧೯೮೫, ಪು.೩೭

೬೬. ಅದೇ, ಪು. ೩೪

೬೭. ಅದೇ, ಪು.೩೬

೬೮. ಅದೇ, ಪು.೩೬

೬೯. ಕರ್ನಾಟಕದ ವೀರಗಲ್ಲುಗಳು, ಆರ್.ಶೇಷಶಾಸ್ತ್ರಿ, ಪು.೫೦-೫೧

೭೦. ಅದೇ, ಪು.೫೨

೭೧. ಕನ್ನಡ ಕಾವ್ಯಗಳಲ್ಲಿ ಸಮರಚಿತ್ರಗಳು, ಶ್ರೀಕಂಠಯ್ಯ, ೧೯೮೩, ಪು.೪

೭೨. ಅದೇ, ಪು.೪

೭೩. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ೧೯೯೬, ಪು.೪೨

೭೪. ಅದೇ, ಪು.೫೩

೭೫. ಅದೇ, ಪು.೬೦೭-೬೦೮

೭೬. ಅದೇ, ಪು.೬೧೦-೬೧೧

೭೭. ಅದೇ, ಪು.೩೪

೭೮. ಅದೇ, ಪು.೩೭

೭೯. ಅದೇ, ಪು.೭

೮೦. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ೧೯೯೬, ಪು.೩೯

೮೧. ಅದೇ, ಪು.೩೭

೮೨. ಅದೇ, ಪು.೩೭

೮೩. ಅದೇ, ಪು.೩೯

೮೪. ಅದೇ, ಪು.೩೯

೮೫. ಅದೇ, ಪು.೩೯

೮೬. ಸಿಂದ್ ಮಾದಿಗರ ಸಂಸ್ಕೃತಿ, ೧೯೯೩, ಪು.೪೫

೮೭. ಅದೇ, ಪು.೬೧-೬೩

೮೮. ಅದೇ, ಪು.೬೩

೮೯. ಅದೇ, ಪು.೬೭

೯೦. ಅದೇ, ಪು.೬೫

೯೧. ಅದೇ, ಪು.೬೬

೯೨. ಅದೇ, ಪು.೬೬

೯೩. ಅದೇ, ಪು.೭೩

೯೪. ಅದೇ, ಪು.೬೩

೯೫. ಅದೇ, ಪು.೩೪

೯೬. ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಎಂ.ಚಿದಾನಂದಮೂರ್ತಿ, ೧೯೮೫, ಪು.೯೭

೯೭. ವಚನ ಸಾಹಿತ್ಯ, ಎಂ.ಚಿದಾನಂದಮೂರ್ತಿ, ೧೯೭೫, ಪು.೧೨

೯೮. ಅದೇ, ಪು.೧೧

೯೯. ವಚನ ಸಾಹಿತ್ಯದಲ್ಲಿ ಕೆಳವರ್ಗದ ಆಶಯ ಮತ್ತು ಅಭಿವ್ಯಕ್ತಿ, ೧೯೯೩, ಪು.೮೬

೧೦೦. ದಾರ್ಶನಿಕರು ಮತ್ತು ದಲಿತರು, ಪ್ರೊ.ಟಿ.ಯಲ್ಲಪ್ಪ ಬೂತಯ್ಯ, ೨೦೦೦, ಪು.೩೮

೧೦೧. ವಚನ ಸಾಹಿತ್ಯ, ಎಂ.ಚಿದಾನಂದಮೂರ್ತಿ, ೧೯೭೫, ಪು.೧೯

೧೦೨. ಅದೇ, ಪು.೧೯

೧೦೩. ದಾರ್ಶನಿಕರು ಮತ್ತು ದಲಿತರು,ಟಿ.ಯಲ್ಲಪ್ಪಬೂತಯ್ಯ, ೨೦೦೦, ಪು.೭೭

೧೦೪. ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ೧೯೮೫, ಪು.೧೦೨

೧೦೫. ವಚನ ಸಾಹಿತ್ಯ, ಎಂ.ಚಿದಾನಂದಮೂರ್ತಿ, ೧೯೭೫, ಪು.೭೩

೧೦೬. ದಾರ್ಶನಿಕರು ಮತ್ತು ದಲಿತರು, ಪ್ರೊ.ಟಿ.ಯಲ್ಲಪ್ಪ ಬೂತಯ್ಯ, ೨೦೦೦, ಪು.೮೦

೧೦೭. ಶರಣ ಹರಳಯ್ಯ, ಮಾರ್ಕಂಡೇಯ ದೊಡ್ಡಮನಿ, ಪು.೫೦

೧೦೮. ದಾರ್ಶನಿಕರು ಮತ್ತು ದಲಿತರು, ಪ್ರೊ.ಟಿ.ಯಲ್ಲಪ್ಪ ಬೂತಯ್ಯ, ೨೦೦೦, ಪು.೬೦

೧೦೯. ಅದೇ, ಪು.೬೧

೧೧೦. ಅದೇ, ಪು.೬೩

೧೧೧. ಅದೇ, ಪು.೬೩

೧೧೨. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, (ಸಂ) ಲಕ್ಷ್ಮಣ್ ತೆಲಗಾವಿ, ೧೯೯೫, ಪು.೧೪೦-೧೪೧

೧೧೩. ಅದೇ, ಪು.೧೫೨-೫೩

೧೧೪. ದಾರ್ಶನಿಕರು ಮತ್ತು ದಲಿತರು, ಪ್ರೊ.ಯಲ್ಲಪ್ಪ ಬೂತಯ್ಯ, ೨೦೦೦, ಪು.೫೪

೧೧೫. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, ೧೯೯೫, ಪು.೧೫೩

೧೧೬. ದಾರ್ಶನಿಕರು ಮತ್ತು ದಲಿತರು, ಯಲ್ಲಪ್ಪ ಬೂತಯ್ಯ, ೨೦೦೦, ಪು.೫೫

೧೧೭. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, ೧೯೯೫, ಪು.೧೫೫

೧೧೮. ಅದೇ, ಪು.೧೫೫

೧೧೯. ಅದೇ, ಪು.೧೩೫

೧೨೦. ದಾರ್ಶನಿಕರು ಮತ್ತು ದಲಿತರು, ಯಲ್ಲಪ್ಪ ಬೂತಯ್ಯ, ೨೦೦೦, ಪು.೫೫-೫೬

೧೨೧. ಘಟ್ಟಿಹೊಸಹಳ್ಳಿ ಘಟ್ಟಿಗ, ೨೦೦೨, ಪು. ೬೪

೧೨೨. ಅದೇ, ಪು.೬೬

೧೨೩. ಮಲೆಮಾದೇಶ್ವರ ಕಾವ್ಯ, ಡಾ.ಕೇಶವನ್ ಪ್ರಸಾದ್(ಸಂ), ೧೯೯೭, ಪು.XI-XIV

೧೨೪. ದಾರ್ಶನಿಕರು ಮತ್ತು ದಲಿತರು, ಯಲ್ಲಪ್ಪ ಬೂತಯ್ಯ, ೨೦೦೦, ಪು.೬೮

೧೨೫. ಮಲೆಮಾದೇಶ್ವರ ಕಾವ್ಯ, ಡಾ.ಕೇಶವನ್ ಪ್ರಸಾದ್(ಸಂ), ೧೯೯೭, ಪು. X-XVI

೧೨೬. ಮಲೆಮಾದೇಶ್ವರರ ಒಂದು ಅಧ್ಯಯನ, ಡಾ.ಬಿ.ಎಸ್.ಸ್ವಾಮಿ, ಪು ೧೫೪

೧೨೭. ಮಲೆಮಾದೇಶ್ವರ ಕಾವ್ಯ, ಡಾ.ಕೇಶವನ್ ಪ್ರಸಾದ್ (ಸಂ), ೧೯೯೭, ಪು. XIV

೧೨೮. ಮಲೆಮಾದೇಶ್ವರ ಒಂದು ಅಧ್ಯಯನ, ಡಾ. ಬಿ.ಎಸ್.ಸ್ವಾಮಿ,, ಪು.೧೫೪

೧೨೯. ಅದೇ, ಪು.೧೫೦

೧೩೦. ಅದೇ, ಪು.೬೭-೬೮

೧೩೧. ವಚನ ಪುರುಷ, ಡಾ.ವಿದ್ಯಾಶಂಕರ, ೧೯೮೧, ಪು.೭೭

೧೩೨. ಹೋರಾಟದ ನೆನೆಹುಗಳು ಚಿತ್ರದುರ್ಗ ಜಿಲ್ಲೆಯ ಯೋಧರ ಸಮ್ಮೇಳನ, ಸ್ಮರಣಸಂಚಿಕೆ, ೧೯೯೬, ಪು.೩೫

೧೩೩. ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಬಿ.ಶೇಷಾದ್ರಿ. ಮತ್ತು ಟಿ.ಆರ್.ಚಂದ್ರಶೇಖರ್ (ಸಂ), ೧೯೯೮, ಪು.೨೦

೧೩೪. ಚಿತ್ರದುರ್ಗ ಜಿಲ್ಲೆಯ ಯೋಧರ ಸಮ್ಮೇಳನ ೧೯೯೬, ಸ್ಮರಣ ಸಂಚಿಕೆ, ಪು.೩೫

೧೩೫. ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಬಿ.ಶೇಷಾದ್ರಿ, ೧೯೯೮, ಪು.೪೩

೧೩೬. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಸಂಪುಟ-ಮೂರು, ಡಾ. ಸೂರ್ಯನಾಥ್ ಕಾಮತ್, ೧೯೮೦, ಪು.೮೭೧

೧೩೭. ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಬಿ.ಶೇಷಾದ್ರಿ, ೧೯೯೮, ಪು.೬೩

೧೩೮. ಕರ್ನಾಟಕದ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ, ಸಿ.ಆರ್.ಗೋವಿಂದರಾಜು, ೧೯೯೮, ಪು.೭೨

೧೩೯. ಸಂಡೂರು ಹೋರಾಟ, ಹನುಮಂತ, ೧೯೮೧, ಪು.೧೩

೧೪೦. ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ಲಕ್ಷ್ಮಣ್ ತೆಲಗಾವಿ, ೧೯೯೯, ಪು.೮೭

# ಅಧ್ಯಾಯ ೩

# ಸಾಮಾಜಿಕ ಹೊರ-ಒಳನೋಟಗಳು

೩.೧ ಮಾದಿಗರ ಜೀವನ ವಿಧಾನ ಮತ್ತು ಸಂಸ್ಕೃತಿ
೩.೨ ಮಾದಿಗರ ಸಾಮಾಜಿಕ ಸ್ಥಾನ-ಮಾನಗಳು
೩.೩ ಶೋಷಣೆಯ ವಿವಿಧ ಮುಖಗಳು ಮತ್ತು ಮಾದಿಗರು
೩.೪ ಬಸವಿ ಪದ್ಧತಿ ಮತ್ತು ಮಾದಿಗರು
೩.೫ ಮತಾಂತರ ಪ್ರಕ್ರಿಯೆಯಲ್ಲಿ ಮಾದಿಗರ ಪಾತ್ರ
೩.೬ ಸಮಾಜದ ಇತರ ಜಾತಿಗಳೊಂದಿಗಿನ ಸಾಮಾಜಿಕ ಸಂಬಂಧಗಳು

## ೩.೧. ಮಾದಿಗರ ಜೀವನ ವಿಧಾನ ಮತ್ತು ಸಂಸ್ಕೃತಿ

ಮಾದಿಗರ ಜೀವನ ವಿಧಾನ ಮತ್ತು ಸಂಸ್ಕೃತಿಯನ್ನು ಸಮಗ್ರವಾಗಿ ತಿಳಿಯಬೇಕಾದರೆ ಅವರ ಜೀವನದ ರೀತಿನೀತಿಗಳು ಮತ್ತು ಜೀವನದ ಪ್ರತಿಯೊಂದು ಸಂದರ್ಭದಲ್ಲಿ ಅನುಸರಿಸುವ ವಿಧಾನ ಹಾಗೂ ಆಚರಣೆಗಳನ್ನು ಕೂಲಂಕಶವಾಗಿ ನೋಡಬೇಕಾಗುತ್ತದೆ. ಅವುಗಳನ್ನು ಸಂಪೂರ್ಣವಾಗಿ ತಿಳಿಯುವ ದೃಷ್ಟಿಯಿಂದ ಎರಡು ಭಾಗಗಳಾಗಿ ವಿಂಗಡಿಸಿ ಅಧ್ಯಯನ ಮಾಡಲಾಗಿದೆ. ೧. ಜೀವನ ವಿಧಾನ ೨. ಜೀವನದ ಪ್ರಮುಖ ಘಟ್ಟಗಳು

### ಜೀವನ ವಿಧಾನ

ಮಾದಿಗರ ಜೀವನ ಕ್ರಮವು ಹೇಗಿದೆ ಎಂಬುದನ್ನು ತಿಳಿದುಕೊಳ್ಳಲು ಅವರು ವಾಸಿಸುವ ನೆಲೆ, ಕೌಟುಂಬಿಕ ರಚನೆ, ಆಹಾರ ಪದ್ಧತಿ, ಭಾಷೆ, ಒಳಾಡಳಿತ ವ್ಯವಸ್ಥೆ ಹಾಗೂ ಉಡಿಗೆ-ತೊಡುಗೆಗಳನ್ನು ಗಮನಿಸಬೇಕು. ಈ ದೃಷ್ಟಿಯಿಂದ ಅವುಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

### ವಸತಿ ವ್ಯವಸ್ಥೆ

ಯಾವುದೇ ಗ್ರಾಮದಲ್ಲೂ ಮಾದಿಗರು ಪ್ರತ್ಯೇಕವಾದ ಸ್ಥಳದಲ್ಲಿ ವಾಸಿಸುತ್ತಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಕೀಳು ವೃತ್ತಿಯಲ್ಲಿ ತೊಡಗಿದ್ದ ಕೆಳಜಾತಿಗಳನ್ನು ಪ್ರತ್ಯೇಕವಾಗಿ ವಾಸಿಸಲು ಸಾಮಾಜಿಕ ಒತ್ತಡ ಏರಿರಬೇಕು. ಹಿಂದೆ ಚರ್ಮಗಾರಿಕೆಯಿಂದಾಗಿ ಕೇರಿಗಳಲ್ಲಿ ಚರ್ಮದ ವಾಸನೆ ಇರುತ್ತಿದ್ದುದರಿಂದ ಈ ಕೇರಿಗಳನ್ನು ಅದಷ್ಟು ಊರಿಗೆ ದೂರದಲ್ಲಿ ನಿರ್ಮಿಸಬೇಕೆಂಬ ಸಾಮಾಜಿಕ ಕಟ್ಟಳೆ ಜಾರಿಯಲ್ಲಿದ್ದಿರಬೇಕು.[೧] ಈ ಹಿನ್ನೆಲೆಯಲ್ಲಿ ಮಾದಿಗರು ಪ್ರತ್ಯೇಕವಾಗಿ ವಾಸಮಾಡುತ್ತಾ ಬಂದಿದ್ದಾರೆ. ಆದರೆ ಇಂದು ಗ್ರಾಮ ಬೆಳವಣಿಗೆಯಿಂದಾಗಿ ಇತರೆ ಜಾತಿಗಳ ಮನೆಗಳೊಂದಿಗೆ ಹೊಂದಿಕೊಂಡಂತೆ ಕಾಣುತ್ತವೆ. ಗ್ರಾಮೀಣ ಪ್ರದೇಶದ ವಸತಿ ವ್ಯವಸ್ಥೆ ಇದಾಗಿದ್ದರೆ ಪಟ್ಟಣ ಪ್ರದೇಶದಲ್ಲಿ ಮಾದಿಗರ ಪ್ರತ್ಯೇಕ ಕೇರಿಗಳು ಕಂಡುಬರುತ್ತವೆ. ಏಕೆಂದರೆ ಹಿಂದೊಮ್ಮೆ ಇವು ಗ್ರಾಮೀಣ ಪ್ರದೇಶಗಳೇ ಆಗಿದ್ದವು. ಆದರೆ ಇತ್ತೀಚೆಗೆ ಹೊಸ ಬಡಾವಣೆಗಳ ನಿರ್ಮಾಣವು ಅಂತಹ ಪ್ರತ್ಯೇಕತೆಯ ಕಡೆ ಗಮನಹರಿಸಿರುವುದಿಲ್ಲ. ಈಗಾಗಲೇ ಮಾದಿಗರು ಹೆಚ್ಚು ವಾಸಿಸುತ್ತಿರುವ ಕೇರಿಗಳನ್ನು 'ಗಾಂಧಿನಗರ' 'ಅಂಬೇಡ್ಕರ್ ನಗರ' 'ಹರಿಜನ ಕೇರಿ' ಎಂಬ ಹೆಸರುಗಳಿಂದ ಗುರುತಿಸಿ ಕೊಂಡಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಮಾತ್ರ 'ಮಾದಿಗರ ಕೇರಿ' ಎಂದೇ ಕರೆಯಲಾಗುತ್ತದೆ.

ಮಾದಿಗರ ಮನೆಗಳನ್ನು ನೋಡಿದರೆ ಗುಡಿಸಲುಗಳೆ ಹೆಚ್ಚಿನ ಸಂಖ್ಯೆಯಲ್ಲಿ ಇವೆ. ಮಾದಿಗರ ಗುಡಿಸಲುಗಳಿಲ್ಲದ ಗ್ರಾಮಗಳೆ ಇಲ್ಲವೆಂದರೆ ತಪ್ಪಾಗಲಾರದು. ಮಾದಿಗರು ಗುಡಿಸಲನ್ನೂ ಹೊಂದಿರದಿರುವ ಗ್ರಾಮಗಳು ಅಪರೂಪ. ಈ ಗುಡಿಸಲುಗಳಲ್ಲಿ ಪ್ರತ್ಯೇಕವಾದ ಕೋಣೆಗಳೇನೂ ಇರುವುದಿಲ್ಲ. ಅಡಿಗೆ ಮಾಡುವ ಕಡೆ ತೆಂಗಿನ ಗರಿಯಿಂದ ತಡಿಕೆಯೊಂದನ್ನು ಕಟ್ಟಿಕೊಂಡಿರುವರು. ಉಳಿದಂತೆ ಊಟ ಮಾಡುವ, ಮಲಗುವ ಮುಂತಾದ ಕಾರ್ಯಗಳು ಒಂದೇ ಸ್ಥಳದಲ್ಲಿ ನಡೆಯುತ್ತವೆ. ಇಂದು ಸರ್ಕಾರ ಕೈಗೊಂಡ ವಸತಿ ಯೋಜನೆಗಳು ಮತ್ತು ಆರ್ಥಿಕ ಮುಂದುವರಿಕೆಯ ಕ್ರಮವಾಗಿ ಹಿಂದೊಮ್ಮೆ ಗುಡಿಸಲುಗಳಿಂದಲೇ ತುಂಬಿರುತ್ತಿದ್ದ ಗ್ರಾಮಗಳಲ್ಲಿ ಮಾಳಿಗೆ, ಹೆಂಚಿನ, ಸೀಮೆಂಟ್ ಶೀಟ್ ಹಾಗೂ ಆರ್‌ಸಿಸಿ ಮನೆಗಳು ಸಹ ಕಂಡುಬರುತ್ತವೆ. ಗ್ರಾಮೀಣ ಪ್ರದೇಶದಲ್ಲಿ ಮಾದಿಗರ ಆರ್‌ಸಿಸಿ ಮನೆಗಳು ಇರುವುದು ಕಡಿಮೆ. ನಗರ ಪ್ರದೇಶದಲ್ಲಿ ನೌಕರಿ ಹೊಂದಿರುವ ಕೆಲವರು ಮಾದಿಗರು ಕಟ್ಟಿಸಿಕೊಂಡಿದ್ದಾರೆ. ಕುಡಿಯುವ ನೀರಿನ ವ್ಯವಸ್ಥೆಗೆ ಬಂದರೆ, ಹಿಂದೆ ಮಾದಿಗರಿಗೆ ಪ್ರತ್ಯೇಕವಾದ ಬಾವಿಗಳು ಇದ್ದುದು ಅನೇಕ ಗ್ರಾಮಗಳ ಹಳೆಯ ಬಾವಿಗಳು ನಿರೂಪಿಸುತ್ತವೆ. ಆದರೆ ಇಂದು ಅವು ಬಳಕೆಯಾಗದೆ ಹಾಳುಬಿದ್ದಿವೆ. ಬೋರ್‌ವೆಲ್ ಬಳಕೆ ಎಲ್ಲ ಕಡೆ ಕಾಣುತ್ತಿದ್ದು ಮಾದಿಗರ ಕೇರಿಗಳಲ್ಲೂ ಬೊರ್‌ವೆಲ್ ಇರುವುದು ಕಂಡುಬರುತ್ತವೆ. ಬೋರ್‌ವೆಲ್ ಇರದ ಕಡೆ ಸವರ್ಣೀಯರ ಕೇರಿಯಲ್ಲಿ ನೀರು ತರಲು ಹೋದಾಗ ಗಲಾಟೆಗಳು ಸರ್ವೇಸಾಮಾನ್ಯವಾಗಿವೆ.

**ಕೌಟುಂಬಿಕ ರಚನೆ**

ಮಾದಿಗರಲ್ಲಿ ಹೆಚ್ಚಾಗಿ ಅವಿಭಕ್ತ ಕುಟುಂಬಗಳು ಕಂಡುಬರುತ್ತವೆ. ಇದು ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡಕ್ಕೂ ಅನ್ವಯವೇ. ಆದರೆ ಇತ್ತೀಚೆಗೆ ವಿವಿಧ ಕಾರಣಗಳಿಗಾಗಿ ವಿಭಕ್ತ ಕುಟುಂಬಗಳು ಹೆಚ್ಚಾಗುತ್ತಿರುವುದು ಸಾಮಾನ್ಯವಾಗಿದೆ. ಮನೆಯ ಯಜಮಾನನಿಗೆ ವಯಸ್ಸಾದ ಬಳಿಕ ತಾನು ಹೊಂದಿರುವ ಮನೆ ಮತ್ತು ಹೊಲಗಳನ್ನು ತಮ್ಮ ಮಕ್ಕಳಿಗೆ ಸಮಾನವಾಗಿ ಹಂಚಿಕೆ ಮಾಡುತ್ತಾನೆ. ಹೀಗೆ ವಿಭಜನೆಗೊಂಡ ಅಣ್ಣ-ತಮ್ಮಂದಿರು ಪ್ರತ್ಯೇಕವಾದ ಸಂಸಾರವನ್ನು ಹೂಡಲು ಆರಂಭಿಸುತ್ತಾರೆ. ತಂದೆ ತಾಯಿಯರನ್ನು ನೋಡಿಕೊಳ್ಳುವ ಹೊಣೆ ಎಲ್ಲರೂ ತೆಗೆದುಕೊಳ್ಳಬೇಕಾಗುತ್ತದೆ ಇಲ್ಲವೇ ಆಸ್ತಿ ಹಂಚಿಕೆಯ ಸಂದರ್ಭದಲ್ಲಿ ಹೆಚ್ಚು ಪಾಲನ್ನು ಯಾರಾದರೊಬ್ಬರು ತೆಗೆದುಕೊಂಡು ಅವರನ್ನು ಸಾಕುವ ಹೊಣೆಯನ್ನು ಹೊತ್ತಿರುತ್ತಾರೆ. ಈ ಬಗೆಯಲ್ಲಿ ವಿಭಕ್ತಕುಟುಂಬವಿರಲಿ ಅವಿಭಕ್ತ ಕುಟುಂಬವೇ ಆಗಿರಲಿ ಮನೆಯ ಹಿರಿಯ ಕುಟುಂಬದ ಯಜಮಾನಿಕೆ ಪಟ್ಟವನ್ನು ಹೊಂದಿದ್ದು ಆತನು ಕುಟುಂಬದ ಎಲ್ಲಾ ಕಾರ್ಯಗಳ ಮೇಲೆ ನಿಯಂತ್ರಣದ ಹಕ್ಕು ಪಡೆದಿರುತ್ತಾನೆ. ಮನೆಯ ಒಳಗೆ ನಡೆಯುವ ಪ್ರತಿಯೊಂದು ಕಾರ್ಯಕ್ರಮಗಳ ಮೇಲೆ ಮನೆಯ ಯಜಮಾನನಷ್ಟೆ ಪ್ರಭಾವ ಬೀರುವ ವ್ಯಕ್ತಿಯೆಂದರೆ ಹೆಂಡತಿ ಇಲ್ಲವೇ ಆತನ ತಾಯಿಯಾಗಿರುತ್ತಾಳೆ.

## ಭಾಷೆ

ಮಾದಿಗರಿಗೆ ಪ್ರತ್ಯೇಕವಾದ ಭಾಷೆಯೇನೂ ಇಲ್ಲವಾದರೂ ಇವರು ಹೆಚ್ಚಾಗಿ ಮಾತನಾಡುವುದು ಕನ್ನಡ ಭಾಷೆಯನ್ನೆ. ಹೀಗಾಗಿ ಇವರ ಪ್ರಧಾನಭಾಷೆ ಕನ್ನಡವೇ ಆಗಿದೆ. ಚಿತ್ರದುರ್ಗ ಜಿಲ್ಲೆಯ ಹಿರಿಯೂರು, ಚಿತ್ರದುರ್ಗ, ಹೊಸದುರ್ಗ, ಹೊಳಲ್ಕೆರೆ ತಾಲ್ಲೂಕುಗಳಲ್ಲಿ ಹೆಚ್ಚಾಗಿ ಕನ್ನಡ ಮಾತನಾಡುವವರು ಹೆಚ್ಚಾಗಿ ಇದ್ದರೆ ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಕನ್ನಡ ಭಾಷೆಯನ್ನಲ್ಲದೆ ತೆಲುಗು ಭಾಷೆಯನ್ನು ಸಹ ಮಾತನಾಡುವುದು ಮಾದಿಗರಲ್ಲಿ ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಸಂಡೂರು, ಕೂಡ್ಲಿಗಿ, ಹೂವಿನ ಹಡಗಲಿ, ಹಗರಿಬೊಮ್ಮನಹಳ್ಳಿ ತಾಲೂಕುಗಳಲ್ಲಿ ಕನ್ನಡ ಭಾಷೆಯನ್ನು ಹೆಚ್ಚಾಗಿ ಮಾತನಾಡುವವರು ಈ ಜನಾಂಗದಲ್ಲಿ ಕಂಡುಬಂದರೆ ಬಳ್ಳಾರಿ ಮತ್ತು ಸಿರುಗುಪ್ಪ ತಾಲ್ಲೂಕುಗಳಲ್ಲಿ ಕನ್ನಡವಲ್ಲದೇ ತೆಲುಗು ಭಾಷೆಯನ್ನು ಹೆಚ್ಚಾಗಿ ಬಳಕೆ ಮಾಡುವುದು ಕಂಡುಬರುತ್ತದೆ. ಈ ರೀತಿ ತೆಲುಗು ಭಾಷೆಗೆ ಪ್ರಭಾವಿತರಾಗಲು ಪ್ರಮುಖ ಕಾರಣ ಕನ್ನಡ ನಾಡಿನ ಪ್ರದೇಶಗಳಿಗೆ ಹೊಂದಿಕೊಂಡಿರುವ ಆಂಧ್ರ ರಾಜ್ಯ ತೆಲುಗು ಭಾಷೆ ಪ್ರಭಾವ ಬೀರಿದೆ. ಅಲ್ಲದೇ ಈ ಜನಾಂಗದ ಅನೇಕರು ಆಂಧ್ರ ಪ್ರದೇಶದಿಂದ ವಲಸೆ ಬಂದು ಈ ಎರಡು ಜಿಲ್ಲೆಯ ಅನೇಕ ಭಾಗಗಳಲ್ಲಿ ನೆಲೆಸಿರುವುದು ಕಾರಣವಾಗಿದೆ. ಹೀಗಾಗಿ ಇಂದಿಗೂ ಅಂಥವರು ತೆಲುಗು ಭಾಷೆಯನ್ನು ಮಾತನಾಡುವುದು ಕಂಡುಬರುತ್ತದೆ.

## ಆಹಾರ ಪದ್ಧತಿ

ಮಾದಿಗರು ತಿನ್ನಲು ಯೋಗ್ಯವಾದ ಮತ್ತು ಜೀವ ಪೋಷಣೆಗೆ ಅಗತ್ಯವಾದ ಪ್ರತಿಯೊಂದು ಆಹಾರವು ಇವರಲ್ಲಿ ಬಳಕೆ ಇದೆ. ಈ ಎಲ್ಲ ಆಹಾರಗಳಿಗಿಂತಲೂ ಮಾಂಸಾಹಾರ ಹೆಚ್ಚುಪ್ರಿಯ. ಪ್ರತಿಯೊಂದು ಗ್ರಾಮ ಮತ್ತು ಪಟ್ಟಣಗಳಲ್ಲಿ ನೆಲೆಸಿರುವ ಮಾದಿಗರು ಹೆಚ್ಚು ಇಷ್ಟಪಡುವುದು ಇದನ್ನೇ. ಅದರಲ್ಲೂ ಕೋಣ ಮತ್ತು ದನದ ಮಾಂಸ ಅತಿಹೆಚ್ಚು ಪ್ರಿಯವಾಗಿದೆ. ಇವರು ಮಾಂಸಹಾರಿಗಳಾಗಲಿಕ್ಕೆ ಕಾರಣಗಳು ಇಲ್ಲದಿಲ್ಲ. ಗ್ರಾಮ ದೇವತೆಗಳ ಆರಾಧನೆಯಲ್ಲಿ ಕೋಣನ ಬಲಿ ಕಡ್ಡಾಯ ಇರುವುದರಿಂದ ಮತ್ತು ಮಾದಿಗರು ಬಲಿ ನಿರ್ವಾಹಕರಾದ್ದರಿಂದ ಅವರಿಗೆ ಬಲಿಕೋಣದ ಪ್ರಧಾನ ಪಾಲು ಸಂದಾಯವಾಗುತ್ತಿತ್ತು. ಸತ್ತ ದನಗಳ ವಾರಸುದಾರರು ಇವರೇ ಆದ್ದರಿಂದ ತಿನ್ನಲು ಯೋಗ್ಯವಾಗಿದ್ದ ಸತ್ತ ದನದ ಮಾಂಸವೂ ಇವರ ಮುಖ್ಯ ಆಹಾರವಾಗಿತ್ತು(ಸಿಂದ್ ಮಾದಿಗರ ಸಂಸ್ಕೃತಿ, ಪು.೮೫) . ಇವತ್ತಿಗೂ ಗ್ರಾಮೀಣ ಪ್ರದೇಶದಲ್ಲಿ ಸತ್ತ ದನ-ಕರುಗಳನ್ನು ಎತ್ತಿ ಹಾಕಲೇಬೇಕೆಂಬ ಸಂಪ್ರದಾಯವನ್ನು ನಿರಾಕರಿಸಲಾಗದೆ ಮುಂದುವರಿಸಿರುವುದು ಕಂಡುಬರುತ್ತದೆ. ಹೀಗಿದ್ದರೂ ಅನೇಕ ಕಡೆ ಈ ಸೇವೆ ನಿಂತು ಹೋಗಿದೆ. ಅಲ್ಲದೆ ಶಿಕ್ಷಿತರನೇಕರು ಈ ಬಗೆಯ ಮಾಂಸವನ್ನು ಕೈಬಿಟ್ಟು ಉಳಿದ ಸಾಕು ಪ್ರಾಣಿಗಳ ಮಾಂಸ ತಿನ್ನುತ್ತಾರೆ.

ಮಾದಿಗರು ಎತ್ತು, ಕೋಣ, ಮೇಕೆ, ಕುರಿ, ಕೋಳಿ, ಮೀನು, ಹಂದಿ ಮುಂತಾದ ಪ್ರಾಣಿಗಳ ಮಾಂಸವನ್ನು ಸೇವಿಸುವುದು ಕಂಡುಬರುತ್ತದೆ. ಜೊತೆಗೆ ಮಾಂಸದ ಊಟ ಇದ್ದಾಗ ಹೆಂಡ, ಸಾರಾಯಿ, ಸೇವನೆ(ಹಿರಿಯರಿಗೆ ಮಾತ್ರ) ಇದ್ದೇ ಇರುತ್ತದೆ. ಹಬ್ಬಕ್ಕೆ ಅಥವಾ ಜಾತ್ರೆಗೆ ಬಂದ ನೆಂಟರಿಷ್ಟರಿಗೆ ಮಾಂಸದ ಊಟ ಹಾಗೂ ಮದ್ಯ ಸೇವನೆ ಮಾಡಿಸಿದಾಗ ಮಾತ್ರವೇ ಅವರಿಗೆ ಸಮಾಧಾನ.

ದಿನನಿತ್ಯದ ಆಹಾರಕ್ಕಾಗಿ ರಾಗಿ, ಜೋಳ, ಅಕ್ಕಿ, ಸಜ್ಜೆ, ಗೋಧಿ ಮುಂತಾದ ಧಾನ್ಯಗಳನ್ನು ಬಳಸಿ ಅನ್ನ, ಮುದ್ದೆ, ರೊಟ್ಟಿ, ಚಪಾತಿ ಮುಂತಾದವುಗಳನ್ನು ಮಾಡಿ ಸೇವನೆ ಮಾಡುತ್ತಾರೆ. ಜೊತೆಗೆ ಕಡ್ಲೆಕಾಳು, ತೊಗರಿಬೇಳೆ, ಹೆಸರುಕಾಳು, ಹುರಳಿಕಾಳು, ತರಕಾರಿ ಬಳಸಿ ಸಾಂಬಾರು ಮಾಡಿಕೊಳ್ಳುತ್ತಾರೆ. ಮೊದಲು ಮಾದಿಗರು ಔಡ್ಲ ಬೀಜವನ್ನು ಹುರಿದು ಬೇಯಿಸಿ ಅದರಿಂದ ಎಣ್ಣೆ ತಯಾರಿಸಿ ಸಾಂಬಾರಿಗೆ ಬಳಸುತ್ತಿದ್ದರು. ಆದರೆ ಕಡ್ಲೆಕಾಯಿ ಎಣ್ಣೆ, ಸೂರ್ಯಕಾಂತಿ ಎಣ್ಣೆ, ಡಾಲ್ಡ ಮುಂತಾದ ಎಣ್ಣೆಯನ್ನು ಇಂದು ಬಳಸುತ್ತಾರೆ. ನವಣೆ, ಅರಕ ಮುಂತಾದವುಗಳಿಂದ ಮುದ್ದೆ ಮತ್ತು ಅನ್ನವನ್ನು ತಯಾರಿಸಿ ಊಟ ಮಾಡುತ್ತಿದ್ದರು. ಅದು ಈಗ ಕಡಿಮೆಯಾಗಿದೆ. ಹಿಂದೆ ಅಡುಗೆ ತಯಾರಿಸಲು ಮಡಕೆಯನ್ನು ಮಾತ್ರವೇ ಉಪಯೋಗಿಸುತ್ತಿದ್ದು ಇತ್ತೀಚೆಗೆ ಅಲ್ಯೂಮಿನಿಯಂ, ಸ್ಟೀಲ್ ಪಾತ್ರೆ ಮುಂತಾದ ವಸ್ತುಗಳನ್ನು ಬಳಸುವುದು ಕಂಡುಬರುತ್ತದೆಯಾದರೂ ಮಡಕೆಯನ್ನು ಬಳಸುವುದು ಇನ್ನೂ ನಿಂತಿಲ್ಲ ವೆಂದೇ ಹೇಳಬಹುದು. ಗ್ರಾಮೀಣ ಪ್ರದೇಶದಲ್ಲಿ ಕಾರ ಅರೆಯುವ ಬಂಡೆಗಳು ಕಂಡುಬಂದರೆ, ಆರ್ಥಿಕವಾಗಿ ಮುಂದೆ ಬಂದಿರುವ ಮಧ್ಯಮ ವರ್ಗದ ಕುಟುಂಬಗಳು ಮಿಕ್ಸಿ, ಕುಕ್ಕರ್, ಗ್ಯಾಸ್ ಮುಂತಾದವನ್ನು ಬಳಸುತ್ತಿರುವರು. ಹಿಂದೆ ಆಹಾರ ಸಂಗ್ರಹಣೆಗಾಗಿ ಬಳಸುತ್ತಿದ್ದ ಹಗೇವು(ಉಗ್ರಾಣ) ಗಳನ್ನು ಇಂದು ಬಳಸುವುದಿಲ್ಲ. ಹಾಗೆಯೇ ಬಿಸುವ ಕಲ್ಲುಗಳು ಹಾಗೂ ಒನಕೆಗಳ ಬಳಕೆ ತುಂಬಾ ಕಡಿಮೆ.

**ಉಡುಗೆ-ತೊಡಿಗೆ**

ಮಾದಿಗ ಜನಾಂಗವು ವಿಶೇಷವಾದ ಉಡುಗೆಯನ್ನೇನೂ ತೊಡುವುದಿಲ್ಲ. ಅವರ ಉಡುಗೆ ಅತ್ಯಂತ ಸರಳವಾಗಿದೆ. ಪುರುಷರು, ಅಂಗಿ, ನಿಕ್ಕರ್, ಬನಿಯನ್, ಲುಂಗಿ ಅಥವಾ ಪಂಚೆ ಬಳಸಿದರೆ ವಿದ್ಯಾವಂತ ಹಾಗೂ ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿರುವವರು ಅವುಗಳನ್ನು ಮಾತ್ರವಲ್ಲದೆ ಬರ್ಮುಡ(ಅಂದರೆ ಉದ್ದನೆ ನಿಕ್ಕರ್) ನೈಟ್ ಪ್ಯಾಂಟ್, ಪ್ಯಾಂಟ್, ಟಿಶರ್ಟ್ ಮುಂತಾದವುಗಳನ್ನು ಬಳಸುತ್ತಾರೆ. ಗ್ರಾಮೀಣ ಪ್ರದೇಶದಲ್ಲಿರುವ ಜನರು ಸಂತೆ, ಹಬ್ಬ, ಜಾತ್ರೆ ಮುಂತಾದ ವಿಶೇಷ ಸಂದರ್ಭಗಳಲ್ಲಿ ಅಂಗಿ, ಲುಂಗಿ ಜೊತೆಗೆ ಟರ್ಕಿ ಅಥವಾ ಮಾಮೂಲು ಟವಲ್ ಬಳಸುತ್ತಾರೆ. ಹಳೆಯ ತಲೆಮಾರಿನವರು ಕಚ್ಚೆ ಪಂಚೆಯನ್ನು ಹೆಚ್ಚಾಗಿ ಧರಿಸುತ್ತಾರೆ. ಜೊತೆಗೆ ಕೋಟು ಇದ್ದರೆ ಅದು ಎಷ್ಟೆ ಹಳೆಯದಾಗಿರಲಿ ಅಥವಾ ಹರಿದಿರಲಿ ಅದನ್ನು ತೊಟ್ಟುಕೊಳ್ಳುತ್ತಾರೆ. ಹಿಂದೆ ಕೇವಲ ಕಾಟನ್

ಬಟ್ಟೆಯನ್ನು ಮಾತ್ರವೇ ಹಾಕುತ್ತಿದ್ದ ಈ ಜನಾಂಗ, ಬಟ್ಟೆ ಇಲ್ಲದೇ ಬರಿ ಮೈಯಲ್ಲಿ ಇರುತ್ತಿದ್ದುದು ಉಂಟು. ಗೌಡ್ರು, ಗೊಂಚಿಗಾರು ಹಾಗೂ ಇತರೆಯವರು ಬಳಸಿ ಬಿಟ್ಟ, ಹಳೆಯದಾದ ಬಟ್ಟೆಯನ್ನು ಕೊಟ್ಟಿದ್ದರೆ ಅವುಗಳನ್ನು ಬಳಸುತ್ತಿದ್ದರು. ಕಾಟನ್ ಬಟ್ಟೆಯೇ ಅಪರೂಪವಾಗಿದ್ದು ಇಂದು ಟೆರಿಕಾಟ್, ನೈಲಾನ್, ರೇಷ್ಮೆ ಮುಂತಾದ ಬಗೆಯ ಬಟ್ಟೆಯನ್ನು ಸ್ತ್ರೀ ಪುರುಷರಿಬ್ಬರು ಬಳಸುತ್ತಿರುವುದು ಕಂಡುಬರುತ್ತದೆ.

ಸ್ತ್ರೀಯರು ವಿವಿಧ ಬಗೆಯ ಉಡುಗೆ-ತೊಡಿಗೆಗಳನ್ನು ಬಳಸುವುದು ಕಂಡುಬರುತ್ತದೆ. ಸೀರೆ, ಲಂಗ, ಕುಪ್ಪಸ ಮುಂತಾದವುಗಳನ್ನು ಬಳಸುತ್ತಾರೆ. ಹಿಂದೆ ಕೇವಲ ಕಾಟನ್ ಬಟ್ಟೆಯನ್ನು ಮಾತ್ರವೇ ಬಳಸುತ್ತಿದ್ದು ಇಂದು ಇತರೆ ಬಗೆಯ ಬಟ್ಟೆಗಳನ್ನು ಬಳಸುತ್ತಾರೆ. ಇತ್ತೀಚಿನ ದಿನಗಳಲ್ಲಿ ನಗರೀಕರಣದ ಪರಿಣಾಮವಾಗಿ ನೈಟಿಗಳನ್ನು ಕೆಲವರು ಬಳಸುವುದು ಕಂಡುಬರುತ್ತದೆ. ಮಹಿಳೆಯರು ಮೂಗುತಿ, ಓಲೆ, ಜುಮುಕಿ, ಬಳೆ ಮುಂತಾದ ಆಭರಣಗಳನ್ನು ತೊಡುತ್ತಾರೆ. ತಾಳಿಯ ಜೊತೆ ಆರ್ಥಿಕವಾಗಿ ಮುಂದುವರಿದಿರುವವರು ಬಂಗಾರದ ಗುಂಡುಗಳು ಇಲ್ಲವೆ ಚೈನನ್ನು ಕುತ್ತಿಗೆಯಲ್ಲಿ ಹಾಕಿಕೊಳ್ಳುತ್ತಾರೆ.

ಹಿಂದೆ ತಲೆಗೆ ಬೇವಿನ(ಕೈ ಎಣ್ಣೆ) ಎಣ್ಣೆಯನ್ನು ಮಾತ್ರವೇ ಬಳಸುತ್ತಿದ್ದು ಇಂದು ಕೊಬ್ಬರಿ ಎಣ್ಣೆ, ಔಡ್ಲೆಣ್ಣೆ ಮುಂತಾದ ಬಗೆಯ ಎಣ್ಣೆಯನ್ನು ಬಳಸುತ್ತಾರೆ. ಹಿಂದೆ ಕೇವಲ ಸವುಳು(ನೊರೆ ತರಿಸುವ ಮರಳು) ಸ್ನಾನ ಮಾಡುವಾಗ ಬಳಸುತ್ತಿದ್ದರು. ಇಂದು ಬದಲಾಗಿ ಬಟ್ಟೆ ಸೋಪು ಇಲ್ಲವೇ ಮೈಸೋಪು ಬಳಸುವುದು ಕಂಡುಬರುತ್ತದೆ.

**ನ್ಯಾಯ ಪದ್ಧತಿ**

ಮಾದಿಗ ಜನಾಂಗದಲ್ಲಿ ಪ್ರತಿಯೊಂದು ಕುಲದ ಯಜಮಾನರನ್ನು ಒಳಗೊಂಡ ಒಂದು ನ್ಯಾಯ ಸಮಿತಿಯು ಕಂಡುಬರುತ್ತದೆ. ಈ ಯಜಮಾನರಲ್ಲಿ ಬುದ್ದಿವಂತ, ಸ್ವಲ್ಪ ಅಕ್ಷರ ಜ್ಞಾನ ಬಲ್ಲವ ಸರಿಯಾದ ನ್ಯಾಯ ತೀರ್ಮಾನ ಮಾಡುವ ಸಾಮರ್ಥ್ಯ ಇರುವವನನ್ನು ಹಟ್ಟಿಯ ಯಜಮಾನ ಎಂದು ಕರೆಯಲಾಗುತ್ತದೆ. ಅಂಥವರನ್ನು 'ಮಣೆಗಾರ' ಎಂದು ಕರೆಯಲಾಗುತ್ತದೆ. ತಮ್ಮ ಜನಾಂಗದ ಯಾವುದೇ ಸಮಸ್ಯೆ ತಲೆದೋರಿದಾಗ ಹಟ್ಟಿಯ ಯಜಮಾನರು ಪಂಚಾಯಿತಿ ಸೇರಿಸಿ ನ್ಯಾಯ ತೀರ್ಮಾನ ಮಾಡುತ್ತಾರೆ. ಹಾಗೆಯೇ ಜನಾಂಗದ ಆಚೆ ಇತರೆ ಜಾತಿಗಳೊಂದಿಗೆ ಗದ್ದಲ ಅಥವಾ ಸಮಸ್ಯೆ ಉದ್ಭವವಾದಾಗ ಇವರು ಆ ಸಮಸ್ಯೆ ಬಗೆಹರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ. ಯಾವುದೇ ಗ್ರಾಮದ ಹಬ್ಬ, ಉತ್ಸವ, ಜಾತ್ರೆ ಮತ್ತು ಇತರೆ ಸಂದರ್ಭಗಳಲ್ಲಿ ಊರಿನ ಮುಖಂಡರು ಮಾದಿಗರ ಸಹಕಾರ ತೆಗೆದುಕೊಳ್ಳಲು ಹಟ್ಟಿಯ ಯಜಮಾನರನ್ನು ಕರೆಸಿ ಮಾತನಾಡುತ್ತಾರೆ. ಇಷ್ಟೆ ಅಲ್ಲದೆ ಈ ಜನಾಂಗದಲ್ಲಿ ಉಂಟಾದ ಸಮಸ್ಯೆಗಳನ್ನು ಬಗೆಹರಿಸಲು ಸುತ್ತ ಮುತ್ತಲಿನ ಹಳ್ಳಿಗಳಿಗೆ

ಹೋಗಿ ಮಾದಿಗ ಮುಖಂಡರು ನ್ಯಾಯ ತೀರ್ಮಾನ ಮಾಡಿ ಬರುತ್ತಾರೆ. ಎಷ್ಟೋ ಸಂದರ್ಭಗಳಲ್ಲಿ ಬೇರೆ ಜನಾಂಗದ ಸಮಸ್ಯೆಗಳನ್ನು ಬಗೆಹರಿಸಲು ನ್ಯಾಯ ತೀರ್ಮಾನ ಮಾಡಿರುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ತಿಳಿದುಬಂದಿತು. ಗ್ರಾಮಮಟ್ಟದಲ್ಲಿ ಸಮಸ್ಯೆ ಉದ್ಭವವಾದಾಗ ಹಟ್ಟಿಯ ಯಜಮಾನರು ಪ್ರಮುಖ ಪಾತ್ರವಹಿಸುತ್ತಾರೆ.

## ಜೀವನದ ಪ್ರಮುಖ ಘಟ್ಟಗಳು

ಒಂದು ಜನಾಂಗದ ಸಂಸ್ಕೃತಿಯ ಮೂಲ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಆ ಜನಾಂಗದ ಹುಟ್ಟು, ಸಾವು, ಮದುವೆಗೆ ಸಂಬಂಧಿಸಿದ ಆಚರಣೆಗಳು ಹೆಚ್ಚು ಪ್ರಯೋಜನಕಾರಿ. ಈ ಹಿನ್ನೆಲೆಯಲ್ಲಿ ಜೀವನದ ಪ್ರಮುಖ ಘಟ್ಟಗಳಲ್ಲಿ ಮಾದಿಗ ಜನಾಂಗ ಅನುಸರಿಸುವ ಕ್ರಮ ಮತ್ತು ಆಚರಣೆಗಳನ್ನು ಕುರಿತಂತೆ ತಿಳಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

### ಜನನ

ಪ್ರತಿಯೊಬ್ಬ ವ್ಯಕ್ತಿಯ ಜೀವನದ ಪ್ರಮುಖ ಘಟ್ಟ ಹುಟ್ಟು. ಅಲ್ಲಿಂದ ಆತ-ಆಕೆಯ ಜೀವನ ಆರಂಭಗೊಳ್ಳುವುದು. ಈ ಕ್ರಿಯೆಗೆ ಸಂಬಂಧಿಸಿದಂತೆ ಯಾವುದೇ ವಿಶಿಷ್ಟ ಆಚರಣೆ ಮಾದಿಗರಲ್ಲಿ ಇಲ್ಲ. ಮದುವೆ ಮಾಡಿದ ಹೊಸದರಲ್ಲಿ ಅಂದರೆ ಹೆಣ್ಣಿನ ಮೊದಲ ಹೆರಿಗೆಯನ್ನು ತವರು ಮನೆಯಲ್ಲಿಯೇ ಮಾಡಿಸುವುದು ರೂಢಿ. ಇದನ್ನು ಚೊಚ್ಚಲ ಹೆರಿಗೆ' ಎಂದೂ ಕರೆಯುತ್ತಾರೆ. ಗರ್ಭಿಣಿಯಾದ ಹೆಣ್ಣನ್ನು ಆಕೆಯ ತಂದೆ ತಾಯಿಗಳು ಗಂಡನ ಮನೆಯಿಂದ ತವರು ಮನೆಗೆ ಕರೆತಂದು ಹಾರೈಕೆ ಮಾಡುತ್ತಾರೆ. ಹೆರಿಗೆಯನ್ನು ಮಾಡಿಸುವ ಸೂಲಗತ್ತಿಯರು ಈ ಜನಾಂಗದಲ್ಲಿ ಪ್ರತಿ ಗ್ರಾಮದಲ್ಲಿಯೂ ಇರುತ್ತಾರೆ. ಅವರೆ ಹೆರಿಗೆಯನ್ನು ಮಾಡಿಸುತ್ತಾರೆ. ಪಟ್ಟಣ ಮತ್ತು ನಗರ ಪ್ರದೇಶಗಳಲ್ಲಿ ಆಸ್ಪತ್ರೆ ಸೌಲಭ್ಯವನ್ನು ಹೆಚ್ಚು ಬಳಸಿಕೊಳ್ಳುತ್ತಾರೆ. ಗ್ರಾಮೀಣ ಪ್ರದೇಶದಲ್ಲಿರುವ ನರ್ಸ್‌ಗಳನ್ನು ಸಹ ಹೆರಿಗೆ ಮಾಡಲು ಕರೆತರುತ್ತಾರೆ. ಹೆರಿಗೆ ಅಥವಾ ಮಗು ಜನಿಸಿದ ನಂತರ ವಿಷಯವನ್ನು ಗಂಡನ ಮನೆಯವರಿಗೆ ಹೇಳಿ ಕಳುಹಿಸುತ್ತಾರೆ. ಹೆರಿಗೆಯ ನಂತರದ ಬಾಣಂತಿ ಸಮಯದಲ್ಲಿ ತಾಯಿಯಾದವಳು ಕೆಲವು ದಿನಗಳವರೆಗೆ ಕಟ್ಟುನಿಟ್ಟಾಗಿ ಇರಬೇಕಾಗುತ್ತದೆ.

### ನಾಮಕರಣ ಶಾಸ್ತ್ರ

ಪ್ರತಿಯೊಬ್ಬ ವ್ಯಕ್ತಿಯು ಈ ಸಮಾಜದಲ್ಲಿ ತನ್ನನ್ನು ಗುರುತಿಸಿಕೊಳ್ಳಲು ಹೆಸರೊಂದನ್ನು ಹೊಂದುವುದು ಅನಿವಾರ್ಯ ಹಾಗೂ ಅಗತ್ಯವೂ ಆಗಿದೆ. ಈ ರೀತಿ ಒಂದು ಹೆಸರನ್ನು ಸೂಚಿಸುವ ಶಾಸ್ತ್ರವನ್ನು 'ನಾಮಕರಣ ಶಾಸ್ತ್ರ'ವೆಂದು ಕರೆಯಲಾಗುವುದು. ಈ ಕಾರ್ಯವನ್ನು ಮಗು ಜನಿಸಿದ ಮೂರು ಅಥವಾ ಒಂಬತ್ತು ದಿನಗಳು ಇಲ್ಲವೇ ಮೂರು ದಿನಗಳಲ್ಲಿ ಮಾಡುತ್ತಾರೆ. ಅಂದು ಶಾಸ್ತ್ರ ಕೇಳಿಸಿ ಅವರು ಸೂಚಿಸಿದ ಅಕ್ಷರದಿಂದ ಆರಂಭಗೊಳ್ಳುವ ಅನೇಕ ಹೆಸರುಗಳನ್ನು ಯೋಚಿಸಿ ನೋಡಿ

ಅವರಿಗೆ ಇಷ್ಟವಾಗುವ ಹೆಸರೊಂದನ್ನು ಕರೆಯಲು ತೀರ್ಮಾನಿಸುತ್ತಾರೆ. ಒಂದು ದಿನ 'ನಾಮಕರಣ ಶಾಸ್ತ್ರ'ದ ದಿನವೊಂದನ್ನು ಸಂಬಂಧಿಕರಿಗೆ ತಿಳಿಸಿ ಎಲ್ಲರನ್ನೂ ಕರೆಕಳುಹಿಸುವರು. ಮಗುವಿನ ತಾಯಿಯ ತವರು ಮನೆಯಲ್ಲಿಯೇ ನಾಮಕರಣ ಮಾಡಲಾಗುತ್ತದೆ. ಆ ದಿನ ಮಗುವಿನ ತಂದೆಯ ಕಡೆಯಿಂದ ಮಗುವಿಗೆ ತೊಟ್ಟಿಲು ತೆಗೆದುಕೊಂಡು ಬಂದು ಆ ತೊಟ್ಟಿಲನ್ನು ಸಿಂಗರಿಸಿ ಮಗುವನ್ನು ಅದರಲ್ಲಿ ಮಲಗಿಸಿ 'ನಾಮಕರಣ ಶಾಸ್ತ್ರ' ಮಾಡುತ್ತಾರೆ. ಕೆಲವರು ಮಗುವಿನ ತಂದೆಯ ಮನೆಯಲ್ಲಿ ಮಾಡುವುದುಂಟು. ಆಗ ಅಲ್ಲಿಗೆ ಬಂದವರೆಲ್ಲರೂ ಮಗುವಿಗೆ ತಮ್ಮ ಕೈಲಾದ ಕಾಣಿಕೆಯನ್ನು ಮಗುವಿನ ತಾಯಿಗೆ ನೀಡುತ್ತಾರೆ. ಆ ದಿನ ನೆರದಿರುವವರಿಗೆ ಕಡಲೆ ಮತ್ತು ಸಕ್ಕರೆ ಮಿಶ್ರಣ ಮಾಡಿ ಹಂಚುತ್ತಾರೆ. ಅಂದು ಸಿಹಿ ಅಡುಗೆನ್ನೂ ಮಾಡಿರುತ್ತಾರೆ.

**ಜವಳಿ ತೆಗೆಯುವ ಶಾಸ್ತ್ರ**

ಮಗುವಿನ ಹುಟ್ಟು ತಲೆಕೂದಲನ್ನು ತೆಗೆಯುವ ಕಾರ್ಯಕ್ಕೆ 'ಜವಳಿ ತೆಗೆಯುವಶಾಸ್ತ್ರ' ಎನ್ನುತ್ತಾರೆ. ಈ ಕಾರ್ಯವನ್ನು ಮಗು ಜನಿಸಿದ ಮೂರು ತಿಂಗಳು ಅಥವಾ ಒಂಬತ್ತು ತಿಂಗಳಿಗೆ ಇಲ್ಲವೇ ಮೂರೇ ವರ್ಷದಲ್ಲಿ ಮಾಡುತ್ತಾರೆ. ಕೆಲವರು ಯಾವುದಾದರೂ ದೇವಾಲಯಕ್ಕೆ ಹೋಗಿ ಕೂದಲು ತೇಗೆಸುತ್ತಾರೆ. ಆದರೆ ಬಹಳಷ್ಟು ಜನರು ಮನೆಯಲ್ಲಿಯೇ ತೇಗೆಸುವುದು ಕಂಡುಬರುತ್ತದೆ. ಎಲ್ಲಾ ಕೂದಲನ್ನು ತೆಗೆದರೂ ಆ ಮಗುವಿನ ತಾಯಿಯ ಸಹೋದರ ಮೊದಲು ಕೂದಲು ತೆಗೆಯುವ ಶಾಸ್ತ್ರವನ್ನು ಮಾಡಿಸುತ್ತಾನೆ. ಆನಂತರದಲ್ಲಿ ಅನುಭವಸ್ತರೊಬ್ಬರಿಂದ ತಲೆಯ ಕೂದಲೆಲ್ಲವನ್ನು ಸಂಪೂರ್ಣವಾಗಿ ತೆಗೆಸುತ್ತಾರೆ. ಈ ಕಾರ್ಯ ನೆರವೇರಿಸಿದ ಆ ಮಗುವಿನ ಸೋದರ ಮಾವನಿಗೆ ತಂದೆ ತಾಯಿಗಳು ಹೊಸ ಬಟ್ಟೆ ಕೊಡಿಸುವುದು ಸಹ ಇದೆ.

**ಋತುಮತಿ ಶಾಸ್ತ್ರ**

ಹೆಣ್ಣಿನ ಜೀವನದಲ್ಲಿ ಸಹಜವಾಗಿ ನಡೆಯುವ ಕ್ರಿಯೆ ಇದಾಗಿದೆ. ಈ ಘಟ್ಟ ತಲುಪಿದಾಗಲೂ ಕೆಲವೊಂದು ಆಚರಣೆಗಳನ್ನು ಮಾಡುವುದು ಪ್ರತಿಯೊಂದು ಜನಾಂಗದಲ್ಲಿಯೂ ಕಾಣಬಹುದು. ಮಾದಿಗರು ಸಹ ಇದಕ್ಕೆ ಹೊರತಾಗಿಲ್ಲ. ಹೆಣ್ಣು ದೊಡ್ಡವಳಾದ ಅಥವಾ ಋತುಮತಿಯಾದ ವಿಷಯ ತಿಳಿದೊಡನೆ ಆ ಹೆಣ್ಣಿನ ಸೋದರ ಮಾವನಿಗೆ ಹೇಳಿಕಳುಹಿಸುತ್ತಾರೆ. ಆತ ಒಂದು ತೆಂಗಿನ ಗರಿಯ ಅಥವಾ ತಡಿಕೆಯೊಂದನ್ನು ಕಟ್ಟಿಕೊಡುತ್ತಾನೆ. ಅದರ ಕೆಳಗೆ ಋತುಮತಿಯಾದ ಹೆಣ್ಣನ್ನು ಐದು ದಿನಗಳ ಕಾಲ ಕೂರಿಸಲಾಗುವುದು. ಯಾವುದೇ ಕಾರಣಕ್ಕೆ ಅವಳು ಒಳಗೆ ಬರುವ ಹಾಗಿಲ್ಲ. ಈ ಐದು ದಿನಗಳ ಕಾಲ ಅವಳೊಂದಿಗೆ ಅವಳ ಗೆಳತಿಯರು ಅಥವಾ ವಯಸ್ಸಾದ ಹೆಂಗಸು ಜೊತೆಯಲ್ಲಿ ಇರುತ್ತಾರೆ. ಋತುಮತಿಯಾದ ಹೆಣ್ಣಿಗೆ ದಿನಾಲೂ ಸ್ನಾನ ಮಾಡಿಸಿ ವಿವಿಧ ಬಗೆಯ ಸಿಹಿ ಅಡುಗೆ ಮಾಡಿ ತಿನಿಸಲಾಗುತ್ತದೆ. ಊಟಕ್ಕೆ ಮೊದಲು ಅಕ್ಕಿ ಮತ್ತು ಬೆಲ್ಲದಿಂದ ಮಾಡಿದ ಸಿಹಿ ಉಂಡೆ,

ಎಳ್ಳಿನ ಉಂಡೆಯನ್ನು ಮಡಿಲಿಗೆ ಹಾಕುವರು. ಆ ವೇಳೆಯಲ್ಲಿ ವಸಗೆ ಪದಗಳನ್ನು ಅನೇಕ ಸ್ತ್ರೀಯರು ಕೂಡಿಕೊಂಡು ಹಾಡುತ್ತಾರೆ. ಕೊನೆಯ ದಿನ ಸ್ನಾನ ಮಾಡಿಸಿ ಹೊಸಬಟ್ಟೆ ಹಾಕಿ ಮನೆಯ ಒಳಗೆ ಕರೆದುಕೊಳ್ಳುತ್ತಾರೆ. ಇಂತಹ ಕಾರ್ಯಗಳು ಹೆಚ್ಚಾಗಿ ಗ್ರಾಮೀಣ ಪ್ರದೇಶದಲ್ಲಿ ಕಂಡು ಬರುತ್ತವೆಯಾದರೂ ಪಟ್ಟಣ ಪ್ರದೇಶದಲ್ಲಿ ಇಲ್ಲವೆನ್ನಲಾಗದು. ಕೆಲವರು ಮಾತ್ರ ಈ ಆಚರಣೆಯನ್ನು ಮಾಡುವುದಿಲ್ಲ.

ವಿವಾಹ

ಪ್ರತಿಯೊಂದು ಗಂಡು ಮತ್ತು ಹೆಣ್ಣಿನ ನಡುವೆ ಸಂಬಂಧ ಬೆಳಸುವ ಪ್ರಮುಖ ಘಟ್ಟ ವಿವಾಹ. ಮಾದಿಗ ಜನಾಂಗದಲ್ಲಿ ಮದುವೆಯಂಥ ಕಾರ್ಯವನ್ನು ಜಾತಿ ಸಂಪ್ರದಾಯದನ್ವಯ ಮಾಡುವುದು ಸಾಮಾನ್ಯ. ಇದಲ್ಲದೇ ಸಾಮೂಹಿಕ ವಿವಾಹಗಳು, ಅಂತರ್‌ಜಾತಿ ವಿವಾಹಗಳು ಸಹ ಈ ಜನಾಂಗದಲ್ಲಿ ನಡೆದಿವೆ. ಆದರೆ ಅವು ತುಂಬ ಕಡಿಮೆ. ಸ್ವಾತಂತ್ರ್ಯ ಪೂರ್ವದಲ್ಲಿ 'ಕಾಂಗ್ರೆಸ್ ಮದುವೆ'ಗಳೆಂದು ಕರೆಯಲ್ಪಡುತ್ತಿದ್ದ ಸಾಮೂಹಿಕ ವಿವಾಹಗಳು ಕೆಲವು ಭಾಗಗಳಲ್ಲಿ ಕಂಡುಬಂದರೆ ಅನ್ಯ ಜಾತಿಯವರನ್ನು ಪ್ರೇಮಿಸಿ ಮದುವೆ ಮಾಡಿಕೊಂಡವರು ಕೂಡ ಇದ್ದಾರೆ. ಆದರೂ ಜಾತಿ ಸಂಪ್ರದಾಯದ ಮದುವೆಗಳೇ ಹೆಚ್ಚು.

ಜಾತಿ ಸಂಪ್ರದಾಯದ ಮದುವೆಗಳಲ್ಲಿ 'ಗೋತ್ರ ಮತ್ತು ಬುವ್ವ ಸಂಪ್ರದಾಯ' ಪ್ರಮುಖ ಪಾತ್ರವಹಿಸುತ್ತವೆ. ಹೆಣ್ಣು ನೋಡುವ ಮೊದಲು ಅವರು ಯಾವ ಕುಲಕ್ಕೆ ಸೇರಿದವರೆಂದು ಮೊದಲು ಕೇಳಿಕೊಳ್ಳುತ್ತಾರೆ. ಒಂದೇ ಕುಲ ಅಥವಾ ಗೋತ್ರಕ್ಕೆ ಸೇರಿದವರ ನಡುವೆ ವಿವಾಹಗಳು ನಡೆಯುವುದಿಲ್ಲ. ಒಂದೇ ಗೋತ್ರಕ್ಕೆ ಸೇರಿದವರಾಗಿದ್ದರೆ ಅವರನ್ನು ಅಣ್ಣ ತಮ್ಮಂದಿರೆಂದು ಭಾವಿಸುತ್ತಾರೆ. ಬೇರೆ ಗೋತ್ರ ಅಥವಾ(ವೈವಾಹಿಕ ಸಂಬಂಧ ಏರ್ಪಡಿಸಬಹುದಾದ) ಕುಲದವರೊಂದಿಗೆ ಮಾತ್ರವೇ ವಿವಾಹ ಮಾಡಿಕೊಳ್ಳುವರು. ಆನಂತರದಲ್ಲಿ ಅವರು ಅನುಸರಿಸುವುದು 'ಬುವ್ವ ಸಂಪ್ರದಾಯ'ವನ್ನು. ಈ ಬುವ್ವ ಸಂಪ್ರದಾಯದಲ್ಲಿ ಹಲವು ಬಗೆಗಳಿವೆ : ೧. ಮರಬುವ್ವ ೨. ಹೆಡಿಗೆ ಬುವ್ವ ೩. ಯಣಬುವ್ವ ಮುಂತಾದವು. ಒಂದೇ ಬುವ್ವಕ್ಕೆ ಸೇರಿದವರಾಗಿದ್ದರೆ ಅವರ ನಡುವೆ ಮದುವೆ ಮಾಡಿಕೊಳ್ಳುವುದಿಲ್ಲ. ಇತ್ತೀಚೆಗೆ ಈ ಅಂಶವನ್ನು ಮುಖ್ಯವಾಗಿ ಪರಿಗಣಿಸದಿದ್ದರೂ ಅನೇಕರು ಈ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸುವುದು ಉಂಟು. ಆದರೆ ಸೋದರ ಮಾವ ಮತ್ತು ಸೋದರ ಅತ್ತೆಯ ಮಕ್ಕಳೊಂದಿಗೆ ಮದುವೆ ಮಾಡಲು ನಿರ್ಧರಿಸುವಾಗ ಬುವ್ವ ಸಂಪ್ರದಾಯದ ಬಗ್ಗೆ ಗಮನಿಸುವುದಿಲ್ಲ. ಹೀಗೆ ಮಾದಿಗರು ತಮ್ಮ ಜಾತಿಯದೇ ಆದ ಕ್ರಮವೊಂದನ್ನು ವೈವಾಹಿಕ ಸಂದರ್ಭದಲ್ಲಿ ಅನುಸರಿಸುತ್ತ ಬಂದಿದ್ದಾರೆ. ಮಾದಿಗರಲ್ಲಿ ಹಿಂದೊಮ್ಮೆ ಬಾಲವಿವಾಹಗಳೇ ಹೆಚ್ಚು ನಡೆಯುತ್ತಿದ್ದು ಇದರಿಂದಾಗಿ ಅನೇಕ ತೊಂದರೆಗಳಾಗುತ್ತಿದ್ದವು. ಈ ಸಂಬಂಧ ಸ್ವಾತಂತ್ರ್ಯ ಪೂರ್ವದಲ್ಲಿ ಆದಿಜಾಂಬವ ಸಂಘವು ಮಾದಿಗರಲ್ಲಿ ಮನವಿ ಮಾಡಿಕೊಂಡಿದ್ದಿದೆ "ಮಕ್ಕಳಿಗೆ ಚಿಕ್ಕವಯಸ್ಸಿನಲ್ಲಿ ಲಗ್ನ ಮಾಡುವುದರಿಂದ

ಅನೇಕ ಕಷ್ಟ ನಷ್ಟಗಳು ಸಂಭವಿಸುತ್ತವಾದುದರಿಂದ ಮಕ್ಕಳ ಲಗ್ನ ಕಾಲದ ವಯಸ್ಸನ್ನು ಹೆಚ್ಚಿಸಬೇಕು. ಅಂದರೆ ಹೆಣ್ಣು ಮಕ್ಕಳಿಗೆ ಸುಮಾರು ಹದಿನಾರು ವರುಷವೂ ಗಂಡು ಮಕ್ಕಳಿಗೆ ಇಪ್ಪತ್ತು ವರುಷ ಮೀರಿರಬೇಕು''(ದಾರ್ಶನಿಕರು ಮತ್ತು ದಲಿತರು, ಪು.೧೭೯) ಎಂದಿದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಹಿಂದೊಮ್ಮೆ ಬಾಲ್ಯವಿವಾಹಗಳು ಹೆಚ್ಚಾಗಿ ನಡೆಯುತ್ತಿದ್ದವೆಂಬುದು ತಿಳಿಯುತ್ತದೆ. ಇವರಲ್ಲಿ ಈಗಲೂ ಬಾಲ್ಯವಿವಾಹಗಳೇ ಹೆಚ್ಚಾಗಿ ನಡೆಯುತ್ತವೆ. ಅದರಲ್ಲೂ ಚಿತ್ರದುರ್ಗ ಜಿಲ್ಲೆಗಿಂತ ಬಳ್ಳಾರಿ ಜಿಲ್ಲೆಯಲ್ಲಿ ಈ ಸಂಖ್ಯೆ ಹೆಚ್ಚೆನ್ನಬಹುದು. ಅವರು ವಿವಾಹ ಮಾಡಿಕೊಳ್ಳಬಹುದಾದ ಮತ್ತು ಸೋದರಿಕೆಯ ಸಂಬಂಧವನ್ನು ಸೂಚಿಸುವ ಕುಲಗೋತ್ರಗಳು ಈ ಕೆಳಗಿನ ಪಟ್ಟಿಯಲ್ಲಿ ಕಂಡುಬರುತ್ತವೆ:

| ಕುಲ | ಸೋದರಿಕೆ ಕುಲಗಳು | ವೈವಾಹಿಕ ಕುಲಗಳು |
|---|---|---|
| ೧. ಐಹೊಳ್ಳೇರು | ಶಡಪೋತ್ಲರು<br>ಶಟ್ಟೇಲರು<br>ಬೋಗೇಲರು<br>ಪೋತು ಗುಳಿಯರು<br>ಮುತ್ತಿನ ಪೆಂಡೇರು | ಹೆಗ್ಡೇರು<br>ಏನುಮ್ಲರು<br>ಕುರಿಯರು<br>ಏಡುಗೆತ್ಲರು<br>ಮುಚ್ಚಲೋರು<br>ಛತ್ರೇರು<br>ಗಾಣಿಗ್ಲರು<br>ಸಣ್ಣಕ್ಕೇರು<br>ಕೆಂಗಾರು |
| ೨. ಹೆಗ್ಡೇರು | ಏಡುಗತ್ಲರು, ಸಾಕೇಲರು | ಸೋದರಿಕೆ ಸಂಬಂಧದ ಕುಲಗಳನ್ನು ಹೊರತು ಪಡಿಸಿ ಇನ್ನುಳೀದ ಕುಲಗಳೊಂದಿಗೆ ವೈವಾಹಿಕ ಸಂಬಂಧ ಬೆಳಸುವರು. |
| ೩. ಕುರಿಯರು | ಮಂದ್ಲರು, ಮಾಗೇರು | ಉಪಕುಲಗಳನ್ನು ಹೊರತು ಪಡಿಸಿ ಇತರ ಎಲ್ಲಾ ಕುಲಗಳಲ್ಲಿ ಮದುವೆ ಯಾಗುತ್ತಾರೆ. |
| ೪. ಏನುಮ್ಲರು | ಹೆಗ್ಡೇರು, ಹಾಲಿನೋರು | ಇತರ ಕುಲಗಳಲ್ಲಿ ಮದುವೆ ಮಾಡಿಕೊಳ್ಳುತ್ತಾರೆ. |
| ೫. ಛತ್ರೇರು | - | ಐಹೊಳ್ಳೆರು, ಕುರಿಯರು ಹೆಗ್ಡೇರು, ಏನುಮ್ಲರು |

| | | |
|---|---|---|
| ೬. ಎಡಗತ್ಲರು | ಹೆಗ್ಡೇರು | ಉಳಿದ ಎಲ್ಲಾ ಕುಲಗಳಲ್ಲಿ ಮದುವೆಯಾಗುವರು |
| ೭. ಮುಚ್ಚಲರು | - | ಉಳಿದ ಎಲ್ಲಾ ಕುಲಗಳಲ್ಲಿ ಮದುವೆಯಾಗುವರು. |
| ೮. ಬೋಗೆಲರು | - | --,,-- |
| ೯. ಸಾಕೇಲರು | - | --,,-- |
| ೧೦. ಮಲ್ಲೇಲರು | - | --,,-- |
| ೧೧. ಸಾಸಂಮ್ಲರು | - | ಹೆಗ್ಡೇರು, ಐವೊಳ್ಳೇರು ಸಾಕೇಲರು |
| ೧೨. ಮಿನಿಗ್ಲರು | - | ಉಳಿದ ಎಲ್ಲಾ ಕುಲಗಳಲ್ಲಿ ಮದುವೆಯಾಗುವರು |
| ೧೩. ಗಾಣಿಗ್ಲರು | - | --,,-- |
| ೧೪. ಬಡಗೇಲರು | - | --,,-- |
| ೧೫. ಮುಮ್ಮದ್ಲರು | - | --,,-- |
| ೧೬. ಲಸ್ಮೇಲರು | - | ಎನುಮ್ಲರು, ಸಾಕೇಲರು |
| ೧೭. ಸಣ್ಣಕ್ಕೇರು | - | ಎಲ್ಲಾ ಕುಲಗಳಲ್ಲಿ ಮದುವೆ ಯಾಗುವರು |
| ೧೮. ಬಂಡಾರದರು | - | --,,-- |
| ೧೯. ಸೀರಣಿಗೇರು | - | --,,-- |
| ೨೦. ಕುಂಬಕಾಯೋರು | - | --,,-- |
| ೨೧. ಶೆಟ್ಟೇಲರು | - | --,,-- |
| ೨೨. ಜ್ಯೋತೆಲರು | - | --,,-- |
| ೨೩. ದೋಸೆಲರು | - | --,,--[೨] |

ಈ ಮೇಲಿನ ಕುಲಗಳು ಮಾತ್ರವಲ್ಲದೇ ಇನ್ನೂ ಅನೇಕ ಕುಲಗಳು ಈ ಜನಾಂಗದಲ್ಲಿರುವುದು ಕಂಡುಬರುತ್ತದೆ. ಹೀಗೆ ಯಾವುದೇ ಕುಲ ಅಥವಾ ಬೆಡಗು ಅಥವಾ ಗೊತ್ರದವರು ತಮ್ಮ ಸೊದರಿಕೆಯ ಸಂಬಂಧದ ಕುಲಗಳನ್ನು ಹೊರತುಪಡಿಸಿ ಉಳಿದಕುಲಗಳಲ್ಲಿ ಮದುವೆ ಕಾರ್ಯವನ್ನು ನೆರವೇರಿಸುವರು.

**ಹೆಣ್ಣು ನೋಡುವ ಮತ್ತು ನಿಶ್ಚಯ ಮಾಡುವ ಕಾರ್ಯಗಳು**

ವಿವಾಹಕ್ಕೆ ಮೊದಲು ಹೆಣ್ಣು ನೋಡುವ ಕಾರ್ಯವನ್ನು ಮಾಡಲಾಗುತ್ತದೆ. ಹೆಣ್ಣಿನ ಮನೆಯವರ

ಆಹ್ವಾನದ ಮೇರೆಗೆ ಗಂಡಿನ ಕಡೆಯವರು ಹೆಣ್ಣನ್ನು ನೋಡಲು ಸೂಕ್ತ ದಿನದಂದು ಹೋಗುತ್ತಾರೆ. ಅಂದು ಹೆಣ್ಣನ್ನು ಸಿಂಗರಿಸಿ ಬಂದವರ ಎದುರು ಕೂರಿಸುತ್ತಾರೆ. ಅವರಿಗೆ ಇಷ್ಟವಾದರೆ ಮುಂದಿನ ಕಾರ್ಯ ಮಾಡಲು ತಿಳಿಸುತ್ತಾರೆ. ಇಲ್ಲದಿದ್ದರೆ ಇಷ್ಟವಾಗಲಿಲ್ಲವೆಂದು ಮಧ್ಯಸ್ತಿಕೆ ವಹಿಸಿರುವವರ ಮೂಲಕ ಹೇಳಿ ಕಳುಹಿಸುತ್ತಾರೆ.

ಹೆಣ್ಣು ನೋಡುವ ಕಾರ್ಯ ಮುಗಿದ ಮೇಲೆ ಹುಡುಗಿ ಒಪ್ಪಿಗೆಯಾದರೆ ಆ ವಿಷಯವನ್ನು ಪತ್ರದ ಅಥವಾ ಮಧ್ಯಸ್ತಿಕೆ ವಹಿಸಿರುವವರ ಮೂಲಕ ತಿಳಿಸುತ್ತಾರೆ. ನಂತರ ಗಂಡು-ಹೆಣ್ಣಿನ ಸಂಬಂಧಿಕರೆಲ್ಲ ಸೇರಿಕೊಂಡು ಹೆಣ್ಣನ್ನು ಮದುವೆಯಾಗಲು ಒಪ್ಪಿಗೆ ನೀಡುವ ಶಾಸ್ತ್ರವನ್ನು ಮಾಡುತ್ತಾರೆ. ಇದನ್ನು 'ವಿಳ್ಯದೆಲೆ ಶಾಸ್ತ್ರ' ಅಥವಾ 'ತಾಂಬೂಲ ಬದಲಾಯಿಸಿಕೊಳ್ಳುವ ಶಾಸ್ತ್ರ' ಎಂದು ಕರೆಯುತ್ತಾರೆ. ಈ ಕಾರ್ಯವು ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ. ಆ ದಿನ ಗಂಡಿನ ಕಡೆಯವರು ತಂದ ಸೀರೆ ಹಾಗೂ ಕುಪ್ಪಸವನ್ನು ಹೆಣ್ಣು ತೊಟ್ಟುಕೊಂಡು ಆಲಂಕಾರ ಮಾಡಿಕೊಳ್ಳುತ್ತಾಳೆ. ಹಾಗೆಯೇ ಗಂಡು ಹೊಸ ಬಟ್ಟೆಯನ್ನು ತೊಡುತ್ತಾನೆ. ಆಗ ಅವರಿಬ್ಬರನ್ನು ಒಂದು ಕಡೆ ಕೂರಿಸಿ ಆರತಿ ಮಾಡುತ್ತಾರೆ. ಹೂವಿನ ಹಾರಗಳನ್ನು ಪರಸ್ಪರ ಬದಲಾವಣೆ ಮಾಡಿಕೊಳ್ಳಲು ತಿಳಿಸುತ್ತಾರೆ. ಅಂದು ಮಾತುಕತೆಗೆ ಗಂಡು ಮತ್ತು ಹೆಣ್ಣಿನ ಹಿರಿಯರು ಹಾಗೂ ಹಟ್ಟಿಯ ಯಜಮಾನರುಗಳು ಕುಳಿತುಕೊಳ್ಳುತ್ತಾರೆ. ಆ ದಿನ ಗಂಡಿಗೆ ಏನೇನು ಕೊಡಬೇಕು ಎನ್ನುವುದು ನಿರ್ಧಾರ ಮಾಡಲಾಗುತ್ತದೆ. ಕೆಲವರು ನಿಶ್ಚಯ ಮಾಡುವುದಕ್ಕೆ ಮೊದಲೇ ಈ ಬಗೆಯ ಮಾತುಕಡೆ ಮಾಡಿರುತ್ತಾರೆ. ಹಿಂದೆ ವಧುದಕ್ಷಿಣೆ ಪದ್ಧತಿ ಆಚರಣೆಯಲ್ಲಿದ್ದುದು ತಿಳಿದುಬರುತ್ತದೆ. ಪ್ರತಿಯೊಂದು ಮದುವೆಯ ಸಂದರ್ಭದಲ್ಲಿ ಹೆಣ್ಣಿಗೆ 'ಕರ' ಕೊಡಬೇಕಾಗಿತ್ತು. ಅಲ್ಲದೇ ಹೆಣ್ಣು ಕೊಡಬೇಕಾದರೆ ಗಂಡಿನ ಕಡೆಯವರು ಅನೇಕ ಬಾರಿ ಓಡಾಡಿದ ನಂತರದ ಹಟ್ಟಿಯ ಯಜಮಾನರು ಹೆಣ್ಣಿನ ಕಡೆಯವರಿಗೆ ಒಪ್ಪಿಸಿದ ನಂತರವೇ ಮದುವೆ ನಡೆಯುತ್ತಿತ್ತು. ಆದರೆ ಈಗ ಅದು ಬದಲಾಗಿ ಹೆಣ್ಣಿನ ಕಡೆಯವರು ಗಂಡಿನ ಮನೆಯವರ ಒಪ್ಪಿಗೆಗೆ ಅನೇಕ ಕಡೆಯಿಂದ ಕಸರತ್ತು ಮಾಡಬೇಕಾಗುತ್ತದೆ. ಇಂದು ಈ ಜನಾಂಗದಲ್ಲಿ ವರದಕ್ಷಿಣೆ ಮದುವೆಗಳೇ ಹೆಚ್ಚು. ವರದಕ್ಷಿಣೆ ಇಲ್ಲದ ಮದುವೆಗಳು ತೀರಾ ಕಡಿಮೆ. ಮಾದಿಗ ಜನಾಂಗದಲ್ಲಿ ಸುಮಾರು ಎಪ್ಪತ್ತರ ದಶಕದ ನಂತರದಲ್ಲಿ ವರದಕ್ಷಿಣೆ ಪದ್ಧತಿ ಆಚರಣೆಗೆ ಬಂದಿದೆ ಎನ್ನಬಹುದು. ಪ್ರತಿಯೊಂದು ಹೆಣ್ಣಿನ ಮನೆಯವರು ತಮ್ಮ ಶಕ್ತಿ ಅನುಸಾರ ಒಡವೆ-ವಸ್ತ್ರ ಮುಂತಾದವುಗಳನ್ನು ಗಂಡಿನ ಮನೆಯವರಿಗೆ ಬಳುವಳಿಯಾಗಿ ನೀಡುತ್ತಾರೆ. ಇಲ್ಲವೇ ಗಂಡಿನ ಕಡೆಯವರ ಬೇಡಿಕೆಗಳೆಲ್ಲವನ್ನೂ ಸಹ ಪೂರೈಸುತ್ತಾರೆ. ಈ ಬಗ್ಗೆ ನಿಶ್ಚಯ ಮಾಡಿದ ಮೇಲೆ ಇಲ್ಲವೇ ಮೊದಲೇ ಮಾತುಕತೆ ಮಾಡುತ್ತಾರೆ. ನಿಶ್ಚಯ ಮಾಡಿದ ನಂತರ ಹಿರಿಯರೆಲ್ಲ ಕೂಡಿ ಪಂಡಿತರ ಹತ್ತಿರ ಹೋಗಿ ಮದುವೆಯ ದಿನವನ್ನು ಗೊತ್ತುಮಾಡಿಕೊಳ್ಳುತ್ತಾರೆ. ಮದುವೆ ಮಾಡಲು ನಿರ್ಧರಿಸಿದ ಮೇಲೆ ಈ ವಿಷಯವನ್ನು ಮೊದಲು ವಿಳ್ಯದೆಲೆ-ಅಡಿಕೆಯನ್ನು ಸಂಬಂಧಿಕರಿಗೆ ನೀಡಿ ಮದುವೆಗೆ ಕರೆಯಲಾಗುತ್ತಿತ್ತು. ಈಗ ಲಗ್ನ ಪತ್ರಿಕೆಯನ್ನು ಅಚ್ಚುಹಾಕಿಸಿ ಮದುವೆಯ ದಿನ ಮತ್ತು ಸ್ಥಳವನ್ನು ತಿಳಿಸಿ ಮದುವೆಗೆ ಆಮಂತ್ರಿಸುತ್ತಾರೆ.

**ಮದಲಿಂಗಶಾಸ್ತ್ರ**

ಮದುವೆಯು ಮದಲಿಂಗ ಶಾಸ್ತ್ರದಿಂದ ಆರಂಭಗೊಳ್ಳುತ್ತದೆ. ಮದುವೆಯ ಗಂಡು ತನ್ನ ಬಂಧು-ಬಾಂಧ್ಯವರೊಂದಿಗೆ ಹೆಣ್ಣಿನ ಮನೆ ಇಲ್ಲವೇ ಕಲ್ಯಾಣ ಮಂಟಪದಲ್ಲಿ ನಡೆಸಿಕೊಡುವ ಮದುವೆಯಲ್ಲಿ ಪಾಲ್ಗೊಳ್ಳಲು ಹೊರಡುವ ದಿನ ಇದಾಗಿದೆ. ಆ ದಿನ ಗಂಡು ಹೆಣ್ಣಿಗೆ ಅನೇಕ ಸಾಂಪ್ರದಾಯಿಕ ಶಾಸ್ತ್ರಗಳನ್ನೆಲ್ಲಾ ಮಾಡುತ್ತಾರೆ. ಹಿಂದೆ ಮದುವೆಯು ಐದು ದಿನಗಳ ಕಾಲ ನಡೆಯುತ್ತಿದ್ದು, ಮೊದಲ ದಿನ ಮದಲಿಂಗ ಶಾಸ್ತ್ರ, ಎರಡನೆ ದಿನ ದೇವರ ಊಟ, ಮೂರನೆಯ ದಿನ ಮುಹೂರ್ತ ಅಥವಾ ತಾಳಿ ಕಟ್ಟುವ ದಿನ, ನಾಲ್ಕನೆಯ ದಿನ ಹೆಣ್ಣಿನ ಮನೆಯಲ್ಲಿ ಉಳಿದುಕೊಳ್ಳುವುದು, ಐದನೆಯ ದಿನ ಗಂಡನ ಮನೆಗೆ ಬರುವುದು-ಹೀಗೆ ಕ್ರಮವಾಗಿ ಐದು ದಿನಗಳ ಕಾಲ ನಡೆಯುತ್ತಿದ್ದ ಸಾಂಪ್ರದಾಯಿಕ ಮದುವೆಗಳು ಇಂದು ಕೇವಲ ಎರಡು ದಿನಗಳಿಗಷ್ಟೇ ಸೀಮಿತಗೊಂಡಿವೆ. ಅದರಲ್ಲೂ ಧಾರೆ ಮುಹೂರ್ತ ದಿನ ಮಾತ್ರವೇ ಪ್ರಮುಖವಾದುದು. ಮದುವೆಗೆ ಬರುವವರು ಯಾವುದೇ ಕಾರ್ಯಕ್ರಮ ತಪ್ಪಿಸಿದರೂ ಮುಹೂರ್ತದ ದಿನ ಮಾತ್ರ ತಪ್ಪದೆ ಬರುತ್ತಾರೆ.

ಮದಲಿಂಗಶಾಸ್ತ್ರದ ದಿನ ಗಂಡಿನ ಮನೆಯಲ್ಲಿ ಸಂಭ್ರಮ ಸಡಗರದ ವಾತಾವರಣ ಇರುತ್ತದೆ. ಮದುವೆಯ ಗಂಡು ಆ ದಿನ ಹರಿಶಿಣ ಹಚ್ಚಿಕೊಂಡು ಸ್ನಾನ ಮಾಡಿ ಹೊಸಬಟ್ಟೆ ತೊಟ್ಟುಕೊಳ್ಳುತ್ತಾನೆ. ಅಂದು ಆತನ ಕೈಯಲ್ಲಿ ನಾಗಪೂಜೆ ಮಾಡಿಸಲಾಗುತ್ತದೆ. ಹುತ್ತ ಇರುವ ಜಾಗಕ್ಕೆ ಬ್ಯಾಂಡ್ ಸಟ್ ವಾದ್ಯದೊಂದಿಗೆ ಕೆಲವು ಹೆಣ್ಣು ಮಕ್ಕಳು ಹಿರಿಯರು ಎಲೆ, ಅಡಿಕೆ, ಕಾಯಿ, ಕಳಸ ಮುಂತಾದವುಗಳನ್ನು ತೆಗೆದುಕೊಂಡು ಹೋಗಿ ಹುತ್ತಕ್ಕೆ ಪೂಜೆ ಮಾಡಿಸಿಕೊಂಡು ಬರುತ್ತಾರೆ. ಆಗ ಕೆಲವು ಸ್ತ್ರೀಯರು ಸೋಬಾನೆ ಪದಗಳನ್ನು ಹಾಡುತ್ತಾರೆ. ಹಿಂದೆ ಮದುವೆಯಲ್ಲಿ ತಪ್ಪಡೀ ಅಥವಾ ತಮಟೆಗಳನ್ನು ಮಂಗಳವಾದ್ಯಗಳಂತೆ ಬಳಸುತ್ತಿದ್ದರು. ಆದರೆ ಇಂದು ಬ್ಯಾಂಡ್ ಸಟ್ ಬಳಸುತ್ತಾರೆ. ಈ ರೀತಿ ಬ್ಯಾಂಡ್ ಸಟ್ ಬಾರಿಸುವಂತವರು ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಮರಡಿಹಳ್ಳಿಯಲ್ಲಿ ಹಿಂದೆ ಇದ್ದರು. ಇವರು ಮಾದಿಗರ ಮದುವೆ ಮಾತ್ರವಲ್ಲದೇ ಇತರ ಜಾತಿಯವರ ಮದುವೆಗಳಿಗೂ ಹೋಗಿ ಬಾರಿಸುತ್ತಿದ್ದರೆಂದು ಅದೇ ಗ್ರಾಮದ ಸ್ವಾತಂತ್ರ್ಯ ಹೋರಾಟಗಾರ ಮಣ್ಣಪ್ಪ ಹೇಳುತ್ತಾರೆ. ಇಂದು ಉಪ್ಪಳಗೆರೆ, ತೇಕಲವಟ್ಟಿ, ಪಟ್ರೆಹಳ್ಳಿ, ಬುರುಜಿನ ರೊಪ್ಪ ಮುಂತಾದ ಗ್ರಾಮಗಳಲ್ಲಿ ಬ್ಯಾಂಡ್ ಸಟ್ ಮಾಡುವವರು ಈ ಜನಾಂಗದವರಿದ್ದಾರೆ. ಈ ರೀತಿಯ ಮಂಗಳವಾದ್ಯ ಇಲ್ಲದೇ ಮದುವೆ ನಡೆಯುವುದು ಚಿತ್ರದುರ್ಗ ಜಿಲ್ಲೆಯಲ್ಲಿ ಕಡಿಮೆ. ಬ್ಯಾಂಡ್ ಸಟ್ ಬಾರಿಸುವ ಇತರೆಯವರನ್ನು ಸಹ ಮದುವೆಗೆ ಹಣ ನೀಡಿ ಕರೆಸಿಕೊಳ್ಳಲಾಗುತ್ತದೆ. ಆದರೆ ಬಳ್ಳಾರಿ ಜಿಲ್ಲೆಯಲ್ಲಿ ಮದುವೆಯಲ್ಲಿ ಹೆಚ್ಚಾಗಿ ತಮಟೆಗಳನ್ನು ಮಂಗಳವಾದ್ಯವಾಗಿ ಬಳಸುವುದು ಕಂಡುಬರುತ್ತದೆ.

ನಾಗಪೂಜೆ ಮುಗಿಸಿಕೊಂಡು ಮಂಗಳವಾದ್ಯದೊಂದಿಗೆ ಗಂಡು ಮನೆಗೆ ಬಂದಾಗ ಮನೆಯ ಮುಂದೆ

ಭತ್ತವನ್ನು ಮೂರು ಭಾಗವಾಗಿ ಮಾಡಿ ಬಿಳಿ ಮತ್ತು ಕೆಂಪು ಬಣ್ಣಗಳಿಂದ ಬರೆದ ವೃತ್ತಾಕಾರದ ಮಧ್ಯೆ ಹಾಕಿರುತ್ತಾರೆ. ಗಂಡಿನ ಕೈಗೆ ಒನಕೆ ಕೊಟ್ಟು ಭತ್ತವನ್ನು ಕುಟ್ಟುವ ಶಾಸ್ತ್ರ ಮಾಡಿಸುತ್ತಾರೆ. ಇದನ್ನು 'ವಳ್ಳಕ್ಕಿ ಶಾಸ್ತ್ರ' ಎಂದು ಕರೆಯುತ್ತಾರೆ. ಇದೇ ಬಗೆಯ ಶಾಸ್ತ್ರಗಳನ್ನು ಹೆಣ್ಣಿನ ಮನೆಯವರು ಸಹ ಅವರ ಮನೆಯಲ್ಲಿ ಮಾಡಿಸಿರುತ್ತಾರೆ. ಈ ಭತ್ತದಿಂದ ಬಂದ ಅಕ್ಕಿಯನ್ನು ಬೀರಕ್ಕಿ ಎಸೆಯಲಿಕ್ಕೆ ಬಳಸಲು ಒಂದು ಕುಂಬದಲ್ಲಿ ಹಾಕುತ್ತಾರೆ. ಇದು ವಲಗಿದ ನಂತರ ಸೋದರ ಮಾವಂದಿರು ಗಂಡು-ಹೆಣ್ಣಿಗೆ(ಅವರ ಅವರ ಮನೆಯಲ್ಲಿ ಈ ಕಾರ್ಯ ನಡೆಯುತ್ತದೆ) ಕೈ ಮತ್ತು ಕಾಲಿನ ಉಗುರು ತೆಗೆದು ಕಾಲುಂಗುರ ಇಟ್ಟು ಮನೆಯ ಒಳಗಡೆ ಕರೆದುಕೊಳ್ಳುತ್ತಾರೆ. ಒಳಗೆ ಕಂಬಳಿ ಹಾಸಿ, ಅದರ ಮೇಲೆ ಕೂರಿಸುತ್ತಾರೆ. ಅಲ್ಲಿ ಕಳಸ, ಕನ್ನಡಿ, ವಿಭೂತಿ, ಎಲೆ ಅಡಿಕೆ ಮುಂತಾದವುಗಳನ್ನು ಇಟ್ಟಿರುತ್ತಾರೆ. ಗಂಡಿಗೆ ಅರಿಶಿಣ ಎಣ್ಣೆಯನ್ನು ಹಚ್ಚುವ ಶಾಸ್ತ್ರ ಮಾಡುತ್ತಾರೆ. ಇದೇ ರೀತಿ ಹೆಣ್ಣಿನ ಮನೆಯಲ್ಲಿಯೂ ಹೆಣ್ಣಿಗೆ 'ಅರಿಶಿಣ ಶಾಸ್ತ್ರ'ಮಾಡಿಸುತ್ತಾರೆ. ಈ ಶಾಸ್ತ್ರ ಮುಗಿದ ನಂತರ ಗಂಡು ತನ್ನ ಬಂಧು-ಬಾಂಧವರು, ಸ್ನೇಹಿತರು, ಹಿತೈಷಿಗಳೊಂದಿಗೆ ಹೆಣ್ಣಿನ ಮನೆಗೆ ಬರುತ್ತಾನೆ.

ಹೆಣ್ಣಿನ ಊರಿಗೆ ಬರುತ್ತಲೆ ಹೆಣ್ಣಿನ ಕಡೆಯವರು ಲೈಟಿನೊಂದಿಗೆ ಇವರನ್ನು ಎದುರುಗೊಳ್ಳುವರು. ಅಲ್ಲಿರುವ ಪಂಚಾಯಿತಿ ಕಟ್ಟೆ ಅಥವಾ ಇತರ ಕಟ್ಟೆ, ಇಲ್ಲದೇ ಹೋದರೆ ದಾರಿಯ ಪಕ್ಕದಲ್ಲಿಯೇ ಗಂಡಿನ ಕಡೆಯವರನ್ನು ಕೂರಿಸಿ ಹೆಣ್ಣಿನವರ ಕಡೆಯಿಂದ 'ಬೀಗರ ಪೂಜೆ' ನಡೆಯುತ್ತದೆ. ಅಲ್ಲಿ ಗಂಡಿನೊಂದಿಗೆ ಅದೇ ಕುಲದ ಕೆಲವರನ್ನು ಕೂರಿಸಿ ವಿಭೂತಿ, ಕುಂಕುಮ ಹಚ್ಚಿ ಅರತಿ ಮಾಡುತ್ತಾರೆ. ಆ ನಂತರ 'ಬಿಡದಿ ಮನೆ'ಗೆ ಗಂಡಿನ ಕಡೆಯವರನ್ನು ಕರೆದುಕೊಂಡು ಹೋಗಿ ಬಿಡುವರು.(ಗಂಡಿನವರು ಉಳಿದುಕೊಳ್ಳಲು ನೀಡಿರುವ ಮನೆ) ಅಂದು ರಾತ್ರಿ ಕರಿಯ ಕಂಬಳಿಯಲ್ಲಿ ಗದ್ದುಗೆ ಹಾಕು 'ಆಸೆ ಮಣೆ ಶಾಸ್ತ್ರ' ಮಾಡುತ್ತಾರೆ. ಆಗ ಗಂಡು ಮತ್ತು ಹೆಣ್ಣಿಗೆ ಹರಿಶಿನ ಹಚ್ಚುವ ಶಾಸ್ತ್ರ ನಡೆಯುತ್ತದೆ. ಅಲ್ಲಿಗೆ ಆ ದಿನದ ಕಾರ್ಯಕ್ರಮವೆಲ್ಲ ಮುಗಿಯುತ್ತದೆ.

**ಧಾರೆ ಮುಹೂರ್ತ**

ಮದುವೆಯಲ್ಲಿ ಅತ್ಯಂತ ಮಹತ್ವವನ್ನು ಪಡೆದ ಪ್ರಕ್ರಿಯೆಯಿದು. ಮದಲಿಂಗ ಶಾಸ್ತ್ರದ ಮಾರನೆಯ ದಿನ ಇದು ನಡೆಯುತ್ತದೆ. ಅಂದು ಗಂಡು ಹೆಣ್ಣಿಗೆ ತಾಳಿ ಕಟ್ಟುವ ಮೂಲಕ ಗಂಡ-ಹೆಂಡತಿಯರಾಗುತ್ತಾರೆ. ಇಂತಹ ಮಹತ್ವದ ಕಾರ್ಯವನ್ನು ಹೆಣ್ಣಿನ ಮನೆಯ ಮುಂಭಾಗದಲ್ಲಿ ನಡೆಸಲಾಗುತ್ತದೆ. ಮನೆಯ ಮುಂದೆ ಹಸಿರು ಚಪ್ಪರದ ಕೆಳಗೆ ಚಿಕ್ಕದೊಂದು ಮಂಟಪವನ್ನು(ಹಾಲುಗಂಬದ ಚಪ್ಪರ) ಹಾಕಲಾಗುತ್ತದೆ. ಬೆಳಿಗ್ಗೆಯಿಂದಲೇ ಕಳ್ಳಿಗಿಡ ಅಥವಾ ಬಾಳೆಕಂಬದಿಂದ ಮಂಟಪ ಮಾಡುವುದನ್ನು ಆರಂಭಿಸಿ ತಾಳಿ ಕಟ್ಟುವ ಸಮಯಕ್ಕೆ ಆ ಮಂಟಪ ಸಿದ್ಧವಾಗಿರುತ್ತದೆ. ಮೊದಲು ಧಾರೆ ಮುಹೂರ್ತದ ಸ್ಥಳಕ್ಕೆ ಗಂಡು ಮತ್ತು ಹೆಣ್ಣನ್ನು ಕರೆದುಕೊಂಡು ಬರುವ ಮೊದಲು ಅವರಿಬ್ಬರಿಗೂ ಸೋದರ ಮಾವನೊಂದಿಗೆ

ಶಾಸ್ತ್ರ ಪ್ರಕಾರ ಸ್ನಾನ ಮಾಡಿಸುತ್ತಾರೆ. ಆನಂತರದಲ್ಲಿ ಗಂಡು 'ಬಿಡದಿ ಮನೆ'ಯಲ್ಲಿ ಹೊಸ ಬಿಳಿ ಬಟ್ಟೆಯನ್ನು ತೊಟ್ಟುಕೊಂಡು ತಲೆಗೆ 'ಬಾಸಿಂಗ' ಕಟ್ಟಿಕೊಂಡು ಮುಹೂರ್ತದ ಸ್ಥಳಕ್ಕೆ ಬರುತ್ತಾನೆ. ಆಗ ಅಲ್ಲಿ ಈ ಹಿಂದೆ ಮದಲಿಂಗಶಾಸ್ತ್ರದ ದಿನ ಕುಟ್ಟಿ ಕುಂಬದಲ್ಲಿ ಹಾಕಿಕೊಂಡಿದ್ದ ಭತ್ತದ ಅಕ್ಕಿಯನ್ನು ಗಂಡು ಮತ್ತು ಹೆಣ್ಣಿನ ಕಡೆಯವರು ಪರಸ್ಪರ ಎರಚಾಡುತ್ತಾರೆ. ಅದನ್ನು 'ಬೀರಕ್ಕಿ ಎಸೆಯುವ ಶಾಸ್ತ್ರ' ಎನ್ನುತ್ತಾರೆ. ಅಲ್ಲಿಂದ ಮುಹೂರ್ತ ಸ್ಥಳಕ್ಕೆ ಬರುತ್ತಾರೆ. ಅಲ್ಲಿಗೆ ಹೆಣ್ಣನ್ನು ಅಲಂಕರಿಸಿಕೊಂಡು ಕರೆತರುತ್ತಾರೆ.

ಮದುವೆಯನ್ನು ಮಾಡಿಸುವ ಮಾದಿಗ ಜನಾಂಗದ ಪುರೋಹಿತರು ಧಾರೆಮುಹೂರ್ತದ ಸ್ಥಳದಲ್ಲಿ ಇರುತ್ತಾರೆ. ಅವರ ನಿರ್ದಶನದಂತೆ ಮದುವೆಯ ಕಾರ್ಯಗಳು ನಡೆಯುತ್ತಿರುತ್ತವೆ. ನಗರ ಪ್ರದೇಶದ ಕಲ್ಯಾಣ ಮಂಟಪದಲ್ಲಿ ನಡೆಯುವಂತಹ ಮದುವೆಗಳಲ್ಲಿ ಬ್ರಾಹ್ಮಣ ಪುರೋಹಿತರೆ ಈ ಕಾರ್ಯ ನೆರವೇರಿಸುವುದು ಕೆಲವು ಮದುವೆಗಳಲ್ಲಿ ಕಂಡುಬರುತ್ತದೆ. ಗ್ರಾಮೀಣ ಪ್ರದೇಶದಲ್ಲಿ ನಡೆಯುವ ಮದುವೆಗಳೆಲ್ಲವೂ ಮಾದಿಗ ಜನಾಂಗದ ಹಿರಿಯರು ಅಥವಾ ಮದುವೆ ಮಾಡಿಸುವ ಶಾಸ್ತ್ರವನ್ನು ಬಲ್ಲವರು ಪುರೋಹಿತರಾಗಿ ಮದುವೆ ಕಾರ್ಯ ನಡೆಸಿಕೊಡುತ್ತಾರೆ. ನಿಗದಿತ ಸಮಯದೊಳಗೆ ಒಂದು ತಟ್ಟೆಯಲ್ಲಿ ಕಾಯಿಯ ಮೇಲೆ ತಾಳಿಯನ್ನು ಇಟ್ಟು ಹಿರಿಯರಿಂದ ಅದನ್ನು ಮುಟ್ಟಿಸಿಕೊಂಡು(ಆಶೀರ್ವಾದ) ಆ ಸ್ಥಳಕ್ಕೆ ಒಬ್ಬರು ತರುತ್ತಾರೆ. ಆಗ ಗಂಡಿಗೆ ಆ ತಾಳಿ ತೆಗೆದುಕೊಟ್ಟು ಹೆಣ್ಣಿನ ಕುತ್ತಿಗೆಗೆ ಕಟ್ಟುವಂತೆ ತಿಳಿಸುತ್ತಾರೆ. ಅದರಂತೆ ಗಂಡು ತಾಳಿ ಕಟ್ಟುತ್ತಾನೆ. ಆಗ ಮದುವೆಗೆ ಬಂದವರು ಅಕ್ಷತೆ ಕಾಳು ಹಾಕುತ್ತಾರೆ. ಅಲ್ಲಿಗೆ ಮುಹೂರ್ತದ ಕಾರ್ಯ ಮುಗಿದಾಂಗುತ್ತದೆ. ಹಿರಿಯರಿಂದ 'ಹಾಲು ಬಿಡುವ ಶಾಸ್ತ್ರ' ಮಾಡಿಸುತ್ತಾರೆ. ಗಂಡು ಮತ್ತು ಹೆಣ್ಣನ್ನು ಎದುರುಬದರು ಕೂರಿಸಿ ಅವರಿಬ್ಬರ ಕೈ ಮೇಲೆ ಕೈ ಜೋಡಿಸಿ ಕಾಯಿಯನ್ನು ಇಟ್ಟು ಬಂದವರೆಲ್ಲ ಮಡಕೆ ಅಥವಾ ಚಂಬಿನಲ್ಲಿ ಇಟ್ಟಿರುವ ಹಾಲನ್ನು ಅವರ ಕೈ ಮೇಲೆ ಮೂರು ಬಾರಿ ಬಿಡುತ್ತಾರೆ. ಅದು ಮುಗಿದ ನಂತರ ಅವರನ್ನು ಹೊರಗಡೆ ಕರೆದುಕೊಂಡು ಬಂದು ಸೂರ್ಯ ನಮಸ್ಕಾರ ಮಾಡಿಸುತ್ತಾರೆ. ಅಲ್ಲಿಗೆ ಧಾರೆ ಮುಹೂರ್ತದ ಕಾರ್ಯ ಸಂಪೂರ್ಣ ಮುಗಿದಂತಾಗುವುದು. ಈ ಕಾರ್ಯ ಮುಗಿದ ನಂತರ ಸಿಹಿ ಅಡುಗೆಯನ್ನು ಬಂದವರಿಗೆಲ್ಲ ಉಣಬಡಿಸಲಾಗುವುದು. ಧಾರೆ ಮುಹೂರ್ತ ನಡೆದ ನಂತರ 'ಆರತಕ್ಷತೆ' ಅಥವಾ 'ಮುಯ್ಯಿಶಾಸ್ತ್ರ' ಮಾಡಲಾಗುತ್ತದೆ. ಆಗ ಗಂಡು ಮತ್ತು ಹೆಣ್ಣನ್ನು ಒಂದು ಕಡೆ ಕೂರಿಸಿ ಮದುವೆಗೆ ಬಂದಂತವರು ತಮ್ಮ ತಮ್ಮ ಶಕ್ತಿಗನುಸಾರ ಉಡುಗೊರೆಗಳನ್ನು ನೀಡುತ್ತಾರೆ. ಈ ಕಾರ್ಯ ಮುಗಿದ ನಂತರ 'ನಾಗೋಲೆ ಶಾಸ್ತ್ರ' ಮಾಡಲಾಗುತ್ತದೆ. ಅಂದರೆ ಗಂಡು ಮತ್ತು ಹೆಣ್ಣಿಗೆ ಕಂಬಳಿ ಹೊದಿಸಿ ಮನೆಯ ಬಾಗಿಲ ಬಳಿ ಒಂದು ಗುಂಡು ಕಲ್ಲಿಗೆ ಪೂಜೆ ಮಾಡಿಸುವ ಕಾರ್ಯ ಇದಾಗಿದೆ. ಒಳಗಡೆ ಬರುವ ಮೊದಲು ಅವರಿಬ್ಬರ ಪಾದಗಳನ್ನು ಹೆಣ್ಣಿನ ಸಹೋದರನು ತೊಳೆದು ಹೆಣ್ಣಾದರೆ ನನಗೆ ಕೊಡುವಂತೆ ಆಶ್ವಾಸನೆ ಪಡೆಯುತ್ತಾನೆ. ಅಲ್ಲಿಗೆ ಅಂದಿನ ಬಹುತೇಕ ಎಲ್ಲಾ ಕಾರ್ಯಗಳು ಮುಗಿದಂತೆ. ಆ ದಿನ

ಹೆಣ್ಣಿನ ಮನೆಯಿಂದ ಗಂಡು-ಹೆಣ್ಣು ಮತ್ತು ಇತರೆ ಸಂಬಂಧಿಕರೊಂದಿಗೆ ಗಂಡನ ಮನೆಗೆ ತೆರಳುತ್ತಾರೆ. ಮಾರನೆ ದಿನ ಹೆಣ್ಣಿನ ಕೈಯಲ್ಲಿ 'ಗಂಗೆ ಪೂಜೆ' ಮಾಡಿಸುತ್ತಾರೆ. ಹಿಂದೆ ಬಾವಿಗಳ ಹತ್ತಿರ ಅಥವಾ ಕೆರೆಯ ಹತ್ತಿರ ಮಾಡಿಸುತ್ತಿದ್ದರು. ಇಂದು ಬೋರ್‌ವೆಲ್ ಬಳಿಯು ಮಾಡಿಸುತ್ತಾರೆ.

**ತಂಗಡಿದ್ಯಾವ್ರು ಅಥವಾ ಗಿಡದ ಪೂಜೆ**

ಮಾದಿಗರ ಮದುವೆಗಳಲ್ಲಿ ಆಚರಣೆ ಮಾಡುವ ವಿಶಿಷ್ಟ ಬಗೆಯ ಕಾರ್ಯ ಇದಾಗಿದೆ. ಜೀವನದಲ್ಲಿ ಒಂದಲ್ಲ ಒಂದು ಬಾರಿ ಈ ದ್ಯಾವ್ರ ಆಚರಣೆ ಮಾಡಲೇಬೇಕೆಂಬುದು ಮಾದಿಗ ಕುಲಗಳ ನಂಬಿಕೆ.[೩] ಈ ನಂಬಿಕೆಯನ್ನು ಇಂದಿಗೂ ಮುಂದುವರಿದುಕೊಂಡು ಬಂದಿರುವುದು ಕಂಡುಬರುತ್ತದೆ. ಮದುವೆಯಾದ ಮಾರನೆ ದಿನ ಮದುವೆ ಮಾಡಿಕೊಂಡ ಗಂಡು-ಹೆಣ್ಣು ಮತ್ತು ಇತರೆಯವರೊಂದಿಗೆ ಊರಿನಿಂದ ಹೊರಗಡೆ ಹೋಗಿ ಮಾಂಸದ ಅಡುಗೆ ಮಾಡಿಕೊಂಡು ಊಟ ಮಾಡಿಬರುತ್ತಾರೆ. ಅಲ್ಲಿ ತಂಗಡಿ ಗಿಡಕ್ಕೆ ಪೂಜೆ ನೆರವೇರಿಸಿದ ಮೇಲೆ ಅಡುಗೆ ಮಾಡಿಕೊಂಡು ಊಟ ಮಾಡುತ್ತಾರೆ. ಮೊದಲು ಕೋಳಿ-ಕುರಿ ಮುಂತಾದ ಪ್ರಾಣಿಗಳನ್ನು ಅಲ್ಲಿ ಬಲಿ ಕೊಡುತ್ತಿದ್ದು ಇಂದು ಏನೂ ಇಲ್ಲದೆ ಹೋದರು ಕನಿಷ್ಟ ಕೋಳಿ ಮೊಟ್ಟೆಯನ್ನಾದರೂ ಬಳಸಿ ಸಾಂಬಾರು ಮಾಡುತ್ತಾರೆ.

**ಪ್ರಸ್ತ**

ಮದುವೆಯಾದ ದಂಪತಿಗಳಿಗೆ ಲೈಂಗಿಕ ಬಯಕೆಯನ್ನು ಈಡೇರಿಸಿಕೊಳ್ಳಲು ಹೆಣ್ಣಿನ ಮನೆಯಲ್ಲಿ ನಡೆಸುವ ಒಂದು ಧಾರ್ಮಿಕ ಕಾರ್ಯವಿದು. ಈ ಕಾರ್ಯವನ್ನು 'ಪ್ರಸ್ತ' ಎಂತಲೂ, ಪರಸ್ಪರ ಕೂಡುವಿಕೆಯ ಮೊದಲ ರಾತ್ರಿ ಆಗಿರುವುದರಿಂದ 'ಪ್ರಥಮ ರಾತ್ರಿ' ಎಂತಲೂ ಹಾಗೂ ಗ್ರಾಮೀಣ ಪ್ರದೇಶದಲ್ಲಿ 'ಗಂಜಿ ಬಟ್ಟೆ' ಬಿಡುವ ಕಾರ್ಯ ಎಂದೂ ಕರೆಯುವರು. ಆ ದಿನ ರಾತ್ರಿ ಗಂಡು-ಹೆಣ್ಣಿಗೆ ಎಣ್ಣೆ ಸ್ನಾನ ಮಾಡಿಸಿ ಆಲಂಕಾರ ಮಾಡುತ್ತಾರೆ. ಅಷ್ಟೊತ್ತಿಗಾಗಲೇ ಅವರಿಬ್ಬರೂ ಮಲಗುವ ಕೋಣೆಯನ್ನು ಹೆಣ್ಣಿನ ಕಡೆಯವರು ಆಲಂಕಾರ ಮಾಡಿರುತ್ತಾರೆ. ಹಿರಿಯರೆಲ್ಲರ ಆಶೀರ್ವಾದ ಪಡೆದು ಅವರಿಬ್ಬರನ್ನು ಆ ಕೋಣೆಯಲ್ಲಿ ಒಟ್ಟಿಗೆ ಮಲಗಲು ಬಿಡುತ್ತಾರೆ. ಜೊತೆಗೆ ಸಿಹಿ ತಿಂಡಿ ಹಾಗೂ ಹಾಲನ್ನು ಇಟ್ಟಿರುತ್ತಾರೆ. ಮಾರನೆ ದಿನ ಹಾಸಿಗೆ ಅಥವಾ ಚಾಪೆಯ ಕೆಳಗೆ ಸ್ವಲ್ಪ ಹಣವನ್ನು ಹೊಸ ದಂಪತಿಗಳು ಇಟ್ಟಿರಬೇಕಾಗುತ್ತದೆ. ಅಂದು ರಾತ್ರಿ ಅವರು ತೊಟ್ಟುಕೊಂಡಿದ್ದ ಬಟ್ಟೆಗಳನ್ನು ತೊಳೆದು ಕೊಡುವವರು ತೆಗೆದುಕೊಳ್ಳುತ್ತಾರೆ.

**ಸೀಮಂತ ಕಾರ್ಯ**

ಮದುವೆಯಾದ ಹೆಣ್ಣಿಗೆ ಅತ್ಯಂತ ಸಂಭ್ರಮ ತರುವ ಕಾರ್ಯವಿದು. ಗರ್ಭಿಣಿಯಾದ ಮೊದಲ ಸಂದರ್ಭದಲ್ಲಿ ಹೆಣ್ಣಿನ ಮನೆಯಲ್ಲಿ ಗಂಡನ ಮನೆಯವರು ಈ ಕಾರ್ಯವನ್ನು ನಡೆಸಿಕೊಡಬೇಕಾಗಿರುತ್ತದೆ. ಈ ಕಾರ್ಯವನ್ನು 'ಸೀಮಂತ ಕಾರ್ಯ' ಎನ್ನುವರು. ತುಂಬು ಗರ್ಭಿಣಿಯಾಗಿರುವ

ಹೊಸದರಲ್ಲಿ ಮತ್ತೊಂದು ಜೀವಕ್ಕೆ ಜನ್ಮ ನೀಡುತ್ತಾಳೆಂಬ ಸಂತೋಷದಿಂದಲೂ ಸುಖಕರ ಹೆರಿಗೆಯಾಗಲೆಂಬ ಹಾರೈಕೆಗಾಗಿಯು ಸೀಮಂತ ಕಾರ್ಯ ಮಾಡಲಾಗುತ್ತದೆ. ಅಂದು ಗರ್ಭಿಣಿ ಹೆಣ್ಣಿಗೆ ಸ್ನಾನ ಮಾಡಿಸಿ ಹೊಸಬಟ್ಟೆ ತೊಡಿಸಿ ಹೂವನ್ನು ಮುಡಿಸಿ ಕೈತುಂಬ ಬಳೆಯ ತೊಡಿಸಿ ಕೂರಿಸಿ ಹರಿಶಿನ ಕುಂಕುಮ ಹಚ್ಚಿ ಆರತಿ ಎತ್ತುತ್ತಾರೆ. ಬಂದವರೆಲ್ಲ ಅಂದು ಹರಿಶಿನ ಹಚ್ಚಿ ಹಾರೈಸುತ್ತಾರೆ. ಆನಂತರ ಬಂದವರಿಗೆಲ್ಲ ಸಿಹಿ ಅಡುಗೆ ಉಣಬಡಿಸಲಾಗುವುದು. ಅಲ್ಲಿಗೆ ಸೀಮಂತ ಕಾರ್ಯ ಮುಗಿಯುತ್ತದೆ.

**ಮರಣ ಸಂಸ್ಕಾರ**

ಮರಣ ಸಂಸ್ಕಾರಕ್ಕೆ ಸಂಬಂಧಿಸಿದಂತೆ ಮಾದಿಗರು ಕೆಲವೊಂದು ಆಚರಣೆಗಳನ್ನು ಅಳವಡಿಸಿಕೊಂಡಿರುವುದು ಕಂಡುಬರುತ್ತದೆ. ಅಂತಹ ಆಚರಣೆಗಳನ್ನು ಮೂರು ಮುಖ್ಯ ಭಾಗಗಳಾಗಿ ವಿಂಗಡಿಸಬಹುದಾಗಿದೆ. ಅವುಗಳೆಂದರೆ ೧. ಮೂರು ದಿನದ ಕೂಳು ೨. ಹೆಗಲು ಇಳಿಸುವ ಶಾಸ್ತ್ರ, ೩. ದೊಡ್ಡತಿಥಿ ಕಾರ್ಯ. ವ್ಯಕ್ತಿ ಮರಣ ಹೊಂದಿದ ನಂತರ ಇವುಗಳನ್ನು ಕ್ರಮವಾಗಿ ಅನುಸರಿಸುತ್ತಾರೆ. ಮರಣ ಹೊಂದಿದವರು ಅತ್ಮಹತ್ಯೆ ಮಾಡಿಕೊಂಡಿದ್ದರೆ ಕಟ್ಟಿಗೆಯಿಂದ ಸುಡುವ ಪದ್ಧತಿ ಇದೆ. ಗುರುಬೋಧ ಪಡೆದವರಾಗಿದ್ದರೆ ಅವರನ್ನು ಉಪ್ಪಿನಿಂದ ಮುಚ್ಚಲಾಗುತ್ತದೆ. ಆದರೆ ಊಳುವ ಪದ್ಧತಿ ಹೆಚ್ಚಾಗಿ ಇವರಲ್ಲಿದೆ.

ಮರಣ ಹೊಂದಿದ ನಂತರ ಸತ್ತ ವ್ಯಕ್ತಿಯ ಸಂಬಂಧಿಕರಿಗೆ ವಿಷಯ ತಿಳಿಸಿ ಮಣ್ಣು ಮಾಡುವ ಕಾರ್ಯಕ್ಕೆ ಬರಹೇಳುತ್ತಾರೆ. ಸತ್ತವನ ದೇಹಕ್ಕೆ ಸ್ನಾನಮಾಡಿಸಿ ಹೊಸದಾದ ಬಿಳಿ ಬಟ್ಟೆಯನ್ನು ತೊಡಿಸುತ್ತಾರೆ. ಹೊರಗಡೆ ಹೆಣವನ್ನು ಕೂರಿಸಿ ಪೂಜೆ ಮಾಡುತ್ತಾರೆ. ಅಷ್ಟೊತ್ತಿಗೆ ಆ ಹೆಣವನ್ನು ತೆಗೆದುಕೊಂಡು ಹೋಗಲು ಕಳ್ಳಿಗಿಡದ ಕೊಂಬೆ ಇಲ್ಲವೇ ಬೇರೆ ಕಟ್ಟಿಗೆಯ ಉದ್ದನೆಯ ಕೋಲೊಂದನ್ನು ತಯಾರು ಮಾಡಿ ಅದರ ಮೇಲೆ ಹಣೆದ ಚಾಪೆಗರಿಯನ್ನು ಹಾಸಿರುತ್ತಾರೆ. ಹೆಣದ ಪೂಜೆಯ ನಂತರ ಅದರಲ್ಲಿ ಮಲಗಿಸಿ ಅಥವಾ ಕೂರಿಸಿ ಸ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಾರೆ. ನಾಲ್ಕು ಜನರು ಅದನ್ನು ಹೆಗಲ ಮೇಲೆ ಹೊತ್ತುಕೊಂಡು ಹೋಗುತ್ತಿದ್ದಾಗ ಮಂಡಕ್ಕಿಯೊಂದಿಗೆ ಎಲೆ ಅಡಿಕೆ ಹಾಗೂ ಚಿಲ್ಲರೆ ಕಾಸನ್ನು ಮಿಶ್ರಣ ಮಾಡಿ ಹೆಣದ ಮೇಲೆ ಒಬ್ಬರು ತೂರುತ್ತಾ ಹೋಗುತ್ತಿರುತ್ತಾರೆ. ಸ್ಮಶಾನ ತಲುಪಿದ ನಂತರ ಈ ಮೊದಲೆ ಅಲ್ಲಿಗೆ ಬಂದು ಕೆಲವರು ಉತ್ತರ-ದಕ್ಷಿಣವಾಗಿ ಗುಂಡಿಯನ್ನು ತೆಗೆದಿರುತ್ತಾರೆ. ಅದಕ್ಕೆ ಮೊದಲು ಬಂದಿದ್ದವರೆಲ್ಲ ತಂಗಡಿ(ಟಿ) ಗಿಡದ ಸೊಪ್ಪನ್ನು ಕಿತ್ತು ತಂದು ಗುಂಡಿಯೊಳಗೆ ಹಾಕಿರುತ್ತಾರೆ. ಅಲ್ಲಿ ಹೆಣಕ್ಕೆ ಪೂಜೆ ಮಾಡಿದ ನಂತರ ಆ ಗುಂಡಿಯೊಳಕ್ಕೆ ಇಳಿಸಲಾಗುತ್ತದೆ. ದಕ್ಷಿಣ ದಿಕ್ಕಿಗೆ ತಲೆಯನ್ನು ಸ್ವಲ್ಪ ಓರೆಮಾಡಿ ಹೆಣವನ್ನು ಮಲಗಿಸುತ್ತಾರೆ. ಅಲ್ಲಿಗೆ ಬಂದವರೆಲ್ಲಾ ಮೂರು ಹಿಡಿ ಮಣ್ಣನ್ನು ಹಾಕಿ ಹೊರಡುತ್ತಾರೆ. ಗುಂಡಿಯನ್ನು ಸಂಪೂರ್ಣ ಮುಚ್ಚಿ ನಂತರ ಗುಡ್ಡೆ ಮಾಡಿ ಹಾರೆ, ಚಲಿಕೆಯನ್ನು ಮೂರು ಬಾರಿ ಎಡಗೈಯಲ್ಲಿ ಆಕಡೆಯಿಂದ ಈ ಕಡೆಗೆ

ಈ ಕಡೆಯಿಂದ ಆ ಕಡೆಗೆ ಹಾಕುತ್ತಾರೆ. ಅಲ್ಲಿಗೆ ಮಣ್ಣು ಮಾಡುವ ಕಾರ್ಯ ಮುಗಿಯುತ್ತದೆ. ಮಣ್ಣು ಮಾಡುವವರೆಲ್ಲ ಕೇರಿಗೆ ವಾಪಸ್ಸು ಬಂದು ಬೋರವೆಲ್ ಬಳಿ ಕೈಕಾಲು ಮುಖ ತೊಳೆದುಕೊಂಡು ಸತ್ತವನ ಮನೆಯ ಒಳಗೆ ಹಚ್ಚಿಟ್ಟಿರುವ ದೀಪವನ್ನು ನೋಡಿ ಕೈಮುಗಿದು ಹೊರಡುತ್ತಾರೆ.

**ಮೂರನೆಯ ದಿನದ ಕೂಳು :** ಸತ್ತ ವ್ಯಕ್ತಿಯನ್ನು ಮಣ್ಣು ಮಾಡಿದ ನಂತರದ ಮೂರು ದಿನದಲ್ಲಿ ಆ ವ್ಯಕ್ತಿಯ ಅಣ್ಣ ತಮ್ಮಂದಿರ ಕುಲಬಾಂಧವರು ಸಮಾನವಾಗಿ ಹಣ ಮತ್ತು ವಸ್ತುಗಳನ್ನು ಹಾಕುತ್ತಾರೆ. ಅದರಿಂದ ಮೂರನೆ ದಿನದಲ್ಲಿ ಕೋಳಿಯೊಂದನ್ನು ಸತ್ತವನ ಸಮಾಧಿಯ ಹತ್ತಿರ ಹೋಗಿ ಬಲಿಕೊಟ್ಟು ತಂದು ಅದರಲ್ಲಿ ಸಾಂಬಾರು ಮಾಡಿ ಮತ್ತೆ ಸಮಾಧಿಯ ಹತ್ತಿರ ಹೋಗಿ ಎಡೆ ಹಾಕುತ್ತಾರೆ. ಆತನಿಗೆ ಇಷ್ಟವಾಗಿದ್ದ ಪ್ರತಿಯೊಂದು ವಸ್ತುಗಳನ್ನು ತೆಗೆದುಕೊಂಡು ಹೋಗಿ ಇಟ್ಟು ದೂರ ಬರುತ್ತಾರೆ. ಕಾಗೆಗಳು ಬಂದು ಅವುಗಳನ್ನು ಮುಟ್ಟುವವರೆಗೂ ಗಮನಿಸುತ್ತಿರುತ್ತಾರೆ. ಹೀಗೆ ಮೂರು ದಿನದ ಕೂಳಿನ ಕ್ರಿಯೆಯನ್ನು ಮಾಡುತ್ತಾರೆ. ಸತ್ತ ವ್ಯಕ್ತಿಯನ್ನು ಹೊತ್ತಿದ್ದ ವ್ಯಕ್ತಿಗಳಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆಗಳನ್ನು ನೀಡಿ 'ಹೆಗಲು ಇಳಿಸುವ' ಶಾಸ್ತ್ರ ಮಾಡುತ್ತಾರೆ. ಅಂದು ಮಾಡಿದ ಅಡುಗೆಯನ್ನು ಮೊದಲು ಹೆಣ ಹೊತ್ತವರಿಗೆ ಮತ್ತು ಸಾವಿನ ಸುದ್ದಿ ತೆಗೆದುಕೊಂಡು ಹೋದವರಿಗೆ ಹಾಗೂ ಗುಂಡಿ ತೆಗೆದವರಿಗೆ ಉಣಬಡಿಸುತ್ತಾರೆ. ಆನಂತರ ಉಳಿದವರು ಮಾಡುತ್ತಾರೆ.

**ದೊಡ್ಡತಿಥಿ :** ಸತ್ತ ವ್ಯಕ್ತಿಯನ್ನು ಹೂಳಿದ ಒಂಬತ್ತು ಇಲ್ಲವೇ ಹದಿನೈದು ಇಲ್ಲವೇ ಹದಿಮೂರನೆಯ ದಿನದಲ್ಲಿ ತಿಥಿಯ ಕಾರ್ಯವನ್ನು ಮಾಡುತ್ತಾರೆ. ಅದನ್ನು 'ದೊಡ್ಡ ತಿಥಿ'ಯೆಂತಲೂ ಕರೆಯುವರು. ಈ ಕುರಿತು ಕೆಲವರು ಪತ್ರಿಕೆ ಅಚ್ಚುಹಾಕಿಸಿ ವಿಷಯವನ್ನು ಬಂಧು-ಬಾಂಧವರಿಗೆ ತಿಳಿಸುತ್ತಾರೆ. ಆ ದಿನ ಸಮಾಧಿಯ ಹತ್ತಿರ ಹೋಗಿ ಪೂಜೆ ಮಾಡಿಕೊಂಡುಬರುತ್ತಾರೆ. ಹಿಂದೆ ಮಾಂಸದ ಅಡುಗೆಯನ್ನು ಮಾಡುತ್ತಿದ್ದರು. ಆದರೆ ಇಂದು ಅದು ಕಡಿಮೆಯಾಗಿದೆ.

ಈ ಬಗೆಯಲ್ಲಿ ಮಾದಿಗರು ಹುಟ್ಟಿನಿಂದ ಸಾವಿನವರೆಗೂ ನಡೆಸುವ ಆಚರಣೆಗಳಿವು. ಕೆಲವೊಂದು ಬದಲಾವಣೆಗಳನ್ನು ಹೊರತುಪಡಿಸಿದರೆ ಉಳಿದೆಲ್ಲಾ ಆಚರಣೆಗಳು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಮಾದಿಗರಲ್ಲಿ ಒಂದೇ ರೀತಿಯಲ್ಲಿರುವುದನ್ನು ಕಾಣಬಹುದಾಗಿದೆ.

## ೩.೨ ಮಾದಿಗರ ಸಾಮಾಜಿಕ ಸ್ಥಾನ-ಮಾನಗಳು

ಭಾರತೀಯ ಸಮಾಜ ಜಾತಿಪದ್ಧತಿಯಿಂದ ಕೂಡಿದ್ದು ಇಲ್ಲಿ ಜಾತಿ ವ್ಯವಸ್ಥೆಯು ತುಂಬಾ ಮಹತ್ವ ಪಡೆದಿದೆ. ಜಾತಿಯು ಪ್ರತಿಯೊಂದು ಜನವರ್ಗದ ಸಾಮಾಜಿಕ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಇದು ಪ್ರತಿಯೊಬ್ಬರ ವೈಯಕ್ತಿಕ ಮತ್ತು ಸಾಮಾಜಿಕ ಸಂಬಂಧಗಳನ್ನು ಕ್ರಮಪಡಿಸುವ, ನಿಯಂತ್ರಿಸುವ ಹಾಗೂ ನಿರ್ದೇಶಿಸುವ ಪ್ರಧಾನ ಪಾತ್ರವಹಿಸುತ್ತದೆ. ಹುಟ್ಟಿನಿಂದ ಸಾಯುವವರೆಗೆ ತನ್ನ ಜಾತಿಯ ನಂಬಿಕೆ, ಆಚರಣೆ ಮುಂತಾದವುಗಳನ್ನು ಅನುಸರಿಸುತ್ತಾ ನಡೆಯುವಂತೆ

ಮಾಡುತ್ತದೆ. ಸಾವಿರಾರು ಜಾತಿಗಳು ಇಂದು ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಸಾಮಾಜಿಕ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಜಾತಿ ಯಾವ ಪಾತ್ರವಹಿಸಲು ಕಾರಣವಾಗಿದೆ ಎಂಬುದನ್ನು ತಿಳಿಯಲು ಇಲ್ಲಿ ಪ್ರಯತ್ನಿಸಿದೆ. ಈ ಹಿನ್ನೆಲೆಯಲ್ಲಿ ಮಾದಿಗರ ಸಾಮಾಜಿಕ ಸ್ಥಾನಮಾನಗಳು ಹೇಗಿವೆ ಎಂದು ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಿದ್ದು, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳನ್ನು ಪ್ರಮುಖವಾಗಿ ಗಮನಿಸಲಾಗಿದೆ.

**ಜಾತಿಯ ಹುಟ್ಟು ಮತ್ತು ಬೆಳವಣಿಗೆ**

'ಜಾತಿ' ಎಂಬುದು ತಳಿ, ಕುಲ, ವಂಶ ಅಥವಾ ಅನುವಂಶಿಕ ಲಕ್ಷಣಗಳ ಸಂಮಿಶ್ರಣ. ಒಂದೇ ಗುಂಪಿಗೆ ಸೇರಿದ ಜನಸಮುದಾಯವನ್ನು ಗುರುತಿಸಲು ಈ ರೀತಿ ಬಳಸಲಾಗುವುದು. ಜಾತಿ ಪದವು ಇಂಗ್ಲೀಷ್ ನಲ್ಲಿ 'ಕಾಸ್ಟ್' ಎಂಬುದಾಗಿದ್ದು, ಇದು ಸ್ಪಾನಿಷ್ ಮೂಲದ ಪದವಾಗಿದೆ. "ಮೊದಲು ಬರಿಯ ಉದ್ಯೋಗಗಳ ಮೇಲೆ ಅವಲಂಬಿಸಿದ ಬ್ರಾಹ್ಮಣ, ಕ್ಷತ್ರಿಯ ಹಾಗೂ ವೈಶ್ಯ ಎಂಬ ಆರ್ಯ ವರ್ಗಗಳು ಕಡೆಗೆ ಜನ್ಮದ ಮೇಲೆ ಅವಲಂಬಿಸಿದ ಜಾತಿಗಳಾಗಿ ಪರಿವರ್ತನೆ ಹೊಂದಿದವು. ಅದೇ ವೇಳೆಗೆ ದಸ್ಯುವರ್ಣ ಅಥವಾ ಶೂದ್ರರದಲ್ಲಿದ್ದ ಬೇರೆ ಬೇರೆ ತರದ ವರ್ಗಗಳೂ ಭಿನ್ನ ಭಿನ್ನ ಜಾತಿಗಳಾದವು. ಹೀಗೆ ಜಾತಿತತ್ವದ ಮೂಲ ಉಗಮವು ಜನಾಂಗ ವ್ಯತ್ಯಾಸಗಳಲ್ಲಿಯ ಅಭಿಮಾನ ಮತ್ತು ದುರಾಭಿಮಾನದಿಂದ ಉಂಟಾಗಿವೆ ಎನ್ನಲಾಗಿದೆ. ವರ್ಣ ಅಥವಾ ವರ್ಗ ವ್ಯವಸ್ಥೆಯ ಮುಂದುವರೆದ ಭಾಗವೇ ಜಾತಿ ವ್ಯವಸ್ಥೆಯಾಗಿದೆ."[೪] ಈ ಬಗೆಯ "ಜಾತಿವ್ಯವಸ್ಥೆಯು ದ್ರಾವಿಡ ಮೂಲದ್ದಲ್ಲ, ವೈದಿಕ ಮೂಲದ್ದು. ಉತ್ತರದ ವೈದಿಕರ ಜಾತಿವ್ಯವಸ್ಥೆ ದ್ರಾವಿಡ ಜನಾಂಗಗಳ ಮೇಲೆ ಹೇರಲ್ಪಟ್ಟ ನಂತರವಷ್ಟೆ ಈ ಹೀನ ಸ್ಥಿತಿ ಪರಂಪರೆಯಾಗಿ ಬೆಳೆಯಿತು. ಇವರ ಹಿಂದಿನ ಆರ್ಥಿಕ-ಸಾಮಾಜಿಕ ವ್ಯವಸ್ಥೆ ಜಾತಿ-ವರ್ಗಗಳ ಮೇಲು ಕೀಳುಗಳಿಂದ ಕೂಡಿರಲಿಲ್ಲ"[೫] ಈ ರೀತಿ ಜಾತಿಪದ್ಧತಿಯು ಆರ್ಯ ಧಾಳಿ ಮಾಡಿದ ನಂತರದಲ್ಲಿ ಹುಟ್ಟಿಕೊಂಡಿದೆ ಎನ್ನಬಹುದಾಗಿದೆ. ಇದು ಹುಟ್ಟಿ ಬೆಳೆದದ್ದು ಕ್ರಿ.ಪೂ.೬೦೦ ಮತ್ತು ಕ್ರಿ.ಶ.೩೦೦ರ ಕಾಲಾವಧಿಯಲ್ಲಿ[೬] ಎನ್ನಲಾಗಿದೆ.

ಪ್ರಾಚೀನ ಕಾಲದಿಂದಲೂ "ಸ್ವಜಾತಿ ಪದ್ಧತಿ ಅಥವಾ ಬಾಗಿಲು ಮುಚ್ಚಿದ ವ್ಯವಸ್ಥೆಯು ಹಿಂದೂ ಸಮಾಜದಲ್ಲಿ ಒಂದು ರೂಢಿಯ ಶೈಲಿಯಾಗಿತ್ತು ಮತ್ತು ಅದು ಬ್ರಾಹ್ಮಣ ಜಾತಿಯಿಂದ ಹುಟ್ಟಿದ ರೂಢಿಯಾಗಿದ್ದುದರಿಂದ ಅದನ್ನು ಎಲ್ಲ ಬ್ರಾಹ್ಮಣೇತರ ಉಪ-ವಿಭಾಗ ಅಥವಾ ವರ್ಗಗಳವರೂ ಹೃದಯ ಪೂರ್ವಕವಾಗಿ ಅನುಕರಿಸಿದರು. ಮುಂದೆ ಅವರುಗಳೇ ಸ್ವಜಾತಿ ಪದ್ಧತಿ ಪಾಲಿಸುವ ಜಾತಿಗಳಾದರು. ಈ ಎಲ್ಲ ಉಪವಿಭಜನೆಗಳನ್ನು ಅವುಗಳ ತಾರತಮ್ಯದ ಮುನ್ನೆಡೆಯಲ್ಲಿ ಅನುಕರಣೆಯ ಅಂಟು ಜಾಡ್ಯ ಬೆನ್ನು ಹತ್ತಿ ಅವು ಜಾತಿಗಳಾಗುವಂತೆ ಮಾಡಿತು"[೭] ಹೀಗೆ ಪ್ರತಿಯೊಂದು ಜಾತಿಯೂ ಮೇಲ್ಪಾತೀಕರಣ ಕ್ರಿಯೆಯೊಂದಿಗೆ ಗಟ್ಟಿಯಾಗ ತೊಡಗಿ ಪ್ರತ್ಯೇಕ ಜಾತಿಗಳಾಗಿ ಹೋದವು.

ಚರಿತ್ರೆಯ ವಿವಿಧ ಕಾಲಘಟ್ಟಗಳಲ್ಲಿ ದಾಖಲಾಗಿರುವ ಅನೇಕ ಜನಾಂಗಿಕ, ಧಾರ್ಮಿಕ ಹಾಗೂ ಪ್ರಭುತ್ವದ ಮೇಲಾಟಗಳು ಜಾತಿಪದ್ಧತಿ ಮತ್ತಷ್ಟು ಕಠಿಣತೆಯ ರೂಪ ಪಡೆಯಲು ಸಾಧ್ಯವಾಯಿತು. ಇಂತಹ ಸಂದರ್ಭಗಳಲ್ಲೆಲ್ಲ ಪುರೋಹಿತಶಾಹಿಗಳ ಪಾತ್ರ ಪ್ರಮುಖವಾಗಿದೆ. ಹೀಗಾಗಿ ಜಾತಿ ವ್ಯವಸ್ಥೆಯಲ್ಲಿ ಉನ್ನತ ಸ್ಥಾನಪಡೆದಿರುವ ಪುರೋಹಿತ ವರ್ಗದ ಕುತಂತ್ರವು ಜಾತಿಪದ್ಧತಿಯಲ್ಲಿ ಜಾತಿಗಳ ಶ್ರೇಣೀಕರಣ ಅಥವಾ ಸ್ಥಾನಮಾನ ನಿಗದಿಗೊಳ್ಳಲು ಪ್ರಮುಖ ಕಾರಣವಾಗಿದೆ. ಈ ರೀತಿ ಜಾತಿ ಹುಟ್ಟಿ ಬೆಳವಣಿಗೆಯಾಗಿ ಇಂದು ಕಠಿಣ ಸ್ವರೂಪವನ್ನು ಪಡೆದುಕೊಂಡಿದೆ.

**ಜಾತಿಪದ್ಧತಿ ವಿರುದ್ಧದ ಹೋರಾಟ**

ಜಾತಿಪದ್ಧತಿಯ ಪರಿಣಾಮವಾಗಿ ಮೇಲು-ಕೀಳು ಬೇಧ-ಭಾವನೆಗಳು ತುಂಬಿ ಮನುಷ್ಯ-ಮನುಷ್ಯರ ನಡುವೆ ಅಡ್ಡಗೋಡೆಗಳು ನಿರ್ಮಾಣವಾದವು. ಇದರಿಂದಾಗಿ ವಿವಿಧ ರೀತಿಯ ಶೋಷಣೆಗಳು ನಡೆಯತೊಡಗಿದವು. ಸಾಮಾಜಿಕ ವ್ಯವಸ್ಥೆಯಲ್ಲಿ ಶ್ರೇಣೀಕೃತ ಜಾತಿಪದ್ಧತಿಯಿಂದ ಅತ್ಯಂತ ಕೆಳಹಂತದಲ್ಲಿ ಬದುಕುತ್ತಿರುವ ಮಾದಿಗರು ಮತ್ತು ಹೊಲೆಯರು ಇಂತಹ ಶೋಷಣೆಗಳಿಗೆ ಗುರಿಯಾದರು. ಈ ಬಗೆಯ ಶೋಷಣೆಗಳಿಂದ ಅವರನ್ನು ವಿಮೋಚನೆಗೊಳಿಸಲು ಮತ್ತು ಅಸಮಾನತೆಯನ್ನು ಹೊಗಲಾಡಿಸಿ ಸಮಾನತೆಯ ಸಮಾಜದ ನಿರ್ಮಾಣ ದೃಷ್ಟಿಯಿಂದ ಜಾತಿಪದ್ಧತಿಯ ವಿರುದ್ಧದ ಹೋರಾಟಗಳು ಆರಂಭಗೊಂಡವು. ಜಾತಿಪದ್ಧತಿಯ ವಿರುದ್ಧದ ಹೋರಾಟ ಬುದ್ಧನ ಕಾಲದಿಂದ ಆರಂಭಗೊಂಡು ಇಂದಿನವರೆಗೂ ನಡೆಯುತ್ತಲೇ ಬಂದಿದೆ. ವಿವಿಧ ಕಾಲಘಟ್ಟಗಳಲ್ಲಿ ಅನೇಕ ಸುಧಾರಕರು, ಧಾರ್ಮಿಕ ವ್ಯಕ್ತಿಗಳು, ಹೋರಾಟಗಾರರು, ಚಿಂತಕರು ಜಾತಿಪದ್ಧತಿಯನ್ನು ವಿರೋಧಿಸಿ ಅದರ ವಿರುದ್ಧ ಪ್ರಬಲವಾಗಿ ಹೋರಾಟ ನಡೆಸಿದ್ದಾರೆ. ಮೊದಲು ಕ್ರಿ.ಪೂ.೬ನೇ ಶತಮಾನದಲ್ಲಿ ಜೈನ ಮತ್ತು ಬೌದ್ಧಧರ್ಮಗಳು ಈ ನಿಟ್ಟಿನಲ್ಲಿ ಹೋರಾಟ ನಡೆಸಿದವು. ನಂತರ ನಡೆದ ಹಿಂದೂ ಪುನರುಜ್ಜೀವನ ದಿಂದಾಗಿ ಮತ್ತೊಮ್ಮೆ ಅಸಮಾನತೆಯನ್ನು ಪ್ರತಿಪಾದಿಸುವ ಧರ್ಮವಾದ ವೈದಿಕ ಧರ್ಮ ಮೇಲುಗೈ ಸಾಧಿಸಿತು. ಆನಂತರ ಕರ್ನಾಟಕ ಸಂದರ್ಭದಲ್ಲಿ ಈ ಬಗೆಯ ಹೋರಾಟವನ್ನು ೧೨ನೇ ಶತಮಾನದಲ್ಲಿ ಬಸವಾದಿ ಶರಣರಿಂದ ನಡೆಯಿತು. ಇದು ಅತ್ಯಂತ ಪರಿಣಾಮಕಾರಿಯಾದಂತ ಪ್ರಭಾವವನ್ನು ಅಂದಿನ ಸಮಾಜದ ಮೇಲೆ ಬೀರಿತು. ಈ ಚಳವಳಿಯಿಂದಾಗಿ ಲಿಂಗಾಯಿತ ಸಮಾಜವು ಅಸ್ತಿತ್ವಕ್ಕೆ ಬಂದಿತು. ಅನಂತರದಲ್ಲಿ ಇದು ಸಹ ಜಾತಿಪದ್ಧತಿಯನ್ನು ಪೋಷಿಸುವ ಧರ್ಮವಾಯಿತು. ಭಾರತದ ವಿವಿಧ ಭಾಗಗಳಲ್ಲಿ ಭಕ್ತಿ ಪಂಥ ಚಳವಳಿಯು ಸಹ ಜಾತಿಪದ್ಧತಿಯನ್ನು ದಿಕ್ಕರಿಸಿತು. ಆದರೆ ಇದು ''ತನ್ನ ಕ್ರಿಯಾ ಪರಿಧಿಯನ್ನು ಆರಾಧನೆಯ ಸಮಾನ ಅವಕಾಶಗಳಿಗಾಗಿ ಸೀಮಿತಗೊಳಿಸಿಕೊಂಡಿದ್ದರಿಂದ ಭಕ್ತಿ ಚಳವಳಿಯು ಜಾತಿ ವ್ಯವಸ್ಥೆಯ ಗಂಡಾಂತರಕಾರಿಯಾಗಿ ಬೆಳೆಯಲಿಲ್ಲ ಹಾಗೆಯೇ ಸೂಫಿ ಚಳವಳಿಯು ಆಧ್ಯಾತ್ಮಿಕ ಸಮಾನತೆಯ ಧ್ಯೇಯದ ಇಸ್ಲಾಂ ಚಳವಳಿಯಾದ್ದರಿಂದ ಜಾತಿ ವಿರೋಧಿ ಚಳವಳಿಯಾಗು ವಂತಿರಲಿಲ್ಲ.''[೮] ಇದರಿಂದಾಗಿ ಜಾತಿ ಪದ್ಧತಿಯನ್ನು ಪ್ರಬಲವಾಗಿ ವಿರೋಧಿಸಲಿಲ್ಲವೆನ್ನಬಹುದು. ಈ ಕಾರಣ ಜಾತಿ ವಿರುದ್ಧದ ಹೋರಾಟಗಳು ಯಶಸ್ವಿಯಾಗಲಿಲ್ಲ.

೧೯ನೇ ಶತಮಾನದಲ್ಲಿ ಅನೇಕ ಸಮಾಜ ಸುಧಾರಕರು ಜಾತಿಪದ್ಧತಿಯನ್ನು ವಿರೋಧಿಸಿ ಹೋರಾಟ ಮಾಡಿದ್ದಾರೆ. ಅವರೆಂದರೆ ಕೇರಳದಲ್ಲಿ ನಾರಾಯಣ ಗುರು, ತಮಿಳುನಾಡಿನಲ್ಲಿ ಪೆರಿಯಾರ್, ಮಹಾರಾಷ್ಟ್ರದಲ್ಲಿ ಜ್ಯೋತಿರಾವ್ ಭಾಪುಲೆ ಮುಂತಾದವರು. ಇವರನ್ನು ಬಿಟ್ಟರೆ ಅಂಬೇಡ್ಕರ್ ದೇಶದ್ಯಾಂತ ಬೃಹತ್ ಆಂದೋಲನವೊಂದನ್ನು ಮಾಡಿದರು. ಇವರು ಜಾತಿಪದ್ಧತಿಯ ವಿರುದ್ಧದ ಹೋರಾಟದಲ್ಲಿ ತೊಡಗಿ ಶೋಷಿತ ಜಾತಿಗಳನ್ನು ಮೇಲೆತ್ತುವಲ್ಲಿ ಕೈಗೊಂಡ ಹೋರಾಟಗಳು ಚಾರಿತ್ರಿಕ ಮಹತ್ವ ಪಡೆದಿವೆ. "ಜಾತಿ ಪರಿಪಾಲನೆ ಜನರ ತಪ್ಪಲ್ಲ ನಿಜವಾಗಿ ತಪ್ಪಿರುವುದು ಜಾತಿಯ ಬಗೆಗೆ ಧರ್ಮ ಉಂಟು ಮಾಡಿದ ಕಲ್ಪನೆಯಲ್ಲಿ. ಈ ಮಾತು ಸರಿಯಾದಾರೆ ನೀವು ಎದುರಿಸಬೇಕಾಗಿದ್ದ ವೈರಿ ಜಾತಿನಿಷ್ಠ ಜನರಲ್ಲ, ಅವರಿಗೆ ಈ ಧರ್ಮ ಬೋಧಿಸಿದ ಶಾಸ್ತ್ರಗಳೇ ಶತ್ರು"[೯] ಈ ಕಾರಣದಿಂದಾಗಿ "ಜಾತಿಗೆ ಆಧಾರವಾದ ಧಾರ್ಮಿಕ ಕಲ್ಪನೆಗಳನ್ನು ನಿರ್ಮೂಲಗೊಳಿಸಿದಾಗ ಮಾತ್ರ ಜಾತಿಯನ್ನು ಭಂಗಿಸುವುದು ಸಾಧ್ಯ" ಎಂಧು ಅಂಬೇಡ್ಕರ್ ಕರೆ ನೀಡಿದರು.[೧೦] ಹೀಗೆ ಜಾತಿ ವಿರುದ್ಧದ ಹೋರಾಟ ಆರಂಭಿಸಿ ತಮ್ಮ ಜೀವನದ ಕೊನೆಯವರೆಗೂ ಹೋರಾಟ ಮಾಡಿದ್ದಾರೆ. ಅವರ ನಂತರ ಕರ್ನಾಟಕದ ಸಂದರ್ಭದಲ್ಲಿ ಅವರ ವಿಚಾರಧಾರೆಗಳ ನೆಲೆಯಲ್ಲಿ ಹುಟ್ಟಿಕೊಂಡ 'ದಲಿತ ಸಂಘರ್ಷ ಸಮಿತಿ' ಸಂಘಟನೆಯು ಜಾತಿ ಪದ್ಧತಿಯ ವಿರುದ್ಧದ ಹೋರಾಟ ಕೈಗೊಂಡಿತು. ದುರಾದೃಷ್ಟವಶಾತ್ ಅದರಲ್ಲಿ ಇಂದು ಮಾದಿಗರು ಮತ್ತು ಹೊಲೆಯರು ಮೀಸಲಾತಿ ಹಿನ್ನೆಲೆಯಲ್ಲಿ ಅನುಮಾನ, ದ್ವೇಷ, ಅಸೂಯೆ ಉಂಟಾಗುವಂತಾಗಿದೆ.

ಈ ರೀತಿ ಪ್ರಾಚೀನ ಕಾಲದಿಂದ ಇಂದಿನವರೆಗೂ ನಡೆದ ಜಾತಿ ವಿರುದ್ಧದ ಹೋರಾಟಗಳು ಜಾತಿಪದ್ಧತಿಯನ್ನು ನಾಶ ಮಾಡಲಿಲ್ಲ. "ಸಂಪ್ರದಾಯಬದ್ಧ ಜನರ ಕೈಯಲ್ಲಿ ಜಾತಿ ಒಂದು ಬಲಿಷ್ಠ ಆಯುಧವಾಗಿದ್ದು, ಅದರಿಂದ ಸುಧಾರಕನನ್ನು, ಸುಧಾರಣೆಗಳನ್ನು ಅದು ನಿರ್ಮೂಲಗೊಳಿಸಬಲ್ಲದು"[೧೧] ಎಂಬುದು ಸತ್ಯವಾಗಿದೆ.

**ಮಾದಿಗರ ಸಾಮಾಜಿಕ ಸ್ಥಾನಮಾನ**

ಶ್ರೇಣೀಕೃತ ಜಾತಿ ಪದ್ಧತಿಯಂತೆ ಪ್ರತಿಯೊಂದು ಜಾತಿಗಳು ಆಯಾಸ್ಥಾನದಲ್ಲಿ ಸಾಮಾಜಿಕ ಸ್ಥಾನಗಳನ್ನು ಹೊಂದಿದ್ದವು. ಸಮಾಜದಲ್ಲಿ ಅತ್ಯಂತ ಕೊನೆಯ ಸ್ಥಾನ ಮಾದಿಗರದು. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಹೊಲೆಯರಿಗಿಂತಲೂ ಕೆಳಗಿನ ಸ್ಥಾನ ಇವರದು. ಅಸ್ಪೃಶ್ಯರಲ್ಲಿ ಅಸ್ಪೃಶ್ಯರೆಂದರೆ ಈ ಭಾಗದ ಮಾದಿಗರು ಮಾತ್ರ. ಈ ರೀತಿಯ ಸಾಮಾಜಿಕ ಸ್ಥಾನಮಾನಗಳು ಅವರು ಕೈಗೊಳ್ಳಬೇಕಾದ ವೃತ್ತಿಗಳನ್ನು ಸಹ ಸೂಚಿಸುತ್ತವೆ. ಈ ಹಿನ್ನೆಲೆಯಲ್ಲಿ ಈ ಎರಡು ಜಿಲ್ಲೆಗಳಲ್ಲಿ ನೆಲೆಸಿರುವ ಮಾದಿಗರು ಕೈಗೊಂಡಿರುವ ವೃತ್ತಿಯು ಕೆಳ ಹಂತದವು. "ಜಾತಿಗಳಲ್ಲಿ ಕಂಡು ಬರುವ ಅಸಮಾನತೆಯನ್ನು ಸಮರ್ಥಿಸಿಕೊಳ್ಳಲು ಪುರೋಹಿತ ವರ್ಗವು ಕರ್ಮಸಿದ್ಧಾಂತವನ್ನು ಕಂಡು

ಹಿಡಿಯಿತು. ವ್ಯಕ್ತಿಯ ಕರ್ಮಾನುಸಾರ ಮೇಲು ಅಥವಾ ಕೆಳಜಾತಿಯಲ್ಲಿ ಹುಟ್ಟುತ್ತಾನೆ ಎಂದು ಹೇಳಲಾಯಿತು.''[೧೨] ಇದು ಬದಲಾಗಬೇಕಾದರೆ ಕೆಳಜಾತಿಗಳು ಮೇಲು ಜಾತಿಗಳ ಸೇವೆ ಮಾಡಿದರೆ ಅವರಿಗೆ ಮೇಲುಜಾತಿಯಲ್ಲಿ ಜನಿಸಲು ಅವಕಾಶವಾಗುತ್ತದೆಯೆಂದು ನಂಬಿಸಿ ಅನೇಕ ಕೀಳು ವೃತ್ತಿಗಳ ಜೊತೆ ಸಾಂಪ್ರದಾಯಿಕ ಸೇವೆಗಳನ್ನು ಕೆಳಜಾತಿಗಳ ಮೇಲೆ ಏರಲಾಗಿದ್ದರಿಂದ ಅವುಗಳಲ್ಲಿ ತೊಡಗಿಕೊಳ್ಳು ವಂತಾಯಿತು. ಈ ರೀತಿ ತೊಡಗಿಕೊಂಡ ಜಾತಿಗಳಲ್ಲಿ ಮಾದಿಗ ಜನಾಂಗವೂ ಒಂದು.

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲೂ ಮಾದಿಗರ ಸ್ಥಾನಮಾನ ಅತ್ಯಂತ ಕಡೆಯದು. ಗ್ರಾಮೀಣ ಪ್ರದೇಶದಲ್ಲಿ ಈ ಜಾತಿಗೆ ಯಾವುದೇ ಗೌರವವಿಲ್ಲದೆ ಅತ್ಯಂತ ಕೀಳಾಗಿ ಕಾಣಲಾಗುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಒಳ್ಳೆಯ ಬಟ್ಟೆಯನ್ನು ತೊಡುವುದು ಇರಲಿ ಚಪ್ಪಲಿ ಮೆಟ್ಟಿಕೊಂಡು ಇತರೆ ಜನಾಂಗದ ಜಾತಿಯ ಜನರು ವಾಸ ಮಾಡುವ ಬೀದಿಗಳಲ್ಲಿ ಓಡಾಡುವ ಹಾಗಿರಲಿಲ್ಲ. ಅಂತಹ ಉದಾಹರಣೆಯೊಂದು ಬಳ್ಳಾರಿ ಜಿಲ್ಲೆಯಲ್ಲಿ ಕೂಡ್ಲಿಗಿ ತಾಲ್ಲೂಕಿನ ಬಣವಿಕಲ್ಲು ಗ್ರಾಮದಲ್ಲಿ ನಡೆದಿರುವುದು ಕಂಡುಬರುತ್ತದೆ. ಸಾಲ ಕೊಟ್ಟಿರುವ ಮಾದಿಗರ ಮರಿಯಪ್ಪ ಹಳ್ಳಿಗಳಿಗೆ ಸಾಲ ಕೇಳಲು ಎಲ್ಲಿ ಹೋದರೂ ಮನೆಯ ಮುಂದಿನ ಕಟ್ಟೆಯ ಮೇಲೆ ಕೂಡದೇ ಕೆಳಗೆ ಕೂಡುತ್ತಿದ್ದರು. ಜನವಸತಿಯ ಯಾವ ಊರೇ ಆಗಲಿ ಒಳ ನಡೆಯುವಾಗ ತನ್ನ ಚಪ್ಪಲಿಗಳನ್ನು ಕೈಯಲ್ಲಿ ಹಿಡಿದುಕೊಂಡೇ ನಡೆಯುತ್ತಿದ್ದರೆಂದು[೧೩] ತಿಳಿದುಬರುತ್ತದೆ. ಈ ಅಂಶದ ಹಿನ್ನೆಲೆಯಲ್ಲಿ ನೋಡಿದಾಗ ಮಾದಿಗರು ಸಾಲ ಕೊಡುವಷ್ಟು ಆರ್ಥಿಕವಾಗಿ ಮುಂದುವರಿದಿರುವುದು ಆಶ್ಚರ್ಯ ಉಂಟುಮಾಡಿದರೂ ಅಂದಿನ ಮಾದಿಗರ ಸ್ಥಿತಿಗತಿಗಳು ಅತ್ಯಂತ ಹೀನಾಯವಾಗಿದ್ದವು. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಅನೇಕ ಬದಲಾವಣೆಗಳು ಆಗಿವೆ. ಮಾದಿಗರು ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯವಾಗಿ ಅಭಿವೃದ್ಧಿ ಹೊಂದಿದ್ದರೂ ಮೇಲು ಜಾತಿಗಳ ವಕ್ರ ದೃಷ್ಟಿಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಮಾದಿಗರು ಶಾಲಾ ಮಾಸ್ತರ ಹುದ್ದೆಗೆ ಆಯ್ಕೆಯಾಗಿ ಹಳ್ಳಿಗಳ ಮಕ್ಕಳಿಗೆ ಪಾಠ ಹೇಳಲು ಹೋದರೆ ಅವರಿಗೆ ಮಾದಿಗ ಜನಾಂಗದವರನ್ನು ಹೊರತು ಪಡಿಸಿದರೆ ಮತ್ತಾವ ಜಾತಿಗಳು ಮನೆ ಬಾಡಿಗೆ ಕೊಡಲು ಮುಂದಾಗು ವುದಿಲ್ಲ. ಕೆಲವೊಂದು ಜಾತಿಯ ಹಟ್ಟಿಯೊಳಗೆ ಇಂದಿಗೂ ಮಾದಿಗರಿಗೆ ಪ್ರವೇಶವಿಲ್ಲ. ಮಾದಿಗರಿಗಿಂತಲೂ ಅತ್ಯಂತ ಕೊಳಕಾಗಿ ಬದುಕುತ್ತಿರುವ ಜಾತಿಗಳು ಸಹ ಮಾದಿಗರೆಂದರೆ ಅಸಹ್ಯದಿಂದ, ಕೀಳಾಗಿ ನೋಡುವುದು ಇದೆ. ಕೆಲವೊಂದು ಪ್ರಮುಖ ಜನಪ್ರತಿನಿಧಿಗಳನ್ನು ಹೊರತು ಪಡಿಸಿದರೆ ಉಳಿದಂತೆ ಎಲ್ಲರನ್ನೂ ಕೀಳಾಗಿಯೇ ಕಾಣಲಾಗುತ್ತದೆ. ಬಳ್ಳಾರಿ ಜಿಲ್ಲೆಯ ಕೆಲವು ಗ್ರಾಮೀಣ ಪ್ರದೇಶಗಳಲ್ಲಿ ಮದುವೆಯಂತಹ ಕಾರ್ಯಗಳಿಗೆ ಬ್ಯಾಂಡ್ ಸೆಟ್ ಬಳಸಿದರೆ ಇತರೆ ಜಾತಿಯವರು ಒಂದು ರೀತಿಯಾಗಿ ಕಾಣುತ್ತಾರೆ. ಇವರನ್ನು ಗ್ರಾಮದ ಯಾವುದೇ ಕಟ್ಟೆಯ ಮೇಲೆ ಕೂರುವುದು ಸಹ ಹಲವು ಕಡೆ ನಿಷೇಧವಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯವಾಗಿ ಎಷ್ಟೇ ಮುಂದುವರಿದ್ದಿದ್ದರೂ ಅವರ ಸ್ಥಾನಮಾನಗಳು ಬದಲಾವಣೆಯಾಗಿಲ್ಲ.

ಕೆಳಹಂತದ ದೃಷ್ಟಿಯಿಂದಲೇ ಪ್ರತಿಯೊಂದು ಮೇಲು ಜಾತಿಗಳು ಕಾಣುತ್ತವೆ. ಆದರೆ ನಗರ ಪ್ರದೇಶದಲ್ಲಿ ಕೆಲವೊಂದು ಬದಲಾವಣೆಗಳು ಆಗಿರುವುದು ಕಂಡುಬರುತ್ತದೆ. ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಮುಂದುವರಿದವರನ್ನು ಗೌರವಿಸುತ್ತಾರೆ. ಇಲ್ಲಿಯೂ ಸರ್ಕಾರಿ ನೌಕರಿ ಹೊಂದಿರುವ ಮನೆ ಇಲ್ಲದವರಿಗೆ ಕೆಲವು ಜಾತಿಯ ಜನರು ಮನೆಗಳನ್ನು ಬಾಡಿಗೆಗೆ ಕೊಡುವುದಿಲ್ಲ. ಗ್ರಾಮೀಣ ಪ್ರದೇಶಗಳಿಗೆ ಹೋಲಿಸಿ ನೋಡಿದರೆ ಪಟ್ಟಣ-ನಗರ ಪ್ರದೇಶದಲ್ಲಿ ನೆಲೆಸಿರುವವರು ಅನೇಕ ಬಗೆಯ ಶೋಷಣೆಗಳಿಂದ ಮುಕ್ತರಾಗಿದ್ದರೂ ಕೀಳಾಗಿ ನೋಡುವುದು ಇನ್ನೂ ನಿಂತಿಲ್ಲವೆನ್ನಬಹುದು. ಹೀಗೆ ಗ್ರಾಮೀಣ ಮತ್ತು ಪಟ್ಟಣ ಪ್ರದೇಶದಲ್ಲಿ ನೆಲೆಸಿರುವ ಮಾದಿಗರು ಸ್ಥಾನಮಾನಗಳನ್ನು ಹೊಂದಿದ್ದಾರೆ.

## ೩.೩ ಶೋಷಣೆಯ ವಿವಿಧ ಮುಖಗಳು ಮತ್ತು ಮಾದಿಗರು

ಶ್ರೇಣೀಕೃತ ಜಾತಿ ವ್ಯವಸ್ಥೆಯು ಮನುಷ್ಯ-ಮನುಷ್ಯರ ನಡುವೆ ಅಡ್ಡಗೋಡೆಗಳನ್ನು ನಿರ್ಮಾಣ ಮಾಡಿ ಅವರಲ್ಲಿ ಮೇಲು-ಕೀಳು ಭಾವನೆಗಳನ್ನು ಸೃಷ್ಟಿಸಿದೆ. ಇದರಿಂದಾಗಿ ಅನೇಕ ಸಾಮಾಜಿಕ ಸಮಸ್ಯೆಗಳು ಉಂಟಾಗಿ ಮೇಲರಿಮೆಯಿಂದ ಬೀಗುತ್ತಿರುವ ಜಾತಿಗಳು ಕೆಳಜಾತಿಗಳನ್ನು ಹೀನಾಯವಾಗಿ ನಡೆಸಿಕೊಳ್ಳುತ್ತಿವೆ. ಜಾತಿಯ ಹಿನ್ನೆಲೆಯಲ್ಲಿ ಕೆಳಜಾತಿಗಳಲ್ಲಿ ಒಂದಾದ ಮಾದಿಗ ಜನಾಂಗವು ಅಸ್ಪೃಶ್ಯತೆ, ದೌರ್ಜನ್ಯ, ದಬ್ಬಾಳಿಕೆ, ಕೊಲೆ, ಅತ್ಯಾಚಾರ ಹಾಗೂ ಬಸವಿ ಪದ್ಧತಿಗೆ ಒಳಗಾಗಿ ದೈಹಿಕ ಮತ್ತು ಮಾನಸಿಕವಾಗಿ ಕುಗ್ಗಿ ಹೋಗಿದ್ದಾರೆ. ಕೀಳರಿಮೆಯ ಕಾರಣಕ್ಕೆ ಈ ಬಗೆಯ ಕೃತ್ಯಗಳಿಂದಾಗಿ ಆಗುವಂಥ ನೋವು, ಸಂಕಟಗಳನ್ನು ಅನುಭವಿಸುತ್ತಾ ಬಂದಿದ್ದಾರೆ. ಈ ಬಗೆಯ ನೋವು-ಸಂಕಟ ಅನುಭವಿಸದ ಯಾವ ಮಾದಿಗನೂ ಇಲ್ಲ. ಸಾವಿರಾರು ವರುಷಗಳಿಂದ ಈ ಬಗೆಯ ಶೋಷಣೆಗಳು ನಡೆದುಕೊಂಡು ಬಂದಿವೆ. ಸ್ವಾತಂತ್ರ್ಯ ನಂತರದಲ್ಲಿ ಕಾನೂನು, ಶಿಕ್ಷಣ, ಸಂಘಟನೆ, ಹೋರಾಟಗಳ ಪರಿಣಾಮವಾಗಿ ಇಂದು ಆ ಬಗೆಯ ಶೋಷಣೆಗಳಿಗೆ ಸ್ವಲ್ಪ ಮಟ್ಟಿನ ಕಡಿವಾಣ ಬಿದ್ದಂತಾಗಿದೆ. ಆದರೂ ಅದು ಮುಂದುವರಿದಿರುವುದು ದುರಂತವೇ ಸರಿ. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ನೆಲೆಸಿರುವ ಮಾದಿಗರು ಅನುಭವಿಸುತ್ತಿರುವ ಶೋಷಣೆಯ ವಿವಿಧ ಮುಖಗಳು ಈ ಕೆಳಗಿನಂತಿವೆ :

**ಅಸ್ಪೃಶ್ಯತೆ**

"ಅಸ್ಪೃಶ್ಯತೆ ಸಾಮಾಜಿಕ ಮನೋಧರ್ಮದ ಒಂದು ಮುಖ. ಅದೊಂದು ಸಾಮಾಜಿಕ ಗುಂಪು ಇನ್ನೊಂದು ಸಾಮಾಜಿಕ ಗುಂಪಿನ ಬಗೆಗೆ ಹೊಂದಿದ್ದ ವಾಕರಿಕೆಯ ಮನೋಭಾವ"[೧೪]ವಾಗಿದೆ. ಇದೊಂದು ಅಮಾನವೀಯ ಪದ್ಧತಿಯಾಗಿದ್ದು, ಭಾರತೀಯ ಸಮಾಜದಲ್ಲಿ ಅತ್ಯಂತ ಕೊನೆಯ ಘಟಕವಾದ ಅಸ್ಪೃಶ್ಯರೆಂದು ಪರಿಗಣಿಸಿರುವ ಮಾದಿಗರು ಮತ್ತು ಹೊಲೆಯರ ಮೇಲೆ ಹೇರಲ್ಪಟ್ಟಿದೆ. ದೇಶದಾದ್ಯಂತ ಇದರ ಬಾಹುಗಳು ಚಾಚಿಕೊಂಡಿವೆ. ಈ ಪದ್ಧತಿಯು ಅಸ್ಪೃಶ್ಯ ವರ್ಗಕ್ಕೆ

ಕೀಳರಿಮೆಯನ್ನು ನೀಡಿದ್ದರೆ ಅಸ್ಪೃಶ್ಯೇತರ ಮೇಲು ಜಾತಿಗಳಿಗೆ ಮೇಲರಿಮೆಯನ್ನು ಮೂಡಿಸಿ ಅವರಲ್ಲಿ ಅಸ್ಪೃಶ್ಯರ ಬಗ್ಗೆ ವಾಕರಿಕೆಯ ಮನೋಭಾವವನ್ನು ಹುಟ್ಟುಹಾಕಿದೆ. ಅಸ್ಪೃಶ್ಯತೆ ಮತ್ತು ಜಾತಿಪದ್ಧತಿಗಳೆರಡೂ ಮನುಷ್ಯ-ಮನುಷ್ಯರ ನಡುವೆ ಮೇಲು-ಕೀಳು, ಸ್ಪರ್ಶ-ಅಸ್ಪೃಶ್ಯ, ಶ್ರೇಷ್ಠ-ಕನಿಷ್ಠ ಎಂಬ ಬೇಧವನ್ನುಂಟು ಮಾಡಿವೆ. ಇದರಿಂದಾಗಿ ಜಾತಿ ಮತ್ತು ಅಸ್ಪೃಶ್ಯತೆಯ ಪರಿಣಾಮವಾಗಿ ಮಾದಿಗರು ಮತ್ತು ಹೊಲೆಯರು ದೈಹಿಕ ಮತ್ತು ಮಾನಸಿಕವಾಗಿ ನರಳುತಿರುವರು. ಅಸ್ಪೃಶ್ಯತೆಯ ಪರಿಕಲ್ಪನೆಯ ಮಡಿ-ಮೈಲಿಗೆ, ಅಶುಚಿತ್ವವನ್ನು ಪ್ರತಿಪಾದಿಸುವುದಾಗಿದ್ದು ಇದರಿಂದ ಮುಕ್ತವಾಗಲು ಕೆಲವೊಂದು ಸೂಕ್ತಮಾರ್ಗಗಳಿದ್ದರೂ, ಅಸ್ಪೃಶ್ಯವರ್ಗದ ಮೇಲೆ ಹೇರಿರುವ ಅಸ್ಪೃಶ್ಯತೆಯನ್ನು ಯಾವುದೇ ಕ್ರಮಗಳಿಂದಲೂ ಮುಕ್ತರಾಗಲು ಸಾಧ್ಯವಿಲ್ಲ. ಹೀಗಾಗಿ ಅಸ್ಪೃಶ್ಯ ವರ್ಗದಲ್ಲಿ ಹುಟ್ಟಿದ ಮನುಷ್ಯ ಅಸ್ಪೃಶ್ಯನಾಗಿಯೇ ಸಾಯುತ್ತಾನೆ. ಇಂತಹ ಅಸ್ಪೃಶ್ಯತೆಯ ಕಾರಣವಾಗಿ ಕೀಳಾಗಿ ಕಂಡು ಅಸಹ್ಯದಿಂದ ನೋಡುವ ಮೇಲ್ಜಾತಿಯ ಜನರ ವಕ್ರದೃಷ್ಟಿಗೆ ಬಿದ್ದು ನೋವು, ಸಂಕಟ ಅನುಭವಿಸದ ಅಸ್ಪೃಶ್ಯರು ಇಲ್ಲವೆಂದೇ ಹೇಳಬಹುದು. ೨೧ನೇ ಶತಮಾನದ ಈ ಹೊತ್ತಿನಲ್ಲಿಯೂ ಮಾದಿಗರು ಮತ್ತು ಹೊಲೆಯರು ಅಸ್ಪೃಶ್ಯತೆಯಿಂದ ವಿಮೋಚನೆ ಹೊಂದಲಾಗಿಲ್ಲ.

**ಅಸ್ಪೃಶ್ಯತೆಯ ಪ್ರಮುಖ ಲಕ್ಷಣಗಳು**

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಮಾದಿಗರು ಅನುಭವಿಸುತ್ತಿರುವ ಅಸ್ಪೃಶ್ಯತೆಯ ಹಿನ್ನೆಲೆಯಲ್ಲಿ ಕೆಲವೊಂದು ಪ್ರಮುಖ ಅಂಶಗಳನ್ನು ಕಾಣಬಹುದಾಗಿದೆ. ಈ ಭಾಗದಲ್ಲಿರುವ ಅಸ್ಪೃಶ್ಯತೆಯ ಪ್ರಮುಖ ಲಕ್ಷಣಗಳನ್ನು ಈ ಕೆಳಕಂಡಂತೆ ಗುರುತಿಸಬಹುದಾಗಿದೆ. ಇವು ಎರಡು ಜಿಲ್ಲೆಗಳಿಗೆ ಮಾತ್ರವಲ್ಲದೇ ಎಲ್ಲಾ ಭಾಗಗಳಿಗೂ ಅನ್ವಯವಾಗುತ್ತದೆ.

೧. ಪ್ರತ್ಯೇಕ ಕೇರಿ ಅಥವಾ ಸ್ಥಳಗಳಲ್ಲಿ ಮನೆ ನಿರ್ಮಾಣ ಮಾಡಿಕೊಳ್ಳುವುದು.

೨. ಸಾರ್ವಜನಿಕ ಸ್ಥಳಗಳಲ್ಲಿ ಪ್ರವೇಶ ನಿಷಿದ್ಧ

೩. ಸವರ್ಣೀಯ ಮನೆಗಳಿಗೆ ಪ್ರವೇಶ ನಿಷಿದ್ಧ.

೪. ಕ್ಷೌರಿಕ ಮತ್ತು ಅಗಸರ ಸೇವೆಯಿಂದ ದೂರ.

೫. ಪಾರಂಪರಿಕ ವೃತ್ತಿಯನ್ನು ಮುಂದುವರಿಸುವುದು.

೬. ಮೇಲು ಜಾತಿಯ ಜನರು ನೆಲೆಸಿರುವ ಕೇರಿಗಳಿಗೆ ಪ್ರವೇಶ ನಿಷಿದ್ಧ.

೭. ಮದುವೆ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳ ಮೆರವಣಿಗೆ ನಿಷೇಧ.

ಪ್ರತಿಯೊಂದು ಗ್ರಾಮದಲ್ಲಿ ಮಾದಿಗರು ಪ್ರತ್ಯೇಕವಾದ ಸ್ಥಳಗಳಲ್ಲಿ ಮನೆಗಳನ್ನು ನಿರ್ಮಿಸಿ ಕೊಂಡಿದ್ದಾರೆ. ಆದರೆ ಇವರು ಸವರ್ಣೀಯ ಮನೆಗಳ ಮಧ್ಯೆಯಾಗಲಿ ಮತ್ತು ಸವರ್ಣೀಯರು ಈ ಜನಾಂಗದ ಮನೆಗಳ ಮಧ್ಯೆ ಮನೆ ಮಾಡಿರುವುದು ಕಂಡುಬರುವುದಿಲ್ಲ. ಊರಿನಿಂದ ಹೊರಗಡೆ

ಮನೆಗಳನ್ನು ನಿರ್ಮಿಸಿಕೊಂಡಿರುತ್ತಾರೆ. ಪಟ್ಟಣ ಪ್ರದೇಶಗಳಲ್ಲಿ ನಾಗರಿಕ ಸೌಲಭ್ಯಗಳಿಲ್ಲದ ಕೊಳಚೆ ಪ್ರದೇಶದಲ್ಲಿ ಮನೆಗಳನ್ನು ನಿರ್ಮಿಸಿಕೊಂಡಿರುತ್ತಾರೆ.

ಪ್ರತಿಯೊಂದು ಗ್ರಾಮದಲ್ಲಿಯೂ ಸಾರ್ವಜನಿಕ ಸ್ಥಳಗಳಲ್ಲಿ ಅಸ್ಪೃಶ್ಯತೆಯ ಹಿನ್ನೆಲೆಯಲ್ಲಿ ಪ್ರವೇಶ ನಿರಾಕರಿಸಿದ್ದಾರೆ. ಹೋಟೆಲ್ ಪ್ರವೇಶ ಇರುವುದಿಲ್ಲ. ಹೊರಗಡೆ ತಾವೇ ಲೋಟ ತಂದು ಇಲ್ಲವೇ ಅಲ್ಲೇ ಅವರಿಗಾಗಿಯೇ ಇಟ್ಟಿರುವ ಲೋಟಗಳಲ್ಲಿ ಹಾಕಿಸಿಕೊಂಡು ಕುಡಿದು ತೊಳೆದಿಟ್ಟು ಹೋಗಬೇಕಿತ್ತು. ದೇವಾಲಯ ಪ್ರವೇಶವಂತೂ ಇರಲಿಲ್ಲ. ಕುಡಿಯುವ ನೀರಿಗಾಗಿ ಮಾದಿಗರಿಗೆ ಪ್ರತ್ಯೇಕ ಬಾವಿಗಳು ಇರುತ್ತಿದ್ದವು. ಅವು ಇಲ್ಲದ ಕಡೆ ಸವರ್ಣೀಯ ಬಾವಿಯ ಹತ್ತಿರ ಹೋಗಿ ಕೊಡಗಳನ್ನು ಇಟ್ಟು ನೀರು ಹಾಕಿರೆಂದು ಕೇಳಬೇಕು, ಕನಿಕರದಿಂದ ಯಾರಾದರೂ ಹಾಕಿದರೆ ಮಾತ್ರವೇ ನೀರು ಸಿಗುತ್ತಿತ್ತು. ಇವರು ನೀರು ಸೇದಿಕೊಳ್ಳುವುದಿರಲಿ ಬಾವಿಯನ್ನು ಮುಟ್ಟುವ ಹಾಗಿರಲಿಲ್ಲ. ಹಾಗೆಯೇ ಕೆರೆ, ಕಟ್ಟೆ, ಕಾಲುವೆಗಳ ಬಳಕೆ ಸಹ ಅಸ್ಪೃಶ್ಯರಾದ ಮಾದಿಗರಿಗೆ ನಿಷಿದ್ಧ.

ಯಾವುದೇ ಸವರ್ಣೀಯರ ಮನೆಗಳಿಗೆ ಮಾದಿಗರು ಪ್ರವೇಶ ಮಾಡುವುದನ್ನು ನಿಷೇಧಿಸಲಾಗಿದೆ. ಅಸ್ಪೃಶ್ಯರಲ್ಲೊಂದಾದ ಹೊಲೆಯ ಜನಾಂಗದ ಮನೆಗಳಿಗೂ ಪ್ರವೇಶ ಮಾಡುವ ಆಗಿಲ್ಲ. ಕ್ಷೌರಿಕ ಮತ್ತು ಅಗಸರು ಇವರ ಸೇವೆ ಮಾಡಲು ನಿರಾಕರಿಸುತ್ತಿದ್ದರು.

ಮಾದಿಗರು ಪಾರಂಪರಿಕವಾಗಿ ಮಾಡುತ್ತಿದ್ದ ವೃತ್ತಿಯನ್ನು ಮಾಡಲೇಬೇಕಾಗಿತ್ತು. ಚಪ್ಪಲಿ ಹೊಲಿಯುವ ಮತ್ತು ಚರ್ಮದ ವಸ್ತು ತಯಾರಿಸುವುದನ್ನು ಮುಂದುವರಿಸಬೇಕಾಗಿತ್ತು. ಜೊತೆಗೆ ಗ್ರಾಮದ ಇತರೆ ಸೇವೆಗಳಾದ ಸತ್ತ ದನಕರುಗಳನ್ನು ಎತ್ತಿಹಾಕುವುದು, ಸುಡಿಗೆ ಹಿಡಿಯುವುದು, ಊರು ಕಾಯುವುದು, ತಮಟೆ ಬಡಿಯುವುದು, ತಳಿರು ತೋರಣ ಕಟ್ಟುವುದು, ಸಾವಿನ ಸುದ್ದಿ ಒಯ್ಯುವುದು ಮುಂತಾದ ಸಾಂಪ್ರದಾಯಿಕ ವೃತ್ತಿಗಳನ್ನು ಮಾದಿಗರು ಮಾಡಬೇಕಾಗುತ್ತಿತ್ತು.

ಮಾದಿಗರು ಸವರ್ಣೀಯರು ವಾಸ ಮಾಡುವ ಬೀದಿಗಳಲ್ಲಿ ಮುಕ್ತವಾಗಿ ಓಡಾಡುವ ಆಗಿರಲಿಲ್ಲ. ಸವರ್ಣೀಯರು ಎದುರಿಗೆ ಬಂದರೆ ಬದಿಗೆ ಸರಿದು ನಿಲ್ಲಬೇಕಿತ್ತು. ಮಾದಿಗರು ಮದುವೆ ಮುಂತಾದ ಕಾರ್ಯಕ್ರಮಗಳನ್ನು ಮಾಡಿದರೆ ಅವರು ಬೀದಿಗಳಲ್ಲಿ ಮೆರವಣಿಗೆ ಹೋಗುವ ಆಗಿಲ್ಲ. ಹೀಗೆ ಅನೇಕ ಬಗೆಯ ಕಟ್ಟುನಿಟ್ಟಿನ ಕ್ರಮವನ್ನು ಅಸ್ಪೃಶ್ಯರಾದ ಮಾದಿಗರು ಅನುಸರಿಸಬೇಕಿತ್ತು. ಒಂದು ವೇಳೆ ಅದನ್ನು ನಿರಾಕರಿಸಿದ್ದೇ ಆದರೆ ಇಡೀ ಊರಿಗೆ ಊರೇ ಒಂದಾಗಿ ಆತನಿಗೆ ಕಠಿಣ ಶಿಕ್ಷೆಯನ್ನು ವಿಧಿಸುತ್ತಿತ್ತು.

### ಸ್ವಾತಂತ್ರ್ಯ ಪೂರ್ವಕಾಲದ ಅಸ್ಪೃಶ್ಯತಾ ನಿವಾರಣೆ

ಆಧುನಿಕ ಕಾಲದಲ್ಲಿ ೧೯ನೇ ಶತಮಾನದಿಂದಲೂ ಅನೇಕ ಸುಧಾರಕರು ಅಸ್ಪೃಶ್ಯತೆ ನಿವಾರಣೆಗೊಳಿಸಲು ಪ್ರಯತ್ನಿಸಿದ್ದಾರೆ. ಅಂಥವರಲ್ಲಿ ಪ್ರಮುಖರೆಂದರೆ, ಜ್ಯೋತಿರಾವ್ ಭಾಪುಲೆ, ಷಾಹುಮಹರಾಜ್,

ಪೆರಿಯಾರ್, ನಾರಾಯಣ ಗುರು, ಡಾ.ಬಿ.ಆರ್. ಅಂಬೇಡ್ಕರ್, ಗಾಂಧಿ ಮುಂತಾದವರು. ಅದರಲ್ಲೂ ರಾಷ್ಟ್ರಮಟ್ಟದಲ್ಲಿ ಅಸ್ಪೃಶ್ಯತೆ ನಿವಾರಣೆಗಾಗಿ ಹೋರಾಟ ಮತ್ತು ಕ್ರಮಗಳನ್ನು ಕೈಗೊಳ್ಳಲು ಪ್ರಯತ್ನಿಸಿದವರೆಂದರೆ ಅಂಬೇಡ್ಕರ್ ಮತ್ತು ಗಾಂಧಿಯವರು.

ಅಸ್ಪೃಶ್ಯತೆ ಕುರಿತಂತೆ ಅಧ್ಯಯನ ಕೈಗೊಂಡವರಲ್ಲಿ ಮೊದಲಿಗರು ಡಾ.ಬಿ.ಆರ್. ಅಂಬೇಡ್ಕರ್ ಅಲ್ಲಿಯ ತನಕ ಯಾವ ಭಾರತೀಯ ವಿದ್ವಾಂಸನೂ ಈ ಕುರಿತು ಅಧ್ಯಯನ ಮಾಡಲು ತೊಡಗಿಲ್ಲ. ಕೆಲವು ವಿದೇಶಿ ವಿದ್ವಾಂಸರು(ಸ್ಪಾನಿರೈಸ್) ಮಾತ್ರ ಈ ಬಗ್ಗೆ ಅಧ್ಯಯನ ಮಾಡಿದ್ದಾರೆ. ಆದರೆ ಇವರೆಲ್ಲರಿಗಿಂತ ಭಿನ್ನವಾಗಿ ಅಂಬೇಡ್ಕರ್ ಅಸ್ಪೃಶ್ಯತೆಯ ಹುಟ್ಟು ಮತ್ತು ಬೆಳವಣಿಗೆಯನ್ನು ಚಾರಿತ್ರಿಕ ದಾಖಲೆಗಳ ಸಹಿತ ವಿಶ್ಲೇಷಿಸುತ್ತಾರೆ. ಅಸ್ಪೃಶ್ಯತೆಯ ಬಗ್ಗೆ ಸಮಗ್ರವಾಗಿ ತಿಳಿಯಬೇಕಾದರೆ ಅವರ ಸಂಶೋಧನ ಕೃತಿ 'ದಿ ಅನ್‌ಟಚ್‌ಬಿಲಿಟಿ'ಯನ್ನು ಅವಲೋಕಿಸಬೇಕು. ಕೇವಲ ಈ ಬಗ್ಗೆ ಚಿಂತನೆಯಷ್ಟೆ ನಡೆಸದೆ ಅಸ್ಪೃಶ್ಯತೆಯ ವಿರುದ್ಧ ದೊಡ್ಡ ಆಂದೋಲನವನ್ನು ರಾಷ್ಟ್ರಮಟ್ಟದಲ್ಲಿ ನಡೆಸಿರುವುದು ಚರಿತ್ರೆಯಲ್ಲಿ ದಾಖಲಾಗಿ ಚಾರಿತ್ರಿಕ ಮಹತ್ವ ಪಡೆದಿದೆ.

**ಮೈಸೂರು ಮತ್ತು ಸಂಡೂರು ಸಂಸ್ಥಾನದಲ್ಲಿ ಅಸ್ಪೃಶ್ಯತೆ ನಿವಾರಣೆ**

ಈ ಮೊದಲು ಮೈಸೂರು ಸಂಸ್ಥಾನದಲ್ಲಿ ಅಸ್ಪೃಶ್ಯರ ಸಮಸ್ಯೆಗಳ ಬಗ್ಗೆ ಪ್ರಜಾಪ್ರತಿನಿಧಿ ಸಭೆಯಲ್ಲಿ ಚರ್ಚೆ ನಡೆಸಲಾಗಿದೆ. ಮೈಸೂರಿನ ಬ್ರಾಹ್ಮಣ ಕಾಂಗ್ರೆಸಿಗರು ಮತ್ತು ಬ್ರಾಹ್ಮಣೇತರ ಶ್ರೀಮಂತರು 'ಹರಿಜನ ಕಲ್ಯಾಣ'ದ ಬಗ್ಗೆ ಮಾತನಾಡತೊಡಗಿದರು. ಆದರೆ ಈ ಮಾತುಗಳು ಕೇವಲ ಪ್ರತಿನಿಧಿ ಸಭೆಗಳಿಗೆ ಮಾತ್ರ ಸೀಮಿತಗೊಂಡಿತ್ತು. ಹರಿಜನರಿಗೆ ದೇವಸ್ಥಾನದ ಪ್ರವೇಶ ನೀಡಬೇಕು ಎಂಬ ಅವಾಸ್ತವಿಕವಾದ ಬೇಡಿಕೆಯನ್ನು ಪರಸ್ಪರ ವಿರೋಧಿಗಳಾದ ಬ್ರಾಹ್ಮಣ-ಬ್ರಾಹ್ಮಣೇತರ ವರ್ಗಗಳು ೧೯೨೭ರಲ್ಲಿ ಮಂಡಿಸಿದವು. ಇವರಿಗೆ ಅಸ್ಪೃಶ್ಯರಿಗೆ ಆ ಹಕ್ಕು ಕೊಡಿಸುವುದಕ್ಕಿಂತಲೂ ಮುಸ್ಲಿಂ ದೀವಾನರನ್ನು ಪೇಚಿಗೆ ಸಿಲುಕಿಸುವುದು ಮುಖ್ಯ ಗುರಿಯಾಗಿದ್ದಂತೆ ಕಾಣುತ್ತದೆ.[೧೫] ಆದರೆ ಸಂಪ್ರದಾಯಸ್ಥರೇ ತುಂಬಿಕೊಂಡಿದ್ದ ನ್ಯಾಯ ವಿಧಾಯಕ ಸಭೆ ಈ ಬೇಡಿಕೆಯನ್ನು ತಿರಸ್ಕರಿಸಿತು.[೧೬] ಈ ರೀತಿಯಾಗಿ ಕೇವಲ ತೋರಿಕೆಗಾಗಿಯೇ ಅಸ್ಪೃಶ್ಯತೆಯ ನಿವಾರಣೆಯ ಬಗ್ಗೆ ಮಾತನಾಡಿದರೆ, ಅದನ್ನು ತೀವ್ರವಾಗಿ ಸಂಪ್ರದಾಯಸ್ಥರು ವಿರೋಧಿಸಿದ್ದಾರೆ. ಹೀಗಾಗಿ ಅಸ್ಪೃಶ್ಯತೆ ನಿವಾರಣೆಗೆ ಯಾವುದೇ ಕ್ರಮ ಕೈಗೊಳ್ಳಲಾಗಲಿಲ್ಲ. ೧೯೩೧ರ ಜನಗಣತಿ ವರದಿಯಲ್ಲಿ ಬ್ರಾಹ್ಮಣರು ಮತ್ತಿತರ ಉನ್ನತ ಜಾತಿಯವರು ಹೆಚ್ಚಾಗಿದ್ದ ಕೇರಿಗಳಲ್ಲಿ ಅಸ್ಪೃಶ್ಯರು ಓಡಾಡುವಂತಿರಲಿಲ್ಲ. ಬೇರೆ ಕೇರಿಗಳಲ್ಲೂ ಮೇಲ್ವರ್ಗದವರು ಎದುರು ಬಂದಾಗ ಅಸ್ಪೃಶ್ಯರು ಬದಿಗೆ ಸರಿದು ಜಾಗ ಮಾಡಿಕೊಡಬೇಕಿತ್ತು[೧೭] ಎಂದು ತಿಳಿಸಿದೆ. ಈ ಹಿನ್ನೆಲೆಯಲ್ಲಿ ಅಸ್ಪೃಶ್ಯರಲ್ಲಿ ಒಂದಾದ ಮಾದಿಗರ ಸ್ಥಿತಿ ಹೇಗಿತ್ತೆಂಬುದನ್ನು ಊಹಿಸಿಕೊಂಡರೇ ಎಂತಹ ಪರಿಸ್ಥಿತಿಯಲ್ಲಿ ಅವರು ಬದುಕುತ್ತಿದ್ದರೆಂದು ತಿಳಿಯುತ್ತದೆ. ಗಾಂಧಿಯವರು

ಈ ಭಾಗಗಳಲ್ಲಿ ಸಂಚರಿಸಿ ಅಸ್ಪೃಶ್ಯತಾ ನಿವಾರಣೆಗೆ ಕಾರ್ಯಕ್ರಮಗಳನ್ನು ಕೈಗೊಂಡರು. ಇದಕ್ಕೆ ಮೊದಲೇ ಈ ಭಾಗದಲ್ಲಿ ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಕೆಲವೊಂದು ಪ್ರಯತ್ನಗಳನ್ನು ಸ್ಥಳೀಯರು ಮಾಡಿರುವುದು ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯ ಕಾಂಗ್ರೆಸ್ ಮುಖಂಡರಾಗಿದ್ದ ಟಿ.ಬಿ.ಕೇಶವರಾವ್ ಮತ್ತು ಅವರ ಹೆಂಡತಿ ೧೯೨೯ರಲ್ಲಿ ಇವರಿಬ್ಬರೂ ಹರಿಜನ ಬಾಲಕನನ್ನು ದತ್ತು ತೆಗೆದುಕೊಂಡು ಸಾಕುತ್ತಿದ್ದರು ಆ ಕಾಲಕ್ಕೆ ಇದೊಂದು ಕ್ರಾಂತಿಕಾರಕ ಹೆಜ್ಜೆಯಾಗಿತ್ತು. ಈ ಕ್ರಮದಿಂದಾಗಿ ಕೇಶವರಾವ್ ದಂಪತಿಗಳು ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾಗಬೇಕಾಯಿತು.[೧೯] ಈ ರೀತಿ ಅಸ್ಪೃಶ್ಯತೆಯ ನಿವಾರಣೆಗೆ ಪ್ರಯತ್ನಿಸಿದವರಿಗೆ ಸಾಮಾಜಿಕ ಬಹಿಷ್ಕಾರ ಹಾಕುವುದರ ಮೂಲಕ ಬೇರೆ ಯಾರು ಆ ಕ್ರಮ ಕೈಗೊಳ್ಳದಂತೆ ಮಾಡುವ ಹುನ್ನಾರ ಮೇಲು ಜಾತಿಗಳಿಂದ ನಡೆಯುತ್ತಿತೆಂದು ಗೊತ್ತಾಗುತ್ತದೆ. ಗಾಂಧಿಯವರು ಪ್ರವಾಸ ಕೈಗೊಂಡಿದ್ದಾಗ ಸಂಡೂರಿನ ಮಹಾರಾಜ ರಾಗಿದ್ದ ಯಶವಂತರಾವ್ ಘೋರ್ಪಡೆಯವರ ಹರಿಜನ ಸೇವೆ, ಹರಿಜನರಿಗೆ ದೇವಾಲಯಗಳಲ್ಲಿ ಪ್ರವೇಶ ನೀಡಿರುವುದು ಮುಂತಾದ ಪ್ರಗತಿಪರ ನೀತಿಗಳನ್ನು(ಗಾಂಧಿ) ಶ್ಲಾಘಿಸಿದರು.[೧೯] ಈ ಅಂಶವು ಸಹ ಅಸ್ಪೃಶ್ಯತೆಯನ್ನು ಹೊಗಲಾಡಿಸುವ ಪ್ರಯತ್ನ ಬಳ್ಳಾರಿ ಜಿಲ್ಲೆಯ ಸಂಡೂರಿನ ರಾಜರು ಕೈಗೊಂಡಿದ್ದರೆಂದು ತಿಳಿಯುತ್ತದೆ. ಈ ಅಂಶಗಳನ್ನು ನೋಡಿದಾಗ ಬಳ್ಳಾರಿ ಜಿಲ್ಲೆಯಲ್ಲಿ ಗಾಂಧಿಯವರ ಪ್ರವೇಶಕ್ಕೆ ಮೊದಲೇ ಈ ಭಾಗದಲ್ಲಿ ಅಸ್ಪೃಶ್ಯತಾ ನಿವಾರಣೆಗೆ ಪ್ರಯತ್ನಿಸಿರುವುದು ತಿಳಿದುಬರುತ್ತದೆ.

**ಗಾಂಧಿ ಮತ್ತು ಅಸ್ಪೃಶ್ಯತಾ ನಿವಾರಣೆ**

ಕರ್ನಾಟಕದ ಸಂದರ್ಭದಲ್ಲಿ ಗಾಂಧಿಯವರು ಅಸ್ಪೃಶ್ಯತೆ ನಿವಾರಣಾ ಕ್ರಮಗಳಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿದ್ದಾರೆ. ಇವರು ಅಸ್ಪೃಶ್ಯತೆ ನಿವಾರಣೆಗಾಗಿ ರಾಜ್ಯದಲ್ಲಿ ಸಂಚರಿಸಿದ್ದಾರೆ. ಅ ಸಂದರ್ಭದಲ್ಲಿಯೇ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿಯೂ ಸಂಚರಿಸಿರುವುದು ಉಂಟು. ಈ ಹಿನ್ನೆಲೆಯಲ್ಲಿ ಗಾಂಧಿಯವರ ಅಸ್ಪೃಶ್ಯತೆ ನಿವಾರಣೆಗೆ ಪ್ರಯತ್ನಿಸಿರುವುದನ್ನು ತಿಳಿಯಲು ಇಲ್ಲಿ ಪ್ರಯತ್ನಿಸಲಾಗಿದೆ.

ಗಾಂಧಿಯವರು 'ಪೂನಾ ಒಪ್ಪಂದ'ದ ನಂತರ ಕೈಗೊಂಡ 'ಹರಿಜನ ಪ್ರವಾಸ' ಕಾರ್ಯಕ್ರಮದ ಸಂದರ್ಭದಲ್ಲಿ ಚಿತ್ರದುರ್ಗ ಜಿಲ್ಲೆಗೆ ಪ್ರಚಾರಕ್ಕೆ ಬಂದು ಅಸ್ಪೃಶ್ಯತೆ ನಿವಾರಣೆಗೆ ಕರೆಕೊಟ್ಟಿದ್ದಾರೆ. ೧೯೩೪ರ ಮಾರ್ಚ್ ತಿಂಗಳ ಮೊದಲ ವಾರದಲ್ಲಿ ಹಾವೇರಿಯಿಂದ ಹೊರಟು ದಾವಣಗೆರೆಗೆ (ಆಗ ಚಿತ್ರದುರ್ಗ ಜಿಲ್ಲೆಯಲ್ಲಿತ್ತು) ಬಂದರು. ಇಲ್ಲಿಯೂ 'ಹರಿಜನ ನಿಧಿ'ಗಾಗಿ ಸಂಗ್ರಹಿಸಿದ ಹಣವನ್ನು ಗಾಂಧೀಜಿಯವರಿಗೆ ನೀಡಿದರು. ಅದೇ ವೇಳೆಯಲ್ಲಿ ಅವರು ಹರಿಜನ ಹಾಸ್ಟಲ್ ಒಂದಕ್ಕೆ ಶಂಕುಸ್ಥಾಪನೆ ನೇರವೇರಿಸಿದರು (ಚಿತ್ರದುರ್ಗ ಜಿಲ್ಲೆ ಸ್ವಾತಂತ್ರರಾಜ್) ಮತ್ತು ಮಾದಿಗರು ವಾಸಿಸುತ್ತಿದ್ದ ಕೇರಿ(ಇಂದು ಗಾಂಧಿನಗರವಾಗಿದೆ)ಗೆ ಭೇಟಿ ಸಹ ಕೊಟ್ಟಿದ್ದರು. ಈ ರೀತಿ ಗಾಂಧಿಯವರ ಹರಿಜನ ಪ್ರವಾಸ ಕಾರ್ಯದಿಂದ ಪ್ರೇರಿತರಾದ ಅನೇಕ ಕಾಂಗ್ರೆಸ್ ಮುಖಂಡರು ಚಿತ್ರದುರ್ಗ ಜಿಲ್ಲೆಯ ಕೆಲವು ಕಡೆ ಅಸ್ಪೃಶ್ಯತೆ ನಿವಾರಣೆಗೆ ಪ್ರಯತ್ನಿಸಿದ್ದಾರೆ. ಅನೇಕ ಗ್ರಾಮಗಳಲ್ಲಿ ಮಾದಿಗರನ್ನು ದೇವಾಲಯದ

ಒಳಗೆ ಕರೆದುಕೊಂಡು ಹೋಗಿದ್ದಾರೆ. ಅಂತಹ ಉದಾಹರಣೆಗಳು ಹೊಳಲ್ಕೆರೆ ತಾಲ್ಲೂಕಿನ ದೊಗ್ಗನಾಳ್, ಹಿರಿಯೂರು ತಾಲ್ಲೂಕಿನ ಕೆ.ಆರ್.ಹಳ್ಳಿ ಗ್ರಾಮಗಳಲ್ಲಿ ನಡೆದಿರುವುದು ಅಧ್ಯಯನ ಸಂದರ್ಭದಲ್ಲಿ ತಿಳಿದುಬಂತು. ಆದರೆ ಈ ಪ್ರಯತ್ನ ಕೇವಲ ಆ ಘಟನೆಗಳಿಗಷ್ಟೇ ಸೀಮಿತವಾಗಿದೆ. ಚಿತ್ರದುರ್ಗ ತಾಲ್ಲೂಕಿನ ತುರುವನೂರು ಗ್ರಾಮದಲ್ಲಿ ಚಳವಳಿಯಲ್ಲಿ ಧುಮುಕಿದ್ದ ಕೆಲವರು ಸವರ್ಣೀಯರ ಬಾವಿಗಳಲ್ಲಿ ನೀರು ತರಲು ಹೋಗಿದ್ದ ಮಾದಿಗರು ನೀರು ಸೇದಿ ಹಾಕುವಂತೆ ಕೇಳಿಕೊಂಡಾಗ ನಿಮ್ಮ ಕೊಡಗಳನ್ನು ನೀವೆ ತುಂಬಿಕೊಳ್ಳಿ ನಾವು ನಿಮಗೆ ನೀರು ಕೊಡುವುದಿಲ್ಲ[೨೦] ಎನ್ನುತ್ತಿದ್ದರು. ಆ ಮೂಲಕ ಅವರಲ್ಲಿ ನೀರು ಸೇದುವಂತೆ ಪ್ರಚೋದನೆ ಮಾಡುತ್ತಿದ್ದರು. ಆದರೆ ಭಯದ ಕಾರಣವಾಗಿ ಆ ಪ್ರಯತ್ನಕ್ಕೆ ಕೈಹಾಕುತ್ತಿರಲಿಲ್ಲವೆನ್ನಬಹುದು. ಈ ಬಗೆಯಲ್ಲಿ ಅಸ್ಪೃಶ್ಯತೆಯನ್ನು ಹೊಗಲಾಡಿಸುವ ಪ್ರಯತ್ನ ಚಿತ್ರದುರ್ಗ ಜಿಲ್ಲೆಯಲ್ಲೂ ನಡೆದಿರುವುದು ಕಂಡುಬರುತ್ತದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡಿದ್ದ ಗಾಂಧಿಯವರು ಅಲ್ಲಿಂದ ಬಳ್ಳಾರಿ ಜಿಲ್ಲೆಯಲ್ಲಿ ಪ್ರವಾಸ ಕೈಗೊಳ್ಳಲು ಬಳ್ಳಾರಿಗೆ ಬಂದರು. ಅಲ್ಲಿನ ಸಭೆಯೊಂದರಲ್ಲಿ ಮಾತನಾಡುತ್ತಾ ಹರಿಜನರ ದೇವಾಲಯ ಪ್ರವೇಶವನ್ನು ಸನಾತನಿಗಳು ವಿರೋಧಿಸುವ ಅಗತ್ಯ ಹರಿಜನರಿಗೆ ದೇವಾಲಯಗಳಲ್ಲಿ ಪ್ರವೇಶ ನೀಡಬೇಕೆಂದು ನಾನು ವಿನಂತಿಸಿಕೊಳ್ಳುತ್ತಿದ್ದೇನೆ. ಅದನ್ನು ಬಲಾತ್ಕಾರದಿಂದ ಜನರ ಮೇಲೆ ಹೇರುವುದಿಲ್ಲ. ಪರಸ್ಪರ ಅರಿತುಕೊಂಡು ಹರಿಜನರ ಸೇವೆಗೆ ಬಳ್ಳಾರಿಯ ಸನಾತನಿಗಳು ಮುಂದಾಗಬೇಕು. ತಾನು ಸಂಗ್ರಹಿಸಿರುವ 'ಹರಿಜನ ನಿಧಿ'ಯಿಂದ ದೇವಾಲಯಗಳನ್ನು ಕಟ್ಟುವುದಿಲ್ಲ ಪ್ರತಿಯಾಗಿ ಹರಿಜನ ಮಕ್ಕಳ ಶಿಕ್ಷಣಕ್ಕಾಗಿ ಬಳಸಲಾಗುವುದು[೨೧] ಎಂದು ನುಡಿದಿರುವುದು ಅಸ್ಪೃಶ್ಯರ ದೇವಾಲಯ ಪ್ರವೇಶವನ್ನು ಸನಾತನಿಗಳು ವಿರೋಧಿಸಿರುವುದನ್ನು ಗ್ರಹಿಸಬಹುದಾಗಿದೆ. ಪ್ರತಿಯಾಗಿ ಅದಕ್ಕೆ ಇದರಲ್ಲಿ ಯಾವುದೇ ಬಲವಂತವಿಲ್ಲ ಮನಸ್ಸು ಪರಿವರ್ತನೆ ಮಾಡಿಕೊಂಡು ಪ್ರವೇಶ ನೀಡಿರಿ ಎಂದು ಭರವಸೆ ನೀಡಿರುವುದಾಗಿದೆ. ಈ ರೀತಿ ಅಸ್ಪೃಶ್ಯತೆ ನಿವಾರಣೆಗೆ ಕರೆಕೊಡುತ್ತಾ 'ಹರಿಜನನಿಧಿ' ಸಂಗ್ರಹಣೆಗಾಗಿ ಬಳ್ಳಾರಿ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡು ಹರಪನಹಳ್ಳಿ(ಹಿಂದೆ ಬಳ್ಳಾರಿ ಜಿಲ್ಲೆಯಲ್ಲಿತ್ತು) ಕೊಟ್ಟೂರು, ಕೂಡ್ಲಿಗಿ, ಸಂಡೂರು, ಹೊಸಪೇಟೆ ಮುಂತಾದ ಕಡೆಗಳಲ್ಲಿ ಸಂಚರಿಸಿದ್ದಾರೆ.

ಗಾಂಧಿಯವರ ಈ ಪ್ರಯತ್ನದಿಂದ ಪ್ರೇರಿತಗೊಂಡ ಕಾಂಗ್ರೆಸ್ ಮುಖಂಡರು ಮತ್ತು ಇತರರು ಜಿಲ್ಲೆಯಲ್ಲಿ ಅಸ್ಪೃಶ್ಯತೆ ನಿವಾರಣೆಗೆ ಪ್ರಯತ್ನಿಸಿದ್ದಾರೆ. ಕೊಟ್ಟೂರಿನಲ್ಲಿ ಗೊರ್ಲಿ ಶರಣಪ್ಪ, ಕೆ.ಗೌಡಪ್ಪ, ಮತ್ತು ಸಿದ್ದಪ್ಪ ಅವರು ಹರಿಜನ ಶಿಕ್ಷಣಕ್ಕಾಗಿ ಹರಿಜನ ಕೇರಿಯ ಪಕ್ಕದಲ್ಲೆ ಸರ್ಕಾರವು ನೀಡಿದ್ದ ನಿವೇಶನದಲ್ಲಿ ಶಾಲೆಯನ್ನು ಇವರು ಸ್ಥಾಪಿಸಿದರು.[೨೨] ಮತ್ತೊಂದು ಕಡೆ ಹಡಗಲಿ ತಾಲ್ಲೂಕಿನ ಮಾಗಳ ಗ್ರಾಮದಲ್ಲಿ ಬನ್ನಿಮಟ್ಟಿ ಲಂಕೆಪ್ಪನವರು ಗಾಂಧೀಜಿಯವರ ಅಸ್ಪೃಶ್ಯತೆ ನಿವಾರಣೆ ವಿಚಾರಗಳಿಂದ ಪ್ರೇರಣೆಗೊಂಡು ಹರಿಜನಕೇರಿಯಲ್ಲಿ ಅಂಗಡಿಯೊಂದನ್ನು ತೆರೆದರು.[೨೩] ಕೊಟ್ಟೂರಿನಲ್ಲಿ ದೀನಾ ಸೇವಾ' ಸಂಘದ ಕಾರ್ಯಕರ್ತರಲ್ಲೊಬ್ಬರಾದ ಸಿದ್ದಪ್ಪನವರು ತಮ್ಮ ವಿವಾಹವನ್ನು

ಹರಿಜನಕೇರಿಯಲ್ಲಿ ನಡೆಸಿ ಕ್ರಾಂತಿ ಮಾಡಿದರು.''[೨೪] ಮತ್ತೊಂದು ಕಡೆ ಹರಿಜನ ಸೇವಾ ಸಂಘದ ಅಧ್ಯಕ್ಷರಾಗಿದ್ದ ಬಳ್ಳಾರಿ ರಾಘುವರಾಯರು ಹರಿಜನ ಬಾಲಕನೊಬ್ಬನನ್ನು ದತ್ತು ತೆಗೆದುಕೊಂಡು ಪೋಷಿಸಿದರು ಎನ್ನಲಾಗಿದೆ.[೨೫] ಇದಲ್ಲದೇ ಈ ಜಿಲ್ಲೆಯಲ್ಲಿ ಗಳಗನಾಥ, ಹಾವನೂರು, ಕೊಂಬಳಿ, ಹೆಬ್ಬಾಳ, ಬನ್ನಿಮಟ್ಟಿ, ಹೊಳಲು ಮುಂತಾದ ಗ್ರಾಮಗಳಲ್ಲಿ ಕಾಂಗ್ರೆಸ್ ಕಾರ್ಯಕರ್ತರು ಅಂಗಡಿ-ಹೋಟೆಲುಗಳಲ್ಲಿ ಹರಿಜನರಿಗೆ ಪ್ರವೇಶ ನೀಡುವಂತೆ ತಿಳಿ ಹೇಳಿರುವ ಕೆಲಸ ಮಾಡಿದರು.[೨೬] ಹೀಗೆ ಅನೇಕ ಕಡೆ ಗಾಂಧಿ ವಿಚಾರಗಳಿಂದ ಪ್ರಭಾವಿತರಾಗಿ ಅಸ್ಪಶ್ಯತೆ ನಿವಾರಣೆ ಮಾಡಲು ಈ ಜಿಲ್ಲೆಯ ಕಾಂಗ್ರೆಸ್ ಮುಖಂಡರು ಮತ್ತು ಇತರರು ಪ್ರಯತ್ನಿಸಿದ್ದಾರೆ. ಈ ವೇಳೆಯಲ್ಲಿ ಮಾದಿಗರು ಶುಚಿಯಾಗಿರುವಂತೆ ಕರೆ ನೀಡಿದರು. ಆದರೆ ಈ ಪ್ರಯತ್ನ ಆ ಘಟನೆಗಳಿಗೆ ಸೀಮಿತವಾಗಿತ್ತೆ ವಿನಃ ಮುಂದುವರಿಯಲಿಲ್ಲ. ಈ ರೀತಿಯಾಗಿ ಅಸ್ಪೃಶ್ಯತೆ ನಿವಾರಣೆಗೆ ಮಹತ್ವ ದೊರೆತು ೧೯೩೯ರಲ್ಲಿ ಮದ್ರಾಸ್ ಸರ್ಕಾರ ದೇವಸ್ಥಾನದ ಪ್ರವೇಶ ಕಾನೂನು ರಚಿಸಿತು. ಮೈಸೂರಿನಲ್ಲಿ ೧೯೪೭ರಲ್ಲಿ ದೇವಾಲಯ ಪ್ರವೇಶದ ಕಾನೂನು ಅಸ್ತಿತ್ವಕ್ಕೆ ಬಂದಿತು.[೨೭]

ಗಾಂಧೀಜಿಯವರು ಅಸ್ಪೃಶ್ಯತೆ ನಿವಾರಣೆಗಾಗಿ ರಾಷ್ಟ್ರದಾದ್ಯಂತ ಕೈಗೊಂಡ ಅವರ ಅಸ್ಪೃಶ್ಯತಾ ನಿವಾರಣೆಯನ್ನು ಕುರಿತು ಅಸ್ಪೃಶ್ಯತಾ ವಿರೋಧಿ ದಳದ ಕಾರ್ಯದರ್ಶಿಯಾಗಿದ್ದ ಬಾಬು ಜಗಜೀವನರಾಂ ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ''ಗಾಂಧೀಜಿಯವರ ಅಸ್ಪೃಶ್ಯತಾ ವಿರೋಧಿ ಸತ್ಯಾಗ್ರಹ ಕೇವಲ ನಿರಾಳವಾದ ಭಾವ ತುಮುಲವನ್ನು ಸೃಷ್ಟಿಸಿತೆ ವಿನಃ ಒಂದು ಆಳವಾದ ಮಾನಸಿಕ ಅಥವಾ ಸಾಮಾಜಿಕ ಕ್ರಾಂತಿಗೆ ದಾರಿಮಾಡಿಕೊಟ್ಟಿರಲಿಲ್ಲ[೨೮] ಎಂದಿದ್ದಾರೆ. ಈ ಹಿನ್ನೆಲೆಯಲ್ಲಿ ಗಾಂಧಿಯವರ ಅಸ್ಪೃಶ್ಯತೆ ನಿವಾರಣ ಕ್ರಮವು ಪರಿಣಾಮಕಾರಿ ಯಾಗಿರಲಿಲ್ಲ ಎನ್ನಬಹುದು.

**ಸ್ವಾತಂತ್ರೋತ್ತರ ಕಾಲದಲ್ಲಿ ಅಸ್ಪೃಶ್ಯತೆ ಮತ್ತು ನಿವಾರಣ ಕ್ರಮ**

ಸ್ವಾತಂತ್ರ್ಯಪೂರ್ವದಲ್ಲಿ ಇದ್ದಂತಹ ಅಸ್ಪೃಶ್ಯತೆ ಆನಂತರದಲ್ಲಿ ಮುಂದುವರಿಯಿತಾದರೂ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಅಂಗೀಕರಿಸಿದ ಸಂವಿಧಾನವು ಅಸ್ಪೃಶ್ಯತೆಯನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಕ್ರಮಕೈಗೊಳ್ಳಲು ನಿರ್ದೇಶನ ಮಾಡಿರುವುದರಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನೇಕ ಕ್ರಮಗಳನ್ನು ಕೈಗೊಂಡಿವೆ. ಭಾರತದ ಸಂವಿಧಾನದ ೧೭ನೇ ವಿಧಿಯು ಅಸ್ಪೃಶ್ಯತೆಯನ್ನು ನಿರ್ಮೂಲನಗೊಳಿಸಲಾಗಿದೆ ಮತ್ತು ಯಾವುದೇ ರೂಪದಲ್ಲಿ ಅದರ ಆಚರಣೆಯನ್ನು ನಿಷೇಧಿಸಿದೆ. ಅಸ್ಪೃಶ್ಯತೆಯಿಂದ ಉಂಟಾಗುವ ಯಾವುದೇ ಅಸಮರ್ಥತೆಯನ್ನು ಆಚರಣೆಗೆ ತರುವುದು ಕಾನೂನಿಗನುಸಾರವಾಗಿ ದಂಡನೀಯವಾದ ಅಪರಾಧವಾಗತಕ್ಕದ್ದು[೨೯] ಎಂಬ ನಿರ್ದೇಶನದ ಹಿನ್ನೆಲೆಯಲ್ಲಿ ಅಸ್ಪೃಶ್ಯತೆಯನ್ನು ಸಂಪೂರ್ಣವಾಗಿ ಹೋಗಲಾಡಿಸುವ ದೃಷ್ಟಿಯಿಂದ ಕೇಂದ್ರ ಸರ್ಕಾರವು ೧೯೫೫ರಲ್ಲಿ ಅಸ್ಪೃಶ್ಯತಾ ಅಪರಾಧ ಕಾನೂನನ್ನು ಜಾರಿಗೆ ತಂದಿತು.[೩೦] ಈ ಕಾನೂನಿನ ಪ್ರಕಾರ ಸಾರ್ವಜನಿಕ

ಸ್ಥಳಗಳಾದ ಬಾವಿ, ಕೆರೆ, ಹೋಟೆಲ್, ಶಾಲೆ, ದೇವಸ್ಥಾನ ಮುಂತಾದ ಕಡೆಗಳಲ್ಲಿ ಜಾತಿಯ ಹಿನ್ನೆಲೆಯಲ್ಲಿ ನಿರ್ಬಂಧ ಹಾಕಿ ಪ್ರವೇಶ ಪಡೆಯುವುದನ್ನು ಅಪರಾಧವೆಂದು ಪರಿಗಣಿಸಿ ಶಿಕ್ಷೆಯನ್ನು ವಿಧಿಸತಕ್ಕದೆಂದು ತಿಳಿಸುತ್ತದೆ. ಈ ರೀತಿ ಕಾನೂನು ರಚಿಸಿ ಅಸ್ಪೃಶ್ಯತೆಯನ್ನು ತಡೆಗಟ್ಟಲು ಸರ್ಕಾರ ಪ್ರಯತ್ನಿಸಿತು. ಆದರೆ ಈ ಪ್ರಯತ್ನ ವಿಫಲವಾಗಿರುವುದು ಕಂಡುಬರುತ್ತದೆ. ಅಸ್ಪೃಶ್ಯತಾ ಆಪರಾಧ ಕಾನೂನಿನ ಕೊರತೆಗಳು ಹಾಗೂ ವಿಫಲತೆಯ ಬಗ್ಗೆ ೧೯೬೯ರಲ್ಲಿ ಸರ್ಕಾರಕ್ಕೆ ನೀಡಿದ ವರದಿ ಇದನ್ನು ಖಚಿತಪಡಿಸುತ್ತದೆ. ಅಸ್ಪೃಶ್ಯತಾ ಅಪರಾಧಗಳು ಅಭಯ ಪಡೆದು ಮಾಡಲಾಗುತ್ತದೆ. ಹೆಚ್ಚಾಗಿ ಅಸ್ಪೃಶ್ಯತಾ ಆಚರಣೆಗೆ ಗುರಿಯಾದವರು ಸಾಮಾಜಿಕ ಪ್ರತೀಕಾರಕ್ಕೆ ಗುರಿಯಾಗಬೇಕೆಂಬ ಭಯದಿಂದಲೇ ದೂರು ಕೊಡಲು ಭಯಪಡುತ್ತಾರೆ. ಹಾಗೆ ದೂರು ಕೊಟ್ಟ ಹರಿಜನರು ಮತ್ತಷ್ಟು ಹಿಂಸೆಗೆ ಗುರಿಯಾಗುತ್ತಾರೆ. ಅವರನ್ನು ಹೊಡೆಯುತ್ತಾರೆ, ಮಕ್ಕಳಿಗೆ ಹೊಡೆಯುತ್ತಾರೆ, ಹೆಂಗಸರ ಶೀಲಭಂಗ ಮಾಡುತ್ತಾರೆ. ಜಮೀನ್ದಾರರು ಅವರಿಗೆ ಕೆಲಸ ಕೊಡುವುದಿಲ್ಲ. ಹಣವಂತರು ಸಾಲ ಕೊಡುವುದಿಲ್ಲ. ಬಹಿಷ್ಕಾರ ಹಾಕಿ ಸಾಮಾಜಿಕವಾಗಿ, ಆರ್ಥಿಕವಾಗಿ ಅವರನ್ನು ಅಧೀನದಲ್ಲಿಟ್ಟುಕೊಳ್ಳಲು ಹವಣಿಸುತ್ತಾರೆ ಎಂದು ಸಮಿತಿ ವರದಿ ಮಾಡಿದೆ.[೩೧] ಈ ಹಿನ್ನೆಲೆಯಲ್ಲಿ ನೋಡಿದಾಗ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯವಾಗಿ ಬಹಳಷ್ಟು ಹಿಂದುಳಿದಿದ್ದ ಮಾದಿಗ ಜನಾಂಗವು ಪ್ರತಿಭಟಿಸುವುದಾಗಲಿ, ದೂರು ಸಲ್ಲಿಸುವುದಾಗಲಿ ಮಾಡುತ್ತಿಲ್ಲ. ಅವರು ಮೇಲ್ಜಾತಿಯ ಜನರ ಕೋಪಕ್ಕೆ ತುತ್ತಾಗಿ ದೈಹಿಕ ಹಾಗೂ ಮಾನಸಿಕವಾಗಿ ನೋವು ಅನುಭವಿಸುವುದಕ್ಕಿಂತಲೂ ಅಸ್ಪೃಶ್ಯತೆಯಿಂದಾಗುವ ನೋವು, ಸಂಕಟವನ್ನು ನುಂಗಿಕೊಂಡು ಜೀವನ ಸಾಗಿಸಿದ್ದಾರೆ. ಸುಮಾರು ೭೦ರ ದಶಕದವರೆಗೂ ದೂರು ಕೊಡುವ ಮತ್ತು ಪ್ರತಿಭಟಿಸುವ ಧೈರ್ಯ ಮಾಡಿರಲಾರರೆಂದೇ ಹೇಳಬಹುದು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಮೈಸೂರು ರಾಜ್ಯದಲ್ಲಿ ರಾಜಕೀಯ ಪ್ರಾತಿನಿಧ್ಯ ಪಡೆದಿದ್ದ ಮಾದಿಗ ಜನಾಂಗದ ಪ್ರಪ್ರಥಮ ಮಂತ್ರಿ ಚನ್ನಿಗರಾಮಯ್ಯ ಮತ್ತು ಕೇಂದ್ರಮಂತ್ರಿಯಾಗಿದ್ದ ಬಾಬು ಜಗಜೀವನರಾಂ ಅವರಿಗೆ ದೇವಾಲಯ ಪ್ರವೇಶ, ದೇವರ ಪ್ರತಿಮೆಯ ಸ್ಪರ್ಶ ಮಾಡಿರುವುದನ್ನು ವಿರೋಧಿಸಿರುವ ಉದಾಹರಣೆ ಇದೆ. ಜನಪ್ರತಿನಿಧಿಗಳ ಪರಿಸ್ಥಿತಿಯೇ ಹೀಗಿದ್ದಾಗ ಇನ್ನು ಸಾಮಾನ್ಯ ಜನರ ಸ್ಥಿತಿ ಹೇಗಿತ್ತು ಎಂದು ಊಹಿಸಿಕೊಳ್ಳಲೂ ಸಾಧ್ಯವಾಗುವುದಿಲ್ಲ.

ಮಾದಿಗರು ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯವಾಗಿ ಚೇತರಿಸಿಕೊಂಡಂತೆ ಸಹಜವಾಗಿಯೇ ತಮ್ಮ ಮೇಲೆ ನಡೆಯುವ ಶೋಷಣೆಗಳ ಪ್ರತಿಭಟಿಸುವ ಮನೋಭಾವ ಬೆಳೆಸಿಕೊಳ್ಳಲಾರಂಭಿಸಿದರು. ಇದೇ ಸಂದರ್ಭದಲ್ಲಿ ಶೋಷಿತ ಜಾತಿಗಳ ವಿರುದ್ಧ ಮೇಲೆ ನಿರಂತರವಾಗಿ ಮುಂದುವರಿದು ಬಂದಿರುವ ಅಸ್ಪೃಶ್ಯತೆ, ದೌರ್ಜನ್ಯ, ಕೊಲೆ, ಅತ್ಯಾಚಾರ ಮುಂತಾದ ಶೋಷಣೆಗಳ ವಿರುದ್ಧ ಸಂಘಟನೆಯ ನೆಲೆಯಲ್ಲಿ ದಲಿತ ಸಂಘರ್ಷ ಸಮಿತಿ ಹೋರಾಟ ಆರಂಭಿಸಿದ್ದು, ಇವರಲ್ಲಿ ಸ್ವಾಭಿಮಾನ, ಧೈರ್ಯ ತಂದುಕೊಟ್ಟಿದೆ. ಈ ಸಂಘಟನೆಯು ರಾಜ್ಯದಾದ್ಯಂತ ಶಾಖೆಗಳನ್ನು

ಹೊಂದಿದ್ದು, ಈ ಎರಡು ಜಿಲ್ಲೆಗಳಲ್ಲಿಯೂ ಶಾಖೆಗಳನ್ನು ತೆರೆದು ಈ ಭಾಗದ ಕೆಳಜಾತಿಗಳಿಗೆ ಧೈರ್ಯ ಮೂಡಿಸಿದೆ. ಬಹುಶಃ ೭೦ ರ ದಶಕದ ನಂತರವೆ ಈ ಜನರು ತಮಗಾದ ಅನ್ಯಾಯಗಳಿಗೆ ದೂರು ಸಲ್ಲಿಸಲು ಮುಂದಾದದ್ದು. ಈ ರೀತಿ ಸಂಘಟನೆ, ಶಿಕ್ಷಣ, ಆರ್ಥಿಕ ಮುಂದುವರಿಕೆಯಿಂದಾಗಿ ಅನೇಕರು ಸಾಮಾಜಿಕ ಸ್ವಾತಂತ್ರ್ಯವನ್ನು ಪಡೆಯಲು ಮುಂದಾದರು. ಹೀಗೆ ತಮ್ಮ ಮೂಲಭೂತ ಹಕ್ಕುಗಳನ್ನು ಕೇಳಲು ಮುಂದಾದಾಗ ಅನೇಕರ ಕೋಪಕ್ಕೆ ತುತ್ತಾದ ಪ್ರಸಂಗಗಳು ನೂರಾರು. ಈ ಸಂಬಂಧದ ಉದಾಹರಣೆಯೊಂದು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನ ವಿಶ್ವನಾಥ ಹಳ್ಳಿಯಲ್ಲಿ ೧೯೮೫ರಲ್ಲಿ ದಾಖಲಾಗಿದೆ. ಆ ಗ್ರಾಮದ ಗೊಲ್ಲರಹಟ್ಟಿಯಲ್ಲಿ ನ್ಯಾಯಬೆಲೆ ಅಂಗಡಿ ಇದ್ದು ಹಟ್ಟಿಯೊಳಗೆ ಹರಿಜನರು ಹೋಗುವಂತಿಲ್ಲ. ಹಟ್ಟಿಯ ಹೊರಗಿನಿಂದಲೆ ಅವರು ಕೂಗು ಹಾಕಬೇಕು. ಅಂಗಡಿಯವನು ಇವರಾರೆಂದು ವಿಚಾರಿಸಿ ಅವನಿಂದ ಕಾರ್ಡ್ ಹಣ ಪಡೆದುಕೊಂಡು ಹೋಗಿ ಎಷ್ಟೊ ಹೊತ್ತಿನತನಕ ಹೊರಗೆ ಕಾದು ಕುಳಿತ ಹರಿಜನರಿಗೆ ಕಾಳು ತಂದುಕೊಡಬೇಕು. ಇಂತಹ ವ್ಯವಸ್ಥೆ ಇರುವ ಕಡೆ ಶಿಕ್ಷಿತ ಮಾದಿಗ ಯುವಕನೊಬ್ಬ ಕಾಳು ತರಲು ನೇರ ಅಂಗಡಿಗೆ ಹೋಗಿದ್ದಾಗ, ಮಾದಿಗ ಸೂಳೆ ಮಗನೆ ಹಟ್ಟಿಯೊಳಗೆ ಬಂದು ನಮ್ಮ ಕುಲ ಕೆಡಿಸಿದೆಯಲ್ಲೊ ಎಂದು ಕತ್ತು ಹಿಡಿದು ಹೊರ ತಳ್ಳಿದರು. ಅದರ ಸಲುವಾಗಿ ಆತನ ಮೇಲೆ ಹಲ್ಲೆ ನಡೆಸಲಾಯಿತು.[೩೨] ಹೀಗೆ ಮಾದಿಗರು ಅಸ್ಪಶ್ಯರೆಂಬ ಹಿನ್ನೆಲೆಯಲ್ಲಿ ಅವಮಾನಕ್ಕೆ ಒಳಗಾಗಿರುವುದೂ ಇದೆ. ಇಂದಿಗೂ ಗೊಲ್ಲರ ಹಟ್ಟಿಯ ಒಳಗಡೆ ಮಾದಿಗರಿಗೆ ಪ್ರವೇಶವಿಲ್ಲ. ಸರ್ಕಾರ ಅಸ್ಪ್ರಶ್ಯತೆಯನ್ನು ಹೋಗಲಾಡಿಸಲು ವಿವಿಧ ರೀತಿಯ ಕಾನೂನು ಕ್ರಮಗಳನ್ನು ಕೈಗೊಂಡರೂ ಇಂದಿಗೂ ಅದನ್ನು ಸಂಪೂರ್ಣವಾಗಿ ನಿರ್ನಾಮ ಮಾಡಲಾಗಿಲ್ಲ. ಅನೇಕ ಗ್ರಾಮಗಳಲ್ಲಿ ಶಿಕ್ಷಣ ಪಡೆದ ಯುವಕರು ಹೋಟೆಲ್, ಕಟ್ಟೆ, ಬಾವಿ ಮುಂತಾದ ಕಡೆ ಧೈರ್ಯದಿಂದ ಮುನ್ನುಗ್ಗಿದಾಗ ಊರಿನ ಜನರೆಲ್ಲ ಒಂದಾಗಿ ಅವರನ್ನು ಥಳಿಸುತ್ತಿದ್ದರು. ಮಾತ್ರವಲ್ಲದೇ ಅನೇಕ ಸಂದರ್ಭಗಳಲ್ಲಿ ಸಾಮಾಜಿಕ ಬಹಿಷ್ಕಾರವನ್ನು ಹಾಕುತ್ತಿದ್ದರು. ಈ ಕುರಿತು ಅಂಬೇಡ್ಕರ್ ಹೀಗೆ ಹೇಳಿದ್ದಾರೆ: ಅಸ್ಪ್ರಶ್ಯರ ವಿರುದ್ಧ ಸಾಮಾಜಿಕ ಬಹಿಷ್ಕಾರವೆನ್ನುವುದು ಹಿಂದೂ ಜನರ ಕೈಯಲ್ಲಿರುವ ಯಾವ ಕ್ಷಣದಲ್ಲಿದ್ದರೂ ತಲೆಯನ್ನು ತುಂಡರಿಸಬಲ್ಲ ತೂಗಾಡುವ ಕತ್ತಿಯೆಂದು ಹೇಳಬಹುದು. ಈ ಅಸ್ತ್ರದ ಭಯನಕತೆ ಅದನ್ನು ಅನುಭವಿಸಿದ ಅಸ್ಪ್ರಶ್ಯರಿಗೆ ಮಾತ್ರವೆ ಗೊತ್ತು.[೩೩] ಈ ಕ್ರಮದ ಪರಿಣಾಮವಾಗಿ ಊರಿನ ಯಾವುದೇ ಜಾತಿಯ ಜನರು ಅಸ್ಪ್ರಶ್ಯರಿಗೆ ಯಾವ ವಿಧದಲ್ಲೂ ಸಹಾಯ ಮಾಡುವ ಆಗಿಲ್ಲ. ಕೂಲಿ ಕರೆಯುವುದಾಗಲಿ, ಅಂಗಡಿಯಲ್ಲಿ ಸಾಮಾನುಗಳನ್ನು ಕೊಡುವುದಾಗಲಿ, ಕೊನೆಗೆ ಕಕ್ಕಸ್ಸಿಗೆ ಇತರೆ ಜಾತಿಯವರ ಹೊಲಗಳಲ್ಲಿ ಅವಕಾಶ ಮಾಡಿಕೊಡಬಾರದೆಂಬ ನಿಯಮಾವಳಿ ಸಾಮಾಜಿಕ ಬಹಿಷ್ಕಾರದ್ದಾಗಿರುತ್ತದೆ. ಈ ಕಾರಣದಿಂದಾಗಿ ಮಾದಿಗರು ಅಸ್ಪ್ರಶ್ಯತೆಯ ಹಿನ್ನೆಲೆಯಲ್ಲಿ ತಮಗೆಷ್ಟೆ ಅವಮಾನವಾದರೂ ಸಹಿಸಿಕೊಂಡು ಜೀವನ ಮಾಡುತ್ತಾ ಬಂದಿದ್ದಾರೆ. ಇದೇ ರೀತಿಯ ಜೀವನ ಎಲ್ಲಾ ಕಡೆಯಲ್ಲೂ ಇಲ್ಲ. ಮಾದಿಗರು ಹೆಚ್ಚಿನ ಜನಸಂಖ್ಯೆ ಹೊಂದಿ

ಶಿಕ್ಷಣ ಪಡೆದ ಹಾಗೂ ಆರ್ಥಿಕವಾಗಿ ಮುಂದುವರಿದಿರುವ ಅನೇಕ ಗ್ರಾಮಗಳಲ್ಲಿ ತಮ್ಮ ಮೇಲೆ ನಡೆಯುವ ಅನ್ಯಾಯಗಳನ್ನು ಪ್ರತಿಭಟಿಸಿದ ಉದಾಹರಣೆಗಳಿದ್ದರೂ ಅಂತಹ ಗ್ರಾಮಗಳ ಸಂಖ್ಯೆ ತುಂಬಾ ಕಡಿಮೆ.

ಇಂದು ಅನೇಕ ಗ್ರಾಮಗಳಲ್ಲಿ ಹೋಟೆಲ್ ಪ್ರವೇಶ ದೊರಕಿದೆಯಾದರೂ ಅಂತಹ ಪ್ರವೇಶ ಸಿಕ್ಕಿರುವುದು ಪ್ರತಿಭಟನೆಯಿಂದಲೇ. ಆದರೆ ಈ ರೀತಿ ಪ್ರವೇಶ ಹೊಂದಿದ ಗ್ರಾಮಗಳು ತುಂಬಾ ಕಡಿಮೆ. ಅದರಲ್ಲಿ ಚಿತ್ರದುರ್ಗ ಜಿಲ್ಲೆಗಿಂತಲೂ ಬಳ್ಳಾರಿ ಜಿಲ್ಲೆಯಲ್ಲಿ ಹೋಟೆಲ್ ಪ್ರವೇಶ ತುಂಬಾ ಕಡಿಮೆ ಇದೆ. ಹೋಟೆಲ್ ಪ್ರವೇಶವಾದರೂ ಅಲ್ಲಿ ಕಟ್ಟೆಯ ಮೇಲೆ ಕೂರುವ ಆಗಿಲ್ಲ. ಇನ್ನೂ ಅನೇಕ ಊರುಗಳಲ್ಲಿ ಪಂಚಾಯಿತಿ ಕಟ್ಟೆಯನ್ನು ಹತ್ತುವುದಿಲ್ಲ. ಚುನಾಯಿತ ಪ್ರತಿನಿಧಿಗಳು ಸಹ ಪ್ರಯತ್ನ ಮಾಡುವುದಿಲ್ಲ. ಅಂತಹ ಘಟನೆಯೊಂದನ್ನು ಕ್ಷೇತ್ರಕಾರ್ಯಕ್ಕೆ ಹೋಗಿದ್ದಾಗ ಯರಿಸ್ವಾಮಿ ತಿಳಿಸಿದರು. ದೇವಾಲಯ ಪ್ರವೇಶವಂತೂ ಬಹುತೇಕ ಗ್ರಾಮಗಳಲ್ಲಿ ಇಲ್ಲವೇ ಇಲ್ಲ. ಇದ್ದರೂ ಅಂತಹ ಗ್ರಾಮಗಳು ಅತ್ಯಂತ ಕಡಿಮೆ. ಅಧ್ಯಯನಕ್ಕೊಳಪಡಿಸಿದ ೪೫ ಗ್ರಾಮಗಳಲ್ಲಿ ಕೆಲವೇ ಗ್ರಾಮಗಳನ್ನು ಹೊರತುಪಡಿಸಿದರೆ ಉಳಿದೆಲ್ಲ ಕಡೆಗಳಲ್ಲಿ ದೇವಾಲಯ ಪ್ರವೇಶ ನಿಷಿದ್ಧ. ಈ ಸಂಬಂಧ ಪೋಲಿಸರಿಗೆ ದೂರು ಕೊಡುವುದಕ್ಕೆ ಈ ಜನಾಂಗದವರು ಮುಂದಾಗುವುದಿಲ್ಲ. ಕೊಟ್ಟರೂ ಕ್ರಮ ಕೈಗೊಳ್ಳುವುದು ಅಷ್ಟೇ ಇದೆ. ಇಲ್ಲವೇ ಗಲಾಟೆಗಳು ನಡೆದು ಮತ್ತೆ ತೊಂದರೆಗೆ ಒಳಗಾಗುವವರು ನಾವೇ ಎಂದು ಯಾರೂ ದೂರು ಸಲ್ಲಿಸಲು ಇಲ್ಲವೇ ಪ್ರತಿಭಟಿಸಲು ಮುಂದಾಗು ವುದಿಲ್ಲ. ಅಸ್ಪೃಶ್ಯತೆಯನ್ನು ಹೊಗಲಾಡಿಸಲು ಸರ್ಕಾರ ಏನೇ ಕ್ರಮಕೈಗೊಂಡರೂ ಅದು ಕೇವಲ ಆ ದಿನದ ಕಾರ್ಯಕ್ರಮಗಳಿಗೆ ಸೀಮಿತವಾಗಿರುತ್ತವೆ.

**ಹಲ್ಲೆ, ದೌರ್ಜನ್ಯ ಹಾಗೂ ಕೊಲೆ ಪ್ರಕರಣಗಳು**

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲೂ ಈ ಜನಾಂಗ ಮೇಲ್ಜಾತಿಗಳೆಂದು ಕರೆಸಿಕೊಂಡಿರುವ ವಿವಿಧ ಜನಾಂಗಗಳಿಂದ ನಿರಂತರವಾಗಿ ಹಲ್ಲೆ, ದೌರ್ಜನ್ಯ ಹಾಗೂ ಕೊಲೆಯಂತಹ ಅಮಾನವೀಯ ಕೃತ್ಯಗಳಿಗೆ ಬಲಿಯಾಗುತ್ತಿದೆ. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿಯೂ ಇವು ಮುಂದುವರಿದಿವೆ. ೭೦ ರ ದಶಕದಲ್ಲಿ ಹುಟ್ಟಿಕೊಂಡ ದಲಿತ ಸಂಘರ್ಷ ಸಮಿತಿಯು ಈ ಭಾಗದ ಜನರನ್ನು ರಕ್ಷಣೆ ಮಾಡುವಲ್ಲಿ ಅವರ ಮೇಲೆ ನಡೆಯುತ್ತಿದ್ದ ಅನ್ಯಾಯಗಳನ್ನು ತಡೆಗಟ್ಟುವಲ್ಲಿ ಪ್ರತಿಭಟನೆಯ ಮೂಲಕ ಪ್ರಯತ್ನ ಮಾಡಿದೆ. ಅದೇ ರೀತಿ ಕಾನೂನು ಕ್ರಮಗಳು ಇಂತಹ ಶೋಷಣೆಗಳಿಂದ ಮುಕ್ತಗೊಳಿಸಲು ಪ್ರಯತ್ನಪಟ್ಟಿವೆಯಾದರೂ ಸಂಪೂರ್ಣವಾಗಿ ವಿಮೋಚನೆ ಹೊಂದಲಾಗಿಲ್ಲ. ೭೦ ರ ದಶಕದಿಂದ ಇಂದಿನವರೆಗೆ ದಾಖಲಾದ ಅನೇಕ ಪ್ರಕರಣಗಳು ಮೇಲಿನ ಮಾತನ್ನು ಖಚಿತಪಡಿಸುತ್ತವೆ. ಈ ಜನಾಂಗದ ಮೇಲೆ ಇಪ್ಪತ್ತರ ದಶಕದಲ್ಲಿ ನಡೆದ ಕೆಲವು ಪ್ರಕರಣಗಳನ್ನು ಇಲ್ಲಿ ವಿವರಿಸಲಾಗಿದೆ.

**ಸಂಗನಕಲ್ಲು ಪ್ರಕರಣ**

೧೯೯೨-೯೩ರಲ್ಲಿ ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ಗ್ರಾಮದಲ್ಲಿ ಸಾರ್ವಜನಿಕ ಸ್ಥಳಗಳನ್ನು ಪ್ರವೇಶ ಕೆಲವರು ಮಾಡಿದ್ದಕ್ಕೆ ಸವರ್ಣೀಯರು ಮಾದಿಗರ ಕೇರಿಗೆ ನುಗ್ಗಿ ಅವರ ಮನೆಗಳಿಗೆ ಬೆಂಕಿ ಹಾಕಿದ್ದಾರೆ. ನೀರು ತರಲು ಕೊಳಾಯಿ ಹತ್ತಿರ ಹೋಗಿದ್ದಾಗ ಸವರ್ಣೀಯ ಕೊಡಗಳನ್ನು ಮುಟ್ಟಿದಕ್ಕೆ ಜಗಳ ಮಾಡಿದರು. ಅದೇ ದಿನ ಕೆಲವರು ಹೋಟೆಲ್ ಪ್ರವೇಶ ಸಹ ಮಾಡಿದ್ದರು. ಈ ಎರಡು ಕಾರಣಗಳಿಂದ ಕೋಪಗೊಂಡ ಆ ಗ್ರಾಮದ ಇತರೆ ಜಾತಿಯವರಾದ ಲಿಂಗಾಯಿತ, ಕುರುಬ, ಬೇಡ, ಮುಸ್ಲಿಂ ಮುಂತಾದವರೆಲ್ಲ ಸೇರಿಕೊಂಡು ಮಾದಿಗರ ಹಟ್ಟಿಗೆ ನುಗ್ಗಿ ಅವರ ಒಟ್ಟು ೧೩೨ ಗುಡಿಸಲು ಮನೆಗಳಿಗೆ ಬೆಂಕಿ ಇಟ್ಟರು. ಇದರಿಂದ ಭಯಭೀತರಾದ ಈ ಜನಾಂಗದವರು ಪೊಲೀಸ್ ದೂರು ಸಲ್ಲಿಸಿದರು. ಈ ಸಂಬಂಧ ಅನೇಕರನ್ನು ಬಂಧಿಸಿದ ಪೋಲಿಸಿನವರು ಸುಮಾರು ಮೂರು ತಿಂಗಳುಗಳ ಕಾಲ ಆ ಗ್ರಾಮದಲ್ಲಿ ಬೀಡು ಬಿಟ್ಟು ಈ ಜನಾಂಗದವರಿಗೆ ರಕ್ಷಣೆ ನೀಡಿದರು.

**ಕೆ.ಆರ್.ಹಳ್ಳಿ ಪ್ರಕರಣ**

ಸುಮಾರು ೧೯೯೮ ಮತ್ತು ೧೯೯೪ ರಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಈ ಜನಾಂಗದವರು ಎರಡು ಬಾರಿ ಗೊಲ್ಲರು ಮತ್ತು ಒಕ್ಕಲಿಗರು ಹಾಗೂ ಇತರೆಯವರಿಂದ ದೌರ್ಜನ್ಯಕ್ಕೆ ಒಳಗಾಗಿದ್ದಾರೆ. ಈ ಹಿಂದೆ ಗ್ರಾಮದ ಹತ್ತಿರ ಎರಡು ಭಾಗದಲ್ಲಿ ಗೋಮಾಳದ ಜಮೀನಿದ್ದು, ಒಂದು ಭಾಗವನ್ನು ಸರ್ಕಾರವು ಅರಣ್ಯ ಇಲಾಖೆಗೆ ಸೇರ್ಪಡೆ ಮಾಡಿಕೊಂಡಿತು. ಆಗ ಸ್ಥಳೀಯರಿಂದ ಯಾವ ಪ್ರತಿಭಟನೆ ಆಗಲಿಲ್ಲ ಆದರೆ ಮತ್ತೊಂದು ಭಾಗದಲ್ಲಿದ್ದ ಗೋಮಾಳದ ಜಮೀನಿನಲ್ಲಿ ಭೂಮಿಯೇ ಇಲ್ಲದ ನಾಲ್ಕು ಜನ ಈ ಜನಾಂಗದವರು ಆ ಭೂಮಿಯ ಒಂದು ಭಾಗದಲ್ಲಿ ಸಾಗುವಳಿ ಮಾಡಲು ತೊಡಗಿದ್ದಾಗ ರಾತ್ರಿ ವೇಳೆ ಗೊಲ್ಲ ಜನಾಂಗದ ಕೆಲವರು ದೊಣ್ಣೆ, ಕೋಲುಗಳನ್ನು ತೆಗೆದುಕೊಂಡು ಹೋಗಿ ಆ ನಾಲ್ಕು ಜನರ ಮೇಲೆ ಮಾರಾಣಾಂತಿಕ ಹಲ್ಲೆ ನಡೆಸಿದರು.

ಮತ್ತೊಂದು ಪ್ರಕರಣದಲ್ಲಿ ಕೆಲವರು ಮರಣಾಂತಿಕ ಹಲ್ಲೆಗೆ ಒಳಗಾಗಿರುವುದು ೧೯೯೪ರ ಯುಗಾದಿ ಹಬ್ಬದ ಎರಡನೆ ದಿನದಲ್ಲಿ ನಡೆದಿದೆ. ಅಂದು ಸಂತೋಷ ಸಂಭ್ರಮದಿಂದ ಯುಗಾದಿ ಹಬ್ಬವನ್ನು ಆಚರಿಸುತ್ತಿರುವಾಗ ಮಾದಿಗ ಜನಾಂಗದ ಕುಡುಕನೊಬ್ಬನ ದುರ್ವರ್ತನೆಯಿಂದ ರೊಚ್ಚಿಗೆದ್ದ ಸವರ್ಣೀಯರು ಇಡೀ ಮಾದಿಗ ಜನ ಸಮುದಾಯದ ಮೇಲೆ ದೊಣ್ಣೆಗಳಿಂದ ಹಲ್ಲೆ ಮಾಡಲು ಆರಂಭಿಸಿದರು. ಇದರಿಂದ ಭಯಭೀತರಾದ ಜನರು ಓಡಿ ಹೋಗಿ ತಮ್ಮ ಮನೆಗಳೊಳಗೆ ಅವಿತುಕೊಂಡರು. ಆ ಸಂದರ್ಭ ಅನೇಕರ ಮೇಲೆ ಮಾರಣಾಂತಿಕ ಹಲ್ಲೆ ನಡೆಯಿತು. ಇದರ ಪರಿಣಾಮವಾಗಿ ಆ ಗ್ರಾಮದಲ್ಲಿ ಅಶಾಂತಿ ವಾತವರಣವೇರ್ಪಟ್ಟು ಪರಸ್ಪರ ಒಬ್ಬರಿಗೊಬ್ಬರು ದ್ವೇಷ ಸಾಧಿಸುವಂತಾಯಿತು. ಈ ಸಂಬಂಧ ಹಲ್ಲೆಗೊಳಗಾದವರ ಛಾಯಾಚಿತ್ರವನ್ನು ಕೋಷ್ಟಕದಲ್ಲಿ

ಗಮನಿಸಬಹುದು.

**ಅನ್ನೆಹಾಳ್ ಪ್ರಕರಣ**

ಚಿತ್ರದುರ್ಗ ಜಿಲ್ಲೆಯ ಅನ್ನೆಹಾಳ್ ಗ್ರಾಮದಲ್ಲಿ ೧೯೯೮ರ ಅನ್ನೆಹಾಳ್ ಪ್ರಕರಣ ಇಡೀ ರಾಜ್ಯದಲ್ಲಿ ಮನೆಮಾತಾಯಿತು. ಈ ಪ್ರಕರಣ ಅತ್ಯಂತ ಅಮಾನವೀಯ ಕೃತ್ಯವಾಗಿದೆ. ಈ ಗ್ರಾಮದ ಮಾದಿಗರು ಲಿಂಗಾಯಿತರ ಮನೆ, ಭೂಮಿಗಳಲ್ಲಿ, ಜೀತ, ಕೂಲಿ ಮಾಡಿಕೊಂಡು ಜೀವನ ಮಾಡುತ್ತಿದ್ದರು. ಮಲ್ಲಪ್ಪ ಎಂಬುವನು ಲಿಂಗಾಯಿತ ಭೂಮಾಲಿಕನೊಬ್ಬನ ಮನೆಯಲ್ಲಿ ಜೀತ ಮಾಡಿಕೊಂಡಿದ್ದ. ಈತನು ಆ ಮನೆಯ ಯಜಮಾನನ ತಂಗಿಯೊಂದಿಗೆ ಅನೈತಿಕ ಸಂಬಂಧ ಹೊಂದಿದ್ದಾನೆಂಬ ಚಾಡಿ ಮಾತುಗಳಿಂದ ಅನುಮಾನಿಸಿ ಕೋಪಗೊಂಡು ಆತನನ್ನು ಮುಗಿಸಲು ತೀರ್ಮಾನಿಸಿ ರಾತ್ರಿ ವೇಳೆ ಹೊಲಕ್ಕೆ ಕರೆದುಕೊಂಡು ಹೋಗಿ ಕೊಲೆ ಮಾಡಲಾಯಿತು. ಇದನ್ನು ಕಣ್ಣಾರೆ ಕಂಡ ರಾಜಪ್ಪ (ಮಾದಿಗರ ಹುಡುಗ) ನನ್ನು ಈ ವಿಷಯ ತಿಳಿಸಿದರೆ ನಿನ್ನನ್ನೂ ಕೊಲೆ ಮಾಡುತ್ತೇವೆಂದು ಪ್ರಾಣ ಬೆದರಿಕೆ ಹಾಕಿದರು. ಇದರಿಂದ ಭಯಪಟ್ಟ ಈತನು ಈ ವಿಷಯ ತಿಳಿಸಲಿಲ್ಲ. ಕೊನೆಗೆ ಧೈರ್ಯದಿಂದ ಕೊಲೆ ಮಾಡಿದ ವಿಷಯವನ್ನು ತಿಳಿಸಿ ಕೊಲೆಯಾದವನ ಹೆಂಡತಿಯಿಂದ ದೂರು ಸಲ್ಲಿಸಿದರು. ಈ ಸಂಬಂಧದಲ್ಲಿ ವಿವಿಧ ದಲಿತ ಸಂಘಟನೆಗಳು ಪ್ರವೇಶ ಮಾಡಿ ಸತ್ಯವನ್ನು ಪತ್ತೆ ಮಾಡುವಂತೆ ಒತ್ತಾಯಿಸಿದವು.

ಈ ರೀತಿ ಪ್ರಕರಣ ಹೊಸ ತಿರುವು ಪಡೆದುಕೊಳ್ಳುತ್ತಲೆ ಮಾದಿಗರು ಮತ್ತು ಲಿಂಗಾಯಿತರ ನಡುವೆ ದ್ವೇಷ ಹೆಚ್ಚಾಗತೊಡಗಿತು. ಈ ಕಾರಣದಿಂದಾಗಿ ರಕ್ಷಣೆಗಾಗಿ ಮಾದಿಗರು ಪೋಲಿಸ್ ದೂರು ಸಲ್ಲಿಸಿದ್ದರಿಂದ ಪೋಲಿಸ್‌ನವರು ಆ ಗ್ರಾಮದಲ್ಲಿ ಬೀಡು ಬಿಟ್ಟಿದ್ದರು. ದಿ: ೦೩.೦೯.೯೮ ರ ಸುಮಾರು ರಾತ್ರಿ ೮ ಗಂಟೆಯ ಹೊತ್ತಿಗೆ ಲಿಂಗಾಯಿತರೆಲ್ಲ ಸೇರಿಕೊಂಡು ಮಾದಿಗರ ಕೇರಿಗೆ ಪೆಟ್ರೋಲ್ ಸಮೇತ ನುಗ್ಗಿದರು. ಪೊಲೀಸಿನವರು ತಡೆಗಟ್ಟಿದರು. ಅವರಿಗೆ ಹೆದರದೆ ಅವರ ಮೇಲೆ ಕಲ್ಲು ತೂರಾಟ ನಡೆಸಿ ಸುಮಾರು ೫೦ ಕ್ಕೂ ಹೆಚ್ಚು ಮನೆಗಳ ಮೇಲೆ ಪೆಟ್ರೋಲ್ ಸುರಿದು ಬೆಂಕಿ ಹಚ್ಚುತ್ತಿದ್ದಂತೆಯೇ ಮಹಿಳೆಯರು ಮತ್ತು ಮಕ್ಕಳು ತಮ್ಮ ಪ್ರಾಣಗಳನ್ನು ಉಳಿಸಿಕೊಳ್ಳಲು ಕತ್ತಲು ರಾತ್ರಿಯಲ್ಲಿ ಓಡಿಹೋಗಿ ಅವಿತುಕೊಂಡರು. ಬೆಂಕಿ ಹಚ್ಚುವ ಕೃತ್ಯವನ್ನು ಪೋಲಿಸರು ತಡೆಗಟ್ಟಲು ಪ್ರಯತ್ನಿಸಿದರೂ ಹೆಚ್ಚಿನ ಸಂಖ್ಯೆ ಪೊಲೀಸ ಇರದ ಕಾರಣ ಆ ಕೃತ್ಯವನ್ನು ತಡೆಗಟ್ಟಲಾಗಲಿಲ್ಲ. ಪೊಲೀಸಿನವರ ಮೇಲೆಯೇ ಕಲ್ಲು ತೂರಾಟ ನಡೆಸಿದರು. ಅದೇ ವೇಳೆಯಲ್ಲಿ ಊಟಕ್ಕೆ ಹೋಗಿ ಬರುತ್ತಿದ್ದ ಪೋಲಿಸ್ ವ್ಯಾನ್ ಬರುತ್ತಿದ್ದಂತೆಯೇ ಮತ್ತಷ್ಟು ಕಲ್ಲು ತೂರಾಟ ಹೆಚ್ಚಿಸಿದರು. ಇದರಿಂದಾಗಿ ಪೋಲಿಸ್‌ನವರು ಗೊಲಿಬಾರ್ ಮಾಡಬೇಕಾಯಿತು. ಪರಿಣಾಮವಾಗಿ ಇಬ್ಬರು ಬಲಿಯಾದರು. ಈ ರೀತಿ ಜಾತಿಯ ಹಿನ್ನೆಲೆಯಲ್ಲಿ ನಡೆದ ಈ ಕೃತ್ಯದಿಂದಾಗಿ ಆ ಗ್ರಾಮದಲ್ಲಿ ಮತ್ತೆ ಹೋಗಿ ವಾಸ ಮಾಡಲು ಯಾರೂ ಧೈರ್ಯ ಮಾಡಲಿಲ್ಲ. ಅದಕ್ಕೆ ಪರ್ಯಾಯವಾಗಿ ಸರ್ಕಾರ ಹೊಸದುರ್ಗ ತಾಲ್ಲೂಕಿನ ಸ್ಥಳವೊಂದರಲ್ಲಿ ಹೊಸ

ಮನೆಗಳನ್ನು ನಿರ್ಮಿಸಿಕೊಟ್ಟಿದ್ದರಿಂದ ಅನ್ನೆಹಾಳ್ ಮಾದಿಗರೆಲ್ಲರೂ ಅಲ್ಲಿ ನೆಮ್ಮದಿಯಿಂದ ವಾಸ ಮಾಡಲಾರಂಭಿಸಿದರು.

**ಕೋಳೂರು ಪ್ರಕರಣ**

ಮಾದಿಗರ ಮನೆಗಳಿಗೆ ಬೆಂಕಿ ಹಚ್ಚಿರುವ ಮತ್ತೊಂದು ಪ್ರಕರಣ ಬಳ್ಳಾರಿ ತಾಲ್ಲೂಕಿನ ಕೋಳೂರು ಗ್ರಾಮದಲ್ಲಿ ನಡೆದಿದೆ. ಜಾತಿಯ ಹಿನ್ನೆಲೆಯಲ್ಲಿ ದಿನಾಂಕ ೧೯.೩.೯೯ ರಂದು ನಡೆದ ಗಲಾಟೆಯಿಂದಾಗಿ ಆ ಗ್ರಾಮದ ಸವರ್ಣೀಯರು ಮಾದಿಗರ ಕೇರಿಗೆ ನುಗ್ಗಿ ಹಲ್ಲೆ ಮಾಡಿ ಅವರ ಗುಡಿಸಲುಗಳಿಗೆ ಬೆಂಕಿ ಇಟ್ಟರು. ಈ ಕೃತ್ಯ ಸಂಬಂಧ ದೂರು ನೀಡಿದರು. ಮಾರನೆಯ ದಿನ ವಿವಿಧ ದಲಿತ ಸಂಘಟನೆಗಳು ಆ ಗ್ರಾಮಕ್ಕೆ ಭೇಟಿಕೊಟ್ಟು ಅವರಿಗೆ ಸಾಂತ್ವನ ಹೇಳಿ ತಪ್ಪಿತಸ್ಥರ ವಿರುದ್ಧ ಕ್ರಮ ಕೈಗೊಳ್ಳುವಂತೆ ಒತ್ತಾಯಿಸಿದರು. ಅಂದು ಗ್ರಾಮಕ್ಕೆ ಅಧಿಕಾರಿಗಳು ಮತ್ತು ಪೊಲೀಸ್ ಇಲಾಖೆಯವರು ಸಹ ಬಂದಿದ್ದರು. ಅಲ್ಲಿ ಮತ್ತೇ ಗಲಾಟೆ ನಡೆಯುವ ಸಾಧ್ಯತೆಯಿದ್ದು, ಹೆಚ್ಚಿನ ಪೊಲೀಸನವರನ್ನು ಕರೆ ಕಳುಹಿಸಿರೆಂದು ಮುಖಂಡರು ಸೂಚನೆ ಕೊಟ್ಟಿದ್ದರು. ಅಧಿಕಾರಿಗಳು ಅದನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ದಲಿತ ಸಂಘಟನೆಗಳೊಂದಿಗೆ ಮಾದಿಗರು ನಮ್ಮ ಮೇಲೆ ಹಲ್ಲೆ ಮಾಡಲು ಬರುತ್ತಿದ್ದಾರೆಂದು ಸುಳ್ಳು ಹೇಳಿ ಹುರಿದುಂಬಿಸಿ ಸವರ್ಣೀಯರೆಲ್ಲ ಒಂದಾಗಿ ಮಾದಿಗರ ಕೇರಿಗೆ ನುಗ್ಗುವಂತಹ ತಂತ್ರವೊಂದನ್ನು ಕೆಲವು ಸವರ್ಣೀಯ ಜನ ಮಾಡಿದರು. ಪರಿಣಾಮವಾಗಿ ೮೦೦ ಮನೆಗಳನ್ನು ಹೊಂದಿದ್ದ ಸವರ್ಣೀಯರ ಗುಂಪು ೮೦ ಮನೆಗಳನ್ನು ಹೊಂದಿದ್ದ ಮಾದಿಗರ ಕೇರಿಗೆ ನುಗ್ಗಿ ಅವರ ಮೇಲೆ ಪೊಲೀಸ್ ಮತ್ತು ಇತರೆ ಅಧಿಕಾರಿಯವರ ಎದುರೆ ನುಗ್ಗಿ ಹಲ್ಲೆ ಮಾಡುವಂತಾಯಿತು. ಇದರಿಂದಾಗಿ ಅನೇಕರು ಮಾರಣಾಂತಿಕ ಹಲ್ಲೆಗೆ ಒಳಗಾದರು.

**ಗಿಲ್ಕೆನಹಳ್ಳಿ ಪ್ರಕರಣ**

ಚಿತ್ರದುರ್ಗ ಜಿಲ್ಲೆಯಲ್ಲಿ ಈ ಜನಾಂಗದ ವ್ಯಕ್ತಿಯೊಬ್ಬನನ್ನು ಕೊಲೆ ಮಾಡಿರುವ ಪ್ರಕರಣವೊಂದು ೨೦೦೧ರಲ್ಲಿ ಹೊಳಲ್ಕೆರೆ ತಾಲ್ಲೂಕಿನ ಗಿಲ್ಕೆನಹಳ್ಳಿಯಲ್ಲಿ ನಡೆದಿದೆ. ಆ ಗ್ರಾಮದಲ್ಲಿದ್ದ ಗೋಮಾಳದ ಜಮೀನನ್ನು ಹತ್ತ ವರ್ಷಗಳ ಹಿಂದಿನಿಂದಲೂ ಮಾದಿಗರ ೩೦ ಮನೆಯವರು ೩-೪ ಎಕರೆಯಂತೆ ಸಾಗುವಳಿ ಮಾಡುತ್ತಿದ್ದು ಸರ್ಕಾರವು ೧೯೮೦ ರ ಸುಮಾರಿಗೆ ಖಾಯಂ ಮಾಡಿಕೊಟ್ಟಿತ್ತು. ಅದರಲ್ಲಿ ಬೇಳೆ ಬೆಳೆದು ಜೀವನ ಮಾಡಿಕೊಂಡಿದ್ದರು. ಇತ್ತೀಚೆಗೆ ಅವರು ಸದರಿ ಜಮೀನಿನಲ್ಲೆ ರಾಗಿ ಮತ್ತು ಟೊಮೊಟೊ ಬೆಳೆಯನ್ನು ಬೆಳೆಸಿದ್ದರು. ದಿ:೨೪.೧೧.೦೧ ರಂದು ಅದೇ ಗ್ರಾಮದಲ್ಲಿ ನೆಲೆಸಿರುವ ಗೊಲ್ಲ ಜನಾಂಗದ ಕೆಲವರು ತಮ್ಮ ಕುರಿಗಳನ್ನು ಇವರ ಹೊಲದಲ್ಲಿ ಬಿಟ್ಟು ಮೇಯಿಸಿದ್ದನ್ನು ಕಣ್ಣಾರೆ ಕಂಡ ಮಾದಿಗ ಜನಾಂಗದ ದುರ್ಗಪ್ಪ ಮತ್ತಿತರು ಅವರನ್ನು ಬೈಯ್ದುರು. ಆಗ ಕೆರಳಿದ ಅವರು ಕೈಯಲ್ಲಿದ್ದ ದೊಣ್ಣೆ, ಮಚ್ಚು ಮುಂತಾದವುಗಳಿಂದ ಅವರ ಮೇಲೆ ಹಲ್ಲೆ ಮಾಡಿದರು.

ಇದರಿಂದ ಆರು ಜನರಿಗೆ ಮಾರಣಾಂತಿಕ ಗಾಯಗಳಾದವು. ಇದನ್ನು ತಿಳಿದು ಅಲ್ಲಿಗೆ ಧಾವಿಸಿದ ಮಾದಿಗ ಜನಾಂಗದ ಇತರರು ಅವರನ್ನು ಆಸ್ಪತ್ರೆಗೆ ಕೊಂಡೊಯ್ದರು. ತುಂಬಾ ಹರಿತವಾದ ಗಾಯಗಳಿಂದಾಗಿ ದಾವಣಗೆರೆ ಆಸ್ಪತ್ರೆಗೆ ಸಾಗಿಸುವ ಮೊದಲೆ ದುರ್ಗಪ್ಪ ಮರಣ ಹೊಂದಿದನು. ಈ ಬಗ್ಗೆ ಪೊಲೀಸಿನವರು ಮೊದಲು ದೌರ್ಜನ್ಯದ ಕೇಸು ದಾಖಲಿಸಿದ್ದರು. ಆನಂತರದಲ್ಲಿ ದ.ಸಂ.ಸ ರಾಜ್ಯ ಸಂಚಾಲಕ ಎಂ.ಜಯಣ್ಣ ಬಂದು ಪೊಲೀಸಿನವರನ್ನು ತರಾಟೆಗೆ ತೆಗೆದುಕೊಂಡಾಗ ಕೊಲೆ ಕೇಸು ದಾಖಲಿಸಿಕೊಂಡು ೭ ಜನರನ್ನು ಬಂಧಿಸಿದರು. ಈ ರೀತಿ ಮಾದಿಗರ ಅನೇಕರು ವಿವಿಧ ಕಾರಣಗಳಿಗಾಗಿ ಕೊಲೆಯಾಗಿದ್ದಾರೆ. ಇವು ಕೇವಲ ಉದಾಹರಣೆಗಳಷ್ಟೆ.

ಈ ರೀತಿ ಮಾದಿಗರು ವಿವಿಧ ಮೇಲ್ಜಾತಿಯ ಜನರಿಂದ ಹಲ್ಲೆ, ದೌರ್ಜನ್ಯ,ಕೊಲೆ ಹಾಗೂ ಅತ್ಯಾಚಾರಗಳಿಗೆ ಬಲಿಯಾಗಿದ್ದಾರೆ. ಅಲ್ಲದೆ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನ ಉಪ್ಪರಿಗೇನಹಳ್ಳಿ, ಚಿತ್ರದುರ್ಗ ತಾಲ್ಲೂಕಿನ ಮಠದ ಕುರುಬರ ಹಟ್ಟಿ, ಕ್ಯಾದಿಗೆರೆ, ಚಿಕ್ಕ ಸಿದ್ದವ್ವನಹಳ್ಳಿ, ದೊಡ್ಡ ಸಿದ್ದವ್ವನಹಳ್ಳಿ, ಮದಕರಿಪುರ, ಹಿರಿಯೂರು ತಾಲ್ಲೂಕಿನ ಗಸ್ನಾಯ್ಕನಹಳ್ಳಿ ಹಾಗೂ ಚಳ್ಳಕೆರೆ ತಾಲ್ಲೂಕಿನಲ್ಲಿ ೧೯೯೭ ರಿಂದ ೨೦೦೨ ರವರೆಗೆ ಪೊಲೀಸ್ ದಾಖಲಾತಿ ಪುಸ್ತಕದಲ್ಲಿ ದಾಖಲಾಗಿರುವ ೫೩ ಪ್ರಕರಣಗಳಿವೆ. ಬಿ.ದುರ್ಗಾ ಮತ್ತು ದ್ಯಾಪನಹಳ್ಳಿ ಗ್ರಾಮದಲ್ಲಿ ಕೊಲೆಯಾಗಿರುವುದಲ್ಲದೇ ಚಳ್ಳಕೆರೆ ತಾಲ್ಲೂಕಿನ ಹುಲಿಕುಂಟೆ ಗ್ರಾಮದಲ್ಲಿ ಅತ್ಯಾಚಾರಕ್ಕೆ ಬಲಿಯಾಗಿರುವುದೂ ಉಂಟು. ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲ್ಲೂಕಿನ ಬಾಗೇವಾಡಿ, ಕುಡುದ್ರಾಳ್, ಹೊಸಳ್ಳಿ, ದರೂರು ಮತ್ತು ಹೊಸಪೇಟೆ ತಾಲ್ಲೂಕಿನ ಡಣಾಪುರ, ದೇವಲಾಪುರ, ಆನಂತಶಯನಗುಡಿ ಮುಂತಾದ ಗ್ರಾಮಗಳಲ್ಲಿ ಅತ್ಯಾಚಾರ ನಡೆದಿದೆ. ಹೀಗೆ ಮಾದಿಗರು ವಿವಿಧ ಬಗೆಯಲ್ಲಿ ವಿವಿಧಜಾತಿಯ ಜನರಿಂದ ಶೋಷಣೆಗೆ ಒಳಗಾಗಿರುವುದು ಕಂಡುಬರುತ್ತದೆ. ಕೆಲವು ಪ್ರಕರಣಗಳನ್ನಷ್ಟೆ ಇಲ್ಲಿ ದಾಖಲಿಸಲಾಗಿದೆ. ಎರಡು ಜಿಲ್ಲೆಗಳ ಪ್ರತಿಯೊಂದು ಗ್ರಾಮವು ಮೇಲ್ಜಾತಿಯ ಜನರಿಂದ ಹಲ್ಲೆ, ದೌರ್ಜನ್ಯಕ್ಕೆ ಒಳಗಾಗಿದ್ದಾರೆ ಎಂದರೆ ತಪ್ಪಗಲಾರದು.

## ೩.೪ ಬಸವಿ ಪದ್ಧತಿ(ದೇವದಾಸಿ ಪದ್ಧತಿ) ಮತ್ತು ಮಾದಿಗರು

ದೇವರು ಮತ್ತು ಧರ್ಮದ ಹೆಸರಲ್ಲಿ ಕೆಳಜಾತಿಗಳ ಹೆಣ್ಣುಮಕ್ಕಳು ವಿವಿಧ ರೀತಿಯ ಶೋಷಣೆಗಳಿಗೆ ಒಳಗಾಗಿದ್ದಾರೆ. ಅಂಥವುಗಳಲ್ಲಿ ಬೆತ್ತಲೆ ಸೇವೆ, ದೇವದಾಸಿ ಅಥವಾ ಬಸವಿ ಪದ್ಧತಿ ಮುಖ್ಯವಾಗಿದೆ. ಇವುಗಳು ಪುರೋಹಿತರ ಮತ್ತು ಮೇಲುಜಾತಿಯ ಜನರ ಕಾಮನೆಗಳನ್ನು ಪೂರೈಸುವ ಸಲುವಾಗಿ ಕೆಳಜಾತಿಯ ಹೆಣ್ಣು ಮಕ್ಕಳನ್ನು ಇಂತಹ ಪದ್ಧತಿಗಳಿಗೆ ಒಳಪಡಿಸಿ ವೇಶ್ಯಾವೃತ್ತಿಯಲ್ಲಿ ತೊಡಗಿಕೊಳ್ಳುವಂತೆ ಮಾಡಿ ಅವರನ್ನು ಲೈಂಗಿಕ ಶೋಷಣೆಗೆ ಒಳಗಾಗುವಂತೆ ಮಾಡಿದೆ. ಈ ಬಗೆಯ ಶೋಷಣೆಗೆ ಒಳಗಾಗಿರುವುದನ್ನು ಭಾರತದಾದ್ಯಂತ ಕಾಣಬಹುದಾಗಿದ್ದು ಅವರನ್ನು ವಿವಿಧ ಹೆಸರುಗಳಿಂದ ಗುರುತಿಸುತ್ತಾರೆ. "ಕೇರಳದಲ್ಲಿ ಮಹರಿಗಳು, ಅಸ್ಸಾಮಿನಲ್ಲಿ ನಟಿಯರು, ಮಹಾರಾಷ್ಟ್ರದಲ್ಲಿ ಮುರುಳಿಯರು, ಆಂಧ್ರ ಪ್ರದೇಶದಲ್ಲಿ ಜೋಗಮ್ಮಗಳು, ಕರ್ನಾಟಕದಲ್ಲಿ ಜೋಗತಿಯರು ಅಥವಾ

ಬಸವಿಯರು"[೩೪] ತಮಿಳುನಾಡಿನಲ್ಲಿ ಇವರನ್ನು ದೇವರಡಿಯರ್ ಅಥವಾ ದಾಸಿಯರು[೩೫] ಹೆಸರುಗಳಿಂದ ಮಾತ್ರವಲ್ಲದೆ ಯೋಗಿನಿ, ಭವಾನಿ, ಕಲಾವಂತಿ, ಜೋಗಿನಿ, ಮಾತಂಗಿ[೩೬] ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿದೆ. ಇಂತಹ ಪದ್ಧತಿಗೆ ಒಳಗಾಗಿ ಲೈಂಗಿಕ ಶೋಷಣೆಗೆ ಒಳಗಾಗಿರುವ ಕೆಳಜಾತಿಗಳಲ್ಲಿ ಮಾದಿಗರೂ ಒಬ್ಬರು.

**ದೇವದಾಸಿ ಪದ್ಧತಿ ಹುಟ್ಟು ಮತ್ತು ಬೆಳವಣಿಗೆ**

ಕರ್ನಾಟಕದಲ್ಲಿ ಅನಾದಿ ಕಾಲದಿಂದಲೂ ವೇಶ್ಯಾವೃತ್ತಿ ಅಸ್ತಿತ್ವದಲ್ಲಿದೆ. "ಪುರೋಹಿತಶಾಹಿ ಮತ್ತು ರಾಜಶಾಹಿಗಳು ತಮ್ಮ ಧಾರ್ಮಿಕ ಮಡಿವಂತಿಕೆ ಹಾಳಾಗಬಾರದು. ತಮ್ಮ ಲೈಂಗಿಕ ಸ್ವೇಚ್ಛಚಾರಕ್ಕೆ ತಡೆ ಬಂದಿರಬಾರದು. ಅದು ವಿಕಾರವಾಗಿ ಕಂಡಿರಲೂಬಾರದು. ಆ ನೆಲೆಯಲ್ಲಿ ಲೈಂಗಿಕ ದಾಸಿಯರನ್ನು ರೂಪಿಸಿದರು".[೩೭] ಇದರಿಂದಾಗಿ ದಾಸಿಪದ್ಧತಿ ಅಸ್ತಿತ್ವಕ್ಕೆ ಬಂದಿತು. ಈ ಪದ್ಧತಿಯನ್ನು ಸಮರ್ಥಿಸುವಂತೆ "ಧಾರ್ಮಿಕ ಸಾಹಿತ್ಯಗಳ ಮೂಲಕ ಗಂಡು ಸಂತಾನವಿಲ್ಲದೆ ಹೋದ ಪಕ್ಷದಲ್ಲಿ ಸ್ವರ್ಗ ಪ್ರಾಪ್ತಿಯಾಗದು ಎಂಬ ಮಾತನ್ನು ಮನುಷ್ಯನಿಗೆ ಒತ್ತಿ ಹೇಳಿದರು. ಗಂಡು ಸಂತಾನವನ್ನು ಬಯಸುಪವರು ಈಗಾಗಲೇ ಹೆಣ್ಣು ಸಂತಾನವನ್ನು ಪಡೆದಿದ್ದರೆ ಆ ಹೆಣ್ಣನ್ನು ದೇವಾಲಯಕ್ಕೆ ಸಮರ್ಪಿಸಿದರೆ ಗಂಡು ಸಂತಾನ ಪ್ರಾಪ್ತಿಯಾಗುತ್ತದೆ ಎಂದು ಜನತೆಗೆ ಸಲಹೆ ನೀಡಲಾಯಿತು. ಪುರೋಹಿತರು ಕೆಳಜಾತಿಯ ಜನರು ನಿರಂತರವಾಗಿ ಸಣ್ಣ ವಯಸ್ಸಿನ ಹುಡುಗಿಯರನ್ನು ತಮ್ಮ ಸಮುದಾಯದಿಂದ ದೇವರ ಹೆಸರಿಗೆ ಬಿಡಬೇಕೆಂದು ಸಮಾಜೋ ಧಾರ್ಮಿಕ ನಿಬಂಧನೆಯನ್ನು ಅವರ ಮೇಲೆ ಹೇರುವಷ್ಟು ಸಮರ್ಥರಾಗಿದ್ದರು"[೩೮] ಈ ಬಗೆಯ ಸಮರ್ಥನೆ ಮತ್ತು ಮೇಲು ಜಾತಿಯ ಜನರ ಕಾಮುಕ ಭಾವನೆಗಳು ಮೌಢ್ಯತೆ, ಬಡತನದಿಂದ ನರಳುತ್ತಿರುವ ಕೆಳಜಾತಿಯ ಜನರು ಈ ಪದ್ಧತಿಯನ್ನು ಅನುಸರಿಸುವಂತೆ ಮಾಡಲಾಯಿತು. ಇದೊಂದು ಬಗೆಯಲ್ಲಿ ವೇಶ್ಯಾವಾಟಿಕೆ ಮಾಡಲು ನೀಡಿದ ಪರವಾನಿಗೆಯಾಯಿತು. ಇದರಿಂದಾಗಿ ಪ್ರಾಚೀನ ಕಾಲದಿಂದ ಇಂದಿನವರೆಗೂ ಕೆಳಜಾತಿಯ ಹೆಣ್ಣು ಮಕ್ಕಳು ಭೋಗದ ವಸ್ತುವಾಗಿ ವಿವಿಧ ರೀತಿಯಲ್ಲಿ ಲೈಂಗಿಕ ಶೋಷಣೆಗೆ ಒಳಗಾಗುತ್ತಿದ್ದಾರೆ.

**ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಬಸವಿ ಪದ್ಧತಿ ಆಚರಣೆ ಮತ್ತು ನಿವಾರಣೆ**

ದೇವದಾಸಿ ಪದ್ಧತಿಗೆ ಒಳಗಾಗಿರುವವರನ್ನು ಎರಡು ಬಗೆಯಲ್ಲಿ ವಿಂಗಡಣೆ ಮಾಡಬಹುದಾಗಿದೆ. ಒಂದು ನೃತ್ಯ ಮಾಡುವವರ ಗುಂಪು, ಮತ್ತೊಂದು ವೇಶ್ಯಾವಾಟಿಕೆ ಮಾಡುವ ಗುಂಪು. ಮೊದಲು ದೇವದಾಸಿ ಪದ್ಧತಿಯೆಂದು ಕರೆಯುತ್ತಿದ್ದು ನಂತರದಲ್ಲಿ ಬಸವಿಯರೆಂದು ಕರೆಯುವುದು ರೂಢಿಯಲ್ಲಿ ಬಂದಿದೆ. "ಬಸವಿಯರನ್ನು ಅರ್ಪಿಸುವ ಪದ್ಧತಿ ಸಾಮಾನ್ಯವಾಗಿ ಕೆಳೈಕ್ಯಾತರು, ಮಾದಿಗರು, ಡೊಂಬರು, ಪೊಡ್ಡರು, ಬೇಡರು, ಕುರುಬರು ಮತ್ತು ಗೊಲ್ಲರಿಗೆ ಸೇರಿತ್ತು. ಮೈಸೂರಿನ ಮನು ಕುಲ ಸಂಬಂಧ ಶಾಸ್ತ್ರದ ಪರಿವೀಕ್ಷಣೆಯ ಒಂದು ಕರಪತ್ರದಲ್ಲಿ ಜಾತಿ ಆಧಾರಿತ ಅರ್ಪಣೆಗಳನ್ನು ನೀಡಲಾಗಿದೆ."[೩೯] ಈ ಅಂಶವು ಮಾದಿಗರು 'ಬಸವಿ' ಪದ್ಧತಿಗೆ ಒಳಗಾಗಿರುವುದನ್ನು ಖಚಿತಪಡಿಸುತ್ತದೆ.

ಈ ಭಾಗಗಳಲ್ಲಿ ಬಸವಿಯರಲ್ಲದೆ, ಜೋಗಿ ಸಂಪ್ರದಾಯವು ಆಚರಣೆಯಲ್ಲಿದೆ. ಜಡೆ ಕಟ್ಟಿದವರು ದೇವರ ಹೆಸರಲ್ಲಿ ಜೋಗಿಗಳಾಗುವ ಪದ್ಧತಿ ಇದೆ. ಅದರಲ್ಲಿ ಹೆಣ್ಣು ಜೋಗಿಗಳನ್ನು 'ಜೋಗಮ್ಮ' ಎಂದು ಗಂಡು ಜೋಗಿಗಳನ್ನು 'ಜೋಗಪ್ಪ'ಗಳೆಂದು ಕರೆಯುತ್ತಾರೆ. ಈ ಬಗೆಯ ಪದ್ಧತಿಗಳು 'ಎಲ್ಲಮ್ಮ, ಅಥವಾ ರೇಣುಕೆ' ದೇವತೆಯ ಹೆಸರಲ್ಲಿ ಆಚರಣೆಗೆ ಬಂದಿದೆ. ಈ ಬಗೆಯ ಸ್ತ್ರೀ ಸಂಪ್ರದಾಯ ದೇವತೆಯ ಹೆಸರಲ್ಲಿ ದೇವಾಲಯ ಇರುವ ಸುತ್ತಮುತ್ತ ಪ್ರದೇಶಗಳಲ್ಲಿ ಬಸವಿ ಅಥವಾ ಜೋಗಿ ಸಂಪ್ರದಾಯಕ್ಕೆ ಒಳಗಾಗಿರುವುದು ಕಂಡುಬರುತ್ತದೆ. "ಬ್ರಿಟಿಷರ ಕಾಲದಲ್ಲಿ ಕನ್ನಡ ಮಾತನಾಡುವ ಹೆಚ್ಚು ಕಮ್ಮಿ ಎಲ್ಲಾ ಪ್ರದೇಶಗಳಲ್ಲಿ ಬಸವಿ ಪದ್ಧತಿ ಪ್ರಚಲಿತವಾಗಿತ್ತಾದರೂ ಜೋಗತಿ ಪದ್ಧತಿಯು ದಕ್ಷಿಣ ಮಹಾರಾಷ್ಟ್ರಕ್ಕೆ ಹೊಂದಿಕೊಂಡಂತೆ ಇರುವ ವಾಯುವ್ಯ ಕರ್ನಾಟಕದಲ್ಲಿ ಮಾತ್ರವೇ ಪ್ರಚಲಿತದಲ್ಲಿತ್ತು."[೪೦] ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ ಬಳ್ಳಾರಿ ಜಿಲ್ಲೆಯಲ್ಲಿ ಸ್ವಇಚ್ಛೆಯಿಂದಲೆ ಇಂತಹ ಪದ್ಧತಿಯನ್ನು ಅನುಸರಿಸಲು ಸರ್ಕಾರಕ್ಕೆ ಮನವಿ ಸಲ್ಲಿಸಿರುವುದನ್ನು ಥರಸ್ಟಾನ್ ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ ಕೃತಿಯಲ್ಲಿ ದಾಖಲಿಸಿದ್ದಾರೆ. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಬಸವಿ ಪದ್ಧತಿ ಇದ್ದುದನ್ನು ಮೇಲಿನ ಅಂಶಗಳು ಖಚಿತಪಡಿಸುತ್ತವೆ.

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ 'ಎಲ್ಲಮ್ಮ' ಸಂಪ್ರದಾಯದ ದೇವತೆಗಳು ನೆಲೆಸಿದ್ದು ಈ ಎರಡು ಜಿಲ್ಲೆಗಳಲ್ಲಿ ಬಸವಿ ಪದ್ಧತಿ ಬಹಳ ಹಿಂದಿನಿಂದಲೂ ಬೆಳೆದು ಬಂದಿದೆ. ಈ ಭಾಗಗಳಲ್ಲಿ ಈ ಪದ್ಧತಿಗೆ ಒಳಗಾಗಿರುವವರು ಹೆಚ್ಚಿನ ಪ್ರಮಾಣದಲ್ಲಿ ಮಾದಿಗರು ಮತ್ತು ನಾಯಕರು. ಬಳ್ಳಾರಿ ಮತ್ತು ಸಿರುಗುಪ್ಪ ತಾಲ್ಲೂಕುಗಳನ್ನೊಳಗೊಂಡಂತೆ ಇತರೆ ಭಾಗಗಳಲ್ಲಿ ನೆಲೆಸಿರುವ ದಲಿತ ಕ್ರೈಸ್ತರನ್ನು ಅಧ್ಯಯನ ಮಾಡಿದ ಗಾಡ್ವಿನ್ ಶಿರಿಯವರು 'ದಲಿತ ಕ್ರೈಸ್ತರು' ಕೃತಿಯಲ್ಲಿ ಈ ಕ್ಷೇತ್ರದಲ್ಲಿ ಸಾಮಾನ್ಯವಾಗಿ ಬಸವಿ ಸ್ತ್ರೀಯರು ಮಾದಿಗ ಮೂಲದವರೆಂದು ತಿಳಿಸುತ್ತಾರೆ.[೪೧] ಕೂಡ್ಲಿಗಿ ತಾಲ್ಲೂಕಿನಲ್ಲಿ ರೇಣುಕ ಎಲ್ಲಮ್ಮನಿಗೆ ನಡೆದುಕೊಳ್ಳುವ ಜೋಗತಿಯರು ಹೆಚ್ಚಾಗಿ ಕಾಣಸಿಗುತ್ತಾರೆ. ಚವುಟಗಿ ಮತ್ತು ಪೆಟ್ಲಿಗಿಯನ್ನು ಹೊತ್ತು ಪ್ರತಿ ಹಳ್ಳಿ ಪಟ್ಟಣದ ಮನೆಮನೆಗೂ ಹೋಗಿ 'ಉಧೋ ಉಧೋ' ಎಂದು ರೇಣುಕಾ ಮಹಾತ್ಮೆಯನ್ನು ತಿಳಿಸಿಕೊಡುತ್ತಾರೆ. ಬಹುತೇಕ ಊರಿಗೊಬ್ಬರು ಇಲ್ಲವೇ ಇಬ್ಬರಾದರೂ ಕನಿಷ್ಟ ಜೋಗತಿಯರು ಕಾಣಸಿಗುತ್ತಾರೆ[೪೨] ಈ ಅಂಶಗಳು ಮಾತ್ರವಲ್ಲದೇ ಅಧ್ಯಯನಕ್ಕೊಳಪಡಿಸಿದ ಎರಡು ಜಿಲ್ಲೆಗಳ ೪೨ ಹಳ್ಳಿಗಳಲ್ಲಿಯೂ ಹಿಂದೆ ಬಸವಿಯರು ಇದ್ದುದು ತಿಳಿದುಬಂದಿತು. ಅಂಥವರಲ್ಲಿ ಕೆಲವರು ಈಗಲೂ ಇದ್ದಾರೆ. ಇವರಲ್ಲದೆ ಇಂದಿಗೂ ಈ ಪದ್ಧತಿಯನ್ನು ಅನುಸರಿಸುತ್ತಿರುವ 'ಬಸವಿ'ಯರು ಮಾದಿಗ ಜನಾಂಗದಲ್ಲಿ ಅನೇಕ ಹಳ್ಳಿಗಳಲ್ಲಿ ಇರುವುದು ಕಂಡುಬಂದಿತು.

ಇಂತಹ ಪದ್ಧತಿಯನ್ನು ಹೋಗಲಾಡಿಸಲು ಸರ್ಕಾರ ಸ್ವಾತಂತ್ರ್ಯ ಪೂರ್ವದಿಂದಲೂ ಪ್ರಯತ್ನಿಸಿದೆ. ಈ ಸಂಬಂಧ ಅನೇಕ ಕಾನೂನುಗಳನ್ನು ಜಾರಿಗೊಳಿಸಿ ದೇವರ ಹೆಸರಲ್ಲಿ ಹೆಣ್ಣು ಮಕ್ಕಳನ್ನು

ಅರ್ಪಿಸುವುದು ಶಿಕ್ಷಾರ್ಹ ಅಪರಾಧವೆಂದು ತಿಳಿಸಿತು. ಸ್ವಾತಂತ್ರ್ಯ ನಂತರದಲ್ಲಿಯೂ ಕ್ರಮ ಕೈಗೊಂಡಿತು. ಆದರೂ ಈ ಪದ್ಧತಿಯನ್ನು ಹೋಗಲಾಡಿಸಲು ಸಾಧ್ಯವಾಗಲಿಲ್ಲ. ಜಾಯಿಂಟ್ ವುಮೆನ್ಸ್ ಪ್ರೊಗ್ರಾಂ ಸಂಸ್ಥೆಯು ಈ ಪದ್ಧತಿ ಆಚರಣೆ ಮಾಡುವ ಮಹಾರಾಷ್ಟ್ರ ಕರ್ನಾಟಕ ಗಡಿ ಭಾಗವನ್ನು ಪರಿವೀಕ್ಷಣೆ ನಡೆಸಿದಾಗ ಅಲ್ಲಿ ಸಾವಿರಾರು ಹುಡುಗಿಯರನ್ನು ದೇವತೆಗೆ ಅರ್ಪಿಸಲಾಗುತ್ತಿದೆಯೆಂದು ಸರ್ಕಾರಕ್ಕೆ ತನ್ನ ಸಂಶೋಧನ ವರದಿಯಲ್ಲಿ ತಿಳಿಸಿದೆ.[೪೩] ಇವರಲ್ಲದೆ ಅನೇಕ ಪ್ರಗತಿಪರ ಸಂಘಟನೆಗಳು ಪ್ರತಿಭಟಿಸಿವೆ. ದೇವರ ಹೆಸರಲ್ಲಿ ಹೆಣ್ಣು ಮಕ್ಕಳನ್ನು ಸಮರ್ಪಿಸುವುದನ್ನು ಪರಿಶಿಷ್ಟ ಜಾತಿಯ ಯುವಕರು ವ್ಯವಸ್ಥಿತ ಪ್ರತಿಭಟನೆಯನ್ನು ಮಾಡಿರುವ ನಿದರ್ಶನಗಳಿವೆ.[೪೪] ಈ ಬಗೆಯ ಪ್ರತಿಭಟನೆಗಳ ಪರಿಣಾಮವಾಗಿ ೧೯೮೨ ರಲ್ಲಿ ಕರ್ನಾಟಕ ರಾಜ್ಯ ಸರ್ಕಾರ ದೇವದಾಸಿ (ಸಮರ್ಪಣ ನಿಷೇಧ) ಕಾಯಿದೆಯನ್ನು ಜಾರಿಗೆ ತಂದಿತು. ಈ ಕಾನೂನಿನ ಪ್ರಕಾರ ಯಾವುದೇ ದೇವತೆಗೆ ದೇವಾಲಯಕ್ಕೆ ಮಹಿಳೆಯರನ್ನೂ, ಬಾಲಕಿಯರನ್ನು ಅರ್ಪಿಸುವುದು ನಿಷೇಧಗೊಂಡಿದೆ. ಯಾರಾದರೂ ಇಂತಹ ಆಚರಣೆಗೆ ನೇರವಾಗಿ ಇಲ್ಲವೇ ಪರೋಕ್ಷವಾಗಿ ನೆರವು ನೀಡಿದರೆ ಅಂಥವರಿಗೆ ರೂ.೨೦೦೦ ದಿಂದ ೫೦೦೦ ಗಳವರೆಗೆ ದಂಡ ಮತ್ತು ಸೆರೆಮನೆಗೆ ತಳ್ಳಲಾಗುತ್ತದೆ. ಈ ಕಾನೂನಿನಡಿಯಲ್ಲಿ ದೇವದಾಸಿಯರಿಗೆ ಪುನರ್ವಸತಿ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಈ ರೀತಿ ಕಾನೂನು ಜಾರಿಗೊಳಿಸಿದರೂ ಕರ್ನಾಟಕ ರಾಜ್ಯ ಸರ್ಕಾರದ ಸಮಾಜ ಕಲ್ಯಾಣ ಇಲಾಖೆಯ ಸಚಿವಾಲಯವು ೧೯೮೫ ರಲ್ಲಿ ನೀಡಿರುವ ದೇವದಾಸಿಯ ಜಿಲ್ಲಾವಾರು ಅಂಕಿ ಅಂಶಗಳನ್ನು ನೋಡಿದಾಗ ಅತ್ಯಂತ ಹೆಚ್ಚು ದೇವದಾಸಿಯರನ್ನು ಹೊಂದಿರುವ ಜಿಲ್ಲೆಗಳಲ್ಲಿ ಬೆಳಗಾಂ ಮತ್ತು ಬಿಜಾಪುರಗಳು ಮೊದಲ ಮತ್ತು ಎರಡನೆ ಸ್ಥಾನದಲ್ಲಿದ್ದರೆ, ಮೂರನೆ ಸ್ಥಾನದಲ್ಲಿ ಬಳ್ಳಾರಿ ಜಿಲ್ಲೆಯಿದೆ.[೪೫] ಈ ಇಲಾಖೆ ಬಳ್ಳಾರಿ ಜಿಲ್ಲೆಯಲ್ಲಿರುವ ದೇವದಾಸಿಯರ ಸಂಖ್ಯೆ ೬೫೨ ಎಂದು ತಿಳಿಸುತ್ತದೆ. ಇದು ಕೇವಲ ಮೇಲು ನೋಟಕ್ಕೆ ಇಲ್ಲವೇ ಅಂದಾಜು ಸಂಖ್ಯೆ ವಿನಃ ವಾಸ್ತವವಲ್ಲ. ಏಕೆಂದರೆ ಈ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಶಿಶು ಅಭಿವೃದ್ಧಿ ಯೋಜನ ಕೇಂದ್ರದಲ್ಲಿ ೨೦೦೦-೦೧ ನೇ ಸಾಲಿನ ದೇವದಾಸಿಯರ ದೃಢೀಕರಣ ಪತ್ರ ನೀಡುವ ದಾಖಲೆಯ ಪುಸ್ತಕದಲ್ಲಿ ಈ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ದಾಖಲು ಮಾಡಿರುವ ದೇವದಾಸಿಯರ ಸಂಖ್ಯೆ ೯೫೦ ಎಂದು ತಿಳಿಸುತ್ತದೆ. ಇವುಗಳಲ್ಲಿ ೪೨೦ಕ್ಕೂ ಹೆಚ್ಚು ಮಾದಿಗ ಜನಾಂಗಕ್ಕೆ ಸೇರಿದ ಹೆಣ್ಣು ಮಕ್ಕಳು ಇದ್ದಾರೆ. ಒಂದು ತಾಲ್ಲೂಕಿನ ಸಂಖ್ಯೆಯೇ ಇಷ್ಟಾದರೆ ಇಡೀ ಜಿಲ್ಲೆಯಲ್ಲಿ ಎಷ್ಟಿರಬಹುದೆಂದು ಊಹಿಸಿಕೊಂಡರೆ ಭಯವಾಗುತ್ತದೆ.

ಅಧ್ಯಯನಕ್ಕೊಳಪಡಿಸಿದ ೪೨ ಗ್ರಾಮಗಳಲ್ಲಿ ಹಿಂದೆ ಬಸವಿ ಪದ್ಧತಿಗೆ ಒಳಗಾಗಿದ್ದ ಅನೇಕ ಕುಟುಂಬಗಳು ಪ್ರತಿಯೊಂದು ಗ್ರಾಮದಲ್ಲಿಯೂ ಇದ್ದರೆಂದು ತಿಳಿದುಬಂದಿದೆ. ಈ ಪದ್ಧತಿಗೆ ಒಳಗಾದ ಅನೇಕರು ಸಾಕ್ಷಿಯಾಗಿ ಇನ್ನೂ ಜೀವಂತ ಬದುಕಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ಬೀಸನಹಳ್ಳಿ ೩, ಹೊಳಲ್ಕೆರೆ ತಾಲ್ಲೂಕಿನ ಟಿ.ನೂಲೇನೂರು ಗ್ರಾಮದಲ್ಲಿ

೧೦, ಜನ ಬಸವಿಯರು ಇದ್ದರೆ, ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲ್ಲೂಕಿನ ಯರಕಲ್ಲು ೬, ನಿಟ್ಟೂರು ೫, ಇಬ್ರಾಹಿಂಪುರ ೫, ಬಳ್ಳಾರಿ ತಾಲ್ಲೂಕಿನ ಸಂಗನಕಲ್ಲು ೧೦, ಸಿರವಾರ ೧೦, ಕಪ್ಪಗಲ್ಲು ಗ್ರಾಮದಲ್ಲಿ ೩೦, ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿ ೪, ನಾಗೇನಹಳ್ಳಿ ೫, ಕಮಲಾಪುರ ೪, ಕೂಡ್ಲಿಗಿ ತಾಲ್ಲೂಕಿನ ಕುಂಬಿಹಳ್ಳಿ ೩, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ದಶ್ಮಾಪುರದ ೨, ಸಂಡೂರಿನ ಲಿಂಗದಹಳ್ಳಿಯಲ್ಲಿ ೨, ಹೂವಿನಹಡಗಲಿ ತಾಲ್ಲೂಕಿನ ಹರವಿಬಸಾಪುರದಲ್ಲಿ ೩ ಜನ ಬಸವಿಯರು ಇರುವುದು ಕಂಡು ಬಂತು. ಈಗಲೂ ಅನೇಕ ಕಡೆ ಹೊಸದಾಗಿ ಗುಪ್ತವಾಗಿ ಹೆಣ್ಣುಮಕ್ಕಳನ್ನು 'ಬಸವಿ'ಯಾಗಿ ಬಿಡುವುದು ಮುಂದುವರಿದಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಈ ಪದ್ಧತಿ ಅಪರೂಪವಾಗಿದ್ದು, ಬಳ್ಳಾರಿ ಜಿಲ್ಲೆಯಲ್ಲಿ ಮಾತ್ರ ಮುಂದುವರಿದಿರುವುದು ಅನೇಕ ಗ್ರಾಮಗಳಲ್ಲಿ ನೋಡಬಹುದಾಗಿದೆ. ಅಧ್ಯಯನಕ್ಕೊಳಪಡಿಸಿದ ಗ್ರಾಮಗಳಲ್ಲಿ ಬಳ್ಳಾರಿ ತಾಲ್ಲೂಕಿನ ಸಿರವಾರದಲ್ಲಿ ೨, ಕಪ್ಪಗಲ್ಲಿನಲ್ಲಿ ೬ ಜನ ಕಂಡುಬರುತ್ತಾರೆ. ಇಂದು ಅದೊಂದು ಕಾನೂನು ಅಪರಾಧವಾಗಿರುವ ಕಾರಣ ಗುಪ್ತವಾಗಿ ನಡೆಯುವುದು ಈ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

### ೩.೫ ಮತಾಂತರ ಪ್ರಕ್ರಿಯೆಯಲ್ಲಿ ಮಾದಿಗರ ಪಾತ್ರ

ಮತಾಂತರವು ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದ್ದು ತಾನು ಈ ಮೊದಲು ಅನುಸರಿಸುತ್ತಿದ್ದ ಧರ್ಮವನ್ನು ತ್ಯಜಿಸಿ ಬೇರೊಂದು ಧರ್ಮವನ್ನು ಒಪ್ಪಿಕೊಂಡು ಅದರ ಆಚಾರ-ವಿಚಾರಗಳನ್ನು ಅನುಸರಿಸುವ ಪ್ರಕ್ರಿಯೆಯಾಗಿದೆ. ಭಾರತದಲ್ಲಿ ಮತಾಂತರ ಪ್ರಕ್ರಿಯೆಯು ಅಸ್ಪೃಶ್ಯರ ಮಟ್ಟಿಗೆ ಹೇಳುವುದಾದರೆ ಇಂಡಿಯಾದಲ್ಲಿ ಜೀವಿಸಲು ಹಾಗೂ ಹಿಂದುಗಳ ದೌರ್ಜನ್ಯಗಳಿಂದ ತಮ್ಮ ಜೀವ ರಕ್ಷಿಸಿಕೊಳ್ಳಲು ಮತಾಂತರವೊಂದು ಅನಿವಾರ್ಯ[೬೮] ಎಂದು ಅಂಬೇಡ್ಕರ್ ಅಭಿಪ್ರಾಯ ಪಡುತ್ತಾರೆ. ಅಸಮಾನತೆಯನ್ನು ಪ್ರತಿಪಾದಿಸುವ ವೈದಿಕ ಧರ್ಮ ಕೆಳಜಾತಿಗಳು ವಿವಿಧ ಬಗೆಯ ಶೋಷಣೆಗೆ ಒಳಗಾಗುವಂತೆ ಮಾಡಿದೆ. ಅವುಗಳಿಂದ ವಿಮೋಚನೆ ಹೊಂದಲು ಮತಾಂತರ ಮಾರ್ಗವನ್ನು ಮಾದಿಗರು ಮತ್ತು ಹೊಲೆಯರು ಅನುಸರಿಸಿದ್ದಾರೆ. ಅದು ಈಗಲೂ ಮುಂದುವರಿದಿದೆ. ಈ ಬಗೆಯ ಮತಾಂತರವು ಭಾರತ ದೇಶದಲ್ಲಿ ಹಲವಾರು ಧರ್ಮದ ಜನಸಂಖ್ಯಾ ಬೆಳವಣಿಗೆಗೆ ಸಹಕಾರಿಯಾಗಿದೆ. ಪ್ರಾಚೀನ ಕಾಲದಿಂದಲೂ ಮತಾಂತರ ಪ್ರಕ್ರಿಯೆಯಲ್ಲಿ ಅಸ್ಪೃಶ್ಯರಾದ ಮಾದಿಗರ ಮತ್ತು ಹೊಲೆಯರ ಪಾತ್ರ ಪ್ರಮುಖವಾದುದು. ಬೌದ್ಧ, ಇಸ್ಲಾಂ, ಕ್ರೈಸ್ತ ಮುಂತಾದ ಧರ್ಮಗಳ ಬೆಳವಣಿಗೆಯಲ್ಲಿ ಈ ಬಗೆಯ ಮತಾಂತರವು ಪ್ರಮುಖವಾದುದಾಗಿದೆ. ಕರ್ನಾಟಕ ಮಟ್ಟಿಗೆ ಹೇಳುವುದಾದರೆ ಇನ್ನಿತರೆ ಧರ್ಮಕ್ಕಿಂತಲೂ ಕ್ರೈಸ್ತ ಧರ್ಮವು ಹೆಚ್ಚು ಪ್ರಚಲಿತದಲ್ಲಿದೆ. ಈ ಕಾರಣದಿಂದಾಗಿಯೇ ಇಂದು ಮಾದಿಗರನೇಕರು ರಾಜ್ಯದಾದ್ಯಂತ ಈ ಧರ್ಮಕ್ಕೆ ಮತಾಂತರಗೊಂಡಿರುವುದನ್ನು ಕಾಣಬಹುದು. ೧೯೭೩ರ ಕ್ರೈಸ್ತ ಸಭಾ ಸಂಖ್ಯೆಗಳ ಪಟ್ಟಿಯ ವಿವರಗಳ ಪ್ರಕಾರ ಕರ್ನಾಟಕದಲ್ಲಿ ೯.೭೮,೬೬೩ರ ಕ್ರೈಸ್ತರಿದ್ದಾರೆ. ಸಿ.ಎಸ್.ಐ ಮತ್ತು ಇತರ ಪ್ರಾಟೆಸ್ಟೆಂಟ್ ಕ್ರೈಸ್ತರು ೩೦,೦೦೦೦ ಕ್ಕೂ ಮೇಲಿದ್ದಾರೆ.

ಕ್ಯಾಥೋಲಿಕ್ ಕ್ರೈಸ್ತರು ೬,೦೦,೦೦೦ ಕ್ಕೂ ಮೀರಿದ್ದಾರೆ. ಇವರಲ್ಲಿ ಶೇ ೪೦ರಷ್ಟು ಪರಿಶಿಷ್ಟ ವರ್ಗದವರು ಎಂದರೆ ಆದಿ ಕರ್ನಾಟಕ ಹೊಲೆಯ ಮತ್ತು ಮಾದಿಗರಾಗಿದ್ದಾರೆ.[೪೭] ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ನೆಲೆಸಿರುವ ಮಾದಿಗರು ಮತಾಂತರ ಪ್ರಕ್ರಿಯೆಯಲ್ಲಿ ಯಾವ ರೀತಿಯ ಪಾತ್ರವಹಿಸಿದ್ದಾರೆಂಬುದನ್ನು ಇಲ್ಲಿ ವಿವರಿಸಲಾಗಿದೆ.

### ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಮತಾಂತರ

ಕರ್ನಾಟಕದಲ್ಲಿ ಕ್ರೈಸ್ತ ಮಿಷನರಿಗಳು ತಮ್ಮ ಸಂಸ್ಥೆಗಳವತಿಯಿಂದ ಶಾಲಾ ಕಾಲೇಜು, ಆಸ್ಪತ್ರೆ, ಅನಾಥಾಶ್ರಮ ಮುಂತಾದ ಸೇವಾಸಂಸ್ಥೆಗಳನ್ನು ವಿವಿಧ ಭಾಗಗಳಲ್ಲಿ ತೆರೆಯುವುದರ ಮೂಲಕ ಕ್ರೈಸ್ತ ಧರ್ಮದ ಬಗ್ಗೆ ಒಳ್ಳೆಯ ಭಾವನೆ ಮೂಡಿಸಿದ್ದರು. ಜೊತೆಗೆ ಜಾತಿ ಪದ್ಧತಿಯ ಪರಿಣಾಮವಾಗಿ ಮೇಲುಜಾತಿಗಳಿಂದ ವಿವಿಧ ರೀತಿಯ ಶೋಷಣೆಗೆ ಒಳಗಾಗಿ ನಿಕೃಷ್ಟವಾಗಿ ಬದುಕುತ್ತಿದ್ದ ಮಾದಿಗರಿಗೆ ಕ್ರೈಸ್ತ ಧರ್ಮ ಗಮನ ಸೆಳೆದಿರುವುದು ಸಹಜವಾಗಿದೆ. ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡಿರುವ ಮಾದಿಗರು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರ ಪಟ್ಟಣ ಪ್ರದೇಶದಲ್ಲಿ ಪ್ರಮುಖವಾಗಿ ನೆಲೆಸಿದ್ದಾರೆ. ಬಳ್ಳಾರಿ ಜಿಲ್ಲೆಯ ಅನೇಕ ಗ್ರಾಮೀಣ ಪ್ರದೇಶಗಳಲ್ಲಿ ಕ್ರೈಸ್ತ ಧರ್ಮದ ಪ್ರಭಾವವಿದ್ದು ಈ ಭಾಗಗಳಲ್ಲಿ ಮಾದಿಗರು ಮತಾಂತರಗೊಂಡಿರುವುದು ಕಂಡುಬರುತ್ತದೆ. ಹೀಗಾಗಿ ಚಿತ್ರದುರ್ಗ ಜಿಲ್ಲೆಗಿಂತ ಬಳ್ಳಾರಿ ಜಿಲ್ಲೆಯಲ್ಲಿ ಕ್ರೈಸ್ತ ಧರ್ಮದ ಪ್ರಭಾವ ಹೆಚ್ಚಿದ್ದು ಮಾದಿಗರು ಹೆಚ್ಚಿನ ಸಂಖ್ಯೆಯಲ್ಲಿ ಮತಾಂತರಗೊಂಡಿದ್ದಾರೆಂದು ಹೇಳಬಹುದಾಗಿದೆ.

### ಸ್ವಾತಂತ್ರ್ಯ ಪೂರ್ವ ಮತ್ತು ನಂತರದ ಮತಾಂತರ

ಕ್ರೈಸ್ತ ಮಿಷನರಿಗಳ ಸೇವೆ ಬಳ್ಳಾರಿ ಮತ್ತು ಚಿತ್ರದುರ್ಗ ಭಾಗಗಳಲ್ಲಿ ೧೯ನೇ ಶತಮಾನದ ಆರಂಭದಿಂದಲೇ ಪ್ರಾರಂಭಗೊಂಡಿದೆ. ಮೊದಲು ಕ್ರೈಸ್ತ ಮಿಷನರಿಗಳು ಮತಾಂತರಕ್ಕೆ ಹೆಚ್ಚು ಆಸಕ್ತಿ ನೀಡಿರಲಿಲ್ಲ. ಆನಂತರದಲ್ಲಿ ಪ್ರಾಮುಖ್ಯತೆ ನೀಡಿದ್ದಾರೆ. ಬಳ್ಳಾರಿ ವಲಯದಲ್ಲಿ ಲಂಡನ್ ಮಿಷನರಿ ಸೊಸೈಟಿಯು ೧೮೧೦ರಲ್ಲಿ ತನ್ನ ಸೇವಾ ಕಾರ್ಯವನ್ನು ಆರಂಭಿಸಿತು.[೪೮] ವೆಸ್ಲಿಯನ್ ಮೆಥೋಡಿಸ್ಟ್ ಮಿಷನ್‌ರವರು ೧೮೭೬-೭೮ರ ಕ್ಷಾಮದಲ್ಲಿ ತುತ್ತಾದ ಕೆಳವರ್ಗದ ಜನರ ಮಧ್ಯೆ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ದಕ್ಷಿಣ ಭಾರತದಲ್ಲಿ ಬಹುಮಂದಿ ದಲಿತರು ಭಾರತೀಯ ಕ್ರೈಸ್ತ ಸಭೆಗೆ ಸೇರಿದರು. ಇವುಗಳಲ್ಲಿ ಮುಖ್ಯ ಕೇಂದ್ರಗಳು ಕೋಲಾರ, ರಾಯಚೂರು, ಬೆಳಗಾಂ, ಯಾದಗಿರಿ, ಬೀದರ್ ಚಿತ್ರದುರ್ಗ, ಹಾಸನ ಮುಖ್ಯವಾಗಿವೆ.[೪೯] ಚಿತ್ರದುರ್ಗದಲ್ಲಿಯೂ ಕ್ರೈಸ್ತ ಮಿಷನರಿ ಅಸ್ತಿತ್ವದಲ್ಲಿರುವುದು ತಿಳಿದುಬರುತ್ತದೆ. ಕ್ರೈಸ್ತ ಮಿಷನರಿಗಳು ಸೇವಾ ದೃಷ್ಟಿಯಿಂದ ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ತಮ್ಮ ಶಾಖೆಯನ್ನು ತೆರೆದಿರುವುದಲ್ಲದೆ. ಕ್ಯಾಥೊಲಿಕ್ ಮತ್ತು ಪ್ರಾಟಸ್ಟಾಂಟ್ ಮಿಷನರಿಗಳು ೧೯೧೪ರಲ್ಲಿ ಹಾಸನವನ್ನು ಮುಖ್ಯ ಕೇಂದ್ರವಾಗಿಟ್ಟುಕೊಂಡು ದಕ್ಷಿಣದ ಕನಕಪುರದಿಂದ ಬಳ್ಳಾರಿಯ ಸಂಡೂರಿನವರೆಗೂ ತಮ್ಮ ಸೇವಾ ಕ್ಷೇತ್ರಗಳನ್ನು ವಿಸ್ತರಿಸಿರುವುದು.[೫೦] ಕಂಡುಬರುತ್ತದೆ.

ಕರ್ನಾಟಕದ ಬಳ್ಳಾರಿ ವಲಯದಲ್ಲಿ ಲಂಡನ್ ಮಿಷನರಿ ಸೊಸೈಟಿ ಅತ್ಯಂತ ಉತ್ತಮ ಸಂಸ್ಥೆಯೆಂದು ಹೆಸರು ಪಡೆದಿದ್ದು, ಇದು 'ಬಳ್ಳಾರಿ ಮಿಷನ್' ಎಂದೇ ಖ್ಯಾತಿಯಾಗಿತ್ತು. ಇವರು ಶಾಲೆ ಮತ್ತು ಅನಾಥಶ್ರಮಗಳನ್ನು ಆರಂಭಿಸಿದರು. ಬಡ ಜನರು ಸಾಲದ ಬೋಗಿನಲ್ಲಿ ಸಿಕ್ಕಿ ಬೀಳುವುದನ್ನು ತಪ್ಪಿಸಲು ಲಂಡನ್ ಮಿಷನರಿ ಸೊಸೈಟಿಯು ಸಹಕಾರಿ ಆರ್ಥಿಕ ಸಂಸ್ಥೆಯೊಂದನ್ನು ತೆರೆದರು.[೫೧] ಇದು ಬಡ ಜನರಿಗೆ ಆರ್ಥಿಕ ಸಹಾಯ ಒದಗಿಸಿಕೊಟ್ಟಿತು. ಈ ಮಿಷಿನರಿಯು ಜನರನ್ನು ಮತಾಂತರಗೊಳಿಸುವುದರಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರಿಸಿರಲಿಲ್ಲ. ಮತಾಂತರಗೊಳ್ಳುತ್ತಿದ್ದವರ ಸಂಖ್ಯೆಯು ಕಡಿಮೆಯಿತ್ತು. ಮೇಲ್ಜಾತಿಯವರಿಂದ ಅಗೊಮ್ಮೆ, ಅಲ್ಲಲ್ಲಿ ಮತಾಂತರವಾಗುತ್ತಿತ್ತೆ ವಿನಃ ಸಾಮೂಹಿಕ ಮತಾಂತರದ ಪ್ರಶ್ನೆಯೇ ಇರುತ್ತಿರಲಿಲ್ಲ.[೫೨] ಇದು ಮೊದಲು ಮೇಲ್ಜಾತಿಯವರಿಗೆ ಮತಾಂತರಕ್ಕೆ ಅವಕಾಶ ಮಾಡಿಕೊಟ್ಟಿತ್ತೆಂದು ತಿಳಿಸುತ್ತದೆ. ಹೀಗೆ ಮೊದಲು ಮತಾಂತರ ಕೇವಲ ಮೇಲ್ಜಾತಿಯವರಲ್ಲಿದ್ದುದು ಲೆಸ್ಟರ್ ಮೂಲಕ ದಲಿತರ ಬಳಿಗೂ ಬಂತು. ಬಳ್ಳಾರಿ ಜಿಲ್ಲೆಯ ಪಶ್ಚಿಮ ತಾಲ್ಲೂಕುಗಳ ಮೇಲ್ಜಾತಿಯವರಿಗೆ ಮಾತ್ರವಿದ್ದ ಮತಾಂತರ ಈಗ ಈಶಾನ್ಯ ಭಾಗದಲ್ಲಿರುವ ಕಾವು ತಾಲಮ್ ನ(ಆಂಧ್ರ) ಅನೇಕ ಹಳ್ಳಿಗಳಲ್ಲಿ ಪ್ರಾರಂಭವಾಯಿತು. ಕ್ರಮೇಣ ದಲಿತರು ಗುಂಪು ಗುಂಪಾಗಿ ಕ್ರೈಸ್ತರಾಗಲು ತೊಡಗಿದರು. ಹೀಗಾಗಿ ಅನೇಕ ದಲಿತ ಕ್ರೈಸ್ತ ಸಭೆಗಳು ಅಲ್ಲಲ್ಲಿ ತಲೆ ಎತ್ತಿದವು. ಇವುಗಳಲ್ಲಿ ಮುಖ್ಯವಾದವು : ಬೊಮ್ಮಲಾಪುರ(೧೯೨೫), ಹಚ್ಚೋಳ್ಳಿ(೧೯೨೯), ಮೀನಹಳ್ಳಿ(೧೯೩೮), ಸಂಗನಕಲ್ಲು(೧೯೫೧), ಕುಡುವರ ಹಾಳ್ (೧೯೫೨), ಹೀಗೆ ಎರಡನೆ ದಶಕದಿಂದ ೧೯೫೦ರವರೆಗೆ ಬಳ್ಳಾರಿ ವಲಯದಲ್ಲಿ ದಲಿತರ ಮತಾಂತರ ಅಧಿಕವಾಗಿ, ಕ್ರೈಸ್ತ ಸಭೆಗಳು ಬೆಳಯ ತೊಡಗಿದವು.[೫೩] ಇದಲ್ಲದೇ ಎಲ್.ಎಂ.ಎಸ್ ಸಂಸ್ಥೆಯು ಮುಖ್ಯವಾಗಿ ಬಳ್ಳಾರಿ, ಆದೋನಿ, ಹಾಸನ, ಬೆಂಗಳೂರು ಮತ್ತು ಹಳೆ ಮೈಸೂರಿನ ಕೆಲವು ಭಾಗಗಳಲ್ಲಿ ಉನ್ನತವಾದ ಸೇವೆಯನ್ನು ಸಲ್ಲಿಸಿರುತ್ತದೆ. ಶೋಷಣೆಗೆ ಗುರಿಯಾಗಿದ್ದ ದಲಿತರಲ್ಲಿ ಅನೇಕರು ಜೀತದಾಳುಗಳಾಗಿದ್ದು ರೆವರೆಂಡ್ ಸಾಡೆ ಮತ್ತು ಇತರೆ ಮಿಷನರಿಗಳು ಅನೇಕ ಜೀತದಾಳುಗಳನ್ನು ಬಿಡಿಸಿ ಕ್ರೈಸ್ತ ಸಭೆಗೆ ಸೇರಿಸಿಕೊಂಡರು.[೫೪] ಈ ರೀತಿ ಲಂಡನ್ ಮಿಷನರಿ ಸೊಸೈಟಿಯು ವಿವಿಧ ಬಗೆಯ ಸೇವೆಗಳ ಮತಾಂತರ ಗೊಳಿಸುವಲ್ಲಿ ಪ್ರೇರಣೆ ಮಾಡಿ ಹೆಚ್ಚು ಹೆಚ್ಚು ಜನ ಮತಾಂತರಗೊಳ್ಳಲು ಕಾರಣವಾಗಿದೆ. ಈ ಸಂದರ್ಭದಲ್ಲಿ ಈ ಭಾಗದ ಮಾದಿಗರನೇಕರು ಮತಾಂತರ ಗೊಂಡಿರುವರು.

ಸ್ವಾತಂತ್ರ್ಯ ಪೂರ್ವದಿಂದ ಆರಂಭಿಸಿದ ಮತಾಂತರ ಪ್ರಕ್ರಿಯೆ ಸ್ವಾತಂತ್ರ್ಯನಂತರದಿಂದ ಇಂದಿನವರೆಗೆ ಮುಂದುವರಿಯುತ್ತಿರುವುದು ಕಂಡುಬರುತ್ತದೆ. ೧೯೭೧ರಲ್ಲಿ ಮೈಸೂರು ಸಭಾ ಪ್ರಾಂತವು ಮೂರು ಪ್ರತ್ಯೇಕ ಸಭಾ ಪ್ರಾಂತ್ಯಗಳಾಗಿ ವಿಭಜನೆ ಹೊಂದಿತು. ಈ ವಿಭಜನೆಯಾದಾಗ ಬಳ್ಳಾರಿ ವಲಯವು ತನ್ನೆಲ್ಲ ಕ್ರೈಸ್ತ ದಲಿತ ಸಭೆಗಳೊಂದಿಗೆ ಕರ್ನಾಟಕ ಉತ್ತರ ಸಭಾ ಪ್ರಾಂತ್ಯದ ಒಂದು ಭಾಗವಾಯಿತು. ಧಾರವಾಡ, ಬಿಜಾಪುರ, ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ ಈ ಐದು ಜಿಲ್ಲೆಗಳಲ್ಲಿ ಹರಡಿರುವ

ಕರ್ನಾಟಕ ಉತ್ತರ ಸಭಾಪ್ರಾಂತ್ಯ[೫೫]ವು ಕಾರ್ಯನಿರ್ವಹಿಸುತ್ತದೆ. ಇದರಿಂದಾಗಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಅದರ ಸೇವೆ, ಸಹಾಯ ಮುಂತಾದ ಅಂಶಗಳು ಮತಾಂತರ ಹೊಂದಲು ಪ್ರೇರೇಪಿಸಿದವು. ಇದರಿಂದಾಗಿ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡಿರುವ ಮಾದಿಗರ ಕುಟುಂಬಗಳಿರುವುದು ಎರಡು ಜಿಲ್ಲೆಗಳ ಎಲ್ಲಾ ತಾಲ್ಲೂಕುಗಳಲ್ಲಿ ಕಂಡುಬರುತ್ತವೆ. ಚಿತ್ರದುರ್ಗ ಜಿಲ್ಲೆಗಿಂತಲೂ ಬಳ್ಳಾರಿ ಜಿಲ್ಲೆಯಲ್ಲಿ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡಿರುವ ಮಾದಿಗರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಈ ಭಾಗದಲ್ಲಿ ಗ್ರಾಮೀಣ ಪ್ರದೇಶದಲ್ಲಿಯೂ ಮತಾಂತರಗೊಂಡಿರುವ ಮಾದಿಗರ ಕುಟುಂಬಗಳು ಇವೆ. ಅಧ್ಯಯನಕ್ಕೊಳಪಡಿಸಿದ ಕೆಲವು ಗ್ರಾಮಗಳಲ್ಲಿ ಉದಾ: ಬಳ್ಳಾರಿ ತಾಲ್ಲೂಕಿನ ಸಿರವಾರದಲ್ಲಿ ೧೫ ಕುಟುಂಬಗಳೂ, ಕಪ್ಪಗಲ್ಲುನಲ್ಲಿ ೨೦ ಕುಟುಂಬಗಳು, ಸಂಗನಕಲ್ಲುನಲ್ಲಿ ೨೫ ಕುಟುಂಬಗಳು, ಕಂಡುಬಂದವು. ಹೊಸಪೇಟೆ ನಗರದ ಇಂದಿರಾ ನಗರವೊಂದರಲ್ಲೆ ನೂರಕ್ಕೂ ಹೆಚ್ಚು ಮಾದಿಗರ ಕುಟುಂಬಗಳು ಮತಾಂತರಗೊಂಡಿದ್ದಾರೆ. ಇದೇ ತಾಲ್ಲೂಕಿನ ಕಮಲಾಪುರದಲ್ಲಿ ೧೫ ಕುಟುಂಬಗಳಿವೆ. ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ನಗರದಲ್ಲಿ ಮತಾಂತರಗೊಂಡ ೩೦ಕ್ಕೂ ಹೆಚ್ಚು ಕುಟುಂಬಗಳು ಕಾಮನಬಾವಿ, ಮತ್ತು ರಾಜೇಂದ್ರ ನಗರಗಳಲ್ಲಿ ವಾಸಿಸುತ್ತಿರುವುದು ಕಂಡುಬಂದಿದೆ. ಹೀಗೆ ಈ ಎರಡು ಜಿಲ್ಲೆಗಳ ಅನೇಕ ಭಾಗಗಳಲ್ಲಿ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿರುವ ಮಾದಿಗರ ಕುಟುಂಬಗಳಿರುವುದನ್ನು ಕಾಣಬಹುದಾಗಿದೆ. ಈ ಭಾಗಗಳಲ್ಲಿ ಮತಾಂತರಗೊಂಡವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಾದಿಗರೆ ಆಗಿದ್ದಾರೆ. ಬಳ್ಳಾರಿ ಜಿಲ್ಲೆಯ ದಲಿತ ಕ್ರೈಸ್ತರ ಬಗ್ಗೆ ಅಧ್ಯಯನ ಮಾಡಿರುವ ಗಾಡ್ವಿನ್ ಶಿರಿ ಅವರು ೪೪ ಹಳ್ಳಿಗಳಲ್ಲಿ ದಲಿತ ಕ್ರೈಸ್ತರ ಕುಟುಂಬಗಳನ್ನು ಅಧ್ಯಯನ ಮಾಡಿದಾಗ ಅವುಗಳಲ್ಲಿ ೧೫೦೦, ಕ್ರೈಸ್ತ ಕುಟುಂಬಗಳಲ್ಲಿ ಕೇವಲ ೧೪ ಮಾದಿಗೇತರ ಕುಟುಂಬಗಳಾಗಿವೆ.[೫೬] ಉಳಿದೆಲ್ಲಾ ಕುಟುಂಬಗಳು ಮಾದಿಗರವೇ ಆಗಿವೆ. ಇವುಗಳಲ್ಲಿ ಬಳ್ಳಾರಿ ಮತ್ತು ಸಿರುಗುಪ್ಪ ತಾಲ್ಲೂಕಿನಲ್ಲಿ ವಿವಿಧ ಭಾಗದಲ್ಲಿ ನೆಲೆಸಿರುವ ಮತಾಂತರಗೊಂಡ ಮಾದಿಗ ಕುಟುಂಬಗಳು ಇವೆ. ಈ ಹಿನ್ನೆಲೆಯಲ್ಲಿ ಈ ಭಾಗದಲ್ಲಿ ಕ್ರೈಸ್ತ ಧರ್ಮಕ್ಕೆ ಮತಾಂತರವಾಗುತ್ತಿರುವವರಲ್ಲಿ ಹೆಚ್ಚಿನ ಸಂಖ್ಯೆ ಮಾದಿಗರದೆಂದು ನಿಖರವಾಗಿ ಹೇಳಬಹುದಾಗಿದೆ.

ಈ ರೀತಿ ಕ್ರೈಸ್ತ ಮಿಷನರಿ ಸೇವೆಗಳು ಕ್ರೈಸ್ತ ಮಿಷನರಿ ಮತ್ತು ಧರ್ಮದ ಬಗ್ಗೆ ಗೌರವ ಮೂಡಿಸಿದ್ದರೆ ಸಾಮಾಜಿಕ ವ್ಯವಸ್ಥೆಯಲ್ಲಿ ಮೇಲು ಜಾತಿಗಳು ಮಾದಿಗರನ್ನು ಕೀಳಾಗಿ ನಡೆಸಿಕೊಳ್ಳುವ ಅಂಶ ಕ್ರೈಸ್ತ ಧರ್ಮಕ್ಕೆ ಮತಾಂತಗೊಳ್ಳಲು ಪ್ರೇರೇಪಿಸಿವೆ. ಮತಾಂತರಗೊಂಡ ಮಾದಿಗರನ್ನು ಸಂದರ್ಶಿಸಿದಾಗ ಸ್ವಇಚ್ಛೆಯಿಂದ ಮತಾಂತರಗೊಂಡಿದ್ದೇವೆಂದು ತಿಳಿಸಿದರು. ಧಾರ್ಮಿಕ ವಿಷಯದಲ್ಲಿ ಮಾತ್ರವೇ ಇವರು ಕ್ರೈಸ್ತರಾಗಿದ್ದು ಕೆಲವೊಂದು ಸರ್ಕಾರಿ ಸೌಲಭ್ಯಗಳ ಬಳಕೆಗೆ ಇವರು ನೀಡುವುದು ತಮ್ಮ ಮೂಲ ಜಾತಿಯ ಪತ್ರವನ್ನೇ ಎಂಬುದು ತಿಳಿದುಬಂದಿದೆ. ಹಾಗೆಯೇ ಮದುವೆಯಂತಹ

ಕಾರ್ಯಗಳನ್ನು ಸಹ ದಲಿತ ಕ್ರೈಸ್ತ ಇಲ್ಲವೇ ಮಾದಿಗರ ಕುಟುಂಬಗಳಲ್ಲಿಯೇ ನಡೆಸುತ್ತಾರೆ. ಆದರೆ ಎಲ್ಲಾ ಚರ್ಚ್‌ಗಳಲ್ಲಿ ಇವರಿಗೆ ಪ್ರಾರ್ಥನೆ ಮಾಡಲು ಅವಕಾಶ ಇಲ್ಲ. ಇವರದೇ ಆದಂತಹ 'ಮತಾಂತರಗೊಂಡ ಕ್ರಿಶ್ಚಿಯನ್ ಚರ್ಚ್‌ಗೆ ಮಾತ್ರ ಹೋಗುತ್ತಾರೆ.

## ೩.೬ ಮಾದಿಗರು ಇತರ ಜಾತಿಗಳೊಂದಿಗೆ ಹೊಂದಿರುವ ಸಾಮಾಜಿಕ ಸಂಬಂಧಗಳು

ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಮಾದಿಗರು ಕೊನೆಯವರಾಗಿದ್ದು ಮೇಲುಜಾತಿಗಳೆಂದು ಭಾವಿಸಿಕೊಂಡಿರುವ ಜಾತಿಗಳೊಂದಿಗೆ ವಿವಿಧ ರೀತಿಯ ಸಂಬಂಧಹೊಂದಿದ್ದಾರೆ. ಪೌರಾಣಿಕ, ವೈವಾಹಿಕ, ಭಾವನಾತ್ಮಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಇತರೆ ಜಾತಿಗಳೊಂದಿಗೆ ಸಂಬಂಧವಿದೆ. ಪೌರಾಣಿಕ, ಐತಿಹ್ಯ, ನಂಬಿಕೆ ಹಾಗೂ ಆಚರಣೆಗಳ ಹಿನ್ನೆಲೆಯಲ್ಲಿ ಮಾದಿಗರು ವಿವಿಧ ಜಾತಿಗಳೊಂದಿಗೆ ಹೊಂದಿರುವ ಸಾಮಾಜಿಕ ಸಂಬಂಧವನ್ನು ಇಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

### ಮಾದಿಗರು ಮತ್ತು ಹೊಲೆಯರು

ಮಾದಿಗರು ಮತ್ತು ಹೊಲೆಯರು ಜಾತಿಪದ್ಧತಿಯಿಂದ ಕೂಡಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಅತ್ಯಂತ ಆಳಕ್ಕೆ ತಳ್ಳಲ್ಪಟ್ಟಿರುವ 'ಅಸ್ಪೃಶ್ಯರು' ಎಂದೇ ಪರಿಗಣಿಸಿರುವ ವರ್ಗದಲ್ಲಿ ಬರುವ ಪ್ರಮುಖ ಜಾತಿಗಳು. ಇವುಗಳಲ್ಲಿ ಪರಸ್ಪರ ಮೇಲು-ಕೀಳು ಭಾವನೆಗಳಿವೆ. ಆದರೆ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಮಾದಿಗರು ಹೊಲೆಯರನ್ನು ಕೀಳಾಗಿ ನೋಡುತ್ತಾರೆ. ಇವೆರಡು ಜಾತಿಗಳು 'ಪಣ'ವ್ಯಾಜ್ಯದ ಹಿನ್ನೆಲೆಯಲ್ಲಿ ಎಡಗೈ ಮತ್ತು ಬಲಗೈ ಗುಂಪುಗಳಲ್ಲಿ ವಿಭಜನೆಗೊಂಡು ಇಂದಿಗೂ ತಮ್ಮಲ್ಲಿ ಎಡಗೈ ಮತ್ತು ಬಲಗೈಗಳೆಂದು ಗುರುತಿಸಿಕೊಳ್ಳುತ್ತಾರೆ. ಇವೆರಡು ಜಾತಿಗಳು ಆದಿಕರ್ನಾಟಕ, ಆದಿದ್ರಾವಿಡ, ಹರಿಜನ ಮುಂತಾದ ಪದಗಳಿಂದ ಗುರುತಿಸಿಕೊಳ್ಳುತ್ತಿದ್ದರೂ ಈ ಎರಡು ಜಿಲ್ಲೆಗಳಲ್ಲಿ ಮಾದಿಗರು ಮಾತ್ರವೇ ಆದಿಕರ್ನಾಟಕ ಮತ್ತು ಹರಿಜನ ಪದಗಳಿಂದ ಗುರುತಿಸಿಕೊಳ್ಳುತ್ತಾರೆ. ಆದರೆ ಈ ಭಾಗದಲ್ಲಿ ಹೊಲೆಯರಿಗಿಂತಲೂ ಅಸ್ಪೃಶ್ಯತೆಯ ನೋವು ಅನುಭವಿಸುತ್ತಿರುವವರು ಮಾದಿಗರೆಂದರೆ ತಪ್ಪಾಗಲಾರದು. ಈ ಎರಡು ಜನಾಂಗಗಳು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಏಕತೆಯಿಂದ ಮುನ್ನೆಡೆದು 'ದಲಿತಶಕ್ತಿ'ಯೊಂದರ ನಿರ್ಮಾಣದಲ್ಲಿ ಪೂರ್ಣ ಸಹಕರಿಸಿವೆ. ಪೌರಾಣಿಕ ಹಿನ್ನೆಲೆಯಲ್ಲಿ ಮೂಲದಲ್ಲಿ ಇವು ಒಂದೇ ಆಗಿವೆ. ಆದರೆ ಇಂದು ಅಂತಹ ಯಾವುದೇ ರೀತಿಯ ಸಂಬಂಧಗಳು ಕಂಡುಬರುವುದಿಲ್ಲ. ಇವುಗಳ ಮಧ್ಯೆ ಯಾವುದೇ ವೈವಾಹಿಕ ಸಂಬಂಧವು ಏರ್ಪಡುವುದಿಲ್ಲ. ೭೦ರ ದಶಕದಲ್ಲಿ ಇವೆರಡು ಜನಾಂಗಗಳ ನಡುವೆ ವೈವಾಹಿಕ ಸಂಬಂಧವೇರ್ಪಡಿಸಲು ಕೆಲವರು ಪ್ರಯತ್ನಿಸಿ ಮದುವೆ ಆದದ್ದು ಉಂಟು. ಆದರೆ ಅದು ಆ ಘಟನೆಗಷ್ಟೇ ಸೀಮಿತಗೊಂಡಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಕೆಲವು ಮಾದಿಗ ಯುವಕರು ಹೊಲೆಯ ಜಾತಿಯ ಹುಡುಗಿಯರನ್ನು ಮದುವೆಯಾಗಿರುವುದಿದೆ.

### ಮಾದಿಗರು ಮತ್ತು ನಾಯಕರ ಸಂಬಂಧ

ಮಾದಿಗರು ಮತ್ತು ನಾಯಕರು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲೂ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವುದು ಕಂಡುಬರುತ್ತದೆ. ನಾಯಕರು ಹೆಚ್ಚಾಗಿರುವ ಅನೇಕ ಭಾಗಗಳಲ್ಲಿ ಮಾದಿಗರ ಮೇಲೆ ದೌರ್ಜನ್ಯಗಳೆಸಗಿರುವುದು ಕಂಡುಬಂದರೂ ಇವೆರಡು ಜನಾಂಗಗಳ ನಡುವೆ ಭಾವನಾತ್ಮಕ ಸಂಬಂಧದ ಆಳವಾದ ಬೇರುಗಳಿವೆ. ಇವರ ನಡುವಿನ ಸಂಬಂಧವನ್ನು ತಿಳಿಯಬೇಕಾದರೆ ನಾವು ಗ್ರಾಮೀಣ ಪ್ರದೇಶಗಳಿಗೆ ತೆರಳಬೇಕಾಗುತ್ತದೆ. ಕೆಲವೊಂದು ಆಚರಣೆ, ಕುಲಗೋತ್ರ ಮುಂತಾದ ಅಂಶಗಳಲ್ಲಿ ಇವೆರಡರ ನಡುವೆ ಸಾಮ್ಯತೆಯನ್ನು ಕಾಣಬಹುದಾಗಿದೆ. ಕುಲಗೋತ್ರದ ವಿಷಯಕ್ಕೆ ಬಂದರೆ ಮಾದಿಗರಲ್ಲಿರುವ ಏನುಮಲೋರು, ಮಂದ್ಲಾರು, ಸಾಕೇಲರು, ಪೂವಲರು, ಕಾಮಗೇತಲರು, ಮುಚ್ಚಲೋರು, ಕುರಿಯರು ಮುಂತಾದ ಗೋತ್ರಗಳು ಎರಡು ಜನಾಂಗಗಳಲ್ಲಿ ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ನೋಡಿದರೆ ಇವರು ಒಂದೇ ಮೂಲದವರಾದರೂ ಸಾಮಾಜಿಕ ಸ್ಥಾನಮಾನಗಳ ವಿಚಾರದಲ್ಲಿ ಮಾದಿಗರಿಗಿಂತಲೂ ಮೇಲೆಂದು ಗುರುತಿಸಿರುವುದಾದರೂ ಹೇಗೆಂಬ ಅಂಶ ಕಾಡುತ್ತದೆ. ಆದರೂ ಅವೆರಡು ಜನಾಂಗಗಳ ನಡುವೆ 'ದೊಡ್ಡಪ್ಪ' 'ಸಣ್ಣಪ್ಪ'(ಚಿಕ್ಕಪ್ಪ) ಅಥವಾ 'ಕಾಕಾ' ಮುಂತಾದ ಭಾವನಾತ್ಮಕ ಸಂಬಂಧಗಳು ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ಕಂಡುಬರುತ್ತವೆ. ಈ ಬಗೆಯ ಸಂಬಂಧಗಳಲ್ಲದೇ ಕೆಲವೊಂದು ಸಾಮಾಜಿಕ ಕರ್ತವ್ಯಗಳಲ್ಲಿಯೂ ಜೊತೆಯಾಗಿ ಭಾಗಿಗಳಾಗಿರು ವುದು ಉಂಟು. ನಾಯಕರು ತಳವಾರಿಕೆಯನ್ನೂ ಮಾಡಿದರೆ ಮಾದಿಗರು ತೋಟಿ ಕೆಲಸವನ್ನು ಮಾಡುತ್ತಾರೆ. 'ಬಲಪೂಜೆ' ಮಾಡುವಾಗ ತಳವಾರ ಕೋಣವನ್ನ ಕಡಿಯುವ ಹಕ್ಕು ಹೊಂದಿದ್ದರೆ ಮಾದಿಗರು ಅದರ ಕಳ್ಳು ಕಸರು, ರಕ್ತವನ್ನು ತೆಗೆದು ದೊಡ್ಡ ಪಾತ್ರೆಯಲ್ಲಿ ಮಾಡಿದ ಅನ್ನದ ಜೊತೆ ಕಲಸಿ ಊರಿನ ಶಾಂತಿಗಾಗಿ ಕಲಸಿದ ರಕ್ತಸಹಿತ ಅನ್ನವನ್ನು ಊರು ಸುತ್ತಾ ಚೆಲ್ಲುವ (ಅದು ನಮ್ಮ ಹಕ್ಕು ಎಂದು ಹೇಳುತ್ತಾರೆ) ಕಾಯಕ ಮಾಡುತ್ತಿದ್ದರು.[೫೭] ಹಾಗೆಯೇ ಗ್ರಾಮ ದೇವತೆಯ ಹಬ್ಬ ಜಾತ್ರೆ ಸಂದರ್ಭಗಳಲ್ಲಿ ಬಲಿಕೊಡುವ ಪ್ರಾಣಿಯ "ಬಿದ್ದ ಮಗ್ಗಲು ಮಾದಿಗರದು(ಆದಿಕರ್ನಾಟಕ) ಆದರೆ ಎದ್ದ ಮಗ್ಗಲು(ಮೇಲಿನ ಮಗ್ಗಲು) ತಳವಾರ ನಾಯಕನದು"[೫೮] ಎಂಬ ಸಂಪ್ರದಾಯ ಆಚರಣೆಯಲ್ಲಿರುವುದು ಇಂದಿಗೂ ಕಾಣಬಹುದಾಗಿದೆ. ನಾಯಕ ಜನಾಂಗದಲ್ಲಿ ಯಾರಾದರೂ ಸತ್ತರೆ ಅವರ ಸಾವಿನ ಸುದ್ದಿಯನ್ನು ತೆಗೆದುಕೊಂಡು ಹೋಗುವ ಕೆಲಸ ಮಾಡುವವರು ಮಾದಿಗರೆ, ಅಲ್ಲದೇ ಹೆಣ ಹೂಳಲು ಗುಂಡಿ ತೆಗೆಯುವ ಕೆಲಸ ಸಹ ಅವರದೆ ಆಗಿರುತ್ತದೆ. ಇವೆರಡು ಜನಾಂಗದ ನಡುವೆ ಯಾವುದೇ ವೈವಾಹಿಕ ಸಂಬಂಧ ಮಾನ್ಯತೆ ಇಲ್ಲವಾದರೂ ಕೆಲವೊಂದು ಪ್ರೇಮಪ್ರಕರಣಗಳಲ್ಲಿ ವಿವಾಹಗಳು ನಡೆದಿವೆ. ನಾಯಕರು ಮದುವೆಯ ಸಂದರ್ಭದಲ್ಲಿ ಮಾದಿಗರಿಗೆ ಹೊಸ ಬಟ್ಟೆಯನ್ನು ಹೊಲಿಸುವುದಿದೆ. ಅಂದರೆ ಮಾದಿಗನನ್ನು ಮನೆಯ ಮಗ ಎಂದು ನಾಯಕರು ಭಾವಿಸುವುದು ಉಂಟು. ಆದರೆ ಮಾದಿಗರಿಗಿಂತ ನಾವು ಮೇಲಿನವರು ಎಂಬ ಭಾವನೆ ನಾಯಕರಲ್ಲಿ ಇದೆ.

## ಮಾದಿಗರು ಮತ್ತು ಗೊಲ್ಲರ ಸಂಬಂಧ

ಬಳ್ಳಾರಿ ಜಿಲ್ಲೆಗಿಂತಲೂ ಚಿತ್ರದುರ್ಗ ಜಿಲ್ಲೆಯಲ್ಲಿ ಗೊಲ್ಲ ಜನಾಂಗ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಇವರು ನೆಲೆಸಿರುವ ಪ್ರದೇಶಗಳಲ್ಲಿ ಪ್ರತ್ಯೇಕವಾದ 'ಹಟ್ಟಿ'ಯೊಂದನ್ನು ನಿರ್ಮಿಸಿಕೊಂಡು ಮುಳ್ಳಿನ ಕಳ್ಳೆಯನ್ನು ಹಟ್ಟಿಯ ಸುತ್ತಲೂ ಹಾಕಿರುತ್ತಾರೆ. ಈ ರೀತಿ ನಿರ್ಮಿಸಿಕೊಂಡಿರುವ ಹಟ್ಟಿಯ ಒಳಗಡೆ ಮಾದಿಗರಿಗೆ ಪ್ರವೇಶವಿಲ್ಲ. ಈ ಪ್ರವೇಶ ನಿರಾಕರಣೆಯ ಹಿನ್ನೆಲೆಯ ನಂಬಿಕೆಯೊಂದು ಈ ರೀತಿ ಇದೆ. ''ಕಾಡು ಗೊಲ್ಲರು ಹರಿಜನರಾದ ಮಾದಿಗರನ್ನು ಹಟ್ಟಿಯೊಳಗೆ ಸೇರಸದಿರುವುದಕ್ಕೆ ಕಾರಣ ಮೂಢನಂಬಿಕೆಯನ್ನು ಆಧರಿಸಿದುದಾಗಿದೆ. ಹಿಂದೆ ಬರೀ ಹುಲ್ಲು ಗುಡಿಸಲುಗಳು ಇರುತ್ತಿದ್ದ ಕಾಲದಲ್ಲಿ ದೇವರು ಹೊಳೆಗೆ ಹೋಗಿ ಹಿಂತಿರುಗಿ ಬಂದಾಗ ದೇವರ ಮುಂದೆ ಸುಡಿಗೆ ಹಿಡಿದು ನಿಂತಿದ್ದ ಇವನು ಒಳಹೊಕ್ಕರೆ ಹುಲ್ಲು ಗುಡಿಸಲುಗಳಿಗೆ ಬೆಂಕಿ ಬಿದ್ದೀತೆಂಬ ಭಯದಿಂದ ಹಟ್ಟಿಯ ಹೊರಗೆ ನಿಂತಿದ್ದೆ ಕಾರಣವಾಗಿ ಅವನನ್ನು ಹಟ್ಟಿಯಿಂದ ಹೊರಗಿಡುವ ಸಂಪ್ರದಾಯವನ್ನು ಇನ್ನೂ ಆಚರಿಸುತ್ತಿದ್ದಾರೆ. ಆದರೆ ದೇವರೊಂದಿಗೆ ಉರುಮೆ ಬಡಿದುಕೊಂಡು ಒಳಹೊಕ್ಕ ಹೊಲೆಯರವನಿಗೆ ಈ ಕಟ್ಟಳೆ ಇಲ್ಲ''[೫೯] ಎಂಬುದು ಕೇವಲ ಊಹಾತ್ಮ ವಿಷಯವೇ ಹೊರತು ವಾಸ್ತವವಲ್ಲ. ಈ ರೀತಿಯ ಪ್ರವೇಶ ನಿರಾಕರಣೆ ಬೇರೆ ಕಾರಣಗಳಿವೆ. ಮಾದಿಗರು, ನಾಯಕರು, ಗೊಲ್ಲರು ಹಿಂದೆ ಅಣ್ಣ ತಮ್ಮಂದಿರು ಮಹಮ್ಮದಿಯರ ದಾಳಿಯಿಂದ ಉತ್ತರದಿಂದ ಈ ಮೂವರು ದಕ್ಷಿಣಕ್ಕೆ ಬಂದವರು ಹಾಗೆ ಬರುವಾಗ ಗಂಗಾ ನದಿಯನ್ನು ದಾಟಬೇಕಾಗಿತ್ತು. ದೊಡ್ಡವನು(ಮಾದಿಗ) ಇಬ್ಬರು ತಮ್ಮಂದಿರನ್ನು(ನಾಯಕ, ಗೊಲ್ಲ) ಹೆಗಲ ಮೇಲೆ ಕೂರಿಸಿಕೊಂಡು ಈಜಿ ದಡ ಸೇರಿದ. ಅಷ್ಟರಲ್ಲಿ ಮನಸ್ಸು ಬದಲಾದವು. ಬೇರೆ ಬೇರೆಯಾಗಿ ಉಳಿದರು ಒಬ್ಬೊಬ್ಬರು ಒಂದು ಜಾತಿಯನ್ನು ಮಾಡಿಕೊಂಡರು.[೬೦] ಕುಲಗೋತ್ರಗಳ ಸಂದರ್ಭದಲ್ಲಿ ''ಕಾಡುಗೊಲ್ಲರ ಮ್ಯಾಸಬೇಡರ, ಕುಂಚಿಟಿ ವಕ್ಕಲಿಗರ, ಕುರುಬರ, ಮಾದಿಗರ ಕುಲದ ಬೆಡಗುಗಳಲ್ಲಿ ಅನೇಕ ಸಾಮ್ಯಗಳು ಇರುವುದನ್ನು ಗಮನಿಸಿದರೆ''[೬೧] ಇವು ಮೂಲದಲ್ಲಿ ಒಂದೇ ಬುಡಕಟ್ಟು ಸಮಾಜಕ್ಕೆ ಸೇರಿದವರಿರಬೇಕು. ಕಾಲಾಂತರ ದಲ್ಲಿ ಇವು ಪ್ರತ್ಯೇಕ ಜಾತಿಗಳಾಗಿರಬಹುದು. ''ಬೇರೆ ಬೇರೆ ಜಾತಿ ಮತ್ತು ಪಂಗಡಗಳಲ್ಲಿ ಒಂದೇ ಕುಲ ಮತ್ತು ಗೋತ್ರವು ಕಂಡುಬಂದಲ್ಲಿ ಒಂದು ತೀರ್ಮಾನಕ್ಕೆ ಬರಬಹುದು. ಜಾತಿಗಳು ಸಾಮಾಜಿಕವಾಗಿ ಭಿನ್ನವಾಗಿದ್ದರೂ ಜನಾಂಗೀಯವಾಗಿ ಒಂದೇ ಆಗಿವೆ.''[೬೨] ಎಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ ಒಂದೇ ಮೂಲಕ್ಕೆ ಸೇರಿರಲು ಸಾಧ್ಯ ಎನ್ನಬಹುದು. ಕೆಲವೊಂದು ಹಬ್ಬಗಳು ಇವರಲ್ಲಿ ಮಾತ್ರವೇ ಇದೇ. ''ಗುಗ್ಗರಿ ಹಬ್ಬವನ್ನು ಮ್ಯಾಸನಾಯಕರು, ಕಾಡು ಗೊಲ್ಲರು, ಮಣಿಗಾರರು(ಮಾದಿಗರು) ಆಚರಿಸುತ್ತಾರೆ.''[೬೩] ಹಾಗೆಯೇ ಎಂದೋ ಮಾಡಿದ ಸಹಾಯದ ನೆನಪಿಗಾಗಿ ಅಥವಾ ಕೃತಜ್ಞತೆಯನ್ನು ಸಲ್ಲಿಸುವುದಕ್ಕಾಗಿ ''ಆಂಧ್ರ ಪ್ರದೇಶದ ಗೊಲ್ಲ ಜನಾಂಗ ಆರಾಧಿಸುವ ವೀರರು ಗೊಲ್ಲರಾಗಿರದೇ

ಹರಿಜನರಾಗಿರುವುದು(ಮಾದಿಗರು) ಗಮನಾರ್ಹ ಸಂಗತಿಯಾಗಿದೆ.''[೬೪] ಹೀಗೆ ಅನೇಕ ಅಂಶಗಳು ಗೊಲ್ಲರೊಂದಿಗೆ ಮಾದಿಗರು ಹೊಂದಿರಬಹುದಾದ ಸಂಬಂಧದ ಬಗ್ಗೆ ತಿಳಿಸುತ್ತವೆ.

ಮಾದಿಗರು ಗೊಲ್ಲ ಜನಾಂಗದವರು ಯಾರಾದರೂ ಸತ್ತಾಗ ಸಾವಿನ ಸುದ್ಧಿಯನ್ನು ಒಯ್ಯುತ್ತಾರೆ. ಅಲ್ಲದೇ ಗೊಲ್ಲಜನಾಂಗದ ಅನೇಕ ಭೂಮಾಲಿಕರಲ್ಲಿ ಇವರು 'ಮಾದಿಗತನ' ಮಾಡುತ್ತಾರೆ. ಆ ಕುಟುಂಬದ ಸದಸ್ಯರಿಗೆ ಬೇಕಾಗಬಹುದಾದ ಚಪ್ಪಲಿಗಳನ್ನು ತಯಾರಿಸಿಕೊಡುವುದಲ್ಲದೆ ಕೃಷಿ ಸಲಕರಣೆಗಳಿಗೆ ಬೇಕಾಗುವ ಚರ್ಮದ ವಸ್ತುಗಳನ್ನು ಸಹ ತಯಾರಿಸಿಕೊಡುತ್ತಾರೆ. ಅದಕ್ಕೆ ಪ್ರತಿಫಲವಾಗಿ ಸುಗ್ಗಿಯ ವೇಳೆ 'ಆಯಾ'ವನ್ನು ಪಡೆಯುತ್ತಾರೆ. ಈ ಬಗೆಯ ಸಂಬಂಧ ಮಾದಿಗ ಮತ್ತು ಗೊಲ್ಲರ ನಡುವೆ ಇದೆ.

**ಮಾದಿಗರು ಮತ್ತು ಲಿಂಗಾಯಿತರ ಸಂಬಂಧ**

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲೂ ಲಿಂಗಾಯಿತರು ನೆಲೆಸಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಅತಿ ಹೆಚ್ಚಿನ ಸಂಖ್ಯೆ ಹೊಂದಿದ್ದಾರೆನ್ನಬಹುದು. ಎರಡು ಮಠಗಳು ಈ ಜನಾಂಗಕ್ಕೆ ಸಂಬಂಧಪಟ್ಟಿವೆ. ಇವರು ಬಹುಸಂಖ್ಯೆಯಲ್ಲಿ ಭೂ ಮಾಲಿಕರಾಗಿದ್ದು ಅವರಲ್ಲಿ ಮಾದಿಗರು, ಕೂಲಿಯಾಳು, ಜೀತಗಾರರಾಗಿ ಕೆಲಸ ಮಾಡುತ್ತಿದ್ದಾರೆ. ''ವೀರಶೈವ ಸಾದರ ಆರಾಧ್ಯ ಗುರುವಾದ ಮರುಳಸಿದ್ದ, ಮೂಲತಃ ಮಾದಿಗರನವನೆಂದಿದು ಎಲ್ಲರಿಗೂ ತಿಳಿದಿರುವ ಸತ್ಯ. ಅದಕ್ಕೆ ಸಾದರಕೋಮಿನವರನ್ನು 'ಸಾದರೋ ಮಾದರೋ' ಎನ್ನುವುದು''[೬೫] ಈ ಕಾರಣಕ್ಕಾಗಿ. ಮಾದಿಗರಲ್ಲಿ ''ಅವರು(ಲಿಂಗಾಯಿತರು) ನಾವು ಕೊಟ್ಟ ಲಿಂಗವನ್ನೇ ಹಾಕಿಕೊಂಡಿರೋದು ಅದ್ದರಿಂದ ಅವರು ನಮ್ಮ ಪಣ''[೬೬] ಎನ್ನುವುದು ಮತ್ತು ಸಾದರು ಮಾದಿಗರೂ ಎರಡು ಒಂದೇ ಎನ್ನುವ ಸಾಮಾನ್ಯ ಮಾತುಗಳು ಕೇಳಿಬರುತ್ತವೆ. ಅಲ್ಲದೇ ಲಿಂಗಾಯತರ ಮದುವೆ ಸಂದರ್ಭದಲ್ಲಿ ಮಾದಿಗರು ಅವರಿಗೆ ಒಂದು ಜೊತೆ ಚಪ್ಪಲಿಯನ್ನು ಕೊಡುವುದು ಇದೆ. ಅದಕ್ಕೆ ಪ್ರತಿಯಾಗಿ ಲಿಂಗಾಯಿತರು ಮಾದಿಗರಿಗೆ ಬಟ್ಟೆಯನ್ನು ಇಲ್ಲವೇ ಹಣವನ್ನು ಕೊಡುವುದು ಇಂದಿಗೂ ಕಂಡುಬರುತ್ತದೆ. ಲಿಂಗಾಯಿತ ಮತ್ತು ಮಾದಿಗರ ನಡುವೆ ಯಾವುದೋ ಸಂಬಂಧ ಇರಬಹುದು ಎನಿಸುತ್ತದೆ. ಮಾದಿಗರು ಚಪ್ಪಲಿ ಹದ ಮಾಡಲು ಬಳಸುವ ತಂಗಡಿ ಗಿಡಕ್ಕೆ ಸಂಬಂಧಿಸಿದಂತೆ ಲಿಂಗಾಯಿತರಲ್ಲಿ ಹೀಗಿದೆ : ''ಲಿಂಗಾಯಿತರಲ್ಲಿ ಮೂರನೆ ಹೆಣ್ಣನ್ನು ಒಬ್ಬ ಗಂಡು ಮದುವೆಯಾಗುವ ಸಂದರ್ಭ ಒದಗಿ ಬಂದರೆ ಮೊದಲು ಹೊನ್ನರಿಕೆ(ತಂಗಟಿ ಗಿಡ) ಗಿಡಕ್ಕೆ ತಾಳಿ ಕಟ್ಟುತ್ತಾನೆ.''[೬೭] ಈ ರೀತಿಯ ಆಚರಣೆಯ ಹಿಂದೆ ಇರಬಹುದಾದ ವಾಸ್ತವವೇನೆಂಬುದು ಅರಿಯಬೇಕಾಗುತ್ತದೆ. ಈ ಎಲ್ಲಾ ಅಂಶಗಳು ಲಿಂಗಾಯಿತ ರೊಡನೆ ಮಾದಿಗರು ಹೊಂದಿರಬಹುದಾದ ಸಂಬಂಧವನ್ನು ತಿಳಿಸುತ್ತವೆ.

ಲಿಂಗಾಯಿತರಲ್ಲಿ ಯಾರಾದರೂ ಸತ್ತರೆ ಸಾವಿನ ಸುದ್ದಿಯನ್ನು ತೆಗೆದುಕೊಂಡು ಹೋಗುವ ಕೆಲಸ

ವನ್ನು ಮಾದಿಗರು ಮಾಡುತ್ತಾರೆ. ಈ ಬಗೆಯ ಸಂಬಂಧವನ್ನು ಬಿಟ್ಟರೆ ಇವೆರಡು ಜನಾಂಗದ ನಡುವೆ ಯಾವುದೇ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲವಾದರೂ ಅನೇಕ ಪ್ರೇಮ ಪ್ರಕರಣಗಳಲ್ಲಿ ಮಾದಿಗರು ಲಿಂಗಾಯಿತ ಹೆಣ್ಣುಗಳೊಂದಿಗೆ ವೈವಾಹಿಕ ಸಂಬಂಧ ಬೆಳಸಿರುವುದು ಎರಡು ಜಿಲ್ಲೆಗಳಲ್ಲಿಯೂ ಕಂಡುಬರುತ್ತದೆ.

**ಮಾದಿಗರು ಮತ್ತು ಬ್ರಾಹ್ಮಣರ ಸಂಬಂಧ**

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಬ್ರಾಹ್ಮಣರ ಸಂಖ್ಯೆ ಕಡಿಮೆಯಿದೆ. ಇಲ್ಲಿ ಮಾದಿಗರೊಂದಿಗೆ ಹೊಂದಿರುವ ಇವರ ಸಂಬಂಧಗಳು ಗೋಚರಿಸುವುದಿಲ್ಲವಾದರೂ ಬೇರೆ ಭಾಗಗಳಲ್ಲಿ ಹೊಂದಿರುವುದು ಕಂಡುಬಂದಿದೆ. ಬೀದರ್, ಗುಲ್ಬರ್ಗಾ, ಬೆಂಗಳೂರು ಮುಂತಾದ ಕಡೆಗಳಲ್ಲಿ ಬ್ರಾಹ್ಮಣರ ಮದುವೆಗಳಲ್ಲಿ ಮಾದಿಗರು ಮತ್ತು ಚರ್ಮಗಾರಿಕೆಗೆ ಬಳಸುವ ಸಲಕರಣೆಗಳು(ವಸ್ತುಗಳು) ವಿಶೇಷ ಮಾನ್ಯತೆ ಹೊಂದಿವೆ. ಬೀದರ್ ಜಿಲ್ಲೆಯಲ್ಲಿ "ಬ್ರಾಹ್ಮಣರ ಮದುವೆಗೆ ಸೋದರ ಮಾವನಾದ ಮಾದಿಗನಿಗೆ ಮೊದಲು ಹೊಸಬಟ್ಟೆ ಕೊಡುವರು"[೬೮] ಎಂದು ತಿಳಿದು ಬಂದರೆ "ಗುಲ್ಬರ್ಗಾ ಜಿಲ್ಲೆಯ ನಿಂಬಾರ್ಗದ ಪ್ರದೇಶದಲ್ಲಿ ಬ್ರಾಹ್ಮಣರ ಮದುವೆಗಳಲ್ಲಿ ಮಾದಿಗರ ಕೇರಿಯಿಂದ ಉಳಿ, ರೆಂಪಿಗೆ ಮತ್ತು ಕೊಡತಿಯನ್ನು ತೆಗೆದುಕೊಂಡು ಹೋದ ಮೇಲೆ ಧಾರೆ ನಡೆಯುವುದು'ಇದೆ. ಇದಲ್ಲದೆ "ಬೆಂಗಳೂರು ಜಿಲ್ಲೆಯಲ್ಲಿ ಬ್ರಾಹ್ಮಣರು ತಮ್ಮ ಮದುವೆ ಶಾಸ್ತ್ರಗಳಲ್ಲಿ ಮಾದಿಗರ 'ಕರೆಬಾನಿ'ಯಿಂದ ಒಂದು ಹಂಚಿಕಡ್ಡಿಯ ತೊಟ್ಟಿನಷ್ಟಾದರೂ ನೀರು ತಂದು ಶಾಸ್ತ್ರ ಮಾಡಬೇಕೆ"[೬೯]ಂಬ ನಿಯಮ ಪಾಲಿಸುವುದು ನೋಡಿದರೆ ಹಿಂದೊಮ್ಮೆ ಮಾದಿಗರ ಹುಡುಗ ಬ್ರಾಹ್ಮಣರ ಹುಡುಗಿಯನ್ನು ಮದುವೆಯಾದ ಹಿನ್ನೆಲೆಯಲ್ಲಿ ಹುಟ್ಟಿದ ಮಾರಮ್ಮನ ಕಥೆಯ ಪರಿಣಾಮ ಬೀರಬಹುದೆನಿಸುತ್ತದೆ. ೧೨ನೇ ಶತಮಾನದಲ್ಲಿ ಮಾದಿಗರ ಮತ್ತು ಬ್ರಾಹ್ಮಣರ ನಡುವೆ ಬಸವಾದಿ ಶರಣರು ನಡೆಸಿದ ಅಂತರ್‌ಜಾತಿಯ ಮದುವೆಯು ಕಲ್ಯಾಣ ಕ್ರಾಂತಿಯನ್ನು ಉಂಟು ಮಾಡಿದ್ದು ಚಾರಿತ್ರಿಕ ಸಂಗತಿ ಈ ರೀತಿಯಲ್ಲಿ ಮಾದಿಗರು ಇಂದಿಗೂ ಅನೇಕ ಬ್ರಾಹ್ಮಣ ಯುವತಿಯರನ್ನು ಪ್ರೇಮಿಸಿ ಮದುವೆಯಾಗಿರುವುದು ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬಂದಿದೆ.

**ಮಾದಿಗರು ಮತ್ತು ರೆಡ್ಡಿಯವರ ಸಂಬಂಧ**

ಮಾದಿಗರು ಹಿಂದೊಮ್ಮೆ ರೆಡ್ಡಿಯವರೊಂದಿಗೆ, ಸಂಬಂಧ ಬೆಳಸಿದ ಕಾರಣವಾಗಿಯೇ ಮಾದಿಗರಲ್ಲಿ ಗೋತ್ರವೊಂದರ ಹುಟ್ಟಿಗೆ ಕಾರಣರಾಗಿರುವುದರ ಕುರಿತು ಐತಿಹ್ಯ ತಿಳಿಸುತ್ತದೆ. 'ಮಾದಿಗರಲ್ಲಿ ಸಕೇಲ ಕುಲದವರು ಬಹಳ ದಿನಗಳ ಹಿಂದೆ ಆಂಧ್ರ ಪ್ರದೇಶದ 'ಪಾಲವೈ' ಎಂಬ ಊರಿನಿಂದ ಬಂದವರು. ಅಣ್ಣ ತಮ್ಮಂದಿರಲ್ಲೆ ಜಗಳವಾಗಿ(ಪೂಜಾರಿಕೆ ವಿಷಯದಲ್ಲಿ ಒಂದು ಬಲವಾದ ಗುಂಪು(ರೆಡ್ಡಿ ಜನಾಂಗದಲ್ಲಿ) ಮತ್ತೊಂದು ಗುಂಪನ್ನು ನಾಶಮಾಡಿದ್ದು ಅವರಲ್ಲಿ ಒಬ್ಬ ಹುಡುಗ ಹೇಗೋ

ವನ್ನು ಮಾದಿಗರು ಮಾಡುತ್ತಾರೆ. ಈ ಬಗೆಯ ಸಂಬಂಧವನ್ನು ಬಿಟ್ಟರೆ ಇವೆರಡು ಜನಾಂಗದ ನಡುವೆ ಯಾವುದೇ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲವಾದರೂ ಅನೇಕ ಪ್ರೇಮ ಪ್ರಕರಣಗಳಲ್ಲಿ ಮಾದಿಗರು ಲಿಂಗಾಯಿತ ಹೆಣ್ಣುಗಳೊಂದಿಗೆ ವೈವಾಹಿಕ ಸಂಬಂಧ ಬೆಳಸಿರುವುದು ಎರಡು ಜಿಲ್ಲೆಗಳಲ್ಲಿಯೂ ಕಂಡುಬರುತ್ತದೆ.

**ಮಾದಿಗರು ಮತ್ತು ಬ್ರಾಹ್ಮಣರ ಸಂಬಂಧ**

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಬ್ರಾಹ್ಮಣರ ಸಂಖ್ಯೆ ಕಡಿಮೆಯಿದೆ. ಇಲ್ಲಿ ಮಾದಿಗರೊಂದಿಗೆ ಹೊಂದಿರುವ ಇವರ ಸಂಬಂಧಗಳು ಗೋಚರಿಸುವುದಿಲ್ಲವಾದರೂ ಬೇರೆ ಭಾಗಗಳಲ್ಲಿ ಹೊಂದಿರುವುದು ಕಂಡುಬಂದಿದೆ. ಬೀದರ್, ಗುಲ್ಬರ್ಗಾ, ಬೆಂಗಳೂರು ಮುಂತಾದ ಕಡೆಗಳಲ್ಲಿ ಬ್ರಾಹ್ಮಣರ ಮದುವೆಗಳಲ್ಲಿ ಮಾದಿಗರು ಮತ್ತು ಚರ್ಮಗಾರಿಕೆಗೆ ಬಳಸುವ ಸಲಕರಣೆಗಳು(ವಸ್ತುಗಳು) ವಿಶೇಷ ಮಾನ್ಯತೆ ಹೊಂದಿವೆ. ಬೀದರ್ ಜಿಲ್ಲೆಯಲ್ಲಿ ''ಬ್ರಾಹ್ಮಣರ ಮದುವೆಗೆ ಸೋದರ ಮಾವನಾದ ಮಾದಿಗನಿಗೆ ಮೊದಲು ಹೊಸಬಟ್ಟೆ ಕೊಡುವರು''[೬೮] ಎಂದು ತಿಳಿದು ಬಂದರೆ ''ಗುಲ್ಬರ್ಗಾ ಜಿಲ್ಲೆಯ ನಿಂಬಾರ್ಗದ ಪ್ರದೇಶದಲ್ಲಿ ಬ್ರಾಹ್ಮಣರ ಮದುವೆಗಳಲ್ಲಿ ಮಾದಿಗರ ಕೇರಿಯಿಂದ ಉಳಿ, ರೆಂಪಿಗೆ ಮತ್ತು ಕೊಡತಿಯನ್ನು ತೆಗೆದುಕೊಂಡು ಹೋದ ಮೇಲೆ ಧಾರೆ ನಡೆಯುವುದು'ಇದೆ. ಇದಲ್ಲದೆ ''ಬೆಂಗಳೂರು ಜಿಲ್ಲೆಯಲ್ಲಿ ಬ್ರಾಹ್ಮಣರು ತಮ್ಮ ಮದುವೆ ಶಾಸ್ತ್ರಗಳಲ್ಲಿ ಮಾದಿಗರ 'ಕರೆಬಾನಿ'ಯಿಂದ ಒಂದು ಹಂಚಿಕಡ್ಡಿಯ ತೊಟ್ಟಿನಷ್ಟಾದರೂ ನೀರು ತಂದು ಶಾಸ್ತ್ರ ಮಾಡಬೇಕೆ''[೬೯]ಂಬ ನಿಯಮ ಪಾಲಿಸುವುದು ನೋಡಿದರೆ ಹಿಂದೊಮ್ಮೆ ಮಾದಿಗರ ಹುಡುಗ ಬ್ರಾಹ್ಮಣರ ಹುಡುಗಿಯನ್ನು ಮದುವೆಯಾದ ಹಿನ್ನೆಲೆಯಲ್ಲಿ ಹುಟ್ಟಿದ ಮಾರಮ್ಮನ ಕಥೆಯ ಪರಿಣಾಮ ಬೀರಬಹುದೆನಿಸುತ್ತದೆ. ೧೨ನೇ ಶತಮಾನದಲ್ಲಿ ಮಾದಿಗರ ಮತ್ತು ಬ್ರಾಹ್ಮಣರ ನಡುವೆ ಬಸವಾದಿ ಶರಣರು ನಡೆಸಿದ ಅಂತರ್‌ಜಾತಿಯ ಮದುವೆಯು ಕಲ್ಯಾಣ ಕ್ರಾಂತಿಯನ್ನು ಉಂಟು ಮಾಡಿದ್ದು ಚಾರಿತ್ರಿಕ ಸಂಗತಿ ಈ ರೀತಿಯಲ್ಲಿ ಮಾದಿಗರು ಇಂದಿಗೂ ಅನೇಕ ಬ್ರಾಹ್ಮಣ ಯುವತಿಯರನ್ನು ಪ್ರೇಮಿಸಿ ಮದುವೆಯಾಗಿರುವುದು ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬಂದಿದೆ.

**ಮಾದಿಗರು ಮತ್ತು ರೆಡ್ಡಿಯವರ ಸಂಬಂಧ**

ಮಾದಿಗರು ಹಿಂದೊಮ್ಮೆ ರೆಡ್ಡಿಯವರೊಂದಿಗೆ, ಸಂಬಂಧ ಬೆಳಸಿದ ಕಾರಣವಾಗಿಯೇ ಮಾದಿಗರಲ್ಲಿ ಗೋತ್ರವೊಂದರ ಹುಟ್ಟಿಗೆ ಕಾರಣರಾಗಿರುವುದರ ಕುರಿತು ಐತಿಹ್ಯ ತಿಳಿಸುತ್ತದೆ. 'ಮಾದಿಗರಲ್ಲಿ ಸಕೇಲ ಕುಲದವರು ಬಹಳ ದಿನಗಳ ಹಿಂದೆ ಆಂಧ್ರ ಪ್ರದೇಶದ 'ಪಾಲವೈ' ಎಂಬ ಊರಿನಿಂದ ಬಂದವರು. ಅಣ್ಣ ತಮ್ಮಂದಿರಲ್ಲೆ ಜಗಳವಾಗಿ(ಪೂಜಾರಿಕೆ ವಿಷಯದಲ್ಲಿ ಒಂದು ಬಲವಾದ ಗುಂಪು(ರೆಡ್ಡಿ ಜನಾಂಗದಲ್ಲಿ) ಮತ್ತೊಂದು ಗುಂಪನ್ನು ನಾಶಮಾಡಿದ್ದು ಅವರಲ್ಲಿ ಒಬ್ಬ ಹುಡುಗ ಹೇಗೋ

ಜಾತಿಗಳನ್ನು ಎಡಗೈ ವೇದಿಕೆಯಡಿ ಸಂಘಟಿಸಿ ನಾಯಕತ್ವವಹಿಸಿದರೆ ಬ್ರಾಹ್ಮಣರು ಕೃಷಿ ಮೂಲದ ಬಲಾಡ್ಯ ಜಾತಿಗಳನ್ನು 'ಬಲಗೈ' ಬ್ಯಾನರ್‌ನಡಿ ಯುದ್ಧಕ್ಕೆ ಛೂ ಬಿಟ್ಟರು.[೨೪] ಪರಿಣಾಮವಾಗಿ ಎಡಗೈ-ಬಲಗೈ ಭಿನ್ನತೆಯ ಉಗಮಕ್ಕೆ ಕಾರಣವಾಯಿತು. ಈ ಬಗೆಯಲ್ಲಿ ತಮ್ಮ ಆರಾಧನೆಯ ಕ್ರಮಗಳನ್ನು ವೈದಿಕೀಕರಣಗೊಳಿಸಲು ಹೊರಟ ಬ್ರಾಹ್ಮಣರ ವಿರುದ್ಧ ಹೋರಾಟದಲ್ಲಿ ಪಾಂಚಾಳರೊಂದಿಗೆ ಮಾದಿಗರು 'ಎಡಗೈ' ಗುಂಪಿನಲ್ಲಿ ಸಹಕರಿಸಿದ್ದಾರೆ. ಇಂದಿಗೂ "ಕೋಲಾರದ ವಿಶ್ವಕರ್ಮರು ಮಾದಿಗನ ಮನೆಗೆ ಹೋಗಿ ಬೆಂಕಿ ಬೇಡಿ ತಂದು ಮದುವೆ ಮುಂತಾದ ಶುಭಾರಂಭಗಳಿಗೆ ಅಡಿಗೆ ಮಾಡಿದರೆ ಹೆಚ್ಚು ಪುಣ್ಯ ಬರುತ್ತದೆ ಎಂಬ ನಂಬಿಕೆ ಹೊಂದಿದ್ದಾರೆ."[೨೫] ಈ ಬಗೆಯ ಸಂಬಂಧವನ್ನು ಪಾಂಚಾಳರೊಂದಿಗೆ ಮಾದಿಗರು ಹೊಂದಿದ್ದಾರೆ.

**ಅಡಿಟಿಪ್ಪಣಿಗಳು**

೧. ಸಿಂದ್ ಮಾದಿಗರ ಸಂಸ್ಕೃತಿ, ಕೊಟಗಾನಹಳ್ಳಿ ರಾಮಯ್ಯ, ೧೯೯೩, ಪು.೯೦

೨. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ಮೈಲಹಳ್ಳಿ ರೇವಣ್ಣ, ಪು.೭೮-೮೦

೩. ಸಿಂದ್ ಮಾದಿಗರ ಸಂಸ್ಕೃತಿ, ೧೯೯೩, ಪು.೨೨೨

೪. ಭಾರತದಲ್ಲಿ ಜಾತಿಪದ್ಧತಿ, ವಿಕ್ಟರ್ ಎಸ್.ಡಿಸೋಜಾ, ೧೯೭೩, ಪು. ೧೯

೫. ಜಾತ್ರೆಗಳು, ಎಸ್.ಎಸ್.ಹಿರೇಮಠ, ೧೯೯೩, ಪು.೬೦

೬. ಭಾರತದಲ್ಲಿ ಜಾತಿ ಹೋರಾಟಗಳು, ಗಂಗಾಧರಮೂರ್ತಿ(ಅನು), ೧೯೯೪, ಪು.೧೩

೭. ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ-೧, ೧೯೯೦, ಪು.೨೪

೮. ಭಾರತದಲ್ಲಿ ಜಾತಿ ಹೋರಾಟಗಳು, ಗಂಗಾಧರಮೂರ್ತಿ(ಅನು), ಪು.೩೯

೯. ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು ಸಂಪುಟ-೨, ೧೯೯೦, ಪು.೯೫

೧೦. ಅದೇ, ಪು.೩೭

೧೧. ಅದೇ ಪು ೮೦

೧೨. ವೇದಾಂತ ರೆಜಿಮೆಂಟ್, ಬಿ.ವಿ.ವೀರಭದ್ರಪ್ಪ, ಪು.೨೨೨

೧೩. ಮುನ್ನೆಡೆಯ ಕೂಡ್ಲಿಗಿ, ಪು.೧೧೦

೧೪. ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು ಸಂಪುಟ-೭, ಪು.೫೧೭

೧೫. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ಎಸ್.ಚಂದ್ರಶೇಖರ್, ೧೯೮೫, ಪು.೯೬

೧೬. ಅದೇ, ಪು.೯೬

೧೭. ಅದೇ, ಪು.೯೭

೧೮. ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಬಿ.ಶೇಷಾದ್ರಿ, ಟಿ.ಆರ್.ಚಂದ್ರಶೇಖರ್, ೧೯೯೮, ಪು.೯೫-೯೫

೧೯. ಅದೇ, ಪು. ೫೬

೨೦. ಹೋರಾಟ ಸಂಗ್ರಾಮದ ನೆನಹುಗಳು, ಚಿತ್ರದುರ್ಗ ಜಿಲ್ಲೆಯ ಯೋಧರ ಸಮ್ಮೇಳನ, ಸ್ಮರಣ ಸಂಚಿಕೆ, ಪು.೩೩

೨೧. ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಬಿ.ಶೇಷಾದ್ರಿ, ಟಿ.ಆರ್.ಸಿ, ೧೯೯೮, ಪು.೫೬

೨೨. ಅದೇ, ಪು.೯೨

೨೩. ಅದೇ, ಪು.೯೪

೨೪. ಅದೇ, ಪು.೯೩

೨೫. ಅದೇ, ಪು.೧೨೯

೨೬. ಅದೇ, ಪು.೯೪

೨೭. ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ಬಿ.ಎಂ.ಎಂ.ಆರಾಧ್ಯ, ೧೯೯೫, ಪು.೧೧೮

೨೮. ಜಾತಿ ವ್ಯವಸ್ಥೆಯ ಸವಾಲುಗಳು, ಬಾಬುಜಗಜೀವನರಾಂ(ಮೂಲ), ರಾಹು(ಅನು) ೧೯೯೯, ಪು.೪೭

೨೯. ಭಾರತದ ಸಂವಿಧಾನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೮೫, ಪು.೧೧

೩೦. ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ೧೯೯೫, ಪು.೮೦

೩೧. ಅದೇ, ಪು.೧೨೦

೩೨. ವೇದಾಂತ ರೆಜಿಮೆಂಟ್, ಬಿ.ವಿ, ವೀರಭದ್ರಪ್ಪ, ಪು.೧೦೧-೧೦೨

೩೩. ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು ಸಂಪುಟ-೧, ೧೯೯೦, ಪು.೫೭೮-೫೭೯

೩೪. ದೇವದಾಸಿ ಸಂಪ್ರದಾಯ, ಡಾ.ಜೋಗನ್‌ಶಂಕರ್, ೧೯೯೩, ಪು.೨೩

೩೫. ಭಾರತ ಸಮಾಜ ಕಾರ್ಯ ವಿಶ್ವಕೋಶ, ಮರುಳಸಿದ್ದಯ್ಯ, ೧೯೯೪, ಪು.೪೬೮

೩೬. ವೇದಾಂತ ರೆಜಿಮೆಂಟ್, ಬಿ.ವಿ.ವೀರಭದ್ರಪ್ಪ, ಪು.೨೨೬

೩೭. ಪಾತರದವರು, ಶೈಲಜ ಹಿರೇಮಠ, ೨೦೦೧, ಪು.೧೩

೩೮. ಭಾರತ ಸಮಾಜ ಕಾರ್ಯ ವಿಶ್ವಕೋಶ, ಮರುಳಸಿದ್ದಯ್ಯ, ೧೯೯೪, ಪು.೪೬೭

೩೯. ದೇವದಾಸಿ ಸಂಪ್ರದಾಯ, ಡಾ.ಜೋಗನ್‌ಶಂಕರ್, ೧೯೯೩, ಪು.೪೯

೪೦. ಭಾರತ ಸಮಾಜಕಾರ್ಯ ವಿಶ್ವಕೋಶ, ಮರುಳಸಿದ್ದಯ್ಯ, ೧೯೯೪, ಪು.೪೭೧

೪೧. ದಲಿತ ಕ್ರೈಸ್ತರು, ಗಾಡ್ವಿನ್‌ಶಿರಿ, ೧೯೯೭, ಪು.೫೭

೪೨. ಮುನ್ನೆಡೆಯ ಕೂಡ್ಲಿಗಿ, ಪು.೯೩

೪೩. ದೇವದಾಸಿ ಸಂಪ್ರದಾಯ, ಜೋಗನ್‌ಶಂಕರ್, ೧೯೯೩, ಪು.೩೫

೪೪. ಭಾರತ ಸಮಾಜಕಾರ್ಯ ವಿಶ್ವಕೋಶ, ೧೯೯೪, ಪು.೩೫

೪೫. ದೇವದಾಸಿ ಸಂಪ್ರದಾಯ, ಜೋಗನ್‌ಶಂಕರ್, ೧೯೯೩, ಪು.೩೪

೪೬. ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ, ಮನಜ, ೧೯೯೭, ಪು.೩೬೨

೪೭. ದಲಿತ ಕ್ರೈಸ್ತ ಪ್ರಶ್ನೆ, ಮನೋಹರ್ ಚಂದ್ರಪ್ರಸಾದ್, ೧೯೯೨, ಪು.೧೩

೪೮. ದಲಿತ ಕ್ರೈಸ್ತರು, ಗಾಡ್ವಿನ್‌ಶಿರಿ, ೧೯೯೭, ಪು.೪೮

೪೯. ದಲಿತ ಕ್ರೈಸ್ತ ಪ್ರಶ್ನೆ, ಮನೋಹರ್ ಚಂದ್ರಪ್ರಸಾದ್, ೧೯೯೨, ಪು.೧೩

೫೦. ಅದೇ, ಪು.೧೧

೫೧. ದಲಿತ ಕ್ರೈಸ್ತರು, ಗಾಡ್ವಿನ್‌ಶಿರಿ, ೧೯೯೭, ಪು.೫

೫೨. ಅದೇ, ಪು.೫

೫೩. ಅದೇ, ಪು.೬

೫೪. ದಲಿತ ಕ್ರೈಸ್ತ ಪ್ರಜ್ಞೆ, ಮನೋಹರ್ ಚಂದ್ರಪ್ರಸಾದ್, ೧೯೯೨, ಪು.೧೧

೫೫. ದಲಿತ ಕ್ರೈಸ್ತರು, ಗಾಡ್ವಿನ್‌ಶಿರಿ, ೧೯೯೭, ಪು.

೫೬. ಅದೇ, ಪು.೧೭೪

೫೭. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ಮೈಲಹಳ್ಳಿ ರೇವಣ್ಣ, ೧೯೯೬, ಪು.೬೧-೬೨

೫೮. ದುರುಗ ಜಾನಪದ, ಡಾ.ಮೀರಾಸಾಬಿಹಳ್ಳಿ ಶಿವಣ್ಣ, ೧೯೯೯, ಪು.೩೬

೫೯. ಅದೇ, ಪು.೨೯

೬೦. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ಮೈಲಹಳ್ಳಿ ರೇವಣ್ಣ, ೧೯೯೬, ಪು.೬೨

೬೧. ದುರುಗ ಜಾನಪದ, ಡಾ.ಮೀರಾಸಾಬಿಹಳ್ಳಿ ಶಿವಣ್ಣ, ೧೯೯೯, ಪು.೩೭

೬೨. ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು ಸಂಪುಟ-೭, ೧೯೭೮, ಪು.೪೨೪

೬೩. ಗೊಲ್ಲ ಕಡಗ, ಡಾ.ಮೀರಾಸಾಬಿಹಳ್ಳಿ ಶಿವಣ್ಣ, ೧೯೯೯, ಪು.೯೫

೬೪. ಕರ್ನಾಟಕದ ವೀರಗಲ್ಲುಗಳು, ಆರ್.ಶೇಷಶಾಸ್ತ್ರಿ, ಪು.೫೦-೫೧

೬೫. ಘಟ್ಟಿಹೊಸಹಳ್ಳಿ ಘಟ್ಟಿಗ, ಹರ್ತಿಕೋಟೆ ವೀರೇಂದ್ರಸಿಂಹ, ತೇಜಸ್ವಿ ಕಟ್ಟಿಮನಿ, ೨೦೦೨, ಪು.೬೬

೬೬. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ಮೈಲಹಳ್ಳಿ ರೇವಣ್ಣ, ೧೯೯೬, ಪು.೬೬

೬೭. ಹಬ್ಬಗಳು (ಭಾಗ-೧), ಎಸ್.ಎಸ್.ಹಿರೇಮಠ, ೧೯೯೨, ಪು.೩೦

೬೮. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ಮೈಲಹಳ್ಳಿ ರೇವಣ್ಣ, ೧೯೯೬, ಪು.೬೭-೬೮

೬೯. ಅದೇ, ಪು.೬೭

೭೦. ಅದೇ, ಪು.೭೧-೭೨

೭೧. ಅದೇ, ಪು.೭೨

೭೨. ಕರ್ನಾಟಕದ ವೀರಗಲ್ಲುಗಳು, ಶೇಷಶಾಸ್ತ್ರಿ, ಪು.೫೨

೭೩. ಸಿಂದ್ ಮಾದಿಗರ ಸಂಸ್ಕೃತಿ, ಕೊಟಗಾನಹಳ್ಳಿ ರಾಮಯ್ಯ, ೧೯೯೩, ಪು.೬೪

೭೪. ಅದೇ, ಪು.೬೬

೭೫. ಕರ್ನಾಟಕ ದಲಿತ ಚಳವಳಿ ಮತ್ತು ಅಂಬೇಡ್ಕರ್, ಗಂಗರಾಂ ಚಂಡಾಳ, ೧೯೯೨, ಪು.೬

ಅಧ್ಯಾಯ ೪

# ಮಾದಿಗರ ಆರ್ಥಿಕ ಸ್ಥಿತಿ-ಗತಿಗಳು

ಯಾವುದೇ ಒಂದು ರಾಷ್ಟ್ರದ ಪ್ರಗತಿಯು ನಿರ್ಧಾರವಾಗುವುದು ಆ ದೇಶದಲ್ಲಿ ವಾಸಿಸುವ ಜನರ ಆದಾಯ, ಆರೋಗ್ಯ, ಶಿಕ್ಷಣ ಹಾಗೂ ಆರ್ಥಿಕ ಸ್ಥಿತಿಗತಿಗಳ ಮೇಲೆ. ಇದರಿಂದಾಗಿ ಪ್ರತಿಯೊಂದು ರಾಷ್ಟ್ರವು ಆ ನಿಟ್ಟಿನಲ್ಲಿ ಆಲೋಚನೆ ಮಾಡಿ ಕ್ರಮ ಕೈಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ಭಾರತವು ಆರ್ಥಿಕ ಪ್ರಗತಿ ಸಾಧಿಸಲು ಯಾವ ಕ್ರಮ ಕೈಗೊಂಡಿದೆ ಎನ್ನುವುದನ್ನು ನೋಡಬೇಕಾಗುವುದು. ಅದರಲ್ಲೂ ಪ್ರಜಾಪ್ರಭುತ್ವ ಹೊಂದಿರುವ ಈ ದೇಶದ ನೆಲದಲ್ಲಿ ವಾಸ ಮಾಡುತ್ತಿರುವ ಪ್ರತಿಯೊಂದು ವರ್ಗದ ಬಗ್ಗೆಯು ಗಮನಹರಿಸಬೇಕಾಗುತ್ತದೆ. ಪ್ರಭುತ್ವವು ಈ ದೇಶದ ಕೃಷಿ, ಕೈಗಾರಿಕೆ, ಶಿಕ್ಷಣ ಮುಂತಾದ ಕ್ಷೇತ್ರಗಳ ಅಭಿವೃದ್ಧಿಗೆ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡು ಕ್ರಮ ಕೈಗೊಳ್ಳಲಾಗಿದೆ. ಈ ಉದ್ದೇಶವನ್ನಿಟ್ಟುಕೊಂಡೆ ಪಂಚವಾರ್ಷಿಕ ಯೋಜನೆಗಳು ಜಾರಿಗೆ ಬಂದುದು. ಸಂವಿಧಾನದ ಕರಡು ಪ್ರತಿ ಕುರಿತ ಚರ್ಚೆಯಲ್ಲಿ ಅಂಬೇಡ್ಕರ್ ಮಾತನಾಡುತ್ತಾ, ಅಧಿಕಾರದ ಜವಾಬ್ದಾರಿ ಹೊತ್ತ ಯಾವುದೇ ಸರ್ಕಾರ ಆರ್ಥಿಕ ಪ್ರಜಾಪ್ರಭುತ್ವವನ್ನು ಸ್ಥಾಪಿಸಲು ಮುಂದಾಗಬೇಕು. ಇದನ್ನು ಒತ್ತಾಯಿಸುವ ಸ್ಫೂರ್ತಿಯನ್ನು ಹೊಂದಿರುವ ರಾಜ್ಯ ನಿರ್ದೇಶಕ ತತ್ವಗಳಿಗೆ ನನ್ನ ಪ್ರಕಾರ ಸಂವಿಧಾನದಲ್ಲಿ ಹೆಚ್ಚು ಪ್ರಾಮುಖ್ಯತೆ ಇದೆ’ ಎಂದರು. ಈ ರೀತಿ ಅವರು ಆರ್ಥಿಕ ಅಸಮಾನತೆಯಿಂದ ಕೂಡಿರುವ ಈ ದೇಶವು ಮೊದಲು ‘ಆರ್ಥಿಕ ಪ್ರಜಾಪ್ರಭುತ್ವ’ವನ್ನು ಜಾರಿಗೊಳಿಸಬೇಕು. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಪ್ರಜಾಸತ್ತಾತ್ಮಕ ನೆಲೆಯಲ್ಲಿ ಹಂಚಿಕೆಯಾಗುವಂತೆಯೂ ನೋಡಿಕೊಳ್ಳಬೇಕು. ಈ ಕಾರಣದಿಂದಾಗಿ ಸಾವಿರಾರು ವರುಷಗಳಿಂದ ಅವಕಾಶದಿಂದ ವಂಚಿತರಾಗಿ ಸಾಮಾಜಿಕ-ಆರ್ಥಿಕತೆಯಲ್ಲಿ ಹಿಂದುಳಿದಿರುವ ವರ್ಗಗಳ ಅಭಿವೃದ್ಧಿಗಾಗಿ ಸಾಮಾಜಿಕ ನ್ಯಾಯ ಒದಗಿಸಿಕೊಡಬೇಕಾಗಿರುವುದು ಪ್ರಭುತ್ವದ ನೈತಿಕ ಹೊಣೆಗಾರಿಕೆಯಾಗಿದೆ. ಈ ನಿಟ್ಟಿನಲ್ಲಿ ಕ್ರಮಕೈಗೊಳ್ಳುವಂತೆ ರಾಜ್ಯ ನಿರ್ದೇಶಕ ತತ್ವಗಳು ನಿರ್ದೇಶನ ಮಾಡುತ್ತವೆ. ಸರ್ಕಾರವು ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವವರನ್ನೂ ಗುರುತಿಸಲು ಸ್ವಾತಂತ್ರ್ಯ ಪೂರ್ವದಿಂದಲೂ ಅನೇಕ ಆಯೋಗಗಳನ್ನು ರಚನೆ ಮಾಡಲಾಗಿದೆ. ಪ್ರತಿಯೊಂದು ಆಯೋಗವು ಸಹ ಅಸ್ಪೃಶ್ಯ ವರ್ಗವು ಆರ್ಥಿಕವಾಗಿ ಹಿಂದುಳಿದಿರುವಿಕೆಯನ್ನು ಸ್ಪಷ್ಟಪಡಿಸಿದವು. ಅದರಂತೆ ಕೆಲವೊಂದು ಸಲಹೆಗಳನ್ನು ಅವರ ಅಭಿವೃದ್ಧಿಗೆ ಸೂಚಿಸಿದವು. ಹೀಗೆ ಸಂವಿಧಾನಬದ್ಧವಾದ ಸಾಮಾಜಿಕ ನ್ಯಾಯವನ್ನು ನೀಡುವ ಸಲುವಾಗಿ ಸರ್ಕಾರವು ಪಂಚಾವಾರ್ಷಿಕ ಯೋಜನೆಗಳ ಮೂಲಕ ಕ್ರಮ ಕೈಗೊಂಡಿತು. ಈ ರೀತಿ ಕೈಗೊಂಡ ಕ್ರಮಗಳು ಎಷ್ಟರಮಟ್ಟಿಗೆ ಸಾಮಾಜಿಕವಾಗಿ ಅತ್ಯಂತ ಕೆಳಹಂತದಲ್ಲಿ ಬಳಲುತ್ತಿರುವ ಮಾದಿಗ ಜನಾಂಗವನ್ನು ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಇವು ಎಷ್ಟು ಸಹಕಾರಿಯಾಗಿವೆ ಎಂದು

ತಿಳಿಯಲು ಇಲ್ಲಿ ಪ್ರಯತ್ನಿಸಲಾಗಿದೆ. ಅದರಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಪ್ರದೇಶದಲ್ಲಿ ವಾಸಿಸುವ ಈ ಜನಾಂಗ ಯಾವ ರೀತಿ ಆರ್ಥಿಕ ಪ್ರಗತಿ ಸಾಧಿಸಿದೆ ಎಂಬುದನ್ನು ಚರ್ಚಿಸಿದೆ.

## ೪.೧ ಕೃಷಿ ಕಾರ್ಮಿಕರು ಮತ್ತು ಮಾದಿಗ ಜನಾಂಗ

ಕೃಷಿ ಕ್ಷೇತ್ರದಲ್ಲಿ ಕೃಷಿ ಕಾರ್ಮಿಕರ ಪಾತ್ರ ಬಹು ದೊಡ್ಡದು. ಮೂಲತಃ ಕೃಷಿ ಪ್ರಧಾನವಾದ ಈ ದೇಶದಲ್ಲಿ ಬಹು ಸಂಖ್ಯೆಯಲ್ಲಿ ಕೃಷಿ ಕಾರ್ಮಿಕರ ಅವಶ್ಯಕತೆ ಕಂಡುಬರುತ್ತದೆ. ಇಂತಹ ಕೆಲಸಗಳಲ್ಲಿ ತೊಡಗಿಸಿಕೊಳ್ಳುವುದು ಆರ್ಥಿಕವಾಗಿ ಹಿಂದುಳಿದಿರುವ ಮಾದಿಗ ಜನಾಂಗಕ್ಕೆ ಅನಿವಾರ್ಯ. ಕೂಲಿ ದೊರೆಯದೆ ಹೋದರೆ ಜೀವನ ಮಾಡುವುದು ದುಸ್ತರ. ಹೀಗಾಗಿ ಈ ಜನಾಂಗ ಬಹು ಸಂಖ್ಯೆಯಲ್ಲಿ ಕರ್ನಾಟಕದಾದ್ಯಂತ ಕೃಷಿ ಕೂಲಿಯನ್ನೇ ನಂಬಿಕೊಂಡು ಜೀವನ ಮಾಡುತ್ತಿದ್ದಾರೆ. ಈ ರೀತಿ ಕೃಷಿಗೆ ಸಹಾಯವಾಗುವಂತೆ ಭೂಮಾಲಿಕವರ್ಗ ಇವರನ್ನು ಅಂದರೆ ಮಾದಿಗರನ್ನೊಳಗೊಂಡಂತೆ ಇತರೆ ಕೆಳಹಂತದ ಜನರನ್ನು ಕೂಲಿಗಾಗಿ ನೇಮಿಸಿಕೊಳ್ಳುತ್ತಿದ್ದುದನ್ನೂ, ದಾಖಲೆಗಳು ಸ್ಪಷ್ಟಪಡಿಸುತ್ತವೆ. ಸ್ವಾತಂತ್ರ ಪೂರ್ವದಲ್ಲಿ ಮೈಸೂರು ಸಂಸ್ಥಾನದ ಪ್ರವಾಸ ಕೈಗೊಂಡ ಜೆ.ಎ. ದುಬಾಯ್‌ರವರು ಈ ರೀತಿ ದಾಖಲಿಸುತ್ತಾರೆ, ಪ್ರಾಕೃತಿಕವಾಗಿ ಸಂಪತ್ತಿನ ಗಣಿಯಾಗಿರುವ ಭಾರತದಲ್ಲಿ ನೂರರಲ್ಲಿ ತೊಂಬತ್ತರಷ್ಟು ಜನ ಕೃಷಿಯಾಧಾರಿತ ಜೀವನವನ್ನು ನಡೆಸಿದ್ದಾರೆ. ಇಲ್ಲಿ ಸಾಕಷ್ಟು ಕೃಷಿ ಭೂಮಿ ಇದೆ. ಇಲ್ಲಿನ ರೈತರು ಎರಡು, ಮೂರು ಅಥವಾ ನೇಗಿಲುಗಳನ್ನು ಹೊಂದಿದ್ದಾರೆ. ಈ ಶೂದ್ರ ವರ್ಣದಲ್ಲಿ ಮೇಲ್ವರ್ಗದ ಜಾತಿಗಳು ತಮ್ಮ ಕೃಷಿ ನೆರವಿಗೆ ಕೆಳಹಂತದ ಜನರನ್ನೂ ಸೇವಕರಾಗಿ ಹೊಂದಿದ್ದಾರೆ.[೨] ಇದು ಕೆಳಹಂತದ ಜನಾಂಗದಲ್ಲಿ ಒಂದಾದ ಮಾದಿಗ ಜನಾಂಗವು ಕೃಷಿ ಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದರೆಂದು ದೃಢೀಕರಿಸುತ್ತದೆ.

ಹಿಂದಿನಿಂದಲೂ ಹೊಲೆಯರು ಮತ್ತು ಮಾದಿಗರಲ್ಲಿ ಬಹಳಷ್ಟು ಮಂದಿ ಕೃಷಿಯಾಳುಗಳಾಗಿ ದುಡಿಯುತ್ತಿದ್ದರೆಂಬುದಕ್ಕೆ ೧೮೯೧ರಲ್ಲಿ ಬಿಡುಗಡೆಯಾದ ಜನಗಣತಿ ವರದಿ ಮಾಹಿತಿ ಒದಗಿಸುತ್ತದೆ.[೩] ಆ ನಂತರದಲ್ಲಿ ೧೯೨೧ರ ಜನಗಣತಿಯ ಪ್ರಕಾರ ಕೃಷಿ ಕೆಲಸಗಾರರ ಒಟ್ಟು ಸಂಖ್ಯೆಯಲ್ಲಿ ಮಾದಿಗ ಜನಾಂಗವು ೬೩,೩೬೩ ಜನ ಎಂದು ತಿಳಿಸಿಕೊಡುತ್ತದೆ.[೪] ಈ ಎಲ್ಲಾ ದಾಖಲೆಗಳು ಈ ಜನಾಂಗ ಬಹಳ ಹಿಂದಿನಿಂದಲೂ ಕೃಷಿ ಕೂಲಿಯನ್ನು ನಂಬಿ ಜೀವನ ಮಾಡುತ್ತಿದ್ದಾರೆ ಎಂಬುದನ್ನು ತಿಳಿಸುತ್ತವೆ. ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲಾ ಪ್ರದೇಶಗಳಲ್ಲಿ ಮಾದಿಗರು ಪರಿಶಿಷ್ಟ ಜಾತಿಯಲ್ಲಿರುವ ಇತರೆ ಜಾತಿಗಳಿಗಿಂತಲೂ ಹೆಚ್ಚಿನ ಸಂಖ್ಯೆಯನ್ನು ಹೊಂದಿದ್ದು, ಹೆಚ್ಚಿನ ಸಂಖ್ಯೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ವಾಸ ಮಾಡುತ್ತಿದ್ದಾರೆ. ಕೃಷಿ ಕೂಲಿಯನ್ನೆ ನಂಬಿ ಬದುಕುತ್ತಿರುವ ಈ ಜನಾಂಗ ಆಯಾ ಪ್ರದೇಶದ ಭೂಮಾಲಿಕ ವರ್ಗದವರ ಹೊಲಗಳಲ್ಲಿ ತಮ್ಮ ದಿನನಿತ್ಯದ ಜೀವನಕ್ಕಾಗಿ ಪುರುಷರು, ಮಹಿಳೆಯರು ಹಾಗೂ ಮಕ್ಕಳನ್ನೊಳಗೊಂಡಂತೆ ಕೂಲಿ ಮಾಡಿ

ಬದುಕುತ್ತಿರುವ ಸಂಖ್ಯೆ ಬಹಳ. ಇದರಿಂದಾಗಿ ಅನೇಕರು ಜೀತಪದ್ಧತಿಯಂತೆ ಅಮಾನವೀಯ ಪದ್ಧತಿಗೆ ಬಲಿಯಾಗಿರುವರು. ದಿನವಿಡೀ ದುಡಿದರೂ ಸಿಗುವ ಕೂಲಿ ಮಾತ್ರ ಕಡಿಮೆ. ಕೆಲಸಕ್ಕೆ ಸಮನಾದ ಕೂಲಿ ಕೇಳುವಂಥ ಧೈರ್ಯ ಇವರಲ್ಲಿ ಇರಲಿಲ್ಲ. ಹಾಗೆಯೇ ಕೊಡಬೇಕೆಂದು ಭೂಮಾಲಿಕ ವರ್ಗವು ಮುಂದಾಗುತ್ತಿರಲಿಲ್ಲ. ಜೀತಪದ್ಧತಿಯೊಂದಿಗೆ ಜಾರಿಯಲ್ಲಿದ್ದ ಇನ್ನೊಂದು ಅನಿಷ್ಟ ಪದ್ಧತಿ ದುಡಿಮೆಯ ಶೋಷಣೆ. ಭೂಮಿಯಲ್ಲಿ ಹಗಲಿರಳೂ ಮೈಮುರಿದು ದುಡಿತ ದುಡಿಮೆಗೆ ಹಿಡಿಕಾಳು ಕೊಡುವ ದುಷ್ಟ ಪದ್ಧತಿ. ಶ್ರೀಮಂತ ಭೂಮಾಲಿಕ ವರ್ಗ ಬಡ ಕೂಲಿಕಾರನಿಗೆ ನ್ಯಾಯವಾಗಿ ನೀಡಬೇಕಾದ ಕೂಲಿಯನ್ನು ಕೊಡಲು ಸಿದ್ಧರಿರಲಿಲ್ಲ.[೫] ಹೀಗಿರುವಾಗಲೂ ಈ ಜನಾಂಗವು ಕೆಲವೊಂದು ಸಾಮಾಜಿಕ ಸಾಂಸ್ಕೃತಿಕ ಸಂದರ್ಭಗಳಲ್ಲಿ ಉಂಟಾಗುವ ಸಮಸ್ಯೆಗಳ ಪರಿಹಾರಕ್ಕೆ ಆಯಾ ಪ್ರದೇಶದ ಭೂಮಾಲಿಕ ವರ್ಗವನ್ನೇ ಹೆಚ್ಚು ಅವಲಂಬಿಸಿಕೊಂಡಿರುವುದರಿಂದ ಬೇರೆ ದಾರಿಯಿಲ್ಲದೆ ಕಡಿಮೆ ಕೂಲಿಗಾಗಿ ದುಡಿಯುತ್ತಾರೆ.

ಚಿತ್ರದುರ್ಗ ಮತ್ತು ಬಳ್ಳಾರಿ ಪ್ರದೇಶದಲ್ಲಿ ಹೆಚ್ಚು ಭೂಮಿಯನ್ನು ಹೊಂದಿರುವ ಜಾತಿಗಳೆಂದರೆ ಲಿಂಗಾಯಿತ, ಒಕ್ಕಲಿಗ, ರೆಡ್ಡಿ, ಕುರುಬ, ನಾಯಕ ಮುಂತಾದವರು. ಚಿತ್ರದುರ್ಗ ಜಿಲ್ಲೆಯ ತರಳಬಾಳ ಸಿರಿಗೆರೆ ಮಠ ಮತ್ತು ಚಿತ್ರದುರ್ಗದ ಬೃಹಮ್ಮಠಗಳಿಗೆ ಸೇರಿದ ಭೂಮಿಯ ಕೃಷಿಯಲ್ಲಿ ತೊಡಗಿದ್ದವರು ಮಾದಿಗರು. ಒಕ್ಕಲುತನದ ಕೆಲಸಗಳಲ್ಲಿ ಅಂದರೆ ಕುಂಟಿರಂಟಿ ಹೊಡೆಯಲು, ಚಕ್ಕಡಿ ನಡೆಸಲು, ಬಿತ್ತಲು, ಹೊಲ ಕೊಯ್ಯಲು ಹಾಗೂ ರಾಶಿಯನ್ನು ಮಾಡಿ ಧಾನ್ಯಗಳನ್ನು ಮಠಕ್ಕೆ ತರಲು ಸಾಮಾನ್ಯವಾಗಿ ಕೆಳಹಂತದ ಆಳುಗಳನ್ನೇ ಬಳಸಲಾಗುತ್ತಿತ್ತು. ತರಳುಬಾಳು ಮಠದಲ್ಲಿ ಅಸ್ಪೃಶ್ಯರಾಗಿದ್ದ ಈ ದಲಿತ ಮಾದಿಗ ಸಮೂಹವು ದಶಕಗಳಿಂದಲೂ ಒಕ್ಕಲುತನದ ಕೆಲಸವನ್ನು ನಿರ್ವಹಿಸುತ್ತಿದ್ದರು.[೬] ಮಠಕ್ಕೆ ಸೇರಿದ ಹೊಲಗಳಲ್ಲಿಯೂ ಕೂಲಿ ಮಾಡುತ್ತಿರುವವರನ್ನು ಈ ಜನಾಂಗದಲ್ಲಿ ಕಾಣಬಹುದಾಗಿದೆ. ಹೀಗೆ ಈ ಜನಾಂಗ ಬಹುಸಂಖ್ಯೆಯಲ್ಲಿ ಕೂಲಿ ಮಾಡಿಯೇ ಜೀವನ ಸಾಗಿಸುತ್ತಿದ್ದು ಕೆಲವೊಂದು ಸಂದರ್ಭದಲ್ಲಿ ಕೂಲಿ ಸಿಗದೆ ಇದ್ದಾಗ ಅನೇಕರು ತಮ್ಮ ಗ್ರಾಮವನ್ನೂ ಬಿಟ್ಟು ಕೂಲಿಗಾಗಿಯೇ ಮಲೆನಾಡು ಪ್ರದೇಶಗಳಿಗೆ ಇಲ್ಲವೇ ಕೂಲಿ ಸಿಗುವಂತಹ ಪ್ರದೇಶಗಳಿಗೆ ಜೀವನ ನಿರ್ವಹಣೆಗಾಗಿಯೇ ಹೋಗುತ್ತಿದ್ದರು ಮತ್ತು ಈಗಲೂ ಹೋಗುತ್ತಿದ್ದಾರೆ. ಅಂತವರ ಸಂಖ್ಯೆ ಕಡಿಮೆ.

೧೯೯೧ರ ಕೃಷಿ ಅವಲಂಬಿತ ವರ್ಗದಲ್ಲಿ ಕೃಷಿ ಕಾರ್ಮಿಕರ ಸಂಖ್ಯೆ ಹೀಗಿದೆ: ಚಿತ್ರದುರ್ಗ ಜಿಲ್ಲೆಯಲ್ಲಿ ಪುರುಷರು, ೭೯,೮೪೯ ಮಹಿಳೆಯರು ೮೮,೮೧೭ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಪುರುಷರು ೧,೨೭,೯೦೧, ಮಹಿಳೆಯರು ೧,೬೧,೨೦೪ ಕೃಷಿಕಾರ್ಮಿರು ಇರುವುದು ಕಂಡು ಬರುತ್ತದೆ.[೬] ಅಧ್ಯಯನಕ್ಕೊಳಪಡಿಸಿದ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ವಿವಿಧ ತಾಲ್ಲೂಕುಗಳ ಗ್ರಾಮಗಳಲ್ಲಿ ಕೂಲಿ ಮಾಡುವ ಮಾದಿಗ ಜನಾಂಗದ ಕುಟುಂಬಗಳು ಈ ಕೆಳಗಿನಂತೆ ಇವೆ.

| ಕ್ರ.ಸಂ. | ತಾಲೂಕು | ಗ್ರಾಮಗಳ ಸಂಖ್ಯೆ | ಕುಟುಂಬಗಳ ಸಂಖ್ಯೆ |
|---|---|---|---|
| | ಚಿತ್ರದುರ್ಗ ಜಿಲ್ಲೆ | | |
| ೧ | ಚಿತ್ರದುರ್ಗ | ೩ | ೨೭೫ |
| ೨ | ಚಳ್ಳಕೆರೆ | ೬ | ೮೬೫ |
| ೩ | ಮೊಳಕಾಲ್ಮೂರು | ೩ | ೩೭೭ |
| ೪ | ಹೊಳಲ್ಕೆರೆ | ೨ | ೨೨೫ |
| ೫ | ಹೊಸದುರ್ಗ | ೪ | ೨೧೦ |
| ೬ | ಹಿರಿಯೂರು | ೫ | ೪೨೨ |
| | ಬಳ್ಳಾರಿ ಜಿಲ್ಲೆ | | |
| ೭ | ಬಳ್ಳಾರಿ | ೩ | ೬೩೦ |
| ೮ | ಕೂಡ್ಲಿಗಿ | ೫ | ೧೭೮ |
| ೯ | ಸಿರುಗುಪ್ಪ | ೫ | ೨೧೪ |
| ೧೦ | ಹೊಸಪೇಟೆ | ೩ | ೮೨೦ |
| ೧೧ | ಸಂಡೂರು | ೨ | ೧೨೦ |
| ೧೨ | ಹಗರಿಬೊಮ್ಮನಹಳ್ಳಿ | ೨ | ೧೩೦ |
| ೧೩ | ಹೂವಿನಹಡಗಲಿ | ೨ | ೧೯೮ |
| | ಒಟ್ಟು | ೪೫ | ೪೬೬೪ |

ಕೂಲಿ ಮಾಡುತ್ತಿರುವ ಕುಟುಂಬಗಳ ಸಂಖ್ಯೆ ಒಟ್ಟು ೪೬೬೪ ಇದ್ದು ಚಿತ್ರದುರ್ಗದ ೨೩ ಗ್ರಾಮಗಳಲ್ಲಿ ೨೩೭೪ ಮತ್ತು ಬಳ್ಳಾರಿ ಜಿಲ್ಲೆಯ ೨೨ ಗ್ರಾಮಗಳಲ್ಲಿ ೨೨೯೦ ಕುಟುಂಬಗಳು ಕೂಲಿ ನಂಬಿಕೊಂಡು ಜೀವನ ಮಾಡುತ್ತಿವೆ. ಈ ಅಂಕಿ ಅಂಶಗಳ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿಯ ಇತರೆ ಜನಾಂಗಗಳಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ನೆಲೆಸಿರುವ ಮಾದಿಗ ಜನಾಂಗ ಶೇ.೯೦ ರಷ್ಟು ಕೂಲಿಯನ್ನೇ ನಂಬಿ ಬದುಕುತ್ತಿದ್ದಾರೆ. ಅದರಲ್ಲೂ ಗ್ರಾಮೀಣ ಪ್ರದೇಶದಲ್ಲಿ ಪುರುಷ ಮಾತ್ರವಲ್ಲದೆ ಮಹಿಳೆ ಹಾಗೂ ಮಕ್ಕಳೂ ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ.

**ಆಯಗಾರಿಕೆ**

ಕೃಷಿಯಲ್ಲಿ ತೊಡಗಿಕೊಳ್ಳಲು ಅನೇಕರ ಸಹಾಯ ಇದ್ದೆ ಇರುತ್ತದೆ. ಈ ಅಗತ್ಯದ ಹಿನ್ನೆಲೆಯಲ್ಲಿ ವಿವಿಧ ಜನಾಂಗಗಳು ಕೈಗೊಂಡಿರುವ ವೃತ್ತಿಯಿಂದ ಕೃಷಿಗೆ ಬೇಕಾದ ಸಲಕರಣೆಗಳನ್ನು ಭೂಮಾಲಿಕರು ಪಡೆಯಬೇಕಾಗಿರುವುದರಿಂದ ಆಯಾಗಾರಿಕೆ ಹುಟ್ಟಿಕೊಂಡಿವೆ. ಈ ರೀತಿ ಭೂ ಮಾಲಿಕರಿಗೆ ಕೃಷಿ ಸಲಕರಣೆಗಳನ್ನು ಒದಗಿಸಿಕೊಡುವ ಆಯಾಗಾರರಲ್ಲಿ, ಮಾದಿಗ ಜನಾಂಗವು ಒಂದು. ಇವರು ಕೃಷಿಗೆ

ಬೇಕಾಗುವ ಚರ್ಮದ ವಸ್ತುಗಳಾದ ಬಾರುಕೋಲು, ಎತ್ತಿನ ಕೊರಳಪಟ್ಟಿ, ಕಪ್ಪಿಲೆ ಬಾನಿ ಮುಂತಾದವುಗಳನ್ನು ಮಾಡಿಕೊಡಬೇಕಿದ್ದು ಅದರೊಂದಿಗೆ ಭೂಮಾಲಿಕ ಮನೆಯ ಸದಸ್ಯರಿಗೆಲ್ಲ ಚಪ್ಪಲಿ ಹೊಲಿದು ಕೊಡುವ ಕೆಲಸವು ಇವರದಾಗಿತ್ತು. ಅದಕ್ಕೆ ಪ್ರತಿಯಾಗಿ ಅವರಿಂದ ವರ್ಷಕ್ಕೆ ಒಂದು ಬಾರಿ ಸುಗ್ಗಿಯ ಕಾದಲ್ಲಿ ಕಾಳು-ಕಡ್ಡಿ ಪಡೆಯುತ್ತಿದ್ದರು. ಪ್ರತಿಯೊಂದು ಆಯಾಗಾರರಿಗೂ ಸಮಾನವಾದ ರೀತಿಯಲ್ಲಿ ಕಾಳು ಹಂಚಿಕೆಯಾಗುತ್ತಿರಲಿಲ್ಲ. ಅದರಲ್ಲಿ ಮಾದಿಗ ಜನಾಂಗಕ್ಕೆ ನೀಡುತ್ತಿದ್ದ ರೀತಿ ಹೇಗಿರುತ್ತೆಂದರೆ "ಕೆಲವೆಡೆ ಅಯ್ಯನವರು ಅಂದರೆ ದೇವಸ್ಥಾನದ ಪೂಜಾರಿಗೆ ಸುಗ್ಗಿಯ ಕಣದಲ್ಲಿನ ರಾಶಿಯ ತುದಿಯ ಬಾಗವನ್ನು ಅವನ ನಂತರ ಬಡಗಿ, ಕಮ್ಮಾರ, ಅಗಸ ಮುಂತಾದವರಿಗೆ ಅಳೆದು ಕೊಡಲಾಗುತ್ತಿತ್ತು. ಅವರ ನಂತರದ ಸ್ಥಾನ ತೀರ ಕೆಳಜಾತಿಯವರಾದ ಬಾರಿಕಾರ, ಕೊರವ, ಚಲವಾದಿ ಮತ್ತು ಮಾದಿಗರು ತಮ್ಮ ಆಯವನ್ನು ಕಣದ ಸುತ್ತ ಹಾಕಿ ಹೋಗುವ ಅಥವಾ ಚೆಲ್ಲಿರುವ ಧಾನ್ಯವನ್ನು ಬಳಿದು ಕೊಳ್ಳಬೇಕಾಗಿತ್ತು.[೮] ಅದು ನಂತರದಲ್ಲಿ ಸ್ವಲ್ಪಮಟ್ಟಿಗೆ ಉತ್ತಮಗೊಳ್ಳುತ್ತಾ ಬಂದಿದೆ. ಆಧುನಿಕ ಕೈಗಾರಿಕೆ ಮತ್ತು ಈ ಜನಾಂಗದಲ್ಲಾದ ಶಿಕ್ಷಣ, ಆರ್ಥಿಕ ಸೌಲಭ್ಯ ಮುಂತಾದ ಅಂಶಗಳ ಪರಿಣಾಮವಾಗಿ ಇಂದು ಆಯಾಗಾರಿಕೆಯು ಹಿಂದಿನಷ್ಟು ಪ್ರಮಾಣದಲ್ಲಿ ಇಲ್ಲ ಎನ್ನಬಹುದು.

ಇಂತಹ ಆಯಾಗಾರಿಕೆ, ಕೂಲಿ, ಜೀತಪದ್ಧತಿ ಮುಂತಾದವುಗಳ ಮೂಲಕ ಮಾದಿಗರು ಚಿತ್ರದುರ್ಗ ಮತ್ತು ಬಳ್ಳಾರಿ ಪ್ರದೇಶಗಳಲ್ಲಿ ಕೃಷಿಕಾರ್ಮಿಕರಾಗಿ ಕೆಲಸ ಮಾಡುತ್ತಿರುವುದು ಪ್ರತಿಯೊಂದು ಗ್ರಾಮದಲ್ಲಿಯೂ ಕಂಡುಬರುತ್ತದೆ. ಗಣಿಗಳಲ್ಲಿ ಕಾರ್ಮಿಕರಾಗಿ, ಸ್ವಯಂ ಉದ್ಯೋಗ ಮುಂತಾದ ಕೆಲಸಗಳಲ್ಲಿ ಈ ಜನಾಂಗವು ತೊಡಗಿಕೊಂಡಿದ್ದರೂ ಸಹ ಕೃಷಿಯನ್ನು ನಂಬಿ ಜೀವನ ಮಾಡುತ್ತಿರುವ ಸಂಖ್ಯೆ ಅತ್ಯಂತ ಹೆಚ್ಚು. ೧೯೭೧ರಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ೧,೫೬,೫೨೮ ಜನ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ೧,೭೧,೧೮೮ ಜನ ಭೂ ರಹಿತ ಕೃಷಿಕಾರ್ಮಿಕರು ಇದ್ದರು.[೯] ಇವರಲ್ಲಿ ಮಾದಿಗರು ಇದ್ದಾರೆ. ೧೯೯೧ರ ಜನಗಣತಿಯ ಪ್ರಕಾರ ಕೃಷಿ ಅವಲಂಬಿತ ಕೃಷಿಕಾರ್ಮಿಕರ ಸಂಖ್ಯೆ ಚಿತ್ರದುರ್ಗ ಜಿಲ್ಲೆಯಲ್ಲಿ ಒಟ್ಟು ೧,೬೮,೬೬೫. ಕೃಷಿಕಾರ್ಮಿಕರು ಇದ್ದು ಅದರಲ್ಲಿ ೮೮,೮೧೬ ಮಹಿಳೆಯರು ಹಾಗೂ ೭೯,೮೪೯ ಪುರುಷರಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೨,೮೯,೬೦೫ ಜನ ಕೃಷಿ ಕಾರ್ಮಿಕರಿದ್ದು ೧,೬೧,೭೦೪. ಮಹಿಳೆಯರು ಹಾಗೂ ೧,೨೭,೯೦೧ ಪುರುಷ ಕಾರ್ಮಿಕರು ಇರುವುದು ಕಂಡುಬರುತ್ತದೆ.[೧೦] ಈ ರೀತಿ ಎರಡು ಜಿಲ್ಲೆಗಳಲ್ಲಿ ಕೃಷಿಯಲ್ಲಿ ತೊಡಗಿಕೊಂಡ ಕಾರ್ಮಿಕರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಇರುವ ಆರ್ಥಿಕವಾಗಿ ಹಿಂದುಳಿದಿರುವ ಮಾದಿಗ ಜನಾಂಗದ ಪುರುಷ, ಮಹಿಳೆಯರು ಇದ್ದಾರೆಂದು ಹೇಳಬಹುದು.

## ೪.೨ ಭೂ ಹಿಡುವಳಿ ಮತ್ತು ಮಾದಿಗರು

ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವಂತಹದು ಭೂಕಂದಾಯವಾಗಿದೆ. ಹಿಂದಿನಿಂದಲೂ ಭೂಮಿಯು ಕೆಲವೇ ವರ್ಗದ ಕೈಯಲ್ಲಿತ್ತು. ಇದರಿಂದಾಗಿ ಕೆಳಹಂತದಲ್ಲಿ ವಾಸಿಸುವ ಅಸ್ಪೃಶ್ಯರು ಕೇವಲ ಮೇಲು ಜಾತಿಗಳ ಸೇವೆಯನ್ನು ಮಾಡುತ್ತಾ ಕೀಳು ವೃತ್ತಿಗಳಲ್ಲಿ ಮಾತ್ರವೇ ತೊಡಗಿದ್ದರು. ಅವರಿಗೆ ತಮ್ಮದೇ ಆದಂತಹ ಕೃಷಿ ಜಮೀನು ಸ್ವಾತಂತ್ರ್ಯ ಪೂರ್ವದವರೆಗೂ ಇರಲಿಲ್ಲ. ಹೀಗಾಗಿ ಆ ವರ್ಗದಲ್ಲಿ ಒಂದಾದ ಮಾದಿಗ ಜನಾಂಗದವರು ಸಹ ಭೂ ರಹಿತರಾಗಿದ್ದರು. ರಾಜಪ್ರಭುತ್ವದ ಸಂದರ್ಭದಲ್ಲಿ ಕೃಷಿಕರಿಗೂ ಮತ್ತು ಪ್ರಭುತ್ವದ ಮಧ್ಯೆ ಭೂ ಹಿಡುವಳಿದಾರರ ವರ್ಗ ಸೃಷ್ಟಿಯಾಯಿತು. ಈ ಸ್ಥಾನದಲ್ಲಿ ಕೇವಲ ಮೇಲು ಜಾತಿಗಳಲ್ಲಿ ಕೆಲವು ಜಾತಿಗಳು ಮಾತ್ರವೇ ಸಂಪ್ರದಾಯಿಕವಾಗಿ ಮುಂದುವರಿದಿದ್ದರು. ಹೀಗಾಗಿ ದೊಡ್ಡ ದೊಡ್ಡ ಜಾತಿಗಳು ಮಾತ್ರವೇ ಸಾಂಪ್ರದಾಯಿಕವಾಗಿ ಮುಂದುವರಿದಿದ್ದರು. ಇಂತಹ ವ್ಯವಸ್ಥೆಯು ಬದಲಾದದ್ದು ಟಿಪ್ಪುವಿನ ಕಾಲದಲ್ಲಿ 'ಮೆಕಿಂಗ್ ಹಿಸ್ಟರಿ'ಯಲ್ಲಿ ಸಾಕಿಯವರು ಟಿಪ್ಪುವಿನ ಕಾಲದಲ್ಲಿ ಕರ್ನಾಟಕದ ಆಧಾರವಾಗಿದ್ದ ಭೂಮಿಯ ಒಡೆತನ ಊಳಿಗಮಾನ್ಯ ವರ್ಗಗಳ ಏಕಸ್ವಾಮ್ಯ ಮುರಿಯಿತು ಎಂದು ಅಭಿಪ್ರಾಯಪಟ್ಟಿದ್ದಾರೆ. ಭೂಮಾಲಿಕರ ಬದಲಿಗೆ ಸಾಗುವಳಿ ಮಾಡುವ ರೈತರೆ ಭೂ ಹಿಡುವಳಿಗಳನ್ನು ಕೃಷಿ ಮಾಡುವ ವ್ಯವಸ್ಥೆಯ ಹುಟ್ಟಿಕೊಂಡಿತು. ಇದರಿಂದಾಗಿ ಕೃಷಿ ಸರಕು ಆರ್ಥಿಕ ಪ್ರಗತಿ ತೀವ್ರಗತಿ ಪಡೆದುಕೊಂಡಿತು. ಇತಿಹಾಸದಲ್ಲಿ ಮೊಟ್ಟ ಮೊದಲ ಬಾರಿಗೆ ಭೂಮಿಯನ್ನು ತಮ್ಮ ಹೆಸರಲ್ಲಿ ರೈತರು ಪಡೆದುಕೊಂಡರು. ಅವರು ಬೇಕಾದವರಿಗೆ ಭೂಮಿಯನ್ನು ಹಸ್ತಾಂತರ ಮಾಡಬಹುದಿತ್ತು. ಟಿಪ್ಪುವಿನ ಕಾನೂನಿನಂತೆ ಆ ಭೂಮಿಯಿಂದ ಯಾವ ರೈತರನ್ನೂ ಸ್ಥಳಾಂತರಿಸುವಂತಿರಲಿಲ್ಲ. ಹೀಗಾಗಿ ಸಾಗುವಳಿ ಮಾಡುವವನೇ ಭೂ ಒಡೆಯನಾದನು. ಇದರಿಂದ ಪ್ರಬಲ ಭೂಮಾಲಿಕರು ಕಡಿಮೆಯಾದರು.[೨೨] ಅಲ್ಲಿಂದ ಸಣ್ಣ ಹಿಡುವಳಿದಾರರ ಅಸ್ತಿತ್ವಕ್ಕೆ ಬಂದಿತೆನ್ನಬಹುದು.

ಭೂ ಹಿಡುವಳಿಗೆ ಸಂಬಂಧಿಸಿದಂತೆ ಸಾಮಾನ್ಯವಾಗಿ ೧೭೭೪ರಿಂದಲೂ ಚಿತ್ರದುರ್ಗ ಪ್ರದೇಶದಲ್ಲಿ ಪ್ರಬಲ ಹಿಡುವಳಿದಾರರು ಮೇಲ್ಜಾತಿಗೆ ಸೇರಿದವರಾಗಿದ್ದರು. ಈ ಭಾಗದಲ್ಲಿ ರೆಡ್ಡಿಗಳು, ಒಕ್ಕಲಿಗ ಮತ್ತು ಲಿಂಗಾಯಿತರು ಹೆಚ್ಚಿನ ಭೂಮಿಯನ್ನು ಸ್ವಾಧೀನಪಡಿಸಿಕೊಂಡಿದ್ದಾರೆ. ಭೂ ಹೀನರು ಪರಿಶಿಷ್ಟ ಪಂಗಡ, ಪರಿಶಿಷ್ಟ ಜಾತಿಗೆ ಸೇರಿದವರು. ಆರ್ಥಿಕವಾಗಿ ಪ್ರಯೋಜಕಾರಿಯಲ್ಲದ ಭೂ ಹಿಡುವಳಿಗಳನ್ನು ಹೊಂದಿದ್ದಾರೆ. ಚಿಕ್ಕ ಮತ್ತು ಸಾಧಾರಣ ರೈತರದು ಸಾಮಾನ್ಯವಾಗಿ ಕಳಪೆ ಗುಣಮಟ್ಟದ ಭೂಮಿ ಹೊಂದಿದ್ದಾರೆ. ಫಲವತ್ತಾದ ನೀರಾವರಿ ಸೌಲಭ್ಯವುಳ್ಳ ಕೆರೆಗಳ ಹಿಂಭಾಗದ ಭೂಮಿಯು ಶ್ರೀಮಂತ ಕೃಷಿಕರ ಕೈಯಲ್ಲಿತ್ತು. ಚಿತ್ರದುರ್ಗ ಪ್ರದೇಶದ ಗ್ರಾಮಗಳಲ್ಲಿ ಭೂರಹಿತ ಕೃಷಿಕರೆಲ್ಲರೂ ಭೂ ಒಡೆಯರಿಗೆ ಅಧೀನವಾಗಿದ್ದರು.[೨೩] ಈ ರೀತಿ ಕೃಷಿಗೆ ಯೋಗ್ಯವಲ್ಲದ ಅಲ್ಪ-ಸ್ವಲ್ಪ ಭೂಮಿಯನ್ನು

ಪರಿಶಿಷ್ಟ ಜಾತಿಯಲ್ಲಿ ಒಂದಾದ ಮಾದಿಗ ಜನಾಂಗವು ಹೊಂದಿದ್ದಿತು. ಆದರೆ ಅದನ್ನು ನೀರಾವರಿಗೆ ಒಳಪಡಿಸುವಷ್ಟು ಅವರು ಶಕ್ತರಿರಲಿಲ್ಲ.

ಮೈಸೂರು ಸಂಸ್ಥಾನದಲ್ಲಿ ಪರಿಶಿಷ್ಟ ಜಾತಿ ವರ್ಗದ ಜನರಿಗೆ ಭೂಮಿ ಹಂಚಲು ಆರಂಭಿಸಿದ್ದು ಬ್ರಿಟೀಷರ ಕಾಲದಲ್ಲಿಯೇ. ಮುರುಗೇಶ್ ಪಿಳ್ಳೆ ಅವರು ೧೯೨೫ರಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ದಲಿತರಿಗೆ ರಿಯಾಯಿತಿ ದರದಲ್ಲಿ ಬೀಳು ಭೂಮಿಯನ್ನು ವಿತರಿಸುವಂತೆ ಸರ್ಕಾರವನ್ನು ಕೇಳಿಕೊಂಡರು. ೧೯೩೧ರ ವೇಳೆಗೆ ಆದಿಕರ್ನಾಟಕದವರಿಗೆ ೯,೭೬೩ ಎಕರೆಗಳಷ್ಟು ಭೂಮಿ ಹಂಚಲಾಗಿದೆಯೆಂದು ಸರ್ಕಾರವು ಘೋಷಿಸಿತು[೧೩] ಈ ವೇಳೆಯಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಹಂಚಿಕೆಯಾಗಿದ್ದ ಅದು ಮಾದಿಗ ಜನಾಂಗದವರಿಗೆ ಎಂದು ಹೇಳಬಹುದು. ಏಕೆಂದರೆ ಈ ಭಾಗದಲ್ಲಿ ಮಾದಿಗರು ಆದಿಕರ್ನಾಟಕವೆಂದೇ ಗುರುತಿಸಿಕೊಂಡಿದ್ದಾರೆ. ಹಾಗೆಯೇ ಬಳ್ಳಾರಿ ಜಿಲ್ಲೆಯಲ್ಲಿ ಮದ್ರಾಸ್ ಸರ್ಕಾರದ ಆಡಳಿತ ಸಂದರ್ಭದಲ್ಲಿ ೧೯೨೩ರಿಂದಲೂ ಮಾದಿಗ ಜನಾಂಗದವರಿಗೆ ಭೂಮಿ ನೀಡಿರುವುದನ್ನು ಕೆಲವೊಂದು ದಾಖಲೆಗಳ ಮೂಲಕ ತಿಳಿಯಲಾಗಿದೆ.[೧೪] ಹೀಗೆ ಸ್ವಾತಂತ್ರ್ಯ ಪೂರ್ವದಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಸರ್ಕಾರವು ಹಂಚಿರುವ ಭೂಮಿಯನ್ನು ಮಾದಿಗ ಜನಾಂಗದ ಅನೇಕರು ಪಡೆದುಕೊಂಡಿದ್ದಾರೆ. ಕರ್ನಾಟಕ ರಾಜ್ಯ ಸರ್ಕಾರವು ೧೯೫೦ರ ನಂತರ ಭೂ ಸುಧಾರಣ ಕಾಯಿದೆ, ಕನಿಷ್ಠ ವೇತನ ಕಾಯಿದೆಗಳನ್ನು ಜಾರಿಗೊಳಿಸುವುದರ ಮೂಲಕ ಭೂ ರಹಿತ ಸಮುದಾಯಗಳ ಹಿತಾಸಕ್ತಿಯನ್ನು ಗಮನಿಸಿದೆ.[೧೫]

**ಸ್ವಾತಂತ್ರ್ಯೋತ್ತರ ಕಾಲದ ಭೂ ಹಂಚಿಕೆ**

ಸ್ವಾತಂತ್ರ್ಯ ಪೂರ್ವಕ್ಕಿಂತ ನಂತರದಲ್ಲಿ ಸರ್ಕಾರವು ಪರಿಶಿಷ್ಟ ಜಾತಿಯವರಿಗೆ ಭೂ ಹಂಚಿಕೆಯನ್ನು ಹೆಚ್ಚಾಗಿ ಮಾಡಿದೆ ಎನ್ನಬಹುದು. ಕರ್ನಾಟಕ ಸರ್ಕಾರವು ೧೯೫೬ರ ನಂತರ ಕಾನೂನು ರೀತಿಯಲ್ಲಿ ಎಲ್ಲ ಭೂ ರಹಿತ ಸಮುದಾಯಗಳಿಗೂ ದರಖಾಸ್ತು ಮೂಲಕ ಭೂಮಿಯನ್ನು ಹರಡುವ ಪ್ರಯತ್ನ ಮಾಡಿದೆ. ಈ ಹಿನ್ನೆಲೆಯಲ್ಲಿ ಅಧಿಕ ಸಂಖ್ಯೆಯ ಫಲಾನುಭವಿಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದ ಸಮುದಾಯಗಳು ದರಖಾಸ್ತು ಭೂಮಿಯನ್ನು ಪಡೆದಿರುವ ಬಗ್ಗೆ ಅಂಕಿ ಸಂಖ್ಯೆಗಳು ಸೃಷ್ಟಿಪಡಿಸುತ್ತವೆ.[೧೬] ಆಗ ಹಂಚಿರುವ ಭೂಮಿಯು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳನ್ನು ಒಳಗೊಂಡಿರುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ, ಹೊಳಲ್ಕೆರೆ ಮುಂತಾದ ತಾಲ್ಲೂಕುಗಳಲ್ಲಿ ಭೂ ಹಂಚಿಕೆಯಲ್ಲಿ ಮಾದಿಗ ಜನಾಂಗದವರಿಗೆ ದೊರೆತಿರುವ ಭೂವಿಯನ್ನು ಕಾಣಬಹುದಾಗಿದೆ. ಆದಿಕರ್ನಾಟಕ(ಮಾದಿಗ) ಜಾತಿಗೆ ಸೇರಿದ ಸಿದ್ದಪ್ಪ ಬಿ. ಮತ್ತು ಇತರರು ದಿನಾಂಕ ೨೯.೦೨.೧೯೫೫ರಲ್ಲಿ ಕೊಟ್ಟ ಮನವಿಯನ್ನು ಪುರಸ್ಕರಿಸಿದ 'ಮೈಸೂರು ರಾಜ್ಯ' ಸರ್ಕಾರ ಚಿತ್ರದುರ್ಗ ತಾಲ್ಲೂಕಿನ ಕೆನ್ನೆಡಲು ಕಾವಲಿನಲ್ಲಿರುವ ಸುಮಾರು ೭೦೦ ಎಕರೆ ಜಮೀನಿನಲ್ಲಿ

ತಲಾ ೯ ಎಕರೆಯಂತೆ ಮರಡಿ ಹಳ್ಳಿಯ ೬೨ ಜನ ಮಾದಿಗ ಜನಾಂಗದವರಿಗೆ ನೀಡಿರುವುದು ತಿಳಿದು ಬರುತ್ತದೆ. ಆ ಜಮೀನು ಸಾಮೂಹಿಕ ಕೃಷಿಗೆ ಒಳಗಾಗಿದ್ದು 'ಬಾಪೂಜಿ ಕಲೆಕ್ಟಿವ್ ಫಾರ್ಮಿಂಗ್ ಸೊಸೈಟಿ'ಯ ಹೆಸರಲ್ಲಿ ಆ ಜಮೀನು ಇದೆ.[೧೭] ಇಂದಿಗೂ ಅದು ಸಾಮೂಹಿಕ ಬೇಸಾಯಕ್ಕೆ ಒಳಪಟ್ಟಿದೆ. ಚಳ್ಳಕೆರೆ ತಾಲೂಕು ಚೌಳೂರು ಕಾವಲು, ಸಾಣಿಕೆರೆ ಕಾವಲು (ಗಂಡಿಮಂಟೆ) ಮುಂತಾದ ಕಾವಲುಗಳಲ್ಲಿ ಮಾದಿಗ ಜನಾಂಗದ ಅನೇಕರು ಭೂ ಹಂಚಿಕೆಯ ಫಲಾನುಭವಿಗಳಿದ್ದಾರೆ.

ಅದೇ ರೀತಿ ಚಿತ್ರದುರ್ಗ ತಾಲ್ಲೂಕಿನ ತುರವನೂರು ಗ್ರಾಮದ ಸ್ವಾತಂತ್ರ್ಯ ಹೋರಾಟಗಾರ ಯರ್ರಪ್ಪನವರು ಎನ್. ರಾಚಯ್ಯನವರ ಕಾಲದಲ್ಲಿ ನಮಗೆಲ್ಲಾ ಜಮೀನು ದೊರಕಿತು. ಅವರು ಬಂದಾಗ ನಮ್ಮನೊ ಹುಕ್ಕಡಿ ಕಾವಲಿನಲ್ಲಿ ನಮ್ಮ ಹಟ್ಟಿಯ ಎಲ್ಲರಿಗೂ ೧೦ ಎಕರೆ ಜಮೀನು ಕೊಟ್ಟರು ಎಂದು ತಿಳಿಸಿದರು. ಹಿರಿಯೂರು ತಾಲ್ಲೂಕಿನ ಕೆ.ಆರ್.ಹಳ್ಳಿ, ಜಿ.ಹನುಮಂತಪ್ಪ ಹೇಳುವಂತೆ ಸ್ವಾತಂತ್ರ್ಯ ಬಂದ ಮೇಲೆ ಗೋಮಾಳದ ಜಮೀನು ೨೦೦ ಎಕರೆ ಇತ್ತು. ಅದಕ್ಕೆಲ್ಲ ಅರ್ಜಿ ಹಾಕಿಕೊಂಡಾಗ ಆಗ ಸಾಗುವಳಿ ದೊರಕಿದವು. ಹೀಗೆ ಎನ್. ರಾಚಯ್ಯನವರು ಮಂತ್ರಿಯಾಗಿದ್ದ ಕಾಲಕ್ಕೆ ಚಿತ್ರದುರ್ಗ ಮತ್ತು ಬಳ್ಳಾರಿ ಪ್ರದೇಶಗಳೆರಡರಲ್ಲಿ ಭೂಮಿ ಹಂಚಿಕೆ ಮಾಡಲಾಗಿದೆ. ಅದೇ ರೀತಿಯಾಗಿ ಸರ್ಕಾರವು ಕೃಷಿಗೆ ಅನುಕೂಲವಾಗುವಂತೆ ಕೃಷಿಯ ಸಲಕರಣೆಗಳು, ಎತ್ತುಗಾಡಿ ಮುಂತಾದವುಗಳನ್ನು ನೀಡಿರುವುದಲ್ಲದೆ ಜಮೀನು ನೀಡಿರುವ ಕಡೆಯೇ 'ಕೃಷಿ ಕಾಲೋನಿ'ಗಳನ್ನೂ ನಿರ್ಮಾಣ ಮಾಡಿಕೊಟ್ಟು, ಕೃಷಿ ಮಾಡಲು ಅನುಕೂಲ ಮಾಡಿರುವುದು ಸಹ ಕಂಡುಬರುತ್ತದೆ. ಚಿತ್ರದುರ್ಗ ತಾಲ್ಲೂಕಿನ ಮರಡಿಹಳ್ಳಿ ಗ್ರಾಮದ ಮಾದಿಗ ಜನಾಂಗದವರಿಗೆ ಕೆನ್ನೆಡಲು ಕಾವಲಿನಲ್ಲಿ ನೀಡಿದ ಜಮೀನನ್ನು ಕೃಷಿಗೆ ಒಳಪಡಿಸಲು ೬೨ ಜೊತೆ ಎತ್ತು, ೬ ಗಾಡಿ ಹಾರೆ, ೬೨ ಗುದ್ದಲಿ, ೬೨ ಮಡಕಿಗೆ ಹಾಕುವ ಕುಳ, ೬೨ ಕುಂಟೆಕುಡ ಹಾಗೂ ೬೨ ಮಡಕೆ ಕುಳಗಳನ್ನು ನೀಡಲಾಯಿತು. 'ಕೃಷಿ ಕಾಲೋನಿ' ಕಾರ್ಯಕ್ರಮದ ಅನುಕೂಲ ಪಡೆಯದ ಪರಿಶಿಷ್ಟ ಜಾತಿಗಳು ಹಾಗೂ ಬುಡಕಟ್ಟು ಜನಾಂಗಗಳಿಗೆ ವೈಯಕ್ತಿಕವಾಗಿ ವ್ಯವಸಾಯ, ಕರಕುಶಲ ಕಲೆಗಳ ಹಾಗೂ ಗುಡಿಕೈಗಾರಿಕೆಗಳ ಅಭಿವೃದ್ಧಿಗಾಗಿ ಸರ್ಕಾರವು ೧೯೫೫ರಲ್ಲಿ ಅವಶ್ಯವಿರುವ ಹಣವನ್ನು ಮಂಜೂರು ಮಾಡಿತು. ಉಳುಮೆಗೆ ಒಂದು ಜೊತೆ ಎತ್ತುಗಳನ್ನು ಖರೀದಿಸಲು ೩೦೦ ರೂಗಳನ್ನು ನೀಡಲಾಗುತ್ತಿತ್ತು. ೧೯೬೭ರಲ್ಲಿ ಈ ಮೊತ್ತ ಹಣವನ್ನು ೫೦೦ರೂಗಳಿಗೆ ಹೆಚ್ಚಿಸಲಾಯಿತು.[೧೮] ಹೀಗೆ ಕೇವಲ ಜಮೀನು ಮಾತ್ರ ನೀಡಿ ಸುಮ್ಮನಾಗದೆ ಅವರಿಗೆ ಕೃಷಿ ಅನುಕೂಲವಾಗಲೆಂದು ಕೃಷಿ ಸಲಕರಣೆಗಳನ್ನು ಕೊಂಡುಕೊಳ್ಳಲು ಸಹಾಯಮಾಡಿತು.

೧೯೭೧ರಲ್ಲಿ ಕರ್ನಾಟಕ ಸರ್ಕಾರವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳಿಗೆ ನೇಗಿಲುಗಳನ್ನು ಕೊಳ್ಳಲು ಧನ ಸಹಾಯ ಒದಗಿಸಿತು. ಹಾಗೆಯೇ ಸರ್ಕಾರಿ ಜಮೀನುಗಳ ಹಂಚಿಕೆ ಯೋಜನೆಯನ್ವಯ ೧೯೭೨-೭೪ರ ಅವಧಿಯಲ್ಲಿ ೯೫,೬೪೪ ಪರಿಶಿಷ್ಟ ಜಾತಿಯ ಕುಟುಂಬಗಳಿಗೆ

೨,೭೭೦೧ಳ ಎಕರೆ ೩೫ ಗುಂಟೆ ಜಮೀನನ್ನು ವಿತರಿಸಲಾಯಿತು.[18] ಈ ಸಂದರ್ಭದಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಹಂಚಿರುವ ಭೂಮಿಯನ್ನು ಪಡೆದ ಪರಿಶಿಷ್ಟ ಜಾತಿಯ ಫಲಾನುಭವಿಗಳು ಇದ್ದಾರೆ. ಈ ಫಲಾನುಭವಿಗಳಲ್ಲಿ ಮಾದಿಗರು ಸಹ ಇದ್ದಾರೆ.

**ಕೃಷಿ ಕಾಲೋನಿ**

ದುರ್ಬಲ ಜಾತಿಗಳ ಆರ್ಥಿಕ ಅಭಿವೃದ್ಧಿಗಾಗಿ ಸರ್ಕಾರವು ಕೈಗೊಂಡ ಕಾರ್ಯಕ್ರಮಗಳಲ್ಲಿ 'ಕೃಷಿ ಕಾಲೋನಿ' ನಿರ್ಮಾಣವೂ ಒಂದು. ಇದು ಭೂರಹಿತ ಜನರಿಗೆ ಕೃಷಿಗೆ ಅನುಕೂಲವಾಗಲು ಜಮೀನು ನೀಡಿದ ಸ್ಥಳದಲ್ಲಿಯೇ ಮನೆಗಳನ್ನು ನಿರ್ಮಾಣ ಮಾಡಿಕೊಡುವ ಕ್ರಮವನ್ನು ಕೈಗೊಳ್ಳಲಾಯಿತು. ಪಂಚವಾರ್ಷಿಕ ಯೋಜನೆಗಳ ಮೂಲಕ ಭೂಹಂಚಿಕೆ, ಕೃಷಿ ಕಾಲೋನಿಗಳನ್ನು ನಿರ್ಮಿಸಲು ಯೋಜಿಸಲಾಯಿತು. ಪರಿಶಿಷ್ಟ ಜಾತಿ ಮತ್ತು ವರ್ಗದ ಭೂರಹಿತರಿಗೆ ಪ್ರತಿ ವ್ಯಕ್ತಿಗೆ ನಾಲ್ಕು ಅಥವಾ ಐದು ಎಕರೆ ವ್ಯವಸಾಯ ಯೋಗ್ಯ ಜಮೀನನ್ನು ನೀಡಲಾಯಿತು. ಅವರು ಮನೆ ಕಟ್ಟಿಕೊಳ್ಳಲು ೪೦೦ ರೂಪಾಯಿಗಳನ್ನು ಅದರ ಜೊತೆಯಲ್ಲೇ ಮಂಜೂರು ಮಾಡಲಾಯಿತು. ಎರಡನೆಯ ಯೋಜನೆಯಲ್ಲಿ ೧೨೦ ಕೃಷಿ ಕಾಲೋನಿಗಳು ಸ್ಥಾಪಿತವಾಗಿದ್ದವು.[20] ಈ ರೀತಿಯಾಗಿ ಭೂರಹಿತರಿಗೆ ಜಮೀನು ಕೊಡುವುದರೊಂದಿಗೆ ಕೃಷಿ ಮಾಡಲು ಅನುಕೂಲವಾಗಲೆಂದು ಅಲ್ಲಿಯೇ ನಿರ್ಮಾಣ ಮಾಡಿಕೊಟ್ಟಿರುವ 'ಕೃಷಿ ಕಾಲೋನಿ'ಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬರುತ್ತವೆ. ಈ ಕಾಲೋನಿಗಳಲ್ಲಿ ಮಾದಿಗ ಜನಾಂಗದ ಅನೇಕರು ಹೊಲ ಮನೆಗಳನ್ನು ಪಡೆದಿದ್ದಾರೆ. ಅಂತಹ ಕಾಲೋನಿಗಳು ಈ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಚೌಳೂರು ಕಾವಲಿನಲ್ಲಿ ೧೦೫೦ ಎಕರೆ ೨೪ ಕುಂಟೆ ಜಮೀನನ್ನು ೧೦೦ ಜನ ಮಾದಿಗ ಜನಾಂಗದವರಿಗೆ ತಲಾ ೪ ಎಕರೆಯಂತೆ ನೀಡಲಾಗಿದೆ. ಕೆ.ಎಂ. ಕೋಟಿ ಜಿಲ್ಲಾಧಿಕಾರಿಗಳಾಗಿದ್ದ ಕಾಲದಲ್ಲಿ ಡಿ.ಸಿ.ಗ್ರಾಂಟ್‌ನಿಂದ ಬಾಬುಜಗ ಜೀವನರಾಂ ಕಾಲೋನಿಯಲ್ಲಿ ೫೦ ಮನೆಗಳು ನಿರ್ಮಾಣವಾಗಿವೆ. ಇಲ್ಲಿ ಜಮೀನು ಪಡೆದಿರುವವರು ಬಸವೇಶ್ವರ ಮತ್ತು ಲಕ್ಷ್ಮಿನರಸಿಂಹಸ್ವಾಮಿ ಕೃಷಿ ಕಾಲೋನಿಗಳಲ್ಲಿ ವಾಸವಾಗಿದ್ದಾರೆ. ಹಾಗೆಯೇ ಚಿತ್ರದುರ್ಗ ತಾಲ್ಲೂಕಿನ ಕೆನ್ನೆಡಲು ಕಾವಲಿ, ಬಾಪು ಕೃಷಿ ಕಾಲೋನಿ ಇದೆ. ಹೀಗೆ ಅನೇಕ ಭಾಗಗಳಲ್ಲಿ ಕೃಷಿ ಕಾಲೋನಿಗಳಿರುವುದು ಜಿಲ್ಲೆಯಲ್ಲಿ ಕಂಡುಬರುತ್ತದೆ. ಕಾಲೋನಿಗಳಲ್ಲಿ ವಾಸಮಾಡುವವರಲ್ಲಿ ಅನೇಕರು ಮಾದಿಗ ಜನಾಂಗದವರು. ಬಾಪು ಕಾಲೋನಿಯಲ್ಲಿ ಮನೆಗಳನ್ನು ಕಟ್ಟಿಕೊಳ್ಳಲು ೭೫ ರೂಪಾಯಿಗಳು ಹಾಗೂ ಹೆಂಚುತೀರು ಕೊಟ್ಟಿದ್ದರು. ಬಸವಲಿಂಗಪ್ಪನವರ(ಸಮಾಜ ಕಲ್ಯಾಣ ಸಚಿವರು) ಕಾಲದಲ್ಲಿ ೧೦ ತಗಡಿನ ಮನೆಗಳನ್ನು ನಿರ್ಮಿಸಲು ಸರ್ಕಾರದ ವತಿಯಿಂದ ಹಣ ನೀಡಿದ್ದರು. ಮತ್ತೆ ೨೦ ಮನೆಗಳನ್ನು ಕಟ್ಟಿಕೊಡಲು ಸರ್ಕಾರ ಮುಂದಾಯಿತು. ಈ ರೀತಿ ಪಡೆದ ಸಾಲವನ್ನು ಕೆಲವರು ತೀರಿಸಿದರೆ, ಮತ್ತೆ ಕೆಲವರ ಸಾಲವನ್ನು ಸರ್ಕಾರವೇ ಮನ್ನಾ ಮಾಡಿತು. ಈ ವಿಷಯವನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಫಲಾನುಭವಿಗಳಲ್ಲಿ ಒಬ್ಬರಾದ ಸ್ವಾತಂತ್ರ್ಯ ಹೋರಾಟ ಗಾರರಾದ ಮಣ್ಣಪ್ಪ ಮರಡಿಹಳ್ಳಿ, ತಿಳಿಸಿದರು.

ಚಿತ್ರದುರ್ಗ ತಾಲ್ಲೂಕಿನ ತರುವನೂರು ಯರಪ್ಪ (ಸ್ವಾತಂತ್ರ್ಯ ಹೋರಾಟಗಾರ)ನವರು ಜಮೀನು ಕೊಟ್ಟಿರುವ ಹುಕ್ಕಡಿ ಕಾವಲುನಲ್ಲಿ ಮನೆಕಟ್ಟಿಕೊಳ್ಳಲು ಇಪ್ಪತ್ತೈದು ಮನೆಗೆ ಹೆಂಚು ತೀರು ಕೊಟ್ರು ಆಗ ಮನೆ ಕಟ್ಟಿಕೊಂಡ್ವಿ. ಆಮೇಲೆ ಇಪ್ಪತ್ತು ಮನೆಗೆ ಗ್ರಾಂಟ್ ಕೊಟ್ರು ಆಗ ಮನೆ ಕಟ್ಟಿ ಕೊಂಡ್ವಿ ಎಂದು ತಿಳಿಸಿದರು. ಈ ರೀತಿ ಪರಿಶಿಷ್ಟ ಜಾತಿಯ ಜನರ ಆರ್ಥಿಕಾಭಿವೃದ್ಧಿಗಾಗಿ ಜಮೀನುಗಳನ್ನು ನೀಡಿ ಅದನ್ನು ಕೃಷಿ ಮಾಡಲು ಬೇಕಾಗುವಂತೆ ಕೃಷಿ ಸಲಕರಣೆಗಳನ್ನು ನೀಡಿದ್ದಲ್ಲದೆ ಅಲ್ಲಿಯೇ ಕಾಲೋನಿಗಳ ನಿರ್ಮಾಣ ಮಾಡಿಕೊಡಲಾಗಿದೆ. ಇಂತಹ ಸೌಲಭ್ಯವನ್ನು ಮಾದಿಗ ಜನಾಂಗದ ಅನೇಕರು ಪಡೆದುಕೊಂಡಿರುವುದು ಜಿಲ್ಲೆಯಾದ್ಯಂತ ಅನೇಕ ಭಾಗಗಳಲ್ಲಿ ಕಂಡುಬರುತ್ತದೆ. ಆದರೆ ಈ ಬಗೆಯ ಕೃಷಿ ಕಾಲೋನಿಗಳು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುವುದಿಲ್ಲ.

## ೪.೩ ಭೂ ಸುಧಾರಣೆ ಮತ್ತು ಮಾದಿಗರು

ಭೂ ಸುಧಾರಣೆ ಕಾಯಿದೆಗಳನ್ನು ಜಮೀನಿಗೆ ಸಂಬಂಧಿಸಿದಂತೆ ಕೃಷಿಯಲ್ಲಿ ಸುಧಾರಣೆ ತರುವ ಸಲುವಾಗಿ ಜಾರಿಯಲ್ಲಿ ತರಲಾಗಿದೆ. ಇದು ಭೂರಹಿತ ಜನರಿಗೆ ಜಮೀನು ಹಂಚಿಕೆ ಮಾಡಲು ಸೂಚಿಸುತ್ತದೆ. ರಾಜ್ಯ ಪುನಾರಚನೆಗೊಂಡ ನಂತರದಲ್ಲಿ ಭೂ ಸುಧಾರಣಾ ಕಾಯಿದೆಗಳನ್ನು ಜಾರಿಗೆ ತರಲಾಗಿದೆ. ಏಕೆಂದರೆ ಈ ಹಿಂದೆ ವಿವಿಧ ಸರ್ಕಾರದ ಆಡಳಿತಕ್ಕೆ ಒಳಪಟ್ಟಿರುವ ರಾಜ್ಯದ ಅನೇಕ ಪ್ರದೇಶಗಳಲ್ಲಿ ಭೂಮಿಗೆ ಸಂಬಂಧಿಸಿದಂತೆ ಏಕರೂಪದ ಕಾನೂನುಗಳು ಸ್ವಾತಂತ್ರ್ಯನಂತರದಲ್ಲಿ ಇರಲಿಲ್ಲ. ಈ ಕಾರಣದಿಂದ ಏಕರೂಪದ ಕಾನೂನು ಜಾರಿಗೆ ತರುವ ಸಲುವಾಗಿಯೇ ರಾಜ್ಯ ಸರ್ಕಾರವು ಕ್ರಮಕೈಗೊಂಡು ಭೂ ಸುಧಾರಣೆಗಳನ್ನು ಜಾರಿಯಲ್ಲಿ ತಂದಿತು. ಇದರಲ್ಲಿ ಭೂ ಮಿತಿ ಹೇರಿಕೆ, ಗೇಣಿ ಸಮಸ್ಯೆ ನಿವಾರಣೆ ಭೂ ಹಂಚಿಕೆ ಮುಂತಾದ ಪ್ರಮುಖ ಕಾರ್ಯಕ್ರಮಗಳನ್ನು ಈ ಕಾಯಿದೆಗಳು ಒಳಗೊಂಡಿದ್ದವು. ಇಲ್ಲಿ ಬಹು ಮುಖ್ಯವಾಗಿ ಭೂ ಹಂಚಿಕೆಗೆ ಸಂಬಂಧಿಸಿದಂತೆ ಮಾತ್ರವೇ ಗಮನಹರಿಸಲಾಗಿದೆ. ಏಕೆಂದರೆ ಅದು ಭೂ ರಹಿತರಿಗೆ ಕೃಷಿ ಜಮೀನು ಹಂಚುವಂತಹ ಕಾರ್ಯಕ್ರಮವಾಗಿರುವುದರಿಂದ ಭೂರಹಿತ ಮಾದಿಗ ಜನಾಂಗ ಯಾವ ರೀತಿ ಈ ಸೌಲಭ್ಯವನ್ನು ಪಡೆಯಲಾಗಿದೆ ಎಂದು ತಿಳಿಯಲು ಪ್ರಯತ್ನಿಸಲಾಗಿದ್ದು, ಚಿತ್ರದುರ್ಗ ಮತ್ತು ಬಳ್ಳಾರಿ ಪ್ರದೇಶಗಳನ್ನು ವಿಶೇಷವಾಗಿ ಗಮನಹರಿಸಿದೆ.

### ೧೯೬೧ರ ಭೂ ಸುಧಾರಣ ಕಾಯಿದೆ

ರಾಜ್ಯ ಪುನರ್‌ರಚನೆಗೊಂಡ ನಂತರ ಭೂ ಸಂಬಂಧ ಅಧ್ಯಯನ ಮಾಡಲು ಒಂದು ಸಮಿತಿಯನ್ನು ಬಿ.ಡಿ. ಜತ್ತಿಯವರ ಅಧ್ಯಕ್ಷತೆಯಲ್ಲಿ ನೇಮಕಮಾಡಿತು. ಇದು ಅಧ್ಯಯನ ಮಾಡಿ ತನ್ನ ವರದಿಯನ್ನು ಸರ್ಕಾರಕ್ಕೆ ನೀಡಿತು. ಆ ವರದಿಯ ಆಧಾರದ ಮೇರೆಗೆ ೧೯೬೧ರಲ್ಲಿ ಭೂ ಸುಧಾರಣಾ ಕಾಯಿದೆ ವಿಧಾನಮಂಡಲಗಳಲ್ಲಿ ಒಪ್ಪಿಗೆ ಪಡೆದು ೧೯೬೫ ರವರೆಗೆ ಅದು ಜಾರಿಯಲ್ಲಿ ಬರಲಿಲ್ಲ. ಆ ನಂತರ

ಸರ್ಕಾರವು ಈ ಕಾಯಿದೆಯನ್ನು ಅನುಸರಿಸಿ ಕ್ರಮ ಕೈಗೊಳ್ಳಲಾರಂಭಿಸಿತು. ಕಾಯಿದೆ ಪ್ರಮುಖವಾಗಿ ಎರಡು ಅಂಶಗಳನ್ನು ಪ್ರತಿಪಾದಿಸಿತು. ಒಂದು ಗೇಣಿಗೆ ಜಮೀನು ಕೊಡುವುದನ್ನು ಪ್ರತಿಬಂಧಿಸಿತು. ಎರಡು ಭೂ ಹಿಡುವಳಿಯ ಮೇಲೆ ಮಿತಿ ಹೇರಲಾಯಿತು. ಈ ಎರಡು ಅಂಶಗಳು ಭೂರಹಿತ ಮಾದಿಗ ಜನಾಂಗಕ್ಕೆ ಅನುಕೂಲ ಮಾಡಿಕೊಟ್ಟಿರುವುದು ಕಂಡುಬರುತ್ತದೆ. ಭೂಮಿ ಮಿತಿ ಹೇರಿಕೆಯ ಭೂಮಾಲಿಕರಿಗೆ ಹೊಡೆತವನ್ನು ಕೊಟ್ಟಿತು. ಇಂತಿಷ್ಟು ಭೂಮಿಯನ್ನು ಮಾತ್ರವೆ ಹೊಂದಿರಬೇಕೆಂದು ತಿಳಿಸಿ ಅದಕ್ಕೂ ಹೆಚ್ಚಿನ ಉಳಿದ ಜಮೀನನ್ನು ಸರ್ಕಾರ ವಶಪಡಿಸಿಕೊಳ್ಳುತ್ತಾ ಹೋಯಿತು. ಅದಕ್ಕೆ ಪರಿಹಾರವಾಗಿ ಇಂತಿಷ್ಟು ಹಣವನ್ನು ನಿಗದಿ ಮಾಡಿ ಪರಿಹಾರವಾಗಿ ಭೂಮಾಲಿಕರಿಗೆ ನೀಡಿತು. ಈ ರೀತಿ ವಶಪಡಿಸಿಕೊಂಡ ಭೂಮಿಯನ್ನು ಸಮಾಜದ ದುರ್ಬಲ ವರ್ಗದವರಿಗೆ ಸರ್ಕಾರ ನೀಡಲು ಮುಂದಾಯಿತು. ಈ ಕ್ರಮದಿಂದಾಗಿ ರಾಜ್ಯದಲ್ಲಿ ಸುಮಾರು ೩೦ ಲಕ್ಷದಷ್ಟು ಭೂಹೀನ ಕುಟುಂಬಗಳಿದ್ದು ಇವರಲ್ಲಿ ಕೇವಲ ಶೇಕಡ ೦.೩ರಷ್ಟು ಭೂಹೀನರಿಗೆ ಭೂಮಿ ದೊರಕಿದೆ.[೨೧] ಇನ್ನು ಗೇಣಿಗೆ ಜಮೀನು ಕೊಡವುದನ್ನೂ ನಿರ್ಬಂಧಿಸಿದ ಸರ್ಕಾರ ಕೆಲವೊಂದು ವರ್ಗದ ಜನರಿಗೆ ರಿಯಾಯಿತಿ ನೀಡಿದೆ. ಸಣ್ಣ ಹಿಡುವಳಿದಾರರು ಎಂಬ ಜನವರ್ಗವು ಸಮಾಜದ ದುರ್ಬಲ ವರ್ಗಗಳು ಎಂದು ಪರಿಗಣಿತರಾಗಿರುವವರು. ೧೯೮೨ರಲ್ಲಿ ಭಾರತದ ನಾನಾ ರಾಜ್ಯಗಳಲ್ಲಿ ಈ ಜನ ವರ್ಗಗಳು ತಮ್ಮ ಜಮೀನನ್ನು ಗೇಣಿ ವ್ಯವಸ್ಥೆಯಿಂದ ಬೇಸಾಯ ಮಾಡಿಸಲು ಅವಕಾಶ ದೊರೆಯಬೇಕಾದಂತವರು ಎಂದು ಪರಿಗಣಿಸಲಾಗಿತ್ತು.[೨೨] ಹೀಗಾಗಿ ಜಮೀನು ಹೊಂದಿದ್ದಂತಹ ಆರ್ಥಿಕವಾಗಿ ಹಿಂದುಳಿದ ಜನಗಳಿಗೆ ಈ ರಿಯಾಯಿತಿ ತೋರಿಸಿದ್ದು ಅವರು ಗೇಣಿಗೆ ಜಮೀನು ಕೊಡಲು ಅವಕಾಶವಾಯಿತು. ಈ ಎರಡು ಜಿಲ್ಲೆಗಳಲ್ಲಿ ಸಣ್ಣ ಪುಟ್ಟ ಜಮೀನು ಹೊಂದಿರುವ ಮಾದಿಗ ಜನಾಂಗ ತಮ್ಮ ಜಮೀನನ್ನು ಕೃಷಿ ಮಾಡಿಸಲು ನೀಡುವಂತಾಯಿತು. ಈ ರೀತಿ ೧೯೬೧ರ ಭೂ ಸುಧಾರಣಾ ಕಾಯಿದೆಯ ಸೌಲಭ್ಯವನ್ನು ಪಡೆದುಕೊಂಡ ದುರ್ಬಲ ಜಾತಿಗಳಲ್ಲಿ ಮಾದಿಗ ಜನಾಂಗವು ಒಂದು.

**೧೯೭೪ರ ಭೂ ಸುಧಾರಣಾ ಕಾಯಿದೆ**

ದೇವರಾಜ ಅರಸು ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ ಈ ಕಾಯಿದೆ ಜಾರಿಗೆ ತರಲಾಯಿತು. ಈ ಕಾಯಿದೆ ಜಾರಿಗೆ ತಂದ ಮೊದಲು ೧೯೬೯ರಲ್ಲಿ ಬೆಂಗಳೂರಿನಲ್ಲಿ ನಡೆದ ಕಾಂಗ್ರೆಸ್ ಸಮಿತಿಯ ಅಧಿವೇಶನದಲ್ಲಿ ಪ್ರಧಾನ ಮಂತ್ರಿ ಇಂದಿರಾಗಾಂಧಿ ಮಾತನಾಡುತ್ತಾ ಭೂ ಸುಧಾರಣೆ (ಕೃಷಿಗಿಂತ) ಕಡಿಮೆ ಮಹತ್ವದ್ದೇನೂ ಅಲ್ಲ. ನಾವು ತುರ್ತಾಗಿ ಕಾರ್ಯಶೀಲರಾಗದೆ ಹೋದರೆ ತೀವ್ರವಾದ ರಾಜಕೀಯ ಹಾಗೂ ಆರ್ಥಿಕ ಸಮಸ್ಯೆಗಳು ಎದ್ದು ಕಾಣುವವು[೨೩] ಎಂದರು. ಈ ಹಿನ್ನೆಲೆಯಲ್ಲಿ ಕೇಂದ್ರ ಮತ್ತು ರಾಜ್ಯದಲ್ಲಿ ಅಧಿಕಾರ ಕೂಡ ಕಾಂಗ್ರೆಸ್ ಪಕ್ಷ ತನ್ನ ಆಡಳಿತ ಅವಧಿಯಲ್ಲಿ ಈ ನಿಟ್ಟಿನಲ್ಲಿ ಕ್ರಮಕೈಗೊಂಡಿವು. ಕೇಂದ್ರದಲ್ಲಿ ೨೧ ಅಂಶಗಳ ಕಾರ್ಯಕ್ರಮವನ್ನು ಜಾರಿಗೆ ತರುವಂತೆ ಸೂಚಿಸಲಾಗಿ

ಅದರಲ್ಲಿ ಭೂಸುಧಾರಣಾ ಕ್ರಮವು ಒಂದಾಗಿತ್ತು. ಇದನ್ನು ಅನುಸರಿಸಿಯೇ ರಾಜ್ಯ ಸರ್ಕಾರವು ಅರಸು ಮುಖ್ಯಮಂತ್ರಿಯಾಗಿದ್ದಾಗ ೧೯೭೪ರಲ್ಲಿ ಭೂ ಸುಧಾರಣಾ ಕಾಯಿದೆಯನ್ನು ಜಾರಿಗೊಳಿಸಿತು. ಇದು ಶೋಷಣೆಗೆ ಸಿಲುಕಿದ ಬಡರೈತರ ಹಿತಕ್ಕಾಗಿ 'ಉಳುವವನೇ ಹೊಲದೊಡೆಯ' ಕಾನೂನು ಜಾರಿಗೆ ತಂದರು. ಬಡವರನ್ನು ಕೋರ್ಟ್ ಮುಂತಾದೆಡೆಗೆ ಈ ಕಾನೂನಿನ ಪ್ರಯೋಜನ ಕೈಗೆಟುಕದಂತೆ ಪ್ರಭಾವಿ ಶ್ರೀಮಂತವರ್ಗ ತಡೆಯಬಹುದೆಂಬ ಶಂಕೆಯಿಂದ ಬಡವರನ್ನು ಪ್ರಬಲ ವರ್ಗದ ಕುತಂತ್ರದಿಂದ ದೂರ ಮಾಡಲು ಗೇಣಿದಾರರಿಗೆ ರಕ್ಷಣೆ ಕೊಡುವ ಕಾನೂನನ್ನು ಜಾರಿಗೆ ತಂದುದಲ್ಲದೆ 'ಭೂ ಸುಧಾರಣಾ ಮಂಡಳಿ' ರಚಿಸಿದರು. ಭೂ ಸ್ವಾಧೀನಕ್ಕಾಗಿ ಬಡರೈತರು ನೀಡಬೇಕಾಗಿದ್ದ ಹಣವನ್ನು ರಾಜ್ಯದ 'ಭೂ ಅಭಿವೃದ್ಧಿ ಬ್ಯಾಂಕಿ'ನಿಂದ ಆರ್ಥಿಕ ನೆರವು ಒದಗಿಸಿದರು.[೨೪]

ಈ ಕಾಯಿದೆಯು ೧೯೬೧ರ ಭೂ ಸುಧಾರಣಾ ಕಾಯಿದೆಯನ್ನು ಪುನರ್‌ವಿಮರ್ಶೆಗೆ ಒಳಪಡಿಸಿ ಕೆಲವೊಂದು ಬದಲಾವಣೆಗಳನ್ನು ಜಾರಿಯಲ್ಲಿ ತಂದಿತು. ಈ ಸಂಬಂಧ ಹಿಂದಿನ ಕಾಯಿದೆಯು ಗೇಣಿಗೆ ರಿಯಾಯಿತಿ ಕೇವಲ ಸೈನಿಕರಿಗೆ ಮತ್ತು ನಾವಿಕರಿಗೆ ಮಾತ್ರವೇ ನೀಡಲಾಯಿತು. ಇದರಿಂದಾಗಿ ಗೇಣಿಗೆ ತಮ್ಮ ಜಮೀನನ್ನು ಕೊಡಲು ಅವಕಾಶವಿದ್ದ ದುರ್ಬಲ ವರ್ಗದ ಈ ಕಾಯಿದೆಯಿಂದ ಗೇಣಿಗೆ ಕೊಡಲು ಪ್ರತಿಬಂಧಿಸಿದಂತಾಯಿತು. ಅಲ್ಲದೇ ಉಳುವವನೆ ಭೂ ಒಡೆಯ ಘೋಷಣೆಯಿಂದ ಹೊರಟ ಈ ಕಾಯಿದೆ ಊಳುಮೆ ಮಾಡುತ್ತಿದ್ದ ಅನೇಕ ಭೂರಹಿತ ಮಾದಿಗ ಜನಾಂಗಕ್ಕೆ ಜಮೀನನ್ನು ದೊರಕಿಸಿಕೊಟ್ಟಿತು. ಸರ್ಕಾರವು ನಾನಾ ವಿಧದಲ್ಲಿ ತಾನು ವಶಪಡಿಸಿಕೊಂಡಿದ್ದ ಭೂಮಿಯನ್ನು ಭೂ ರಹಿತರಿಗೆ ಹಂಚುವ ಕಾರ್ಯವನ್ನು ನ್ಯಾಯ ಮಂಡಳಿಗೆ ವಹಿಸಿತ್ತು. ಅನಂತರ ಜಿಲ್ಲೆಯ ಡೆಪ್ಯೂಟಿ ಕಮಿಷನರ್ ಅಥವಾ ಅಧಿಕೃತರಾದ ಅವರ ಅಧೀನ ಅಧಿಕಾರಿಗೆ ವಹಿಸಿಕೊಡಲಾಯಿತು. ವಿತರಣೆಗೆ ಒದಗಿಬರುವ ಜಮೀನುಗಳಲ್ಲಿ ಶೇ.೫೦ರಷ್ಟನ್ನೂ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳ ಜನರಿಗೆ ಮೀಸಲಿರಬೇಕೆಂದು ಕಾಯಿದೆಯು ಕಟ್ಟಳೆ ಹಾಕಿತ್ತು.[೨೫] ಈ ಕ್ರಮದಿಂದ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯಲ್ಲಿ ಒಂದಾದ ಮಾದಿಗ ಜನಾಂಗ ಭೂರಹಿತರು ಕೃಷಿಗೆ ಜಮೀನು ಪಡೆದಿರುವುದು ಕಂಡುಬರುತ್ತದೆ. ಅಲ್ಲದೆ ಈ ರೀತಿ ಪಡೆದ ಭೂಮಿಯನ್ನು ಕೃಷಿಗೆ ಒಳಪಡಿಸಲು ಅನೇಕ ಕೃಷಿ ಸಲಕರಣೆಗಳನ್ನು ಕೊಳ್ಳಲು ಸರ್ಕಾರ ಈ ವರ್ಗದ ಜನರಿಗೆ ಧನ ಸಹಾಯ ಮಾಡಿದೆ. ಐದನೆಯ ಯೋಜನೆಯಲ್ಲಿ ೪.೬೩ ಲಕ್ಷ ರೂ.ಗಳನ್ನು ೩,೩೧೯ ಜನರಿಗೆ ಸಹಾಯ ಮಾಡುವುದರ ಮೂಲಕ ವೆಚ್ಚ ಮಾಡಿತು. ೧೯೭೯-೮೦ರಲ್ಲಿ ೩,೬೮೬ ಕೃಷಿಕರಿಗೆ ನೆರವು ೩.೮೪ ಲಕ್ಷ ರೂ.ಗಳಾಗಿತ್ತು.[೨೬] ಹೀಗೆ ಸರ್ಕಾರ ಮಾಡಿರುವ ಸಹಾಯವನ್ನು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಮಾದಿಗ ಜನಾಂಗದ ಅನೇಕರು ಪಡೆದುಕೊಂಡಿದ್ದಾರೆ. ಈ ಸಂದರ್ಭದಲ್ಲಿ ಅಂದರೆ ಸುಮಾರು ೧೯೭೫ರಲ್ಲಿ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಮರಡಿಹಳ್ಳಿ ಗ್ರಾಮದಲ್ಲಿ ಮಾದಿಗ ಜನಾಂಗಕ್ಕೆ ಸೇರಿದ ೬೨ ಜನಕ್ಕೆ ೬೨ ಗಾಡಿ, ೬೨ ಜೊತೆ ಎತ್ತುಗಳನ್ನು ಕೊಳ್ಳಲು ಸಹಾಯ

ಮಾಡಿರುವುದನ್ನು ಈ ಸೌಲಭ್ಯ ಪಡೆದವರಲ್ಲಿ ಒಬ್ಬರಾದ ಮರಡಿಹಳ್ಳಿ ಮಣ್ಣಪ್ಪನವರು ತಿಳಿಸಿದರು.

ಕರ್ನಾಟಕ ಭೂ ಮಂಜುರಾತಿ ನಿಯಮಾವಳಿ ಅಡಿಯಲ್ಲಿ ೧೯೭೦ರಿಂದ ೧೯೮೨-೮೩ರವರೆಗೆ ಭೂರಹಿತರಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ದೊರತಿರುವ ಭೂಮಿಯ ವಿವರ ಈ ಕೆಳಗಿನಂತಿದೆ :[೨೭]

| ವರ್ಷ | ಹರಡಿಕೊಂಡಿರುವ ಫಲಾನುಭವಿಗಳ ಸಂಖ್ಯೆ | ಒಟ್ಟು ಜಮೀನು ವಿಸ್ತೀರ್ಣ ಎಕರೆ-ಗುಂಟೆ | ಪರಿಶಿಷ್ಟ ಜಾತಿ ಮತ್ತು ಪಂಗಡ ಸಂಖ್ಯೆ | ವಿಸ್ತೀರ್ಣ ಎಕರೆ-ಗುಂಟೆ |
|---|---|---|---|---|
| ೧೯೭೦-೭೧ | ೧,೧೧೨ | ೨೯೬೯-೨೧ | ೫೬೧ | ೧೯೧೮-೦೧ |
| ೧೯೭೧-೭೨ | ೧,೨೩೪ | ೫೧೨೭-೧೭ | ೬೬೩ | ೨೫೮೯-೧೮ |
| ೧೯೭೨-೭೩ | ೧,೨೪೬ | ೩೭೨೦-೧೭ | ೫೮೪ | ೧೬೧೫-೦೩ |
| ೧೯೭೩-೭೪ | ೨,೦೫೬ | ೫೫೬೯-೧೨ | ೧೦೦೦ | ೨೫೩೧-೧೫ |
| ೧೯೭೪-೭೫ | ೩,೯೮೨ | ೮೯೨೯-೦೪ | ೧೮೨೫ | ೪೦೫೯-೧೦ |
| ೧೯೭೫-೭೬ | ೯೭೪ | ೨೪೪೧-೧೯ | ೫೧೮ | ೧೫೧೪-೧೭ |
| ೧೯೭೬-೭೭ | ೧೧೦೫ | ೨೬೮೫-೧೫ | ೫೫೮ | ೧೪೮೧-೨೧ |
| ೧೯೭೭-೭೮ | ೩೨೫೮ | ೯೮೦೦-೩೬ | ೧೯೩೮ | ೫೮೭೯-೩೨ |
| ೧೯೭೮-೭೯ | ೫೧೫ | ೧೪೮೬-೧೫ | ೩೧೫ | ೯೮೦-೩೮ |
| ೧೯೭೯-೮೦ | ೧೯೩ | ೬೭೪-೩೯ | ೧೪೮ | ೫೨೭-೩೩ |
| ೧೯೮೦-೮೧ | ೪೭೦ | ೭೮೮-೩೧ | ೨೯೮ | ೫೮೭-೨೩ |
| ೧೯೮೧-೮೨ | ೩೪೦ | ೯೧೮-೩೪ | ೨೫೯ | ೭೪೦-೨೩ |
| ೧೯೮೨-೮೩ | ೧೨೮೩ | ೩೦೧೦-೨೦ | ೮೯೩ | ೨೧೧೯-೨೯ |
| ಒಟ್ಟು | ೧೭,೭೭೦ | ೪೮,೦೨೨-೩೯ | ೯೫೬೦ | ೨೬೫೧೫-೨೩ |

(ಬಸವರಾಜಪ್ಪ ಎಚ್.ಈ., ಚಿತ್ರದುರ್ಗ ಪ್ರದೇಶದ ಭೂ ಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ)

ಹೀಗೆ ಸರ್ಕಾರವು ೧೯೭೦ ರಿಂದ ೧೯೮೩ರವರೆಗೆ ಭೂರಹಿತರಿಗೆ ಹಂಚಿರುವ ಜಮೀನುಗಳಲ್ಲಿ ಪರಿಶಿಷ್ಟ ಜಾತಿಯ ೯೫೬೦ ಫಲಾನುಭವಿಗಳು ಒಟ್ಟು ೨೬೫೧೫ ಎಕರೆ ೨೩ ಗುಂಟೆ ಭೂಮಿಯನ್ನು ಪಡೆದಿದ್ದಾರೆ. ಇವರಲ್ಲಿ ಈ ಜಿಲ್ಲೆಯ ಭೂರಹಿತರಾದ ಮಾದಿಗರು ಪಡೆದಿದ್ದಾರೆ.

ರಾಜ್ಯದಲ್ಲಿ ಭೂರಹಿತರಿಗೆ ಭೂಹಂಚಿಕೆಯ ಯೋಜನೆಯು ಮುಂದುವರಿದು ೧೯೮೨-೮೪ರ ಅವಧಿಯಲ್ಲಿ ೨೦,೫೯೧ ಪರಿಶಿಷ್ಟ ಜಾತಿಯ ಕುಟುಂಬಗಳಿಗೆ ೫೩,೨೦೧ ಎಕರೆ ಸರ್ಕಾರಿ ಜಮೀನನ್ನು ನೀಡಲಾಯಿತು.[೨೮] ಈ ರೀತಿ ಹಂಚಿರುವ ಜಮೀನುಗಳನ್ನು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಮಾದಿಗ ಜನಾಂಗವು ಪಡೆದುಕೊಳ್ಳಲಾಗಿದೆ. ಭೂಮಿಯ ಒಡೆತನಕ್ಕಾಗಿ ಪರಿಶಿಷ್ಟ ಜಾತಿ ಮತ್ತು

ಪಂಗಡದವರಿಂದ ಖಾಯಂಗೊಳಿಸಲು ಬಂದ ಅರ್ಜಿಗಳಲ್ಲಿ ಚಿತ್ರದುರ್ಗ ಜಿಲ್ಲೆಯಿಂದ ೩೨೨೩೬ ಅರ್ಜಿಗಳಲ್ಲಿ ೧೧೫೪೯ ಜನರಿಗೆ ೨೩೪೪೫.೧೨ ಎಕರೆಗಳನ್ನು ಸರ್ಕಾರ ೧೯೯೦ರ ನಂತರ ಖಾಯಂ ಗೊಳಿಸಿದೆ. ಅದೇ ರೀತಿ ಬಳ್ಳಾರಿ ಜಿಲ್ಲೆಯಿಂದ ೧೪೩೦೪ ಅರ್ಜಿಗಳಲ್ಲಿ ೪೩೦೦ ಅರ್ಜಿಗಳನ್ನು ಪುರಸ್ಕರಿಸಿ ೧೩,೩೯೧.೦೦ ಎಕರೆ ಜಮೀನನ್ನೂ ಖಾಯಂಗೊಳಿಸಿದೆ.[೨೯] ಖಾಯಂಗೊಳಿಸಿರುವ ಜಮೀನುಗಳಲ್ಲಿ ಮಾದಿಗ ಜನಾಂಗ ಅಭಿವೃದ್ಧಿ ನಿಗಮವು ಭೂ ಒಡೆತನ ಕಲ್ಪಿಸಿಕೊಡಲು ಯೋಜಿಸಲಾಗಿದ್ದು ಅವರಲ್ಲಿ ೬೦ ಜನರಿಗೆ ನೀಡಿದೆ. ಅವುಗಳಲ್ಲಿ ೨೦ ಜನರು ಮಾದಿಗ ಜನಾಂಗಕ್ಕೆ ಸೇರಿದವರಿಗೆ ಭೂಒಡೆತನ ಸಿಕ್ಕಿದೆ. (ಜಿಲ್ಲಾ ಪರಿಶಿಷ್ಟ ಜಾತಿ ವರ್ಗಗಳ ಅಭಿವೃದ್ಧಿ ನಿಗಮ ಬಳ್ಳಾರಿ) ಅಂತಹ ಗ್ರಾಮಗಳೆಂದರೆ ಮರಡಿಹಳ್ಳಿ, ಚಿಕ್ಕಜಾಜೂರು, ರಂಗಾಪುರ, ತುರುವನೂರು, ದೊಗ್ಗನಾಳ್ ಮುಂತಾದ ಗ್ರಾಮಗಳಲ್ಲಿ ಅವರಿಗೆ ಭೂಮಿ ಹಂಚಿರುವುದು ಕಂಡುಬರುತ್ತದೆ.

ಇವುಗಳಲ್ಲದೆ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿರುವ ಅನೇಕರಿಗೆ ಸರ್ಕಾರ ಜಮೀನು ನೀಡಿದಾಗ ಚಿತ್ರದುರ್ಗ ಜಿಲ್ಲೆಯಲ್ಲಿ ಈ ಹೋರಾಟದಲ್ಲಿ ಭಾಗವಹಿಸಿರುವ ಮಾದಿಗ ಜನಾಂಗದವರು ಜಮೀನುಗಳನ್ನು ಪಡೆದುಕೊಂಡಿದ್ದಾರೆ. ಅಧ್ಯಯನಕ್ಕೊಳಪಡಿಸಿದ ಹಳ್ಳಿಗಳಲ್ಲಿ ಸರ್ಕಾರಿ ಜಮೀನಿನ ಜೊತೆಯಲ್ಲಿ ಪಿತ್ರಾರ್ಜಿತ ಜಮೀನು ಹಾಗೂ ಕೆಲವರು ಸ್ವಂತ ಖರೀದಿ ಮಾಡಿದ ಜಮೀನುಗಳನ್ನು ಮಾದಿಗ ಜನಾಂಗ ಹೊಂದಿರುವುದು ಕಂಡುಬರುತ್ತದೆ. ಇವರು ಜಮೀನುಗಳ ಹೊಂದಿರುವ ಕುಟುಂಬಗಳ ಸಂಖ್ಯೆ ಈ ರೀತಿ ಇದೆ.

### ೧. ಚಿತ್ರದುರ್ಗ ಜಿಲ್ಲೆಯ ಕೆಲವು ಗ್ರಾಮಗಳಲ್ಲಿ ಜಮೀನು ಹೊಂದಿರುವ ಮಾದಿಗ ಜನಾಂಗದ ಕುಟುಂಬಗಳ ವಿವರ

| ಕ್ರ.ಸಂ. | ತಾಲೂಕು | ಗ್ರಾಮಗಳ ಸಂಖ್ಯೆ | ಸಂಖ್ಯೆ |
|---|---|---|---|
| ೧ | ಚಿತ್ರದುರ್ಗ | ೩ | ೩೦ |
| ೨ | ಚಳ್ಳಕೇರೆ | ೬ | ೧೨೩ |
| ೩ | ಮೊಳಕಾಲ್ಮೂರು | ೩ | ೧೧೪ |
| ೪ | ಹೊಳಲ್ಕೆರೆ | ೨ | ೧೯೦ |
| ೫ | ಹೊಸದುರ್ಗ | ೪ | ೧೨೦ |
| ೬ | ಹಿರಿಯೂರು | ೫ | ೧೧೮ |
| | ಒಟ್ಟು | ೨೩ | ೧೧೦೦ |

ಬಳ್ಳಾರಿ ಜಿಲ್ಲೆ

| ಕ್ರ.ಸಂ. | ತಾಲೂಕು | ಗ್ರಾಮಗಳ ಸಂಖ್ಯೆ | ಸಂಖ್ಯೆ |
|---|---|---|---|
| ೦೧ | ಬಳ್ಳಾರಿ | ೩ | ೨೪೬ |
| ೦೨ | ಸಿರಗುಪ್ಪ | ೩ | ೨೬ |
| ೦೪ | ಕೂಡ್ಲಿಗಿ | ೫ | ೧೬೫ |
| ೦೫ | ಹಗರಿಬೊಮ್ಮನಹಳ್ಳಿ | ೨ | ೬೨ |
| ೦೬ | ಸಂಡೂರು | ೨ | ೫೦ |
| ೦೭ | ಹೂವಿನಹಡಗಲಿ | ೨ | ೬೩ |
| ೦೮ | ಹೊಸಪೇಟೆ | ೩ | ೩೪೧ |
| | ಒಟ್ಟು | ೨೨ | ೯೦೪ |

ಚಿತ್ರದುರ್ಗ ಜಿಲ್ಲೆಯಲ್ಲಿ ೨೩ ಗ್ರಾಮಗಳಲ್ಲಿ ೧೧೦೦ ಕುಟುಂಬಗಳು ಜಮೀನು ಹೊಂದಿದ್ದರೆ ಬಳ್ಳಾರಿ ಜಿಲ್ಲೆಯಲ್ಲಿ ೨೨ ಗ್ರಾಮಗಳಲ್ಲಿ ೯೦೪ ಕುಟುಂಬಗಳು ಜಮೀನು ಹೊಂದಿರುವುದು ಕಂಡು ಬರುತ್ತದೆ. ಸಿರುಗುಪ್ಪ ತಾಲ್ಲೂಕಿನ ದೇವಲಾಪುರ ಮತ್ತು ಯರಕಲ್ಲು ಗ್ರಾಮಗಳಲ್ಲಿ ಮಾದಿಗರಿಗೆ ಭೂಮಿ ಇಲ್ಲದಿರುವುದು ಕಂಡುಬಂದಿತು.

ಈ ರೀತಿ ಮಾದಿಗರು ಹೊಂದಿರುವ ಜಮೀನುಗಳಲ್ಲಿ ೧/೨ ಎಕರೆಯಿಂದ ಹಿಡಿದು ೩ ಎಕರೆಯ ಒಳಗಡೆ ಇರುವ ಜಮೀನುಗಳೇ ಹೆಚ್ಚು. ೩ ರಿಂದ ೫ ಎಕರೆ ಜಮೀನು ಹೊಂದಿರುವ ಮಾದಿಗ ಜನಾಂಗದ ಸಂಖ್ಯೆ ೩೩೯ ಆದರೆ ೫ ರಿಂದ ೧೦ ಎಕರೆಯ ಒಳಗಡೆ ಭೂಮಿಯನ್ನು ಹೊಂದಿರುವವರು ೪೨ ಕುಟುಂಬ ೧೦ ಎಕರೆ ಹೆಚ್ಚು ಜಮೀನು ಹೊಂದಿರುವ ಮಾದಿಗ ಜನಾಂಗದ ೩ ಮನೆತನಗಳು ಕಪ್ಪಗಲ್ಲಿನಲ್ಲಿ ಕಂಡುಬಂದವು. ಆದರೆ ಈ ಎಲ್ಲಾ ಜಮೀನುಗಳಲ್ಲಿ ನೀರಾವರಿಗೆ ಒಳಪಡಿಸಿರುವ ಜಮೀನು ತಂಬಾ ಕಡಿಮೆ. ಚಿತ್ರದುರ್ಗ ಜಿಲ್ಲೆಯಲ್ಲಿ ಮಾರಿಕಣಿವೆ. ಡ್ಯಾಂನಿಂದ ಹೊರಟ ಕಾಲುವೆಯ ಅಕ್ಕಪಕ್ಕ ಇರುವ ಜಮೀನುಗಳು ಹಾಗೂ ಬಳ್ಳಾರಿ ಜಿಲ್ಲೆಯ ತುಂಗಾಭದ್ರ ಡ್ಯಾಂನಿಂದ ಹೊರಟು (ಬಳ್ಳಾರಿ ಜಿಲ್ಲೆಯಲ್ಲಿ) ಕಾಲುವೆಯ ಅಕ್ಕಪಕ್ಕದಲ್ಲಿರುವ ಜಮೀನುಗಳು ನೀರಾವರಿಗೆ ಒಳಪಟ್ಟಿವೆ ಯಾದರೂ ಹಾಗೆಯೇ ಕೆರೆ ಇರುವ ಸ್ಥಳಗಳಲ್ಲಿಯೂ ಕೆಲವು ಇವೆ. ಆದರೆ ಈ ರೀತಿ ನೀರಿನ ವ್ಯವಸ್ಥೆ ಇರುವ ಕಡೆಯಲ್ಲಿ ಮಾದಿಗ ಜನಾಂಗ ಜಮೀನು ಹೊಂದಿರುವುದು ತುಂಬಾ ಕಡಿಮೆ.

ಈ ರೀತಿ ಮಾದಿಗ ಜನಾಂಗ ತಾವು ಹೊಂದಿರುವ ಜಮೀನುಗಳಲ್ಲಿ ಕೆಲವು ಸರ್ಕಾರದ ಭೂ ಹಂಚಿಕೆಯಿಂದಲೂ ಪಡೆದಿರುವ ಜಮೀನು ಇಲ್ಲ ಎನ್ನಲಾಗಿದೆ. ಇತ್ತೀಚೆಗೆ ೧೯೯೭ರಲ್ಲಿ ಬಳ್ಳಾರಿ ತಾಲ್ಲೂಕಿನ ಕಪ್ಪಗಲ್ಲು ಗ್ರಾಮದಲ್ಲಿ ಸರ್ಕಾರವು ೨೦ ದೇವದಾಸಿಯರಿಗೆ ಒಂದೊಂದು ಎಕರೆಯಂತೆ

ಜಮೀನು ಹಂಚಿಕೆ ಮಾಡಿರುವುದು ಅಧ್ಯಯನ ಸಂದರ್ಭದಲ್ಲಿ ಕಂಡು ಬಂದಿತು. ಆದರೆ ಹೆಚ್ಚಿನ ಪ್ರಮಾಣದಲ್ಲಿ ಮಾದಿಗ ಜನಾಂಗ ಕೃಷಿಯ ಕಡೆ ಗಮನಹರಿಸದೆ ಕೂಲಿಯನ್ನೆ ನಂಬಿ ಬದುಕುತ್ತಿದ್ದಾರೆ. ಇದಲ್ಲದೆ ಸರ್ಕಾರವು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದವರಿಗೆ ಜಮೀನು ನೀಡಿದಾಗ ಮಾದಿಗ ಜನಾಂಗದ ಸ್ವಾತಂತ್ರ್ಯ ಹೋರಾಟಗಾರರನೇಕರು ಜಮೀನು ಪಡೆದಿದ್ದಾರೆ. ಅಂತಹ ಗ್ರಾಮಗಳೆಂದರೆ ಚಿತ್ರದುರ್ಗ ತಾಲ್ಲೂಕಿನ ಮರಡಿಹಳ್ಳಿ, ತುರುವನೂರು, ಹೊಳಲ್ಕೆರೆ ತಾಲ್ಲೂಕಿನ ಚಿಕ್ಕಜಾಜೂರು, ದೊಗ್ಗನಾಳ, ರಂಗಾಪುರ ಈ ಗ್ರಾಮಗಳಲ್ಲಿ ಜಮೀನು ಪಡೆದ ಮಾದಿಗ ಜನಾಂಗದ ಸ್ವಾತಂತ್ರ್ಯ ಹೋರಾಟಗಾರರಿದ್ದಾರೆ. ೧೯೭೭ರ ಕಾಯಿದೆಯ ನಂತರ ಜೀತಪದ್ಧತಿ ನಿರ್ಮೂಲನೆಗೊಳಿಸಲು ಪ್ರಯತ್ನಿಸಿದ್ದು, ಅದರಂತೆ ಪುನರ್ವವ್ಯಸ್ಥೆ ಮಾಡಲು ಮುಂದಾದಾಗ ಈ ಪದ್ಧತಿಗೆ ಒಳಗಾದವರಿಗೆ ಭೂಮಿ ನೀಡಲು ಸರ್ಕಾರ ಮುಂದೆ ಬಂದಾಗ ಅನೇಕ ಮಾದಿಗ ಜನಾಂಗದವರಿಗೆ ಜಮೀನು ದೊರಕಿದೆ. ಅಲ್ಲದೆ ಇತ್ತೀಚೆಗೆ ಆರ್ಥಿಕವಾಗಿ ಪ್ರಬಲರಾಗಿರುವ ಕೆಲವರು ಜಮೀನನ್ನು ಕೊಂಡುಕೊಂಡು ಕೃಷಿಯಲ್ಲಿ ತೊಡಗಿದ್ದಾರೆ. ಈ ರೀತಿಯಲ್ಲಿ ಸರ್ಕಾರದಿಂದಲೂ ಹಾಗೂ ವೈಯುಕ್ತಿಕವಾಗಿ ಭೂಮಿಯ ಒಡೆತನವನ್ನೂ ಈ ಎರಡು ಜಿಲ್ಲೆಗಳಲ್ಲಿರುವ ಮಾದಿಗ ಜನಾಂಗ ಹೊಂದಲಾಯಿತು.

ಈ ರೀತಿ ಪಡೆದ ಜಮೀನುಗಳಲ್ಲಿ ಸರ್ಕಾರ ದರಖಾಸ್ತು ಮೂಲಕ ಹಂಚಿರುವ ಭೂಮಿಯ ಗುಣಮಟ್ಟ ಉತ್ಕೃಷ್ಟವಾಗಿಲ್ಲದೇ ಇರುವುದು. ಇಂತಹ ಭೂಮಿ ಕೇವಲ ಎರಡರಿಂದ ಮೂರು ಎಕರೆಯಷ್ಟು ಇರುವುದು ಹಾಗೆ ಬಹುತೇಕ ಭೂಮಿಯು ಸಣ್ಣ ಕಲ್ಲುಗಳಿಂದ ಕೂಡಿದ್ದೂ ನೀರಾವರಿಗೆ ಒಳಪಡಿಸಲು ಸಾಧ್ಯವಿಲ್ಲದ ಭೂ ಪ್ರದೇಶವಾಗಿದೆ. ಚಿತ್ರದುರ್ಗ ಜಿಲ್ಲೆಯೂ ಸದಾ ಬರ ಪ್ರದೇಶವಾಗಿದ್ದು ಇಂತಹ ಭೂಮಿಯಲ್ಲಿ ಮಳೆಯನ್ನಾಧರಿಸಿ ಬೆಳೆಯುವುದು ತುಂಬಾ ಕಷ್ಟಕರವಾಗಿದೆ.[೨೦] ಹೀಗೆ ಸರ್ಕಾರ ಹಂಚಿರುವ ಜಮೀನನ್ನು ಉಳುಮೆಗೆ ಬಾರದಂತಹ ಜಮೀನಾಗಿತ್ತು ಎಂದು ತಿಳಿಯಬಹುದಾಗಿದ್ದರೂ ಅನೇಕರು ಇಂದು ಸರ್ಕಾರದ ಇತರೆ ಯೋಜನೆಗಳಲ್ಲಿ ಸಾಲ ಮತ್ತು ಸಹಾಯ ಪಡೆದು ಅನೇಕ ಜಮೀನುಗಳನ್ನು ನೀರಾವರಿಗೆ ಒಳಪಡಿಸಿದ್ದಾರೆ. ಆದರೆ ಅವರ ಸಂಖ್ಯೆ ತುಂಬಾ ಕಡಿಮೆ. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಮಾದಿಗ ಜನಾಂಗವು ಹೊಂದಿರುವ ಜಮೀನುಗಳಲ್ಲಿ ಶೇಕಡ ೯೦ರಷ್ಟು ಜಮೀನು ಮಳೆಯನ್ನಾದರಿಸಿ ಕೃಷಿ ಮಾಡುವುದಾಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ವಾಣಿವಿಲಾಸ ಸಾಗರದಿಂದ ಹಾಗೂ ಬಳ್ಳಾರಿ ಜಿಲ್ಲೆಯ ಹೊಸಪೇಟೆಯಲ್ಲಿರುವ ತುಂಗಾಭದ್ರ ಡ್ಯಾಂನಿಂದ ಹೊರಟ ಕಾಲುವೆಗಳ ಅಕ್ಕಪಕ್ಕದಲ್ಲಿರುವ ಜಮೀನುಗಳನ್ನು ಹೊಂದಿರುವ ಮಾದಿಗ ಜನಾಂಗದವರು ಸ್ವಂತ ಕೃಷಿ ಮಾಡುತ್ತಿದ್ದಾರೆ. ಈ ರೀತಿ ಸಣ್ಣ ಪುಟ್ಟ ಭೂಮಿಯ ಒಡೆತನ ಪಡೆದ ಮಾದಿಗ ಜನಾಂಗವು ಸಾಮಾಜಿಕ-ಸಾಂಸ್ಕೃತಿಕ ಒತ್ತಡಗಳಿಗೆ ಸಿಲುಕಿ ತಮ್ಮ ಜಮೀನುಗಳನ್ನು ಅನೇಕರು ಮಾರಿಕೊಂಡಿದ್ದಾರೆ. ಇನ್ನೂ ಅನೇಕರು ಹಾಗೆಯೇ ಬೀಳು ಬಿಟ್ಟಿರುವರು. ಇನ್ನು ಕೆಲವರು ಮಾರಾಟ ಮಾಡಲು ಆಗದೆ ಇತ್ತ ಕೃಷಿಗೆ ಒಳಪಡಿಸಲು ಆಗದೆ ಜಮೀನನ್ನು ಬೀಳು ಬಿಟ್ಟಿದ್ದಾರೆ.

ಸರ್ಕಾರವು ಕೊಟ್ಟಿದ್ದ ಜಮೀನನ್ನು ಪರಭಾರೆ ಮಾಡಲು ನೀಡಿದ ಅವಧಿಗೆ ಮುಂಚೆ ಅತ್ಯಂತ ಕಡಿಮೆ ಬೆಲೆಗೆ ಮಾರಾಟ ಮಾಡಿರುವ ಜಮೀನುಗಳನ್ನು ಮತ್ತೆ ಪಡೆಯಲು ಮಾದಿಗ ಜನಾಂಗದ ೨೦ಕ್ಕೂ ಹೆಚ್ಚು ಜನರು ವಕೀಲ ಪಾಂಡುರಂಗ ಅವರಿಂದ ಭೂಮಿ ತೆಗೆದುಕೊಂಡವರ ಮೇಲೆ ಕೇಸು ಹಾಕಿಸಿ ಅನೇಕವುಗಳನ್ನು ವಶಪಡಿಸಿಕೊಂಡಿರುವುದು ಅವರಲ್ಲಿದ್ದ ದಾಖಲೆಗಳಿಂದ ತಿಳಿಯುತ್ತದೆ. ಹೀಗೆ ಸರ್ಕಾರ ಕೊಟ್ಟಿರುವಂತಹ ಭೂಮಿಗಳನ್ನು ನಾನಾ ಕಷ್ಟಗಳು ಮತ್ತು ದೌರ್ಜನ್ಯಗಳಿಂದ ಇತರೆ ಜಾತಿಯವರು ಉಳುಮೆಯ ಮಾಡುತ್ತಿರುವರು. ಆದರೆ ಅವರ ವಿರುದ್ಧ ಕೇಸು ದಾಖಲಿಸುವ ಧೈರ್ಯ ಅನೇಕರಿಗೆ ಇಲ್ಲ. ಹಾಗೆಯೇ ಕೇಸು ಹಾಕಿಸಿದಂತಹ ಜಮೀನುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಕೃಷಿಗೆ ಒಳಪಡಿಸಲು ಕೆಲವರು ಮುಂದಾಗುತ್ತಿಲ್ಲ. ಹೀಗೆ ಮಾದಿಗ ಜನಾಂಗ ಕೃಷಿ ಭೂಮಿಗೆ ಸಂಬಂಧಿಸಿದಂತೆ ಜಮೀನು ಹೊಂದಿ ಬದುಕುತ್ತಿರುವುದು ಕಂಡುಬರುತ್ತದೆ.

## ೪.೪ ಜೀತಪದ್ಧತಿ ಮತ್ತು ಮಾದಿಗರು

ಜೀತಪದ್ಧತಿಯು ಒಂದು ಅಮಾನುಷ ಪದ್ಧತಿ. ಇದು ಶೋಷಣೆಯ ಇನ್ನೊಂದು ಮುಖ. ಸಮಾಜೋ-ಸಾಂಸ್ಕೃತಿಕ ಸಂದರ್ಭಗಳಲ್ಲಿ ಉಂಟಾಗುವ ಸಮಸ್ಯೆಗಳ ನಿವಾರಣೆಗಾಗಿ ಆರ್ಥಿಕವಾಗಿ ಪ್ರಬಲ ಮತ್ತು ದುರ್ಬಲ ವರ್ಗಗಳ ಮಧ್ಯೆ ನಡೆಯುವ ಕಾನೂನು ಬಾಹಿರ ಒಪ್ಪಂದವಿದು. ಈ ಸಂಬಂಧ ಸಾಲ ಪಡೆದ ವ್ಯಕ್ತಿ ಇಲ್ಲವೇ ಆತನ ಸಂಬಂಧಿ ಸಾಲ ತೀರುವವರೆಗೂ ಸಾಲ ನೀಡಿದವನ ಮನೆಯಲ್ಲಿ ದುಡಿಯುಬೇಕಾಗುತ್ತದೆ. ಇದನ್ನು ದಿನ ನಿತ್ಯದ ಕೂಲಿಗಾಗಿ ಬರುವ ಕೂಲಿಯಾಳುಗಳಿಗಿಂತಲೂ ಹೆಚ್ಚು ಕಾಲ ದುಡಿಯಬೇಕಾಗುತ್ತದೆ. ಬೆಳಿಗ್ಗೆ ಎದ್ದ ತಕ್ಷಣ ಯಜಮಾನನ ಮನೆಯಲ್ಲಿ ಕಸ ಹೊಡೆದು ದನಕರುಗಳನ್ನು ಹೊರಗಡೆ ಕಟ್ಟಿ ಹಾಕಿ ಅವುಗಳಿಗೆ ಮೇವು ತರಬೇಕು. ಆನಂತರ ತನ್ನ ಯಜಮಾನನ ಹೊಲದಲ್ಲಿ ಕೆಲಸ ಮಾಡಬೇಕು. ಮತ್ತೆ ಸಾಯಂಕಾಲದಿಂದ ರಾತ್ರಿಯವರೆಗೆ ಮನೆಯಲ್ಲಿ ಇತರೆ ಕೆಲಸಗಳನ್ನು ಮಾಡಬೇಕು. ಈ ರೀತಿ ಆತನು ವಿಶ್ರಾಂತಿ ಇಲ್ಲದ ದುಡಿಮೆ ಅವನಾದಾಗಿರುತ್ತದೆ. ಅಲ್ಲದೇ ಯಜಮಾನನ ಒಪ್ಪಿಗೆ ಇಲ್ಲದೇ ಎಲ್ಲಿಗೂ ಹೋಗುವಂತಿಲ್ಲ. ಜೀತಕ್ಕೆ ಒಳಗಾಗುವ ಮನುಷ್ಯನನ್ನು ದೈಹಿಕ ಹಾಗೂ ಮಾನಸಿಕವಾಗಿ ಹಿಂಸೆಗೆ ಒಳಪಡಿಸುತ್ತದೆ. ಈ ರೀತಿಯಾಗಿ ಆತನು ಗುಲಾಮನಂತೆ ದುಡಿಯಬೇಕಾಗುತ್ತದೆ. ಹೀಗಾಗಿ ಆತನು ತನ್ನ ಮೂಲಭೂತ ಹಕ್ಕುಗಳೆಲ್ಲವನ್ನು ಕಳೆದುಕೊಂಡಿರುತ್ತಾನೆ. ಇಂತಹ ಪದ್ಧತಿಗೆ ಒಳಗಾಗಿರುವವರಲ್ಲಿ ಮಾದಿಗ ಮತ್ತು ಹೊಲೆಯ ಜನಾಂಗದವರೇ ಹೆಚ್ಚು.

### ಜೀತ ಪದ್ಧತಿಯ ಉಗಮ

ಜೀತಪದ್ಧತಿಯ ಬೇರುಗಳು ಪ್ರಾಚೀನ ಕಾಲದಲ್ಲಿ ಅಡಗಿರುವುದನ್ನು ಅನೇಕ ಪ್ರಾಚೀನ ಕೃತಿಗಳು ತಿಳಿಸುತ್ತವೆ. "ಭಾರತೀಯ ಸಮಾಜದಲ್ಲಿ ವರ್ಣ ವ್ಯವಸ್ಥೆಯು ಸೃಷ್ಟಿಗೊಂಡು ಶೂದ್ರರನ್ನು ಈ

ವ್ಯವಸ್ಥೆಯಲ್ಲಿ ಅತ್ಯಂತ ಕೆಳದರ್ಜೆಯವರೆಂದು ಪರಿಗಣಿಸಿ ಉಳಿದ ಮೂರು ವರ್ಣಗಳವರನ್ನು ಸೇವಿಸುವುದೇ ಅವರ ಪರಮ ಕರ್ತವ್ಯವೆಂದು ನಿಗಧಿಪಡಿಸಿದಂದೇ ಜೀತಪದ್ಧತಿಯೂ ಆರಂಭವಾಯಿತೆನ್ನ ಬಹುದು"[೬೦] ಅಲ್ಲಿಂದ ಆರಂಭಗೊಂಡ ಈ ಪದ್ಧತಿಯು ಭಾರತದಾದ್ಯಂತ ಅಸ್ತಿತ್ವಕ್ಕೆ ಬಂದಿತು. ಜೀತಪದ್ಧತಿಯ ಮುಖ್ಯ ಘಟಕಾಂಶಗಳೆಂದರೆ ೧. ಸಾಲದ ಋಣ ಮತ್ತು ೨. ಬಲತ್ಕಾರದ ದುಡಿಮೆ. ಇದನ್ನು ರಾಷ್ಟ್ರೀಯ ಮಂಡಲಿ ಹೀಗೆ ವಿವರಿಸಿದೆ : 'ಜೀತಪದ್ಧತಿಯ ಬಹು ಮುಖ್ಯ ಭಾಗವೆಂದರೆ ಸಾಲ ಕೊಡುವವನ್ನು ತನ್ನ ಸಾಲಕ್ಕಾಗಿ ತನ್ನನ್ನೂ ಅಥವಾ ಕೆಲವು ವೇಳೆ ತನ್ನ ಕುಟುಂಬದ ಸದಸ್ಯರನ್ನು ಒತ್ತೆ ಇಡುತ್ತಾನೆ. ಈ ಋಣ ಭಾದೆಯೇ ಜೀಪದ್ಧತಿಯ ತಾಯಿ ಬೇರು[೬೧] ಎನ್ನಲಾಗಿದೆ. ಜೀತಪದ್ಧತಿಯು ಹೀಗೆ ಹುಟ್ಟಿಕೊಂಡು ಇಂದಿಗೂ ಅನೇಕ ಭಾಗಗಳಲ್ಲಿ ಜೀವಂತರಾಗಿರುವುದು ಕಾಣಬಹುದು.

ಈ ಪದ್ಧತಿಯು ವಿವಿಧ ಪ್ರದೇಶದಲ್ಲಿ ನಾನು ಹೆಸರುಗಳಿಂದ ಕರೆಯಲ್ಪಡುತ್ತದೆ. ಕರ್ನಾಟಕದಲ್ಲಿ ಜೀತಗಾರ, ಆಳುಗಾರ, ಕಂಬಳದವನು ಎಂದೂ, ತಮಿಳುನಾಡಿನಲ್ಲಿ ಪಡಿಯಲ್, ಪನಿಯಲ್ ಚರಮಾಸ್, ಪನ್ಯಾಲ್, ಕೇರಳದಲ್ಲಿ ಅಡಿಯಮ್ಮರ್ ಅಥವಾ ಚಿರುಮು ಅಂಬಿಲ್ಲ, ಕುರುಚಿಯೋ, ಮಾಪಿಳ್ಳೆ ಪಣಿಯನ್, ಕಟ್ಟು ನಾಯಕನ್, ಅಡ್ಯಾಮೈನಾಡ್, ಫಲೆಯನ್ ಆಂಧ್ರಪ್ರದೇಶದಲ್ಲಿ ಜನ್ನೆಗುಲ, ಪಲೇರ, ಗೋತಿ ಮತ್ತು ವೇತಿ, ಮಹಾರಾಷ್ಟ್ರ ಬೇಗಾರ್ ಸಲ್ಕಾರಿ[೬೨] ಇಂತಹ ಅಮಾನುಷ ಪದ್ಧತಿಯು ಭಾರತದಾದ್ಯಂತ ಇದ್ದು ಕರ್ನಾಟಕದಲ್ಲಿಯೂ ವಿಶಾಲವಾಗಿ ಹರಡಿಕೊಂಡಿದ್ದು ಗ್ರಾಮೀಣ ಪ್ರದೇಶದಲ್ಲಿರುವವರು ಹೆಚ್ಚಾಗಿ ಈ ಪದ್ಧತಿ ಒಳಗಾಗಿದ್ದಾರೆ. ಈ ಪದ್ಧತಿ ಚಿತ್ರದುರ್ಗ ಮತ್ತು ಬಳ್ಳಾರಿ ಪ್ರದೇಶಗಳಲ್ಲಿ ಅಗಾಧವಾಗಿ ಇದ್ದುದು ಕಂಡುಬರುತ್ತದೆ. ಅದರಲ್ಲಿ ಈ ಭಾಗದ ಮಾದಿಗ ಜನಾಂಗವು ಹೆಚ್ಚಿನ ಸಂಖ್ಯೆಯಲ್ಲಿ ಈ ಪದ್ಧತಿಗೆ ಬಲಿಯಾಗಿದೆ. ಹೀಗಾಗಿ ಈ ಪದ್ಧತಿಗೆ ಒಳಗಾಗಿರುವ ಮಾದಿಗ ಜನಾಂಗಕ್ಕೆ ಸಂಬಂಧಿಸಿದಂತೆ ಇಲ್ಲಿ ಚರ್ಚೆ ಮಾಡಲಾಗುವುದು.

**ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಜೀತಪದ್ಧತಿ**

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಈ ಪದ್ಧತಿಯು ವ್ಯಾಪಕವಾಗಿ ಹರಡಿಕೊಂಡಿದ್ದು, ಈ ಪದ್ಧತಿಗೆ ಬಲಿಯಾಗಿರುವವರಲ್ಲಿ ಮಾದಿಗ ಜನಾಂಗದ ಪ್ರಮಾಣ ಹೆಚ್ಚು ಎನ್ನಬಹುದು. ಏಕೆಂದರೆ ಸಾಮಾಜಿಕ-ಆರ್ಥಿಕವಾಗಿ ಹಿಂದುಳಿದಿರುವ ಈ ಜನಾಂಗಕ್ಕೆ ಸಾವಿರಾರು ವರುಷಗಳಿಂದ ಶಿಕ್ಷಣ ವಂಚಿತರಾಗಿದ್ದುದು ಕಾರಣವಾಗಿದೆ. ಇವರು ಭೂರಹಿತರು ಆಗಿದ್ದುದರಿಂದ ಭೂಮಾಲೀಕರನ್ನು ಅವಲಂಬಿಸಿಕೊಂಡೇ ಜೀವನ ಮಾಡುತ್ತಿದ್ದರು. ಅನೇಕ ಸಂದರ್ಭಗಳಲ್ಲಿ ಹಣದ ಅವಶ್ಯಕತೆ ಬೀಳುವುದರಿಂದ ಸ್ಥಳೀಯ ಭೂಮಾಲಿಕರಿಂದ ಸಹಾಯ ಪಡೆಯುತ್ತಿದ್ದರು. ಆಗ ಸಾಹುಕಾರ ಮತ್ತು ಸಾಲ ಪಡೆಯುವವನ ನಡುವೆ ಒಪ್ಪಂದವಾಗಿ ಸಾಲ ತೀರುವವರೆಗೆ ತಾನು ಇಲ್ಲವೇ ತನ್ನ ಮಗನನ್ನು

ಸಂಬಳ ನೀಡುತ್ತೇನೆಂದು ವಾಗ್ದಾನ ಮಾಡಿರುತ್ತಾರೆ. ಅದರಂತೆ ಸಾಲ ಕೊಟ್ಟವನ ಮನೆಯಲ್ಲಿ ಸಾಲ ತೀರುವವರೆಗೂ ದುಡಿಯಲು ಆರಂಭಿಸುತ್ತಾರೆ. ಇದೇ ರೀತಿ ಮಾದಿಗ ಜನಾಂಗವು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಾದ್ಯಾಂತ ಭೂಮಾಲೀಕರ ಮನೆಗಳಲ್ಲಿ ಸಂಬಳ (ಜೀತಕ್ಕೆ) ಇದ್ದುದು ಕಂಡು ಬರುತ್ತದೆ. ಈ ಎರಡು ಜಿಲ್ಲೆಗಳ ಗ್ರಾಮೀಣ ಪ್ರದೇಶದಲ್ಲಿ ಪ್ರತಿಯೊಂದು ಗ್ರಾಮದಲ್ಲೂ ಜೀತಪದ್ಧತಿಗೆ ಒಳಗಾಗಿರುವ ವ್ಯಕ್ತಿಗಳನ್ನು ಕಾಣಬಹುದಾಗಿದೆ. ಪದ್ಧತಿಗೆ ಒಳಗಾಗಿ ದೈಹಿಕ ಹಾಗೂ ಮಾನಸಿಕ ಹಿಂಸೆ ಅನುಭವಿಸಿರುವ ಈ ಜನಾಂಗದ ಅನೇಕರು ಇನ್ನೂ ಜೀವಂತವಾಗಿದ್ದಾರೆ. ಅವರಲ್ಲಿ ಕೆಲವರು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಈ ಮಾಹಿತಿ ತಿಳಿಸಿದರು. ಆ ಬಗ್ಗೆ ಎರಡು ಜಿಲ್ಲೆಯ ಭೂಮಾಲಿಕರೆಂದರೆ ಲಿಂಗಾಯತರು, ಒಕ್ಕಲಿಗರು, ರೆಡ್ಡಿ, ಕುರುಬ, ನಾಯಕ, ಕಮ್ಮಾರ ಮುಂತಾದವರು. ಇವರ ಮನೆಗಳಲ್ಲಿ ಮಾದಿಗ ಜನಾಂಗದ ಅನೇಕರು ಜೀತಕ್ಕೆ ಇರುವರು. ಇಂತಹ ಪದ್ಧತಿಗೆ ಒಳಗಾಗಿರುವ ಜೀತಗಾರರ ಸಂಖ್ಯೆ ಗಾಂಧಿ ಶಾಂತಿ ಪ್ರತಿಷ್ಠಾನ ಸಮಿತಿ ಒದಗಿಸಿದ ಮಾಹಿತಿಯಂತೆ ೧೯೭೩ ರಿಂದ ಸಂಶೋಧನೆಯನ್ನು ನಡೆಸಿ ೧೯೭೭ರಲ್ಲಿ ನೀಡಿರುವ ವರದಿಯನ್ವಯ ಕರ್ನಾಟಕದಲ್ಲಿ ೨ ಲಕ್ಷಕ್ಕೂ ಹೆಚ್ಚು ಜೀತದಾಳುಗಳು ಇದ್ದಾರೆಂದು ಕಂಡುಬಂದಿದೆ. ಅವರಲ್ಲಿ ಚಿತ್ರದುರ್ಗವನ್ನೊಳಗೊಂಡಂತೆ ಇತರೆ ೬ ಜಿಲ್ಲೆಗಳಲ್ಲಿ ೧೦ ಸಾವಿರದಿಂದ ೨೦ ಸಾವಿರ, ಬಳ್ಳಾರಿ ಮತ್ತು ಬೆಳಗಾಂ ಜಿಲ್ಲೆಯಲ್ಲಿ ಐದು ನೂರರಿಂದ ಐದು ಸಾವಿರ ಜೀತಪದ್ಧತಿ ಒಳಗಾಗಿದ್ದರೆಂದು ತಿಳಿಸುತ್ತದೆ''[೬೪] ಈ ಅಂಶವು ಈ ಎರಡು ಜಿಲ್ಲೆಗಳಲ್ಲಿ ಜೀತಪದ್ಧತಿ ಇತ್ತೆಂಬುದನ್ನು ಸ್ಪಷ್ಟಪಡಿಸುತ್ತದೆ.

## ಜೀತಪದ್ಧತಿಯ ನಿರ್ಮೂಲನೆ ಕ್ರಮಗಳು

ಸ್ವಾತಂತ್ರ್ಯ ಪೂರ್ವದಲ್ಲಿ ಇದರ ನಿರ್ಮೂಲನೆಗೆ ಯಾವುದೇ ಕ್ರಮ ಕೈಗೊಳ್ಳಲಾಗಿಲ್ಲ. ಸ್ವಾತಂತ್ರ್ಯೋತ್ತರವೂ ಕೆಲವು ವರ್ಷಗಳವರೆಗೆ ಅದರ ವಿರುದ್ಧ ಯಾವುದೇ ಕ್ರಮಕೈಗೊಳ್ಳಲಿಲ್ಲ. ಇದೊಂದು ಸಹಜವಾದ ಕಾರ್ಯವೆಂದು ಭಾವಿಸಲಾಗಿತ್ತೇ ವಿನಃ ಇದು ಕಾನೂನು ಬಾಹಿರ ಪದ್ಧತಿ ಎಂದೆನಿಸಿರಲಿಲ್ಲ. ಸಂವಿಧಾನವು ಅಂಗೀಕಾರಗೊಂಡ ನಂತರದಲ್ಲಿ ರಾಜ್ಯಕ್ಕೆ ನಿರ್ದೇಶನ ಮಾಡಿರುವ ನಿರ್ದೇಶಕ ತತ್ವಗಳು ಈ ಸಂಬಂಧ ಕ್ರಮ ಕೈಗೊಳ್ಳಲು ಸರ್ಕಾರಕ್ಕೆ ಆದೇಶಿಸುತ್ತದೆ. ಪರಿಶಿಷ್ಟ ಜಾತಿ ಮತ್ತು ಬುಡಕಟ್ಟಿಗೆ ಸಂಬಂಧಿಸಿದಂತೆ ಅವರನ್ನು ಸಾಮಾಜಿಕ ಅನ್ಯಾಯದಿಂದ ಮತ್ತು ಎಲ್ಲಾ ರೀತಿಯಿಂದ ಸಂರಕ್ಷಿಸತಕ್ಕದೆಂದು[೬೫] ತಿಳಿಸಿದೆ. ವಿಶ್ವಸಂಸ್ಥೆಯ ಆಶ್ರಯದಲ್ಲಿ ೧೯೫೭ರಲ್ಲಿ ನಡೆದ ಬಲವಂತ ದುಡಿಮೆಯ ಪದ್ಧತಿಯ ನಿರ್ಮೂಲನೆಗೆ ಕ್ರಮಕೈಗೊಳ್ಳುವಂತೆ ಪ್ರೇರಣೆ ನೀಡಿತು. ಆದರೂ ೧೯೭೪ರವರೆಗೂ ಯಾವ ಕ್ರಮ ಕೈಗೊಳ್ಳಲಿಲ್ಲ. ದೇವರಾಜು ಅರಸು ಮುಖ್ಯಮಂತ್ರಿಯಾಗಿದ್ದ ಕಾಲಕ್ಕೆ ಜೀತಪದ್ಧತಿಯನ್ನು ರದ್ದು ಮಾಡುವ ಸುಗ್ರಿವಾಜ್ಞೆ ೧೯೭೫ರ ಅಕ್ಟೋಬರ್ ೨೪ ರಂದು ಹೊರಬಿತ್ತು.[೬೬] ಈ ಆಜ್ಞೆಯ ಪ್ರಕಾರ ಕ್ರಮ ಕೈಗೊಳ್ಳುವಂತೆ ಪ್ರತಿಯೊಂದು ಜಿಲ್ಲೆಯ ದಂಡಾಧಿಕಾರಿಗಳಿಗೆ ಸೂಚಿಸಿತು.

ಆ ಪ್ರಕಾರ ಅಧಿಕಾರಿಗಳು ಕ್ರಮಕೈಗೊಂಡಿರುವ ಪರಿಣಾಮವಾಗಿ ಜೀತಪದ್ಧತಿಯಿಂದ ಅನೇಕರು ಬಿಡುಗಡೆ ಹೊಂದಿದರು. ಇದೇ ಸಂದರ್ಭದಲ್ಲಿ ಉಳಿದ ಸಾಲಕ್ಕಾಗಿ ಹೊಲ, ಮನೆ, ದನಕರು, ಗಾಡಿ ಮುಂತಾದವುಗಳನ್ನು ವಶಪಡಿಸಿಕೊಂಡ ಅನೇಕ ಭೂಮಾಲಿಕರು ಸಂಬಳದಿಂದ (ಜೀತದಿಂದ) ತೆಗೆದು ಹಾಕಿದ್ದರು. ಇನ್ನೂ ಅನೇಕರನ್ನು ಕಾನೂನು ಮೂಲಕ ಬಿಡಿಸಲಾಯಿತು. ಹೀಗೆ ಸರ್ಕಾರ, ವಿವಿಧ ಸಂಘ-ಸಂಸ್ಥೆ ಹಾಗೂ ಕಾನೂನುಗಳ ಮೂಲಕ ಮಾದಿಗ ಜನಾಂಗದ ಅನೇಕರು ಈ ಎರಡು ಜಿಲ್ಲೆಗಳಲ್ಲಿ ಬಿಡುಗಡೆ ಹೊಂದಿದರು. ಆದರೂ ಅದು ತುಂಬಾ ಪರಿಣಾಮ ಬೀರಿದ್ದು ೮೦ರ ದಶಕದ ನಂತರವೆಂದು ಹೇಳಬಹುದು. ಹೀಗೆ ಸರ್ಕಾರವು ಕೈಗೊಂಡ ಕ್ರಮದಿಂದ ಬಿಡುಗಡೆ ಹೊಂದಿದ ನಂತರ ಮತ್ತೆ ಈ ಪದ್ಧತಿಗೆ ಮರಳಬಾರದೆನ್ನುವ ಆಶಯದಿಂದ ಅವರಿಗೆ ಪುನರ್ವಸತಿ ಕಲ್ಪಿಸಿಕೊಡಲು ಸರ್ಕಾರ ಪ್ರಯತ್ನಿಸಿದೆ. ಅನೇಕ ಸಹಾಯ ಮತ್ತು ಸಹಾಯ ಯೋಜನೆಗಳನ್ನು ರೂಪಿಸಿದೆ. ಕರ್ನಾಟಕ ರಾಜ್ಯದಲ್ಲಿ ಡಿಸೆಂಬರ್ ೧೯೭೯ರ ಅಂತ್ಯದವರೆಗೆ ೬೨,೬೮೯ ಜೀತದಾಳುಗಳನ್ನು ಗುರುತಿಸಿ ಬಿಡುಗಡೆ ಮಾಡಲಾಗಿತ್ತು. ಅವರಲ್ಲಿ ೯,೪೦೩ ಜೀತದಾಳುಗಳಿಗೆ ೫೬.೩೨ ಲಕ್ಷ ರೂ ಧನ ಸಹಾಯದಿಂದ ಪುನರ್ವಸತಿ ಕಲ್ಪಿಸಲಾಗಿತ್ತು. ಅವರು ಈಗ ಕೃಷಿ ಕೂಲಿಗಾರರಾಗಿ ದುಡಿಯುತ್ತಿದ್ದಾರೆ. ೧೯೭೯-೮೦ರ ಅಂತ್ಯದವರೆಗೆ ಚಿತ್ರದುರ್ಗ, ಕೋಲಾರ, ಶಿವಮೊಗ್ಗ, ಬೆಳಗಾವಿ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಜೀತ ಮುಕ್ತರ ಪುನರ್ವಸತಿಗಾಗಿ ವಿವಧ ಯೋಜನೆಗಳನ್ನು ಕೈಗೊಳ್ಳಲಾಯಿತು.[೩೭] ಹೀಗೆ ಸರ್ಕಾರವು ಜೀತಪದ್ಧತಿಯಿಂದ ಒಳಗಾದವರನ್ನು ಬಿಡಿಸಲು ಪ್ರಯತ್ನಿಸಿತಲ್ಲದೆ ಪುನರ್ವಸತಿಯನ್ನು ಕೂಡ ಮಾಡಿತ್ತು. ಈ ಸಂದರ್ಭದಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಜೀತಕ್ಕಿದ್ದ ಮಾದಿಗ ಜನಾಂಗದ ಅನೇಕರು ಬಿಡುಗಡೆ ಹೊಂದಿದ್ದಲ್ಲದೇ ಕೆಲವರು ಪುನರ್ವಸತಿ ಒಳಪಟ್ಟು ಸಹಿ ಇದ್ದಾರೆ. ರಾಜ್ಯದಲ್ಲಿ ೧೯೮೧ರ ಹೊತ್ತಿಗೆ ಕರ್ನಾಟಕದಲ್ಲಿ ೬೨,೬೯೯ ಜೀತದಾಳುಗಳನ್ನು ಗುರುತಿಸಿ ೫೨,೮೬೮ ಜನರಿಗೆ ಪುನರ್ವಸತಿಗೊಳಿಸಿದ್ದಾರೆ.[೩೮] ಅದು ಮುಂದುವರಿದು ೧೯೮೧-೮೨ರಲ್ಲಿ ೬೧೭೨ ಜೀತದಾಳುಗಳನ್ನು, ೧೯೮೨-೮೩ರಲ್ಲಿ ೯೫೨೪, ೧೯೮೩-೮೪ರಲ್ಲಿ ೧,೩೫೯ ಹಾಗೂ ೧೯೮೪-೮೫ರಲ್ಲಿ ೭,೨೮೪ ಜೀತದಾಳುಗಳನ್ನು ಗುರುತಿಸಲಾಗಿದೆ. ಅವರಲ್ಲಿ ಪುನರ್ವಸತಿ ಪಡೆದ ಪರಿಶಿಷ್ಟ ಜಾತಿ ಮತ್ತು ಜನಾಂಗಗಳ ಫಲಾನುಭವಿಗಳು ಶೇಕಡ ೭೫ರಷ್ಟು ಎಂದು ಅಂದಾಜು ಮಾಡಲಾಗಿದೆ.[೩೯]

ಈ ರೀತಿ ಸರ್ಕಾರವು ಕೈಗೊಂಡ ಜೀತಪದ್ಧತಿಯ ನಿರ್ಮೂಲನ ಕಾಯಿದೆಯ ಪರಿಣಾವಾಗಿ ಈ ಎರಡು ಜಿಲ್ಲೆಗಳಲ್ಲಿ ಮಾದಿಗ ಜನಾಂಗದ ಅನೇಕರು ವಿಮೋಚನೆ ಹೊಂದಿದ್ದರೂ ಪುನರ್ವಸತಿ ಪಡೆಯುವಲ್ಲಿ ವಿಫಲರಾಗಿದ್ದಾರೆ. ಏಕೆಂದರೆ ಅಧಿಕಾರಿಗಳು ಜೀತಪದ್ಧತಿಗೆ ಒಳಗಾಗಿದ್ದ ವ್ಯಕ್ತಿಗಳನ್ನು ಗುರುತಿಸಲು ಬಂದಾಗ ಕೆಲವರು ನಾವು ಜೀತಕ್ಕೆ ಇರಲಿಲ್ಲವೆಂದು ಸುಳ್ಳು ಹೇಳಿದ್ದಾರೆ. ಈ ಹೇಳಿಕೆಯ ಹಿಂದೆ ಭೂಮಾಲೀಕರ ಒತ್ತಡ ಮತ್ತು ಭಯ ಇತ್ತು. ಹೀಗಾಗಿ ಅನೇಕ ಭಾಗಗಳಲ್ಲಿ ಪುನರ್ವಸತಿ ಸೌಲಭ್ಯದಿಂದ ವಂಚಿತರಾಗುವಂತಾಯಿತು. ಈ ರೀತಿ ಸರ್ಕಾರ ಕ್ರಮಕೈಗೊಂಡರೂ ಪದ್ಧತಿಯಿಂದ

ಸಂಪೂರ್ಣವಾಗಿ ವಿಮೋಚನೆ ಹೊಂದಲಿಲ್ಲ. ಇನ್ನೂ ಈ ಪದ್ಧತಿಯಲ್ಲಿ ಸಿಲುಕಿರುವ ಉದಾಹರಣೆಗಳು ದೊರೆಯುತ್ತವೆ. ಬಳ್ಳಾರಿ ತಾಲ್ಲೂಕಿನ ವದ್ದಟ್ಟಿ ಗ್ರಾಮದಲ್ಲಿ ಜೀತಕ್ಕಿರುವ ವ್ಯಕ್ತಿಯ ಮೇಲೆ ಭೂಮಾಲಿಕ ಹಲ್ಲೆ ಮಾಡಿದ್ದು ಆ ಪ್ರಕರಣ ಇಂದು ಬಯಲಾಗಿದೆ.[೮೦] ಅದೇ ರೀತಿಯಲ್ಲಿ ಕನ್ನಡ ವಿಶ್ವವಿದ್ಯಾಲಯದ ಸಂಶೋಧನ ವಿದ್ಯಾರ್ಥಿಗಳು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಗ್ರಾಮವೊಂದರ ಹುಡುಗ ಶಿವಮೊಗ್ಗ ಜಿಲ್ಲೆಯಲ್ಲಿ ಜೀತಕ್ಕಿರುವವರನ್ನು ಬಿಡಿಸಲು ಆತನು ಪಡೆದ ಸಾಲವನ್ನು ವಿಶ್ವವಿದ್ಯಾಲಯದ ಕೆಲವು ಉದ್ಯೋಗಿಗಳ ಹತ್ತಿರ ಹಣ ಸಂಗ್ರಹಿಸಿ ಹಣ ಕೊಟ್ಟು ಆತನನ್ನು ಬಿಡಿಸಲು ಹೋಗಿದ್ದಾಗ ಅಲ್ಲಿ ಸುಮಾರು ೨೦ಕ್ಕೂ ಹೆಚ್ಚು ಜನ ಜೀತಕ್ಕಿರುವುದು ತಿಳಿದು ಬಂದಿದೆ.

ಅಧ್ಯಯನದ ಸಂದರ್ಭದಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಅನೇಕ ಗ್ರಾಮಗಳಲ್ಲಿ ಜೀತಪದ್ಧತಿಯು ಇನ್ನೂ ಜೀವಂತವಾಗಿರುವುದು ಕಂಡುಬಂದಿತು. ಜೀತಕ್ಕಿರುವ ಮಾದಿಗರ ಸಂಖ್ಯೆ ಮತ್ತು ಗ್ರಾಮಗಳು ಹೀಗಿವೆ: ಚಿತ್ರದುರ್ಗ ಜಿಲ್ಲೆಯಲ್ಲಿ ಹೊಳಲ್ಕೆರೆ ತಾಲ್ಲೂಕಿನ ಶಿವಗಂಗೆಯಲ್ಲಿ ೪, ಹೊಸದುರ್ಗ ತಾಲ್ಲೂಕಿನ ದೇವಿಗೆರೆ ೧೫, ಬೀಸನಹಳ್ಳಿ ೩ ಜನ ಇದ್ದರೆ, ಹಿರಿಯೂರು ತಾಲ್ಲೂಕಿನ ಪಟ್ರೆಹಳ್ಳಿ ೩, ಚಳ್ಳಕೆರೆ ತಾಲ್ಲೂಕಿನ ದೊಡ್ಡೇರಿಯಲ್ಲಿ ೫ ಜನ, ಮೊಳಕಾಲ್ಮೂರು ತಾಲ್ಲೂಕಿನ ಬಿ.ಜಿ. ಕೆರೆಯಲ್ಲಿ ೧೫ ಜನರು ಇದ್ದರೆ, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಬಣವಿಕಲ್ಲು ಗ್ರಾಮದಲ್ಲಿ ೪ ಜನ, ಬಳ್ಳಾರಿ ತಾಲ್ಲೂಕಿನ ಸಿರವಾರದಲ್ಲಿ ೧೫ ಜನ ಜೀತಕ್ಕೆ ಇರುವುದು ಕಂಡುಬರುತ್ತದೆ. ಇವರೆಲ್ಲರೂ ಲಿಂಗಾಯಿತರ ಮನೆಗಳಲ್ಲಿ ಜೀತಕ್ಕಿರುವುದು ಕಂಡುಬಂದರೆ, ಕೆಲವು ಕಡೆ ಕುರುಬರು, ಗೌಡರು (ಒಕ್ಕಲಿಗರು), ಶೆಟ್ಟಿ, ಆಂಧ್ರದ ಗುಂಟರು, ತಮಿಳಿಯನ್ಸ್, ನಾಯಕ, ವಡ್ಡ ಜಾತಿಯ ಜನ ಭೂಮಾಲಿಕರ ಮನೆಯಲ್ಲಿ ಜೀತಕ್ಕಿರುವುದು ಕಂಡುಬರುತ್ತದೆ. ಹೊಳಲ್ಕೆರೆ ತಾಲ್ಲೂಕಿನ ಎಮ್ಮಿಗನೂರಿನಲ್ಲಿ ಹೆಣ್ಣು ಮಕ್ಕಳು ಜೀತಕ್ಕಿರುವುದು ತಿಳಿದುಬಂತು. ಈ ಹಿನ್ನೆಲೆಯಲ್ಲಿ ನೋಡಿದರೆ ಮಾದಿಗರು ಇನ್ನೂ ಈ ಪದ್ಧತಿಯಿಂದ ಹೊರಗಡೆ ಬರಲು ಸಾಧ್ಯವಾಗಿಲ್ಲವೆಂದೆ ಹೇಳಬಹುದು. ಇದಕ್ಕೆ ಯಾರು ಕಾರಣ ಎಂದು ಪ್ರಶ್ನಿಸಿಕೊಂಡರೆ ಮಾದಿಗರು ಆರ್ಥಿಕವಾಗಿ ಇನ್ನೂ ಹಿಂದುಳಿದಿರುವುದು. ಅವರು ಆರ್ಥಿಕವಾಗಿ ಅಭಿವೃದ್ಧಿಯಾಗದೆ ಜೀತಪದ್ಧತಿಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.

## ೪.೫ ಚರ್ಮಗಾರಿಕೆ ಮತ್ತು ಇತರೆ ವೃತ್ತಿಗಳು

ಮಾದಿಗರ ಪ್ರಧಾನವಾದ ವೃತ್ತಿ ಚರ್ಮಗಾರಿಕೆ. ಚರ್ಮಕ್ಕೂ ಮತ್ತು ಮಾದಿಗರಿಗೂ ಅವಿನಭಾವ ಸಂಬಂಧವಿದೆ. ಚರ್ಮ ವೃತ್ತಿ ಎಂದ ತಕ್ಷಣ ಮಾದಿಗರು, ಮಾದಿಗರು ಎಂದರೆ ಚರ್ಮದ ವೃತ್ತಿಯು ಕಣ್ಣು ಮುಂದೆ ಬರುತ್ತದೆ. ಈ ಬಗೆಯಲ್ಲಿ ಅವರು ಚರ್ಮದ ವೃತ್ತಿಯನ್ನು ಹಿಂದೆ ಕೈಗೊಂಡಿದ್ದರು.

ಇಂದಿಗೂ ಪಟ್ಟಣ ಮತ್ತು ನಗರ ಪ್ರದೇಶ ಹಾಗೂ ಗ್ರಾಮೀಣ ಪ್ರದೇಶದಲ್ಲಿ ಈ ವೃತ್ತಿಯನ್ನು ಮುಂದುವರಿಸಿರುವ ಅನೇಕರು ಈ ಜನಾಂಗದಲ್ಲಿ ಕಂಡುಬಂದರೂ ಅದು ಹಿಂದಿನಂತೆ ಇಂದು ಪ್ರಧಾನ ವೃತ್ತಿಯಾಗಿ ಉಳಿದಿಲ್ಲ. ಈ ವೃತ್ತಿಗೂ ಮತ್ತು ಸಾಮಾಜಿಕ ಸ್ಥಾನಮಾನಕ್ಕೂ ನಿಕಟ ಸಂಬಂಧವಿದ್ದು ಈ ವೃತ್ತಿಯಿಂದ ಇವರು ಕೆಳಹಂತಕ್ಕೆ ತಳ್ಳಲ್ಪಟ್ಟರೆ ಅಥವಾ ಸಾಮಾಜಿಕ ಕೆಳಹಂತದ ಸ್ಥಾನಮಾನಗಳಿಂದಾಗಿ ಈ ವೃತ್ತಿಯನ್ನು ಕೈಗೊಂಡರೆ? ಎಂಬ ಪ್ರಶ್ನೆ ಕಾಡುತ್ತದೆ. ಅಲ್ಲದೆ ಇವರು ಮಾತ್ರವೇ ಯಾಕೆ ಚರ್ಮಗಾರಿಕೆ ವೃತ್ತಿಯನ್ನು ಕೈಗೊಂಡರು? ಮತ್ತಾವ ಜಾತಿಗಳು ಏಕೆ ತೊಡಗಲಿಲ್ಲ? ಸಾಮಾನ್ಯವಾಗಿ ನಂಬಿರುವಂತೆ ಚರ್ಮಗಾರಿಕೆ ವೃತ್ತಿ ಕೆಳಹಂತದ ವೃತ್ತಿಯಾಗಿದ್ದು ಸಾಮಾಜಿಕವಾಗಿ ಹಿಂದುಳಿದಂತಹ ಈ ಜಾತಿಗೆ ಈ ವೃತ್ತಿಯನ್ನು ಕೈಗೊಳ್ಳಬೇಕಾದ ಸಾಮಾಜಿಕ ಒತ್ತಡ ಇತ್ತು. ಇದರೊಂದಿಗೆ ಮಾದಿಗರು ಬಿಟ್ಟಿ(ಪುಕ್ಕಟೆ)ಯಾಗಿ ಗ್ರಾಮದ ಇತರೆ ಸೇವೆಗಳಲ್ಲಿ ತೊಡಗಿಕೊಳ್ಳಬೇಕಾಗಿತ್ತು. ಅಂತಹವುಗಳಲ್ಲಿ ಸತ್ತ ದನಕರುಗಳನ್ನು ಎತ್ತಿ ಹಾಕಬೇಕಾಗಿರುವುದು ಒಂದು. ಈ ಸೇವೆ ಅವರಿಗೆ ಚರ್ಮ ಮತ್ತು ಮಾಂಸವನ್ನು ಒದಗಿಸುತ್ತದೆ. ಈ ಕಾರಣದಿಂದಾಗಿ ಅವರು ದನದ ಮಾಂಸವನ್ನು ಆಹಾರವಾಗಿ ಸೇವಿಸುವುದರ (ಇಂದು ಈ ಜನಾಂಗದ ಮಧ್ಯಮ ವರ್ಗ ತಿನ್ನುವದನ್ನು ನಿಲ್ಲಿಸಿದೆ) ಜೊತೆಯಲ್ಲಿ ಈ ವೃತ್ತಿಯನ್ನು ತೊಡಗಿಸಿಕೊಂಡಿದ್ದರು. ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಸತ್ತ ದನಗಳನ್ನು ಎತ್ತಿ ಹಾಕುವ ಸಾಂಪ್ರದಾಯಿಕ ಸೇವೆಯಿಂದ ಸಮಾಜದ ಮೇಲು ಜಾತಿಗಳ ಒತ್ತಡದಿಂದ ಹಾಗೂ ಇತರೆ ಕಾರಣಗಳಿಂದಾಗಿ ಬಹುತೇಕ ಮಾದಿಗರು ಮುಂದುವರಿಸಿದ್ದರೂ ತಮ್ಮ ಜೀವನ ನಿರ್ವಹಣೆಗಾಗಿ ಚರ್ಮಗಾರಿಕೆ ಪ್ರಧಾನ ವೃತ್ತಿಯಾಗಿ ಉಳಿದಿಲ್ಲ. ಇದಕ್ಕೆ ಪ್ರಮುಖ ಕಾರಣ ಆಧುನಿಕ ಕೈಗಾರಿಕೆಯ ಬೆಳವಣಿಗೆಯಾಗಿದೆ. ಇದರ ಪರಿಣಾಮವಾಗಿ ಚರ್ಮಗಾರಿಕೆ ಕಡಿಮೆಯಾಗಿದೆ. ಇದು ಮಾತ್ರವಲ್ಲದೆ ಇತರೆ ಗುಡಿಕೈಗಾರಿಕೆಗಳು ಕಡಿಮೆಯಾದವು. ಬಹುಶಃ ಈ ಹಿನ್ನೆಲೆಯಲ್ಲಿ ಕಾರ್ಲ್‌ಮಾರ್ಕ್ಸ್ ಭಾರತೀಯ ಸಮಾಜವನ್ನು ಕುರಿತು ಹೇಳುವಾಗ ಇಲ್ಲಿಯ ಸಂಪ್ರದಾಯಿಕ ವೃತ್ತಿಗಳ ವಿಭಜನೆಯನ್ನು ವಿಶೇಷವಾಗಿ ಗಮನಿಸಿ ಭಾರತೀಯ ಜಾತಿವ್ಯವಸ್ಥೆಗೆ ಆಧಾರ ಸ್ತಂಭದಂತಿರುವ ವಂಶಪಾರಂಪರಿಕವಾದ ಶ್ರಮ ವಿಭಜನೆಯನ್ನು ಆಧುನಿಕ ಕೈಗಾರಿಕೆಯು ಕರಗಿಸಿ ಬಿಡುತ್ತದೆ.[೪೧] ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಪ್ರದೇಶಗಳಲ್ಲಿ ಮಾದಿಗರು ಕೈಗೊಂಡಿರುವ ಚರ್ಮಗಾರಿಕೆ ಹಾಗೂ ಇತರೆ ವೃತ್ತಿಗಳನ್ನು ಕುರಿತು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಮೈಸೂರು ಅರಸರ ಕಾಲದ ಮೈಸೂರು ರಾಜ್ಯದಲ್ಲಿ ಬೆಂಗಳೂರು, ಮೈಸೂರು, ತುಮಕೂರು, ಹಾಸನ, ಕಡೂರು ಹಾಗೂ ಚಿತ್ರದುರ್ಗ ಜಿಲ್ಲೆಗಳಲ್ಲಿ ಗ್ರಾಮಾಂತರ ಪ್ರದೇಶಗಳ ಕೈಗಾರಿಕೆಯಲ್ಲಿ ಪಾದರಕ್ಷೆಗಳ ತಯಾರಿಕೆಯು ಒಂದು''[೪೨] ಈ ವೃತ್ತಿಯಲ್ಲಿ ತೊಡಗಿರುವ ಮಾದಿಗ ಜನಾಂಗದ

ಕೆಲವರನ್ನು ಸಂದರ್ಶನ ಹಾಗೂ ಅಧ್ಯಯನಕ್ಕೊಳಪಡಿಸಿದಾಗ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಕೆಲವು ಗ್ರಾಮಗಳಲ್ಲಿ ಈ ವೃತ್ತಿಯಲ್ಲಿ ಮಾದಿಗರು ತೊಡಗಿಸಿಕೊಂಡಿರುವುದು ಇಂದು ಕಡಿಮೆ ಪ್ರಮಾಣದಲ್ಲಿರುವುದು ತಿಳಿದುಬರುತ್ತದೆ. ಹಿಂದೆ ಚರ್ಮಗಾರಿಕೆ ಮುಖ್ಯ ಉದ್ಯೋಗ ವಾದ್ದರಿಂದ ಚರ್ಮ ಹದ ಮಾಡಲು ಬಳಸುತ್ತಿದ್ದ 'ಕರಿಬಾನಿ' ಅಥವಾ 'ಗಲ್ಲೆ' ಇಂದು ಕೇವಲ ಪೂಜಾರ್ಹವಾಗಿದೆ. ಇಂದು ಚಿತ್ರದುರ್ಗ ನಗರದಲ್ಲಿ ೫೫ ಜನರು ಈ ವೃತ್ತಿಯನ್ನು ಕೈಗೊಂಡಿದ್ದು ಅವರಲ್ಲಿ ೧೦ ಜನರು ಮಾರಾಟ ಸಹ ಮಾಡುತ್ತಾರೆ. ಹಿರಿಯೂರು ಪಟ್ಟಣದಲ್ಲಿ ೨೫, ಚಳ್ಳಕೆರೆ ೧೫, ಬಳ್ಳಾರಿ ೧೫೩, ಹೊಸಪೇಟೆ ೩೫, ಸಿರುಗುಪ್ಪ ೧೫ ಜನರು ಈ ವೃತ್ತಿಯಲ್ಲಿ ಮುಂದುವರಿಯುತ್ತಿರುವುದು ಕಂಡು ಬಂದಿತು. ಅವರಲ್ಲಿ ಚಪ್ಪಲಿ ತಯಾರು ಮಾಡಿ ಮಾರುವವರು ಕಡಿಮೆ ಸಂಖ್ಯೆಯಲ್ಲಿದ್ದರೆ ಹೆಚ್ಚಿನ ಸಂಖ್ಯೆಯಲ್ಲಿ ಕೇವಲ ಚಪ್ಪಲಿ ರಿಪೇರಿ ಮಾಡುವವರು ಇದ್ದಾರೆ. ಇವರಿಗೆ ದಿನಕ್ಕೆ ಕನಿಷ್ಟ ೨೫ ರಿಂದ ಹಿಡಿದು ೪೦-೫೦ ರವರೆಗೂ ದುಡಿಮೆಯ್ಾಗುತ್ತಿದೆ. ಬಳ್ಳಾರಿ ಮತ್ತು ಚಿತ್ರದುರ್ಗ ನಗರಗಳಲ್ಲಿ ಇದು ಕನಿಷ್ಟ ೩೦ ರಿಂದ ೭೦-೮೦ ರವರೆಗೆ ದುಡಿಮೆಯಾಗುತ್ತದೆ ಎಂದು ಕೆಲವರು ತಿಳಿಸಿದರು.

ಇವರು ಅಸಂಘಟಿತರಾಗಿದ್ದು ಸರ್ಕಾರದ ಸೌಲಭ್ಯದಿಂದ ವಂಚಿತರಾಗಿದ್ದಾರೆ. ಕೆಲವರು ಮಾತ್ರವೇ ಈ ಸೌಲಭ್ಯ ಪಡೆದಿರುತ್ತಾರೆ. 'ಲಿಡ್ಕರ್' ಮತ್ತು ನಗರಸಭೆಯ ವತಿಯಿಂದ ನೀಡುವ ಚರ್ಮಕುಟೀರಗಳನ್ನು ಮತ್ತೆ ಕೆಲವರು ಪಡೆದಿದ್ದಾರೆ. ಹೆಚ್ಚಿನ ಸಂಖ್ಯೆಯ ಜನ ಬೀದಿಗಳಲ್ಲಿ ಮರದ ಕೆಳಗೆ ಕುಳಿತು ಚಪ್ಪಲಿ ರಿಪೇರಿ ಕೆಲಸ ಮಾಡುತ್ತಾರೆ. ಅಕ್ಕಪಕ್ಕದ ಹಳ್ಳಿಗಳಿಂದ ಈ ವೃತ್ತಿಯನ್ನು ಮಾಡಲು ಬಂದಂತಹ ಕೆಲವರು ಮರದ ಕೆಳಗೆ ಇಲ್ಲವೇ ರಸ್ತೆಯ ಬದಿಗಳಲ್ಲೆ ಚಪ್ಪಲಿ ರೀಪೇರಿ ಮಾಡುವ ಸಾಮಾನು ಚರ್ಮ, ಹಳೆಯ ಚಪ್ಪಲಿಗಳೊಂದಿಗೆ ಮಲಗುವುದು ಹೊಸಪೇಟೆ ಮತ್ತು ಚಿತ್ರದುರ್ಗ ನಗರಗಳಲ್ಲಿ ಕಂಡುಬಂದಿದೆ. ಇಂದಿಗೂ ಮಾದಿಗ ಜನಾಂಗದ ಅನೇಕರು ಚಪ್ಪಲಿ ತಯಾರಿಕಾ ತರಬೇತಿಯನ್ನು ಪಡೆಯುತ್ತಿದ್ದಾರೆ. ಚಪ್ಪಲಿ ಹದಮಾಡುವ, ತಯಾರಿಕೆ ಮಾಡುವ ತರಬೇತಿಯನ್ನು ಪಡೆದಿರುವ ಈ ಜನಾಂಗದವರು ಮೊಳಕಾಲ್ಮೂರು ತಾಲ್ಲೂಕಿನ ಬಿ.ಜಿ.ಕೆರೆಯಲ್ಲಿ ೧೫೦ ಜನರಿದ್ದರೆ. ಸಿರುಗುಪ್ಪದಲ್ಲಿ ೧೨ ಜನರು ಕಂಡುಬಂದರು. ಈ ವೃತ್ತಿಯಲ್ಲಿ ತೊಡಗಿರುವ ಮಾದಿಗರಿಗೆ ಬಳ್ಳಾರಿ ನಗರದಲ್ಲಿ ವಿಶೇಷವಾದ ಸೌಲಭ್ಯವನ್ನು ಲಿಡ್ಕರ್‌ವತಿಯಿಂದ ದೊರಕಿಸಿಕೊಟ್ಟಿರುವುದು ಕಂಡುಬಂದಿತು. ಈ ವೃತ್ತಿಯಲ್ಲಿ ತೊಡಗಿಕೊಂಡಿದ್ದವರಿಗೆ ೧೦೦ ಚರ್ಮ ಕುಟೀರಗಳನ್ನು ನೀಡಲಾಗಿದ್ದು 'ಲಿಡ್ಕರ್' ವತಿಯಿಂದ ಮನೆ ಇಲ್ಲದವರಿಗೆ ಕ್ವಾಟರ್ಸ್ ಮನೆಗಳನ್ನು ಕೌಲ್‌ಬಜಾರನಲ್ಲಿ ನೀಡಲಾಗಿದೆ. ಒಟ್ಟು ೫೦ ಮನೆಗಳನ್ನು ನೀಡಿದ್ದು ಹೊಸದಾಗಿ ೧೭ ಮನೆಗಳು ಇದೀಗ ನಿರ್ಮಾಣವಾಗುತ್ತಿವೆ.

ಗ್ರಾಮೀಣ ಪ್ರದೇಶದಲ್ಲಿ ಕೆಲವರು ಮಾತ್ರವೇ ಈ ವೃತ್ತಿಯಲ್ಲಿ ಮುಂದುವರಿಸಿರುವುದು ಕಂಡು

ಬರುತ್ತದೆ. ಅಧ್ಯಯನಕ್ಕೊಳಪಡಿಸಿದ ೪೫ ಹಳ್ಳಿಗಳಲ್ಲಿ ಕನಿಷ್ಟ ಒಬ್ಬರಾದರು ಈ ವೃತ್ತಿಯಲ್ಲಿ ತೊಡಗಿಕೊಂಡಿರುವುದು ಕಂಡುಬಂದಿತು. ಈ ಹಿನ್ನೆಲೆಯಲ್ಲಿ ನೋಡಿದಾಗ ಹಿಂದೊಮ್ಮೆ ಪ್ರಧಾನ ವೃತ್ತಿಯಾಗಿದ್ದ ಚರ್ಮಗಾರಿಕೆ ಇಂದು ಕಡಿಮೆಯಾಗಿದೆ.

### ವ್ಯಾಪಾರ

ಮಾದಿಗರು ಪ್ರಧಾನವಾಗಿ ಕೂಲಿಯನ್ನು ಬಿಟ್ಟರೆ ಚರ್ಮಗಾರಿಕೆ, ಕೃಷಿಯಲ್ಲಿ ತೊಡಗಿಕೊಂಡಿರುವುದು ಕಂಡು ಬರುತ್ತದೆ. ಹಾಗಿದ್ದೂ ಪಟ್ಟಣ ಪ್ರದೇಶಗಳು ಅಕ್ಕಪಕ್ಕದ ಗ್ರಾಮಗಳಲ್ಲಿ ಸಣ್ಣಪುಟ್ಟ ವ್ಯಾಪಾರ ಮಾಡುತ್ತಿರುವುದು ಸಹ ಕಂಡುಬಂದಿತು. ಚರ್ಮದ ವ್ಯಾಪಾರ ಮಾಡುವವರು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಮಾರಮ್ಮನಹಳ್ಳಿ, ರಾಮಸಾಗರ ಹಟ್ಟಿಯಲ್ಲಿ ಮತ್ತು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನ ರಾಯಪುರದಲ್ಲಿ ಒಬ್ಬಬ್ಬರು ಕಂಡುಬರುತ್ತಾರೆ. ಕೂಡ್ಲಿಗಿ ತಾಲ್ಲೂಕಿನ ಕುಂಬಿಹಳ್ಳಿಯಲ್ಲಿ ದನಗಳ ವ್ಯಾಪಾರ ಮಾಡುವವರು ಒಬ್ಬರು, ಬಣವಿಕಲ್ಲಿನಲ್ಲಿ ಐಸ್‌ವ್ಯಾಪಾರ ೧೫ ಜನರು ಮಾಡುತ್ತಿರುವುದು ಕಂಡುಬಂದಿದೆ. ಇವುಗಳಲ್ಲದೆ ತೆಂಗಿನಕಾಯಿ ವ್ಯಾಪಾರ, ಹುಣಸೆ ವ್ಯಾಪಾರ, ತರಕಾರಿ, ಕಿರಾಣಿ ಅಂಗಡಿಗಳು ಅಧ್ಯಯನಕ್ಕೊಳಪಡಿಸಿದ ಕೆಲವು ಗ್ರಾಮಗಳಲ್ಲಿ ಮಾಡುವುದು ಕಂಡುಬಂದಿತು. ಆದರೆ ವ್ಯಾಪಾರ ಮಾಡುವವರ ಸಂಖ್ಯೆ ತುಂಬಾ ಕಡಿಮೆಯೇ.

### ಕೈಗಾರಿಕೆ

ಕೈಗಾರಿಕೆಯಲ್ಲಿ ಮಾದಿಗರು ತೊಡಗಿಕೊಂಡಿರುವುದು ಬೆರಳೆಣಿಕೆಯಷ್ಟು ಮಾತ್ರ. ಏಕೆಂದರೆ ಕೈಗಾರಿಕೆಗೆ ಬೇಕಾಗುವಷ್ಟು ಬಂಡವಾಳ ತೊಡಗಿಸಲು ಇವರಿಂದ ಸಾಧ್ಯವಾಗುವುದಿಲ್ಲ. ಸರ್ಕಾರದಿಂದ ಸಾಲ ಸೌಲಭ್ಯ ಪಡೆಯಲು ರಾಜಕೀಯ ಮತ್ತು ಆರ್ಥಿಕವಾಗಿ ಪ್ರಬಲರಾಗಿರುವವರಿಗೆ ಮಾತ್ರ ಸಾಧ್ಯ. ಈ ಹಿನ್ನೆಲೆಯಲ್ಲಿ ಚಿತ್ರದುರ್ಗದಲ್ಲಿ ರಾಮಚಂದ್ರಪ್ಪ (ಮಾಜಿ, ಜಿಲ್ಲಾ ಪಂಚಾಯಿತಿ ಸದಸ್ಯರು) ಮತ್ತು ಮಲ್ಲೇಶಪ್ಪ ಎಂಬಿಬ್ಬರು ಮಾತ್ರವೇ ಎಣ್ಣೆ ತಯಾರಿಸುವ ಕೈಗಾರಿಕೆಯನ್ನು ಸ್ಥಾಪನೆ ಮಾಡಿರುವರಾದರೂ ಜಾತಿಯ ಹಿನ್ನೆಲೆಯಲ್ಲಿ ಆ ಕ್ಷೇತ್ರದಲ್ಲಿರುವ ಇತರೆ ಜನಾಂಗದ ಸಹಕಾರ ದೊರೆಯುವುದಿಲ್ಲ. ಬಳ್ಳಾರಿ ಜಿಲ್ಲೆಯಲ್ಲಿ ಮಾದಿಗರು ವ್ಯಾಪಾರದಲ್ಲಿ ತೊಡಗಿಸಿಕೊಂಡಿರುವುದು ಕಡಿಮೆ.

### ಇತರೆ ವೃತ್ತಿಗಳು

ಅಧ್ಯಯನಕ್ಕೊಳಪಡಿಸಿದ ಕೆಲವು ಗ್ರಾಮಗಳಲ್ಲಿ ಇತರೆ ವೃತ್ತಿಯಲ್ಲಿ ತೊಡಗಿ ಕೊಂಡಿರುವವರು ಕಂಡುಬರುತ್ತಾರೆ. ಬಡಗಿ, ಕಮ್ಮಾರಿಕೆ, ಮನೆ ಕಟ್ಟುವ ಕೆಲಸ, ಅಡಿಕೆ ಪಟ್ಟೆ ಮಾಡುವುದು. ತೆಂಗಿನ ಚಾಪೆ ಹೆಣೆಯುವುದು, ಗಾರೆ ಕೆಲಸ, ಬೀಡಿ ಕಟ್ಟುವುದು, ಮುಂತಾದ ಕೆಲಸಗಳನ್ನು ಮಾಡುವುದು ಅಲ್ಲಲ್ಲಿ ಕಂಡುಬರುತ್ತದೆ.

## ೪.೬ ಸರ್ಕಾರ ಹುದ್ದೆಗಳು ಮತ್ತು ಮಾದಿಗರು

ಯಾವುದೇ ಒಂದು ಜನಾಂಗದ ಆರ್ಥಿಕ ಸ್ಥಿತಿ-ಗತಿಯನ್ನು ಅರಿಯುವಾಗ ಸರ್ಕಾರಿ ಮತ್ತು ಖಾಸಗಿ ಕ್ಷೇತ್ರದಲ್ಲಿ ಅದು ಪಡೆದಿರುವ ಅವಕಾಶವನ್ನೂ ಪರಿಗಣಿಸಲೇಬೇಕು. ಇಲ್ಲದೇ ಹೋದರೆ ಅದು ಅಪೂರ್ಣ ಎನಿಸುತ್ತದೆ. ಏಕೆಂದರೆ ಈ ಹುದ್ದೆಗಳು ವ್ಯಕ್ತಿಯ ಮತ್ತು ಅತನ ಕುಟುಂಬದ ಆರ್ಥಿಕ ಸ್ಥಿತಿಯನ್ನು ಸುಧಾರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಈ ಹಿನ್ನೆಲೆಯಲ್ಲಿ ಮಾದಿಗ ಜನಾಂಗವು ಹೊಂದಿರಬಹುದಾದ ಸರ್ಕಾರಿ ಮತ್ತು ಖಾಸಗಿ ಹುದ್ದೆಗಳನ್ನು ಕುರಿತು ಲಭ್ಯವಿರುವ ಮಾಹಿತಿಯನ್ನು ಆಧರಿಸಿ ವಿಶ್ಲೇಷಣೆ ಮಾಡಲು ಪ್ರಯತ್ನಿಸಿದೆ. ಒಂದು ಕಾಲಕ್ಕೆ ಸರ್ಕಾರಿ ನೌಕರಿಗಳು ಕೇವಲ ಬ್ರಾಹ್ಮಣ ವರ್ಗಕ್ಕೆ ಸೀಮಿತವಾಗಿದ್ದವು. ಏಕೆಂದರೆ ಶಿಕ್ಷಣ ಕಲಿತವರಷ್ಟೆ ಸರ್ಕಾರಿ ನೌಕರಿಯನ್ನೂ ಪಡೆಯಲು ಅವಕಾಶವಿದ್ದುದರಿಂದ ಸಾಂಪ್ರದಾಯಿಕವಾಗಿ ಶಿಕ್ಷಣ ಕಲಿಯುವ ಹಕ್ಕು ಕೇವಲ ಬ್ರಾಹ್ಮಣರಿಗೆ ಮಾತ್ರ ಮೀಸಲಾದ್ದರಿಂದ ಹೆಚ್ಚು ಹೆಚ್ಚು ಅವಕಾಶಗಳು ಅವರೆ ಪಡೆದುಕೊಳ್ಳಲು ಸಾಧ್ಯವಾಯಿತು. ವಸಾಹತು ಶಾಹಿ ಕಾಲಘಟ್ಟದಲ್ಲಿ ಶೂದ್ರರಾದಿಯಾಗಿ, ಅಸ್ಪೃಶ್ಯರಿಗೆ ಶಿಕ್ಷಣ ಕಲಿಯುವ ಅವಕಾಶ ದೊರೆತದ್ದರಿಂದ ಅವರು ಶಿಕ್ಷಿತರಾದರು. ಇದು ಸರ್ಕಾರಿ ನೌಕರಿಗಳಲ್ಲಿ ಪ್ರಬಲವಾಗಿ ಬೇರೂರಿದ್ದ ಬ್ರಾಹ್ಮಣ ವರ್ಗದವರ ಸ್ಥಾನಗಳನ್ನು ಅಲುಗಾಡಿಸಿತು. ಬ್ರಿಟಿಷ ಆಳ್ವಿಕೆಯ ಸಂದರ್ಭದಲ್ಲಿ ಶಿಕ್ಷಣ ಪಡೆದ ಶೂದ್ರವರ್ಗಕ್ಕೆ ಕೆಲವೊಂದು ನೌಕರಿಗಳನ್ನು ನೀಡುವುದರೊಂದಿಗೆ ಆರಂಭಗೊಂಡ ನೇಮಕಾತಿ ಇಂದು ಅಸ್ಪೃಶ್ಯರಾದಿಯಾಗಿ ಅನೇಕ ಜಾತಿಗಳು ಸರ್ಕಾರಿ ಹುದ್ದೆಗಳನ್ನು ಪಡೆಯುವಂತಾಯಿತು. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಸರ್ಕಾರಿ ಇಲಾಖೆಗಳಲ್ಲಿ ಮಾದಿಗ ಜನಾಂಗದವರು ಪಡೆದಿರುವ ಅವಕಾಶವನ್ನು ಕುರಿತು ಇಲ್ಲಿ ಹೇಳಲಾಗಿದೆ.

### ಮೀಸಲಾತಿ ಮತ್ತು ಸರ್ಕಾರಿ ನೌಕರಿ

ಪರಿಶಿಷ್ಟಜಾತಿ, ಪರಿಶಿಷ್ಟವರ್ಗ ಹಾಗೂ ಹಿಂದುಳಿದ ಜಾತಿಗಳಿಗೆ ಸರ್ಕಾರಿ ನೌಕರಿಯನ್ನು ಪಡೆಯುವಲ್ಲಿ 'ಮೀಸಲಾತಿ' ನಿಯಮ ಪ್ರಮುಖ ಪಾತ್ರವಹಿಸಿದೆ. ಈ ರೀತಿಯ ಮೀಸಲಾತಿ ನಿಯಮ ಸರ್ಕಾರಿ ನೌಕರಿಗೆ ಅನ್ವಯವಾದದ್ದು ೧೯ನೇ ಶತಮಾನದ ನಂತರದಲ್ಲಿ ಎನ್ನಬಹುದು. ಸ್ವಾತಂತ್ರ್ಯಪೂರ್ವದಲ್ಲಿ ಸರ್ಕಾರಿ ನೌಕರಿಗಳಲ್ಲಿ ಎಲ್ಲರಿಗೂ ಸಮಾನ ಅವಕಾಶಗಳನ್ನು ನೀಡಬೇಕೆಂಬುವಲ್ಲಿ ಹಾಗೂ ಪ್ರತ್ಯೇಕವಾಗಿ ಸಾಮಾಜಿಕ-ಆರ್ಥಿಕ ತುಳಿತಕ್ಕೊಳಪಟ್ಟವರಿಗೆ ಹೆಚ್ಚಿನ ಪ್ರೋತ್ಸಾಹ ಅವಶ್ಯಕತೆಯನ್ನು ಮನಗಂಡ ಮೈಸೂರು ದಿವಾಸರಲ್ಲಿ ಕಾಂತರಾಜರು ಮೊದಲಿಗರು[೪೩] ಇವರು ತಮ್ಮ ಅಡಳಿತದ ಅವಧಿಯಲ್ಲಿ ಹಿಂದುಳಿದವರ ಬಗ್ಗೆ ವಿಶೇಷ ಕಾಳಜಿ ವಹಿಸಿದ ಪರಿಣಾಮವಾಗಿ ಸರ್ಕಾರಿ ಹುದ್ದೆಗಳ ನೇಮಕಾತಿಯಲ್ಲಿ ಎಲ್ಲಾ ಹಿಂದುಳಿದ ವರ್ಗಗಳಿಗೆ ವಿಶೇಷವಾಗಿ ಹರಿಜನರಿಗೆ ಪ್ರಾತಿನಿಧ್ಯ ಕೊಡಬೇಕೆಂದು ಸರ್ಕಾರವು ನೇಮಕಾತಿ ಅಧಿಕಾರಿಗಳಿಗೆ ಸೂಚನೆಗಳನ್ನು ಕೊಟ್ಟಿತ್ತು.[೪೪] ಇದರಿಂದ ಹಿಂದುಳಿದವರಿಗೆ

ಸರ್ಕಾರಿ ಹುದ್ದೆಗಳು ದೊರಕಲಾರಂಭಿಸಿದವು. ಆದರೂ ನೇಮಕಾತಿಗಳಲ್ಲಿ ಬ್ರಾಹ್ಮಣ ವರ್ಗದ ಪ್ರಾಬಲ್ಯವನ್ನು ತಡೆಗಟ್ಟಲಾಗಲಿಲ್ಲ. ಇದರ ಪರಿಣಾಮವಾಗಿ ಹುಟ್ಟಿಕೊಂಡಿದ್ದು ಹಿಂದುಳಿದ ವರ್ಗಗಳ ಚಳವಳಿ. ಇದರಿಂದಾಗಿ ಸರ್ಕಾರ ಹಿಂದುಳಿದವರ ಸ್ಥಿತಿ-ಗತಿಗಳನ್ನು ಅರಿಯಲು 'ಮಿಲ್ಲರ್' ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿತು.

ಮಿಲ್ಲರ್ ಸಮಿತಿ ಅಧ್ಯಯನ ಕೈಗೊಂಡು ೧೯೧೯ರಲ್ಲಿ ಅಧ್ಯಯನದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಈ ವರದಿಯಲ್ಲಿ ಹಿಂದುಳಿದವರೆಂದರೆ "ಸರ್ಕಾರಿ ಸೇವೆಯಲ್ಲಿ ಸಾಕಷ್ಟು ಪ್ರಾತಿನಿಧ್ಯವಿಲ್ಲದ ಎಲ್ಲಾ ಬ್ರಾಹ್ಮಣೇತರರು"[೪೫] ಎಂದು ವ್ಯಾಖ್ಯಾನಿಸಿತು. ಅದರಲ್ಲಿ ಅಸ್ಪೃಶ್ಯ ವರ್ಗದವರನ್ನು ಹಿಂದುಳಿದವರ ಜೊತೆಗೆ ಸೇರಿಸದೆಯೇ ಪ್ರತ್ಯೇಕವಾಗಿ ಪರಿಗಣಿಸಿತ್ತು.[೪೬] ಅಲ್ಲದೆ ಜಾತಿವಾರು ಪಡೆದಿರುವ ಪ್ರಾತಿನಿಧ್ಯವನ್ನು ಅಂಕಿ ಅಂಶಗಳ ಸಮೇತ ಸ್ಪಷ್ಟಪಡಿಸಿ ಸರ್ಕಾರ ಮುಂದೆ ಕೈಗೊಳ್ಳಬೇಕಾದ ಕ್ರಮಗಳನ್ನು ವರದಿಯಲ್ಲಿ ತಿಳಿಸಿತು. ೧೯೧೮ರ ಹೊತ್ತಿಗೆ ರಾಜ್ಯದಲ್ಲಿ ವಿವಿಧ ಜಾತಿಗಳು ಹೊಂದಿರುವ ಸ್ಥಾನಗಳನ್ನು ಈ ಕೆಳಗಿನಂತೆ ತಿಳಿಸಿದೆ :

| ಜಾತಿಗಳು | ಸರ್ಕಾರಿ ಸೇವೆಯಲ್ಲಿ | ಶೇಕಡ |
|---|---|---|
| ಬ್ರಾಹ್ಮಣರು | ೯೭೧೨ | ೬೯.೬೪ |
| ಕ್ಷತ್ರಿಯರು | ೨೨೦ | ೧.೫೮ |
| ಒಕ್ಕಲಿಗರು | ೩೩೮ | ೨.೪೨ |
| ಲಿಂಗಾಯಿತರು | ೫೦೪ | ೩.೬೧ |
| ಮೊದಲಿಯರ್ | ೨೭೭ | ೫.೭೦ |
| ವಿಶೇಷವಾಗಿ | | |
| ಹಿಂದುಳಿದವರು | ೧೦೦೧ | ೭.೧೮ |
| ನಿಮ್ನ ವರ್ಗಗಳು | ೧೬೫ | ೧.೧೮ |
| ಮುಸ್ಲಿಂ | ೧೦೭೮ | ೭.೭೩ |
| ಆಂಗ್ಲ ಕ್ರೈಸ್ತರು | ೩೯೫ | ೨.೮೩ |
| ಆಂಗ್ಲ ಭಾರತೀಯರು | ೧೫೬ | ೧.೧೨[೪೭] |

ಈ ಅಂಕಿ ಅಂಶಗಳನ್ನು ಗಮನಿಸಿದರೆ ಮೇಲ್ನೋಟಕ್ಕೆ ಬ್ರಾಹ್ಮಣರು ಹೆಚ್ಚಿನ ಸಂಖ್ಯೆಯಲ್ಲಿ ನೇಮಕರಾಗಿರುವುದು ಕಂಡುಬರುತ್ತದೆ. ಜನಸಂಖ್ಯಾ ದೃಷ್ಟಿಯಿಂದ ಉಳಿದ ಜಾತಿಗಳಿಗಿಂತ ಅದು ಪಡೆದಿರುವ ಪ್ರಾತಿನಿಧ್ಯ ಕಡಿಮೆಯೇನೂ ಅಲ್ಲ. ಈ ಹಿನ್ನೆಲೆಯಲ್ಲಿ ಸರ್ಕಾರ ಈ ತಾರತಮ್ಯವನ್ನು ಹೋಗಲಾಡಿಸಲು ಕ್ರಮ ಕೈಗೊಂಡ ಪರಿಣಾಮವಾಗಿ ಅನಂತರದ ಸರ್ಕರಿ ನೌಕರಿಯ ನೇಮಕಾತಿಯಲ್ಲಿ

ಶೇ.೬೯.೬೪ರಷ್ಟು ಇದ್ದ ಬ್ರಾಹ್ಮಣರ ಸಂಖ್ಯೆ ಶೇ ೫೪.೧ಕ್ಕೆ ಇಳಿಯಿತು. ಇದರಿಂದ ಹಿಂದುಳಿದ ವರ್ಗಗಳ ಪ್ರಾತಿನಿಧ್ಯ ಸುಮಾರು ಶೇ.೧೨ರಷ್ಟು ಹೆಚ್ಚಾಯಿತು[೪೮] ಇಂತಹ ನೇಮಕಾತಿಯ ಸಂದರ್ಭಗಳಲ್ಲಿ ಮಾದಿಗ ಜನಾಂಗ ಆಯ್ಕೆ ಇಲ್ಲವೆನ್ನಬಹುದು. ಏಕೆಂದರೆ ಆಗ ತಾನೆ ಶಿಕ್ಷಣ ಅವರಿಗೆ ಕಲಿಯುವ ಅವಕಾಶ ಮಾಡಿಕೊಡಲಾಗಿತ್ತು. ಇದರಿಂದ ಶಿಕ್ಷಣ ಕಲಿತವರ ಸಂಖ್ಯೆಯು ಬೆರಳೆಣಿಕಯಷ್ಟು ಮಾತ್ರವೇ ಇತ್ತು. ಈ ಹಿನ್ನೆಲೆಯಲ್ಲಿ ಸರ್ಕಾರ ನೇಮಕಾತಿಗಾಗಿ ೧೯೨೨ರಲ್ಲಿ ಮಾಸ್ತರರ ಹುದ್ದೆಗಳಿಗೆ ಆದಿಕರ್ನಾಟಕ, ಅಭ್ಯರ್ಥಿಗಳು ದೊರೆತಾಗ ಆದಿಕರ್ನಾಟಕ ಶಾಲೆಗಳಲ್ಲಿ ಉಂಟಾಗಬಹುದಾದ ಖಾಲಿಸ್ಥಳಗಳಿಗೆ ಜಾಹಿರಾತು ಮೂಲಕ ಅರ್ಜಿಯನ್ನು ಕರೆಯದೆ ನೇಮಕಾತಿ ಮಂಡಳಿಗಳಿಗೆ ತಿಳಿಸಿ ನೇರವಾಗಿ ನೇಮಿಸಬಹುದೆಂದು ಆದೇಶ ಮಾಡಲಾಗಿತ್ತು.[೪೯] ಆದರೆ ಈ ಅವಕಾಶವನ್ನು ಮೊದಲು ಶಿಕ್ಷಣ ಪಡೆದ ಬೆಂಗಳೂರು ಮತ್ತು ಮೈಸೂರು ಭಾಗದ ಆದಿಕರ್ನಾಟಕರಿಗೆ ದೊರಕಿವೆ. ಏಕೆಂದರೆ ಶಿಕ್ಷಣ ಕಲಿಯುವ ಪ್ರಕ್ರಿಯೆ ಮೊದಲು ಆರಂಭಗೊಂಡಿದ್ದು ಆ ಭಾಗದಿಂದಲೆ.

ಆದರೆ ಚಿತ್ರದುರ್ಗ ಜಿಲ್ಲೆಯಲ್ಲಿ ಆ ಕಾಲಕ್ಕೆ ಯಾರು ನೇಮಕವಾಗಿಲ್ಲ. ಹಾಗೆಯೇ ಬಳ್ಳಾರಿ ಜಿಲ್ಲೆಯಲ್ಲಿಯೂ ಕೂಡ. ಸ್ವಾತಂತ್ರ್ಯ ಪಡೆವ ಸಂದರ್ಭ ಮತ್ತು ನಂತರದಲ್ಲಿ ಶಾಲಾಮಾಸ್ತರ ಹುದ್ದೆಗೆ ಆಯ್ಕೆಯಾಗಿದ್ದ ಹಿರಿಯೂರು ತಾಲ್ಲೂಕಿನ ಉಲುಗಲಕುಂಟೆ ಗ್ರಾಮದ ಆರ್.ಕಣುಮಯ್ಯ ಗೊಲ್ಲಪ್ಪ, ಕೆಂಚಪ್ಪ, ಮುಂತಾದ ಕೆಲವರು ಶಾಲಾ ಮಾಸ್ತರರ ಹುದ್ದೆಗೆ ಆಯ್ಕೆಯಾದೆವೆಂದು ತಿಳಿಸಿದ್ದಾರೆ. ಚಳ್ಳಕೆರೆ ತಾಲ್ಲೂಕಿನಲ್ಲಿ ಕೆಂಚಪ್ಪ ದೊಡ್ಡಬೀರನಳ್ಳಿ, ಎ.ಕೆ.ಹನುಮಂತಪ್ಪ ಚಟ್ಟೆಕಂಬ, ಡಿ.ರಂಗಪ್ಪ ಹಾಗೂ ದ್ಯಾಮಯ್ಯ ಗೋಪನಹಳ್ಳಿಯವರು ಶಿಕ್ಷಕರಗಾಗಿ ಆಯ್ಕೆಯಾಗಿರುವುದು ತಿಳಿದುಬಂದಿತು. ಈ ಹಿನ್ನೆಲೆಯಲ್ಲಿ ನೋಡಿದಾಗ ಶಾಲಾ ಮಾಸ್ತರರ ಹುದ್ದೆಗಳು ಮಾದಿಗರಿಗೆ ಪ್ರಥಮವಾಗಿ ದೊರೆತ ಸರ್ಕಾರಿ ನೌಕರಿಗಳಾಗಿವೆ. ಸ್ವಾತಂತ್ರ್ಯ ಪೂರ್ವದಲ್ಲಿ ಮಾದಿಗರು ಸರ್ಕಾರಿ ನೌಕರಿಯಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಬೆರಳೆಣಿಕೆಯಷ್ಟು ಎನ್ನಬಹುದು.

ಭಾರತ ಸ್ವಾತಂತ್ರ್ಯ ಹೊಂದಿದ ನಂತರ ೧೯೫೦ ನವಂಬರ್ ೧ರಂದು ಸಂವಿಧಾನ ಅಂಗೀಕರಿಸಲಾಯಿತು. ಈ ಸಂವಿಧಾನವು ಶಿಕ್ಷಣ ಮತ್ತು ಸರ್ಕಾರಿ ನೌಕರಿಗಳನ್ನು ಪಡೆಯಲು ಹಿಂದುಳಿದ ಜಾತಿಗಳಿಗೆ ಬಲವನ್ನು ಹಾಗೂ ಕಾನೂನಿನ ರಕ್ಷಣೆಯನ್ನು ನೀಡಿತು. ಸಂವಿಧಾನದ ೧೬ನೇ ವಿಧಿಯ ೧ ಮತ್ತು ೪ ಅನುಚ್ಛೇದಗಳು ಸರ್ಕಾರಿ ನೌಕರಿಯ ನೇಮಕಾತಿಗೆ ಸಂಬಂಧಿಸಿವೆ. ೧೬ನೇ ವಿಧಿಯ ೧ ಅನುಚ್ಛೇದವು ರಾಜ್ಯದಲ್ಲಿ ಯಾವುದೇ ಪದಕ್ಕೆ ಸಂಬಂಧಿಸಿದಂತೆ ನಿಯೋಜನೆ ಅಥವಾ ನೇಮಕಾತಿ ವಿಷಯಗಳಲ್ಲಿ ಎಲ್ಲ ನಾಗರಿಕರಿಗೂ ಸಮಾನ ಅವಕಾಶವಿರತಕ್ಕದ್ದು[೫೦] ಎಂದು ರಾಜ್ಯ ಸರ್ಕಾರಕ್ಕೆ ನಿರ್ದೇಶನ ಮಾಡುತ್ತದೆ. ಹಾಗೆಯೇ ದುರ್ಬಲ ಜಾತಿಗಳಿಗೆ ಸಾಮಾಜಿಕ ನ್ಯಾಯ ದೊರಕಿಸಿಕೊಡಬೇಕೆಂಬ ಉದ್ದೇಶದಿಂದ ಅದೇ ವಿಧಿಯ ೪ರ ಅನುಚ್ಛೇದದಲ್ಲಿ ಯಾವುದೇ ಹಿಂದುಳಿದ ನಾಗರಿಕ ವರ್ಗದವರಿಗೆ ರಾಜ್ಯ ಅಧೀನದಲ್ಲಿರುವ ಸೇವೆಗಳಲ್ಲಿ ಸಾಕಷ್ಟು ಪ್ರಾತಿನಿಧ್ಯವಿಲ್ಲವೆಂದು ರಾಜ್ಯವು ಅಭಿಪ್ರಾಯಪಟ್ಟಲ್ಲಿ

ಅಂಥವರಿಗಾಗಿ ನೇಮಕಾತಿಗಳಲ್ಲಿ ಅಥವಾ ಹುದ್ದೆಗಳನ್ನು ಮೀಸಲಿಡುವುದಕ್ಕಾಗಿ ರಾಜ್ಯದ ಯಾವುದೇ ಉಪಬಂಧವನ್ನು ಮಾಡಲು ಪ್ರತಿಬಂಧಿಸತಕ್ಕದ್ದಲ್ಲ[೫೧] ಎಂದು ನಿರ್ದೇಶಿಸುತ್ತದೆ. ಈ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟು ಜನರಿಗೆ ಅವರ ಜನಸಂಖ್ಯಾ ಪ್ರಮಾಣದ ಶೇ ೧೮ ರಷ್ಟು ಮೀಸಲಾತಿಯನ್ನು ಸರ್ಕಾರಿ ಉದ್ಯೋಗದ ನೇಮಕಾತಿಯಲ್ಲಿ ಅನುಸರಿಸುವಂತಾಯಿತು. ಅಲ್ಲಿಂದ ಆರಂಭಗೊಂಡ 'ಮೀಸಲಾತಿ' ನಿಯಮ ಇಂದಿಗೂ ಮುಂದುವರಿದಿದೆ. ಮೀಸಲಾತಿಯ ಪರಿಣಾಮವಾಗಿಯೇ ದುರ್ಬಲ ಜಾತಿಯಲ್ಲಿ ಒಂದಾದ ಮಾದಿಗರು ಸರ್ಕಾರಿ ನೌಕರಿಗಳನ್ನು ಪಡೆಯಲು ಅವಕಾಶವಾಗಿದೆ.

**ಸ್ವಾತಂತ್ರ್ಯ ನಂತರದ ಸರ್ಕಾರಿ ಹುದ್ದೆಗಳ ನೇಮಕಾತಿ ಮತ್ತು ಮಾದಿಗರು :** ಸ್ವಾತಂತ್ರ್ಯನಂತರದಲ್ಲಿ ಸರ್ಕಾರಿ ಹುದ್ದೆಗಳ ನೇಮಕಾತಿಗಳು ನಡೆದಾಗ ಪರಿಶಿಷ್ಟ ಜಾತಿಗೆ ನೀಡಿರುವ(ಮೀಸಲಾತಿ ಅನ್ವಯ) ಸ್ಥಾನಗಳಲ್ಲಿ ಮಾದಿಗ ಜನಾಂಗದ ಅನೇಕರು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ನೇಮಕವಾಗಿರುವುದು ಕಂಡುಬರುತ್ತದೆ. ಈ ರೀತಿ ಸರ್ಕಾರದ ಹುದ್ದೆಗಳಿಗೆ ಈ ಜನಾಂಗಕ್ಕೆ ಸಿಕ್ಕಿರಬಹುದಾದ ಪ್ರಾತಿನಿಧ್ಯವನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಪೌರಸೇವಾ ಸಂಸ್ಥೆ, ಶಿಕ್ಷಣ ಇಲಾಖೆ ಸಮಾಜಕಲ್ಯಾಣ ಇಲಾಖೆ, ಕಂದಾಯ ಇಲಾಖೆ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಮುಂತಾದ ಸರ್ಕಾರಿ ಇಲಾಖೆಗಳಲ್ಲಿ ಇವರು ಪಡೆದಿರುವ ಅವಕಾಶವನ್ನು ಲಭ್ಯ ಇರುವ ಮಾಹಿತಿಯ ಹಿನ್ನೆಲೆಯಲ್ಲಿ ವಿಶ್ಲೇಷಿಸಿಲಾಗಿದೆ.

**ಪೌರಸೇವಾ ಸಂಸ್ಥೆಗಳ ಹುದ್ದೆಗಳು**

ಪೌರಸೇವಾ ಸಂಸ್ಥೆ ಎಂಬುದು ಆಧುನಿಕ ಪರಿಕಲ್ಪನೆ. ಹೆಸರೇ ಸೂಚಿಸುವಂತೆ ಇದೊಂದು ನಾಗರಿಕ ಸೇವಾ ಸಂಸ್ಥೆ. ಪಟ್ಟಣ-ನಗರ ಪ್ರದೇಶಗಳಲ್ಲಿ ವಾಸಮಾಡುವ ಜನರಿಗೆ ಮೂಲಭೂತ ಸೌಕರ್ಯಗಳನ್ನು ಪೂರೈಸುವುದು ಅದರ ಹೊಣೆಯಾಗಿರುತ್ತದೆ. ಈ ಪೌರಸೇವಾ ಸಂಸ್ಥೆಗಳ ಬೆಳವಣಿಗೆಯನ್ನು ರಾಜಪ್ರಭುತ್ವದಿಂದಲೂ ಗುರುತಿಸಬಹುದಾಗಿದ್ದು, ಆಗ ನಗರಗಳನ್ನು ನೋಡಿಕೊಳ್ಳಲು 'ಕೊತ್ವಾಲಾ' ಎನ್ನುವ ಅಧಿಕಾರಿಯನ್ನು ನೇಮಕ ಮಾಡಲಾಗುತ್ತಿತ್ತು. ಪ್ರದೇಶಗಳ ಸ್ವಚ್ಛತೆಯನ್ನು ಕಾಪಾಡಲು, ಕಸಹೊಡೆಯುವ ಮಲಮೂತ್ರಗಳನ್ನು ಎತ್ತಿಹಾಕುವ ಈ ಕೀಳು ಕೆಲಸಗಳನ್ನು ಕೈಗೊಳ್ಳಲೇ ಬೇಕಾದ ಒತ್ತಡ ಕೆಳಜಾತಿಗಳ ಮೇಲಿತ್ತು. ಇದು ಅಸ್ಪೃಶ್ಯ ವರ್ಗವನ್ನು 'ಮಲ ಹೊರುವ' ಹೇಯ ಪದ್ಧತಿಗೆ ಒಳಪಡಿಸಿತು. ಸ್ವಾತಂತ್ರ್ಯಾನಂತರದಲ್ಲಿ ಇಂತಹ ಪದ್ಧತಿಯನ್ನು ಹೊಗಲಾಡಿಸಲು ಸರ್ಕಾರ ಕ್ರಮ ಕೈಗೊಂಡಿರುವುದು ಕಂಡುಬರುತ್ತದೆ. ದೇವರಾಜ ಅರಸು ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ ಈ ಅನಿಷ್ಟ ಪದ್ಧತಿಯನ್ನು ನಿಷೇದಿಸಿ ಶಾಸನ ಜಾರಿಗೆ ತಂದುದಲ್ಲದೇ ಅಂತವರನ್ನು ಪೌರಕಾರ್ಮಿಕರನ್ನಾಗಿ ನಿಯುಕ್ತಿ ಮಾಡಿದರು[೫೨] ಅಲ್ಲಿಂದ ಈ ಸಂಸ್ಥೆಯಲ್ಲಿ ಸ್ವಚ್ಛತೆಯ ಕಾರ್ಯದಲ್ಲಿ ತೊಡಗಿರುವ

ಕೆಲಸಗಾರರನ್ನು 'ಪೌರಕಾರ್ಮಿಕರು' ಎಂದು ಗುರುತಿಸಲು ಆರಂಭಿಸಲಾಯಿತು. ಇಂದು ಪೌರಸೇವಾಸಂಸ್ಥೆಗಳ ಆಡಳಿತವನ್ನು ನೋಡಿಕೊಳ್ಳುವ ಒಂದು ಪ್ರತ್ಯೇಕ ಸಚಿವಾಲಯವಿದ್ದು, ಅದಕ್ಕೆ ಒಬ್ಬ ಸಚಿವರನ್ನು ನೇಮಕಮಾಡಲಾಗುವುದು. ಈ ರೀತಿಯ ಹಿನ್ನೆಲೆಯನ್ನು ಹೊಂದಿರುವ ಪೌರಸೇವಾ ಸಂಸ್ಥೆಗಳಲ್ಲಿರುವ ಹುದ್ದೆಗಳನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಒಂದು ಆಡಳಿತ ಅಥವಾ ಕಛೇರಿ ಸಿಬ್ಬಂದಿ ಮತ್ತೊಂದು 'ಪೌರಕಾರ್ಮಿಕ' ವರ್ಗ. ಈ ವರ್ಗದ ಹುದ್ದೆಗಳಲ್ಲಿ ಮಾದಿಗ ಜನಾಂಗ ಪಡೆದಿರಬಹುದಾದ ಅವಕಾಶಗಳು ಎಷ್ಟೆಂಬುದನ್ನು ಕೆಲವು ಮಾಹಿತಿಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಪ್ರದೇಶದಲ್ಲಿ ಇರುವ ಪೌರಸೇವಾ ಸಂಸ್ಥೆಗಳನ್ನು ಗಮನಿಸಲಾಗಿದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ೧ ನಗರಸಭೆ, ೪ ಪುರಸಭೆಗಳು ಹಾಗೂ ೧ಪಟ್ಟಣಪಂಚಾಯಿತಿಗಳು ಇವೆ. ಚಿತ್ರದುರ್ಗ ನಗರಸಭೆಯು ಒಟ್ಟು ೨೩೬ ನೌಕರರನ್ನು ಒಳಗೊಂಡಿದ್ದು ಅವುಗಳಲ್ಲಿ ಪರಿಶಿಷ್ಟ ಜಾತಿಯ ೧೩೨ ಹುದ್ದೆ ಮಾದಿಗರೇ ಇರುವುದು ಕಂಡುಬರುತ್ತದೆ. ಇವುಗಳಲ್ಲಿ ಕಛೇರಿ ಸಿಬ್ಬಂದಿ ವಿಭಾಗದಲ್ಲಿರುವ ೨೩ ಹುದ್ದೆಗಳು ಪುರುಷರಿಗೂ, ೨ ಮಹಿಳೆಯರಿಗೂ ದೊರಕಿವೆ. ಪೌರಕಾರ್ಮಿಕರ ವಿಭಾಗದಲ್ಲಿ ೭೧ ಪುರುಷರು, ೩೪ ಮಹಿಳೆಯರು ಈ ಜನಾಂಗದವರು ಇದ್ದಾರೆ. ಈ ಎಲ್ಲಾ ಹುದ್ದೆಗಳು ೧೯೬೦ ರಿಂದ ೨೦೦೦ರ ಅವಧಿಯಲ್ಲಿ ನೇರ ಮತ್ತು ಅನುಕಂಪದ ಮೇಲೆ ನೇಮಕಾತಿಯಾಗಿರುವಂಥವು. ಅನುಕಂಪದ ಆಧಾರದ ಮೇಲೆ ೧೮ ಜನರು ನೇಮಕಾತಿಯಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಹಿಂದೆ ಪೌರಕಾರ್ಮಿಕರು ಈ ಜನಾಂಗದವರು ಇದ್ದರೆಂಬುದನ್ನು ತಿಳಿಯಬಹುದಾಗಿದೆ.

ಚಳ್ಳಕೆರೆ ಪುರಸಭೆಯಲ್ಲಿ ಒಟ್ಟು ೧೧೩ ಹುದ್ದೆಗಳಿದ್ದು ಪರಿಶಿಷ್ಟ ಜಾತಿಗೆ ೫೭ ಹುದ್ದೆಗಳನ್ನು ನೀಡಲಾಗಿದೆ. ಇವುಗಳಲ್ಲಿ ಕಛೇರಿ ಸಿಬ್ಬಂದಿ ವಿಭಾಗದ ೧೦ ಹುದ್ದೆಗಳಲ್ಲಿ ೧೨ ಹುದ್ದೆಗಳು ಮತ್ತು ಪೌರಕಾರ್ಮಿಕ ವಿಭಾಗದಲ್ಲಿ ೩೮ ಹುದ್ದೆಗಳಿಗೆ ಮಾದಿಗ ಜನಾಂಗದವರು ನೇಮಕವಾಗಿದ್ದಾರೆ. ಇವರು ಆಯ್ಕೆಯಾದ ಅವಧಿ ೧೯೬೫ರಿಂದ ೨೦೦೧. ಇವುಗಳಲ್ಲಿ ಅನುಕಂಪದ ಆಧಾರದ ಮೇಲೆ ೭ ಜನ ಆಯ್ಕೆಯಾಗಿದ್ದಾರೆ.

ಮೊಳಕಾಲ್ಮೂರು ಪಟ್ಟಣ ಪಂಚಾಯಿತಿಯ ೧೪ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿಗೆ ೯ ಹುದ್ದೆಗಳನ್ನು ನೀಡಲಾಗಿದೆ. ಇದರಲ್ಲಿ ಕಛೇರಿ ಸಿಬ್ಬಂದಿ ವಿಭಾಗದ ೨ ಹುದ್ದೆಗಳಲ್ಲಿ ಮಾದಿಗರು ಒಂದು, ಹೊಲೆಯ ಒಂದು ಪಡೆದರೆ ಉಳಿದ ೭ ಜನ ಪೌರಕಾರ್ಮಿಕರು ಈ ಜನಾಂಗದವರೇ ಆಗಿದ್ದಾರೆ. ೧೯೭೨ ರಿಂದ ೧೯೭೮ರ ಅವಧಿಯಲ್ಲಿ ಆಯ್ಕೆಯಾದವರು ಇವರು.

ಈ ಮೇಲಿನ ಅಂಕಿ-ಅಂಶಗಳು, ಕೆಲವು ಸೇವಾ ಸಂಸ್ಥೆಗಳಲ್ಲಿ ಮಾದಿಗರು ಪಡೆದಿರಬಹುದಾದ

ಹುದ್ದೆಗಳ ಸಂಖ್ಯೆಯನ್ನು ತಿಳಿಸುತ್ತವೆ. ಉಳಿದ ಪುರಸಭೆಗಳ ಪೌರಕಾರ್ಮಿಕ ಹುದ್ದೆಗಳಲ್ಲಿ ತೊಡಗಿರುವವರು ನೂರಕ್ಕೆ ಶೇ.೯೯ರಷ್ಟು ಮಾದಿಗರೆ ಆಗಿದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ೨ ನಗರ ಸಭೆಗಳು, ೧ ಪುರಸಭೆ ಹಾಗೂ ೬ ಪಟ್ಟಣ ಪಂಚಾಯಿತ್ ಗಳಿವೆ. ಅವುಗಳಲ್ಲಿ ಬಳ್ಳಾರಿ ನಗರಸಭೆಯ ಒಟ್ಟು ೭೩೭ ಹುದ್ದೆಗಳು ಇದ್ದು, ಕಛೇರಿ ಸಿಬ್ಬಂದಿ ವಿಭಾಗದಲ್ಲಿ ಪರಿಶಿಷ್ಟ ಜಾತಿಯ ೪೦ ಹುದ್ದೆಗಳಲ್ಲಿ ೨೫ ಮಾದಿಗರು, ೫ವಡ್ಡರು, ೭ ಹೊಲೆಯರು ಹಾಗೂ ೩ ಕೊರಚರಿಗೆ ದೊರಕಿವೆ. ಈ ಹುದ್ದೆಗಳ ನೇಮಕಾತಿಯ ಅವಧಿ ೧೯೬೨ರಿಂದ ೧೯೯೯ ಆಗಿದೆ. ನೀರು ಸರಬರಾಜು ವಿಭಾಗದಲ್ಲಿ ಪರಿಶಿಷ್ಟ ಜಾತಿಯ ೧೫ ಹುದ್ದೆಗಳಿದ್ದು ೧೫ ಜನ ಮಾದಿಗರು, (೨ ದಲಿತ ಕ್ರಿಶ್ಚಿಯನ್ ೨ ದಾಸರಿ) ಆಯ್ಕೆಯಾಗಿದ್ದಾರೆ. ಇವರ ನೇಮಕಾತಿ ಅವಧಿಯು ೧೯೬೪ರಿಂದ ೧೯೮೫ ಆಗಿದೆ. ಪೌರಕಾರ್ಮಿಕ ವಿಭಾಗದಲ್ಲಿ ಸುಮಾರು ೨೫೦ಕ್ಕೂ ಹೆಚ್ಚು ಹುದ್ದೆಗಳು ಅವುಗಳಲ್ಲಿ ಶೇ ೯೯ರಷ್ಟು ಮಾದಿಗ ಜನಾಂಗವೇ ಪಡೆದಿದೆ. ಕಛೇರಿ ಸಿಬ್ಬಂದಿ ವರ್ಗದಲ್ಲಿ ಪಡೆದ ಹುದ್ದೆಗಳಲ್ಲಿ ೧೦ ಅನುಕಂಪದ ಆಧಾರದ ಮೇಲೆ ಉದ್ಯೋಗ ದೊರಕಿವೆ.

ಹೊಸಪೇಟೆ ನಗರಸಭೆಯ ಕಛೇರಿ ಸಿಬ್ಬಂದಿ ವಿಭಾಗದ ೨೮ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿಯವರಿದ್ದು ಅವುಗಳಲ್ಲಿ ೨೫ ಮಾದಿಗರು, ೨ ಬೋವಿ, ೧ ಕೊರಚರಿಗೆ ದೊರಕಿವೆ. ಈ ಆಯ್ಕೆಯು ೧೯೭೪ ರಿಂದ ೧೯೯೯ರ ಅವಧಿಯಲ್ಲಿ ನಡೆದಿರುವಂತವು. ಪೌರಕಾರ್ಮಿಕರ ವಿಭಾಗದಲ್ಲಿ ೧೨೧ ಹುದ್ದೆಗಳು ಮಾದಿಗ ಜನಾಂಗಕ್ಕೆ ದೊರಕಿವೆ. ಅದರಲ್ಲಿ ೫೬ ಪುರುಷರು, ೬೫ ಮಹಿಳೆಯರು ಸೇರಿದ್ದಾರೆ. ಇವರ ನೇಮಕಾತಿ ಅವಧಿಯು ೧೯೬೧ ರಿಂದ ೧೯೯೯ ಆಗಿದೆ. ಇಲ್ಲಿ ವಿಶೇಷವಾಗಿ ಮಾದಿಗರೇ ಹೆಚ್ಚು ಇದ್ದಾರೆ.

ಹೊಸಪೇಟೆ ತಾಲ್ಲೂಕಿನ ಕಮಲಾಪುರದ ಪಟ್ಟಣ ಪಂಚಾಯತ್‌ನಲ್ಲಿ ಪರಿಶಿಷ್ಟ ಜಾತಿಯ ೧೬ ಹುದ್ದೆಗಳಲ್ಲಿ ಕಛೇರಿಯ ಸಿಬ್ಬಂದಿಯ ೪ ಹುದ್ದೆಗಳಲ್ಲಿ ಮಾದಿಗರು ೩, ಚನ್ನಯ್ಯದಾಸರು ೧ ಪಡೆದಿದ್ದಾರೆ. ಉಳಿದ ೧೪ ಪೌರಕಾರ್ಮಿಕರ ಹುದ್ದೆಗಳಲ್ಲಿ ಮಾದಿಗ ಜನಾಂಗದ ೧೦ ಪುರುಷರು ೪ ಮಹಿಳೆಯರು ಇದ್ದಾರೆ. ಇವರ ನೇಮಕಾತಿಯ ಅವಧಿ ೧೯೬೭ ರಿಂದ ೨೦೦೦ ಆಗಿದೆ.

ಈ ಮೇಲಿನ ಅಂಕಿ-ಅಂಶಗಳು ಕೆಲವು ಪೌರಸೇವಾ ಸಂಸ್ಥೆಗಳು ಪರಿಶಿಷ್ಟ ಜಾತಿಯ ಹುದ್ದೆಗಳಲ್ಲಿ ಮಾದಿಗರು ಪಡೆದಿರಬಹುದಾದ ಹುದ್ದೆಗಳ ಬಗ್ಗೆ ಮಾಹಿತಿ ನೀಡುತ್ತವೆ. ಪ್ರತಿಯೊಂದು ಪೌರಸೇವಾ ಸಂಸ್ಥೆಯಲ್ಲಿ ಕಂಡುಬರುವ ಪ್ರಮುಖ ಅಂಶವೆಂದರೆ ಪೌರಕಾರ್ಮಿಕರ ಹುದ್ದೆಗಳಿಗೆ ಮಾದಿಗರೆ ನೇಮಕವಾಗಿರುವುದು. ಅಲ್ಲದೇ ಅನುಕಂಪ ಆಧಾರದ ಮೇಲೆ ನೇಮಕಾತಿಯಾಗಿರುವಂಥದ್ದು. ಕಸಹೊಡೆಯುವ, ಮಲಮೂತ್ರ ಎತ್ತಿಹಾಕುವ, ಚರಂಡಿ ಸ್ವಚ್ಛಮಾಡುವ ಇನ್ನು ಮುಂತಾದ ಕೀಳು ಕೆಲಸಗಳನ್ನು ಮಾಡುವ ಪೌರಕಾರ್ಮಿಕರ ಹುದ್ದೆಗೆ ಬೇರೆ ಜಾತಿಯವರು ತೊಡಗಿಕೊಳ್ಳಲು

ಮುಂದಾಗುವುದಿಲ್ಲ. ಶೇ.೯೯ರಷ್ಟು ಮಾದಿಗ ಜನಾಂಗದವರೇ ಈ ವೃತ್ತಿಯಲ್ಲಿ ತೊಡಗಿಕೊಂಡಿದ್ದಾರೆ. ಅಧ್ಯಯನ ಸಂದರ್ಭದಲ್ಲಿ ಕಂಡುಬಂದ ಅತಿಮುಖ್ಯ ಅಂಶವೆಂದರೆ ಪೌರಕಾರ್ಮಿಕ ವೃತ್ತಿಯನ್ನು ಕೈಗೊಂಡಿರುವ ಬಹುತೇಕರು ಆಂಧ್ರ ಮೂಲದ ಮಾದಿಗರೇ ಹೆಚ್ಚು. ಸ್ಥಳೀಯರ ಸಂಖ್ಯೆ ತುಂಬಾ ಕಡಿಮೆ. ಈ ಅಂಶವನ್ನು ಗಮನಿಸಿದಾಗ ಯಾಕೆ ಸ್ಥಳೀಯ ಮಾದಿಗರು ಈ ವೃತ್ತಿಯಲ್ಲಿ ತೊಡಗಿಕೊಳ್ಳಲಾಗಿಲ್ಲವೆಂದಾಗ ಇದೊಂದು ಕೀಳು ವೃತ್ತಿಯೆಂತಲೂ ಮತ್ತು ಈಗಾಗಲೇ ಭದ್ರವಾಗಿ ನೆಲೆಯೂರಿ ತಮ್ಮ ಜೀವನೋಪಾಯಕ್ಕೆ, ಕೂಲಿ, 'ಜೀತ', 'ಆಯಾಗಾರಿಕೆ', 'ಚಪ್ಪಲಿ ತಯಾರಿಕೆ' ಮುಂತಾದ ವೃತ್ತಿಯಲ್ಲಿ ತೊಡಗಿಕೊಂಡಿದ್ದರಿಂದ ಹೆಚ್ಚು ತೊಡಗಿಸಿಕೊಳ್ಳಲಾಗಿಲ್ಲ. ಆಂಧ್ರದಿಂದ ವಲಸೆ ಬಂದ ಮಾದಿಗರಿಗೆ ಈ ವೃತ್ತಿಯಲ್ಲಿ ತೊಡಗಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಪೌರಕಾರ್ಮಿಕರ ವೃತ್ತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತೊಡಗಿಸಿಕೊಂಡವರು ಆಂಧ್ರಮೂಲದ ಮಾದಿಗರಾಗಿದ್ದಾರೆ.

ಶಿಕ್ಷಣ ಇಲಾಖೆ : ಪೌರಸೇವಾ ಸಂಸ್ಥೆಗಳ ನಂತರ ಮಾದಿಗರು ಶಿಕ್ಷಣ ಇಲಾಖೆಯ ಶಿಕ್ಷಕರ ಹುದ್ದೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಅವುಗಳನ್ನು ಪ್ರಾಥಮಿಕ, ಪ್ರೌಢಶಾಲಾ ಶಿಕ್ಷಕರು ಹಾಗೂ ಕಾಲೇಜು ಉಪನ್ಯಾಸಕರೆಂದು ವಿಂಗಡಿಸಲಾಗಿದೆ. ಈ ವಿಭಾಗಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಈ ಜನಾಂಗ ಶಿಕ್ಷಕರಾಗಿರುವುದು ಪ್ರಾಥಮಿಕ ಶಾಲೆಗಳಲ್ಲಿ. ಉಳಿದಂತೆ ಕಡಿಮೆ ಪ್ರಮಾಣದ ಹುದ್ದೆಗಳನ್ನು ಪಡೆದಿರುವುದು ಅನೇಕ ಅಂಕಿ-ಅಂಶಗಳಿಂದ ತಿಳಿದುಬರುತ್ತದೆ. ಈ ಕುರಿತು ಲಭ್ಯ ಮಾಹಿತಿ ಹಿನ್ನೆಲೆಯಲ್ಲಿ ಈ ಇಲಾಖೆಯಲ್ಲಿ ಬೋಧಕ ಮತ್ತು ಬೋಧಕೇತರ ವರ್ಗದಲ್ಲಿ ಮಾದಿಗರು ಪಡೆದಿರುವ ಅವಕಾಶಗಳನ್ನು ಇಲ್ಲಿ ವಿವರಿಸಲಾಗಿದೆ.

**ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಕರು**

ಚಿತ್ರದುರ್ಗ ಜಿಲ್ಲೆಯಲ್ಲಿ ೨೦೦೦-೦೧ನೇ ಸಾಲಿಗೆ ಒಟ್ಟು ೧೭೯೫ ಪ್ರಾಥಮಿಕ ಶಾಲೆಗಳಲ್ಲಿ ಚಿತ್ರದುರ್ಗ ತಾಲ್ಲೂಕಿನಲ್ಲಿ ೩೯೦ ಪ್ರಾಥಮಿಕ ಶಾಲೆಗಳು ಮತ್ತು ೮೧ ಪ್ರೌಢಶಾಲೆಗಳಿವೆ. ಈ ಶಾಲೆಗಳಲ್ಲಿ ಒಟ್ಟು ಶಿಕ್ಷಕರ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಗೆ ೨೨೬ ಹುದ್ದೆಗಳು ಪ್ರಾಥಮಿಕ ಶಾಲೆಯಲ್ಲಿ ೨೮ ಹುದ್ದೆಗಳು ಪ್ರೌಢಶಾಲೆಗಳಲ್ಲಿ(ಬೋಧಕ ಮತ್ತು ಬೋಧಕೇತರ) ನೀಡಲಾಗಿದೆ. ಪ್ರಾಥಮಿಕ ಶಾಲೆಗಳಲ್ಲಿ ಮಾದಿಗರು ೧೧೩ ಹುದ್ದೆಗಳನ್ನು ಪಡೆದಿದ್ದಾರೆ. ಪ್ರೌಢಶಾಲೆಗಳಲ್ಲಿ ೧೨ ಹುದ್ದೆಗಳನ್ನು ಪಡೆದಿದ್ದಾರೆ.

ಚಳ್ಳಕೆರೆ ತಾಲ್ಲೂಕಿನಲ್ಲಿ ಪ್ರಾಥಮಿಕ ಶಾಲೆಯ ೧೨೮೮ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿಗೆ ೩೨೦ ನೀಡಲಾಗಿದೆ. ಇವು ೧೯೬೭ ರಿಂದ ೨೦೦೦ ಅವಧಿಯಲ್ಲಿ ನೇಮಕಾತಿ ನಡೆದಿದ್ದು ಅವುಗಳಲ್ಲಿ ೧೬೪ ಹುದ್ದೆಗಳು ಮಾದಿಗರಿಗೆ, ೭೧ ಹುದ್ದೆಗಳು ಹೊಲೆಯರಿಗೆ, ೩೨ ಲಂಬಾಣಿ, ೩೧ ಬೋವಿ ಹಾಗೂ

೧೨ ಕೊರವ ಮತ್ತು ಇತರೆ ಜನಾಂಗದವರಿಗೆ ದೊರೆತಿರುವುದು ಕಂಡುಬರುತ್ತದೆ. ಮಾದಿಗ ಜನಾಂಗದವರು ಪಡೆದಿರುವ ಹುದ್ದೆಗಳಲ್ಲಿ ೪೯ ಹುದ್ದೆಗಳು ಮಹಿಳೆಯರಿಗೆ ದೊರಕಿವೆ. ಪ್ರೌಢಶಾಲಾ ಶಿಕ್ಷಕರ ಹುದ್ದೆಗಳು ಪರಿಶಿಷ್ಟ ಜಾತಿಗೆ ೧೫ ನೀಡಲಾಗಿದ್ದು ಅವುಗಳಲ್ಲಿ ಮಾದಿಗರು ೧೦ ಹುದ್ದೆಗಳಲ್ಲಿ, ಹೊಲೆಯರು ೨, ಬೋವಿ ೧, ಲಂಬಾಣಿ ೨ ಹುದ್ದೆಗಳನ್ನು ಹೊಂದಿದ್ದಾರೆ. ಇವುಗಳಲ್ಲಿ ಬೋಧಕ ಬೋಧಕೇತರರು ಸಹ ಇದ್ದಾರೆ.

ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ೮೨ ಹುದ್ದೆಗಳನ್ನು ಪರಿಶಿಷ್ಟ ಜಾತಿಗೆ ನೀಡಲಾಗಿದ್ದು ಅವುಗಳನ್ನು ೧೯೬೭ರಿಂದ ೧೯೯೯ರ ಅವಧಿಯಲ್ಲಿ ನೇಮಕ ಮಾಡಲಾಗಿದೆ. ಇವುಗಳಲ್ಲಿ ಮಾದಿಗರಿಗೆ ೫೧ ಹುದ್ದೆಗಳು(ಮಹಿಳೆ-೭), ಹೊಲೆಯರು ೧೦ ಹುದ್ದೆಗಳನ್ನು, ಬೋವಿ ೮ ಹುದ್ದೆಗಳಲ್ಲಿ ಲಂಬಾಣಿ ಜನಾಂಗವು ೭ ಹುದ್ದೆಗಳು ಹಾಗೂ ಕೊರಚರು ಸೇರಿಕೊಂಡಂತೆ ಇತರೆ ೬ ಹುದ್ದೆಗಳನ್ನು ಪಡೆದಿರುವುದು ಕಂಡುಬರುತ್ತದೆ. ಸರ್ಕಾರಿ ಪ್ರೌಢಶಾಲೆಗಳಲ್ಲಿ ೧೯೭೫ ರಿಂದ ೨೦೦೧ರ ಅವಧಿಯಲ್ಲಿ ನೇಮಕವಾದ ಪರಿಶಿಷ್ಟ ಜಾತಿಯ ೧೮ ಹುದ್ದೆಗಳಲ್ಲಿ(ಬೋಧಕೇತರರು ಸೇರಿದ್ದಾರೆ) ಮಾದಿಗರು ೧೦, ಹೊಲೆಯರು ೩, ಬೋವಿ ೪; ಇತರೆ ೧ ಹುದ್ದೆಗಳನ್ನು ಹಂಚಲಾಗಿದೆ.

ಹಿರಿಯೂರು ತಾಲ್ಲೂಕಿನ ಪ್ರಾಥಮಿಕ ಶಾಲೆಗಳಲ್ಲಿನ ಶಿಕ್ಷಕರಲ್ಲಿ ಪರಿಶಿಷ್ಟ ಜಾತಿಗೆ ೨೨೩ ಹುದ್ದೆಗಳನ್ನು ನೀಡಲಾಗಿದ್ದು, ಇವುಗಳಲ್ಲಿ ೧೦೦ಕ್ಕೂ ಹೆಚ್ಚು ಹುದ್ದೆಗಳು ಮಾದಿಗರಿಗೆ ದೊರಕಿವೆ. ಬೋಧಕೇತರ ವರ್ಗದಲ್ಲಿ ೧ ಹುದ್ದೆ ಮಾದಿಗರಿಗೆ ದೊರೆತಿರುವುದು ಕಂಡುಬರುತ್ತದೆ.

ಈ ಮೇಲಿನ ಅಂಕಿ ಅಂಶಗಳು ಈ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯ ಇತರೆ ಜಾತಿಗಳಿಗಿಂತಲೂ ಮಾದಿಗರು ಹೆಚ್ಚಿನ ಪ್ರಮಾಣದಲ್ಲಿ ಪಡೆದಿರುವುದನ್ನು ಖಚಿತಪಡಿಸುತ್ತವೆ. ಶಿಕ್ಷಣ ಪಡೆಯುವ ಅವಕಾಶ ದೊರೆತಂತೆ ಮೊದಲು ಶಿಕ್ಷಕರ ಹುದ್ದೆಗಳು ಇವರಿಗೆ ದೊರಕಿವೆ. ಸ್ವಾತಂತ್ರ್ಯಾನಂತರದಲ್ಲಿ ಮಾದಿಗ ಜನಾಂಗದವರು ಶಿಕ್ಷಕರಾಗಿ ಆಯ್ಕೆಯಾಗಿರುವ ಹಿರಿಯೂರು ತಾಲ್ಲೂಕಿನಲ್ಲಿ ಆಗ ಶಿಕ್ಷಕ ಹುದ್ದೆಗೆ ಆಯ್ಕೆಯಾಗಿದ್ದ ಹುಲಗಲಗುಂಟೆ ಗ್ರಾಮದ ಆರ್.ಕಣುಮಯ್ಯನವರು ಅವರೊಂದಿಗೆ ಹಿಂದೆ ಮುಂದೆ ಶಿಕ್ಷಕರ ಹುದ್ದೆಗೆ ಗೊಲ್ಲಯ್ಯ, ಕರಿಯಪ್ಪ ಇನ್ನೂ ಕೆಲವರು ಆಯ್ಕೆಯಾಗಿದ್ದನ್ನೂ ತಿಳಿಸಿದರು. ಆದರೆ ಸಂಖ್ಯಾ ಪ್ರಮಾಣ ಕಡಿಮೆ. ಅದಕ್ಕೆ ಈ ಜನಾಂಗದಲ್ಲಿ ಆಗ ಶಿಕ್ಷಣ ಕಲಿತವರು ಕಡಿಮೆಯಾಗಿರುವುದು ಮುಖ್ಯ ಕಾರಣವಾಗಿದೆ. ಶಿಕ್ಷಕರ ಹುದ್ದೆಗಳಿಗೆ ಹೆಚ್ಚು ಅವಕಾಶಗಳು ಅಥವಾ ನೇಮಕಾತಿಗಳು ನಡೆದಾಗ ಮಾದಿಗರು ಹೆಚ್ಚಿನ ಪ್ರಮಾಣದಲ್ಲಿ ಆಯ್ಕೆಯಾಗಿದ್ದು ೧೯೮೦ರ ನಂತರವೇ. ಈ ರೀತಿಯಲ್ಲಿ ಶಿಕ್ಷಕರ ಹುದ್ದೆಗಳು ಮಾತ್ರವಲ್ಲದೆ ಈ ಜನಾಂಗದ ಕೆಲವರು ಈ ಇಲಾಖೆಯಲ್ಲಿ ಗುಮಾಸ್ತರು, ಶಿಕ್ಷಣ ಸಹಾಯಕರು, ಶಿಕ್ಷಣಾಧಿಕಾರಿಗಳು ಆಗಿರುವುದು ಈ ಜಿಲ್ಲೆಯಲ್ಲಿ ಕಂಡುಬರುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ೧೯೯೯-೨೦೦೦ ಸಾಲಿಗೆ ೧೪೯೨ ಪ್ರಾಥಮಿಕ ಶಾಲೆಗಳಿವೆ. ಈ ಶಾಲೆಗಳಲ್ಲಿನ ಹುದ್ದೆಗಳಲ್ಲಿ ಹೊಸಪೇಟೆ ತಾಲ್ಲೂಕಿನಲ್ಲಿ ೯೬ ಹುದ್ದೆಗಳಿರುವುದು ಕಂಡುಬರುತ್ತದೆ. ಇವುಗಳಲ್ಲಿ ಪರಿಶಿಷ್ಟ ಜಾತಿಗೆ ೧೫೪ ಹುದ್ದೆಗಳನ್ನು ಪರಿಶಿಷ್ಟ ಜಾತಿಗೆ ನೀಡಲಾಗಿದ್ದು ಅವುಗಳಲ್ಲಿ ಮಾದಿಗರು ೬೭ ಶಿಕ್ಷಕ ಹುದ್ದೆಗಳನ್ನು(೧೭ ಮಹಿಳೆಯರು) ಪಡೆದುಕೊಂಡಿರುವುದು ಕಂಡುಬರುತ್ತದೆ. ಉಳಿದಂತೆ ಹೊಲೆಯರು- ೨೫, ಲಂಬಾಣಿ-೩೪ ಬೋವಿ-೨೦ ಹಾಗೂ ಪರಿಶಿಷ್ಟ ಜಾತಿಯ ಇತರೆ ಜನಾಂಗ ೪ ಹುದ್ದೆಗಳನ್ನು ಪಡೆದಿದ್ದಾರೆ. ಇವು ೧೯೬೮ ರಿಂದ ೨೦೦೧ರ ಅವಧಿಯಲ್ಲಿ ನೇಮಕಾತಿಯಾಗಿರುವಂಥವು.

ಸಿರುಗುಪ್ಪ ತಾಲ್ಲೂಕಿನಲ್ಲಿ ಒಟ್ಟು ಪ್ರಾಥಮಿಕ ಶಾಲಾ ಶಿಕ್ಷಕರ ಸಂಖ್ಯೆ ೭೨೭ ಇದ್ದು ಇವುಗಳಲ್ಲಿ ಪರಿಶಿಷ್ಟ ಜಾತಿಗೆ ೧೧೪ ಶಿಕ್ಷಕರ ಹುದ್ದೆಗಳನ್ನು ನೀಡಲಾಗಿದೆ. ಇವುಗಳನ್ನು ೧೯೬೪ ರಿಂದ ೨೦೦೦ ಅವಧಿಯಲ್ಲಿ ನೇಮಕಾತಿ ಮಾಡಲಾಗಿದೆ. ಈ ಹುದ್ದೆಗಳಲ್ಲಿ ಮಾದಿಗರು ೩೨, ಲಂಬಾಣಿ ೪೬, ಚಲವಾದಿ ೨೦, ಬೋವಿ ೮ ಹಾಗೂ ಕೊರಚ ಮತ್ತು ಇತರ ೮ ಹುದ್ದೆಗಳನ್ನು ಪಡೆದಿದ್ದಾರೆ. ಇಲ್ಲಿ ಶಿಕ್ಷಕರ ಹುದ್ದೆಗಳಲ್ಲಿ ಹೆಚ್ಚಿನ ಪ್ರಮಾಣ ಲಂಬಾಣಿ ಜನಾಂಗ ಪಡೆದುಕೊಂಡಿರುವುದು ಕಂಡುಬರುತ್ತದೆ. ಪ್ರೌಢಶಾಲೆಗಳಿಗೆ ಬಂದರೆ ೩ ಹುದ್ದೆಗಳಲ್ಲಿ ೨ ಬೋಧಕ ಮತ್ತು ೧ ಬೋಧಕೇತರ ಹುದ್ದೆಯಲ್ಲಿ ಮಾದಿಗ ಜನಾಂಗದವರು ಇದ್ದಾರೆ.

ಈ ಮೇಲಿನ ಅಂಕಿ ಅಂಶಗಳು ಬಳ್ಳಾರಿ ಜಿಲ್ಲೆಯ ಎರಡು ತಾಲ್ಲೂಕುಗಳಲ್ಲಿ ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಕರ ಹುದ್ದೆಗಳಿಗೆ ಮಾದಿಗ ಜನಾಂಗ ಪಡೆದಿರುವ ಅವಕಾಶಗಳನ್ನು ಖಚಿತಪಡಿಸುತ್ತವೆ. ಈ ಹಿನ್ನೆಲೆಯಲ್ಲಿ ಉಳಿದ ತಾಲ್ಲೂಕಿನಲ್ಲಿ ಶಿಕ್ಷಕರ ಹುದ್ದೆಗಳು ಮಾದಿಗ ಜನಾಂಗಕ್ಕೆ ದೊರೆತಿರುವುದು ಕಂಡುಬರುತ್ತದೆಯಾದರೂ ಹೆಚ್ಚಿನ ಪ್ರಮಾಣದಲ್ಲಿ ದೊರೆತಿದೆ ಎನ್ನಲಾಗದು. ಬಳ್ಳಾರಿ ಜಿಲ್ಲೆಯ ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಕರ ಹುದ್ದೆಗಳಲ್ಲಿ ಮಾದಿಗ ಜನಾಂಗ ಪಡೆದಿರುವ ಸಂಖ್ಯಾ ಪ್ರಮಾಣ ಚಿತ್ರದುರ್ಗ ಜಿಲ್ಲೆಗೆ ಹೋಲಿಕೆ ಮಾಡಿದರೆ ಕಡಿಮೆ ಎನ್ನಬಹುದು. ಏಕೆಂದರೆ ಅಧ್ಯಯನಕ್ಕೊಳಪಡಿಸಿದ ಈ ಎರಡು ಜಿಲ್ಲೆಗಳ ವಿವಿಧ ತಾಲ್ಲೂಕಿನ ಕೆಲವು ಹಳ್ಳಿಗಳಲ್ಲಿ ಸರ್ಕಾರಿ ನೌಕರಿ ಪಡೆದ ಮಾದಿಗರ ಸಂಖ್ಯೆ ಚಿತ್ರದುರ್ಗ ಜಿಲ್ಲೆಗಿಂತ ಬಳ್ಳಾರಿ ಜಿಲ್ಲೆಯಲ್ಲಿ ಕಡಿಮೆ ಇದೆ. ಅಧ್ಯಯನಕ್ಕೊಳಪಡಿಸಿದ ಹಳ್ಳಿಗಳಲ್ಲಿ ಮಾದಿಗರು ಪಡೆದಿರುವ ಸರ್ಕಾರಿ ನೌಕರಿಯಲ್ಲಿ ಶಿಕ್ಷಕರ ಸಂಖ್ಯೆಯೇ ಹೆಚ್ಚು ಕಂಡುಬರುತ್ತದೆ.

**ಕಾಲೇಜು ಉಪನ್ಯಾಸಕರ ಹುದ್ದೆಗಳು**

ಕಾಲೇಜು ಉಪನ್ಯಾಸಕರ ಹುದ್ದೆಗಳಲ್ಲಿ ಮಾದಿಗರಿರುವುದು ಎರಡು ಜಿಲ್ಲೆಗಳಲ್ಲಿ ಕಂಡುಬಂದರೂ ಬಳ್ಳಾರಿ ಜಿಲ್ಲೆಗಿಂತ ಚಿತ್ರದುರ್ಗ ಜಿಲ್ಲೆಯಲ್ಲಿ ಸರ್ಕಾರಿ ಕಿರಿಯ ಮತ್ತು ಪ್ರಥಮ ದರ್ಜೆ ಕಾಲೇಜು(ಪದವಿ)ಗಳ ಉಪನ್ಯಾಸಕರ ಸಂಖ್ಯೆ ಹೆಚ್ಚು. ಚಿತ್ರದುರ್ಗ ಜಿಲ್ಲೆಯಲ್ಲಿ ಮಾದಿಗ ಜನಾಂಗಕ್ಕೆ

ಸೇರಿದ ಅಧ್ಯಾಪಕರು ಹಿರಿಯೂರು, ಚಳ್ಳಕೆರೆ, ಚಿತ್ರದುರ್ಗ, ತುರವನೂರು, ಹೊಸದುರ್ಗ ಮುಂತಾದ ಕಡೆ ಕಂಡುಬರುತ್ತಾರೆ. ಹೊರ ಜಿಲ್ಲೆಗಳಲ್ಲಿಯೂ ಈ ಜನಾಂಗದ ಕೆಲವರು ಅಧ್ಯಾಪಕರಾಗಿ ಹಾಗೂ ಕಾಲೇಜು ಪ್ರಿನ್ಸಿಪಾಲರಾಗಿಯೂ ಸೇವೆ ಸಲ್ಲಿಸುತ್ತಿರುವುದು ಕಂಡುಬರುತ್ತದೆ. ಆದರೆ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚು ಕಾಲೇಜು ಅಧ್ಯಾಪಕರು ಈ ಜನಾಂಗದಲ್ಲಿ ಕಂಡುಬರುವುದಿಲ್ಲ.

**ವಿಶ್ವವಿದ್ಯಾಲಯದ ವಿವಿಧ ಹುದ್ದೆಗಳು**

ರಾಜ್ಯದಲ್ಲಿರುವ ವಿವಿಧ ವಿಶ್ವವಿದ್ಯಾಲಯದಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆ ಮಾದಿಗ ಜನಾಂಗದವರು ವಿವಿಧ ಹುದ್ದೆಯಲ್ಲಿರುವುದು ಕಂಡುಬರುತ್ತದೆ. ಚಿತ್ರದುರ್ಗ ಜಿಲ್ಲೆಯವರಾದ ಡಾ.ಮೈಲಹಳ್ಳಿ ರೇವಣ್ಣ, ರುದ್ರಮುನಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಕ್ರಮವಾಗಿ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಉಪನಿರ್ದೇಶಕರು ಮತ್ತು ಇಂಗ್ಲೀಷ್ ಅಧ್ಯಾಪಕರಾಗಿದ್ದಾರೆ. ಪ್ರೊ.ಲಕ್ಷ್ಮಣ್ ತೆಲಗಾವಿಯವರು ಕನ್ನಡ ವಿಶ್ವವಿದ್ಯಾಲಯದಲ್ಲಿ ಚರಿತ್ರೆ ಅಧ್ಯಾಪಕರು. ಇದೇ ವಿಶ್ವವಿದ್ಯಾಲಯದಲ್ಲಿ ಬಳ್ಳಾರಿ ಜಿಲ್ಲೆಗೆ ಸೇರಿದ ಎ.ವೆಂಕಟೇಶ್ ಸಹಾಯಕ ಕುಲಸಚಿವರಾಗಿದ್ದಾರೆ. ಉಳಿದಂತೆ 'ಡಿ' ಗ್ರೂಪ್ ನೌಕರರ ವಿಭಾಗದಲ್ಲಿ ೨ ಹುದ್ದೆಗಳಲ್ಲಿ ಮಾದಿಗರು ಇರುವುದು ಕಂಡುಬರುತ್ತದೆ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಇದೇ ಜಿಲ್ಲೆಯವರಾದ ಪ್ರೊ.ದುರ್ಗಾದಾಸ್ ಅಧ್ಯಾಪಕರಾಗಿದ್ದಾರೆ.

ಈ ಎರಡು ಜಿಲ್ಲೆಗಳಲ್ಲಿ ಮಾದಿಗ ಜನಾಂಗ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅವರು ಪಡೆದಿರುವ ಸರ್ಕಾರಿ ಹುದ್ದೆಗಳನ್ನು ಗಮನಿಸಿದರೆ ಪ್ರಾಥಮಿಕ ಶಾಲೆಗಳಲ್ಲಿ ಹೆಚ್ಚಾಗಿ ಕಂಡುಬಂದರೆ ಆನಂತರದಲ್ಲಿ ಬರುವ ಪ್ರೌಢಶಾಲೆ, ಕಾಲೇಜು ಹಾಗೂ ವಿಶ್ವವಿದ್ಯಾಲಯದವರೆಗೆ ನೌಕರಿಗಳನ್ನು ಪಡೆದವರಾದರೂ ಮಾತ್ರವೇ ಬೆರಳಣಿಕೆಯಷ್ಟು ಈ ಜನಾಂಗದಲ್ಲಿರುವುದು ಕಂಡುಬರುತ್ತಾರೆ.

**ಸಮಾಜ ಕಲ್ಯಾಣ ಇಲಾಖೆಯ ಹುದ್ದೆಗಳು**

ಪರಿಶಿಷ್ಟ ಜಾತಿ ಮತ್ತು ವರ್ಗದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ಪ್ರಮುಖ ಇಲಾಖೆಗಳಲ್ಲಿ ಸಮಾಜ ಕಲ್ಯಾಣ ಇಲಾಖೆಯು ಒಂದು. ಈ ಇಲಾಖೆಯಲ್ಲಿಯೂ ಮಾದಿಗ ಜನಾಂಗದ ಅನೇಕರು ವಿವಿಧ ಸರ್ಕಾರಿ ಹುದ್ದೆಗಳನ್ನು ಹೊಂದಿರುವುದು ಕಂಡುಬರುತ್ತದೆ. ಚಿತ್ರದುರ್ಗ ಜಿಲ್ಲಾ ಸಮಾಜಕಲ್ಯಾಣ ಇಲಾಖೆಯಲ್ಲಿ ಪರಿಶಿಷ್ಟ ಜಾತಿಗೆ ನೀಡಿರುವ ೨೫ ಹುದ್ದೆಗಳಲ್ಲಿ ಅಡಿಗೆ ಸಹಾಯಕರು, ಅಡಿಗೆಯವರು, ಜವಾನ, ಗುಮಾಸ್ತ, ವಾಹನ ಚಾಲಕ, ಕಛೇರಿ ಅಧ್ಯಕ್ಷರನ್ನು ಒಳಗೊಂಡಿದೆ. ಇವುಗಳಲ್ಲಿ ಮಾದಿಗರು ೨೧, ಹೊಲೆಯರು ೪, ಬೋವಿ ೧ ಹಾಗೂ ಇತರೆಯವರು ೧ ಹುದ್ದೆಗಳಲ್ಲಿ ಇರುವುದು ಕಂಡುಬರುತ್ತದೆ. ೧೯೭೮ ರಿಂದ ೧೯೯೫ರ ಅವಧಿಯಲ್ಲಿ ಈ ಹುದ್ದೆಗಳು ನೇಮಕಾತಿಯಾಗಿವೆ. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಮಾದಿಗ ಜನಾಂಗಕ್ಕೆ ಸೇರಿದವರೆ ಆಗಿದ್ದರೂ ಶಿಕ್ಷಣ ಇಲಾಖೆಯಿಂದ ನಿಯೋಜನೆ ಮೇರೆಗೆ ಬಂದಿರುವರು.

ಚಳ್ಳಕೆರೆ ತಾಲ್ಲೂಕು ಸಮಾಜ ಕಲ್ಯಾಣ ಇಲಾಖೆಯಲ್ಲಿ ಒಟ್ಟು ೫೨ ಹುದ್ದೆಗಳಲ್ಲಿ ೧೬ ಜನ ಪರಿಶಿಷ್ಟ ಜಾತಿಯವರು ಇದ್ದಾರೆ. ಅವುಗಳಲ್ಲಿ ಮಾದಿಗರು ೮, ಹೊಲೆಯರು ೩, ಬೋವಿ ೩, ಹಾಗೂ ೩ ಹುದ್ದೆಗಳಲ್ಲಿ ಲಂಬಾಣಿ ಜನಾಂಗದವರು ನೇಮಕವಾಗಿದ್ದಾರೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಸಮಾಜ ಕಲ್ಯಾಣ ಇಲಾಖೆಯಲ್ಲಿ ಪರಿಶಿಷ್ಟ ಜಾತಿಯವರು ೧೦ ಹುದ್ದೆಗಳನ್ನು ಪಡೆದಿದ್ದು ಅವುಗಳಲ್ಲಿ ಮಾದಿಗರು ೫, ಹೊಲೆಯರು ೪, ಲಂಬಾಣಿ ೧ ಹುದ್ದೆಗಳನ್ನು ಪಡೆದಿರುವುದು ಕಂಡುಬರುತ್ತದೆ. ಮಾದಿಗ ಜನಾಂಗದ ನೌಕರರ ಆಯ್ಕೆ ೧೯೮೦ ರಿಂದ ೧೯೯೩ರ ಅವಧಿಯಲ್ಲಿ ನಡೆದಿರುವಂಥವು.

ಪ್ರತಿಯೊಂದು ತಾಲ್ಲೂಕಿನ ಸಮಾಜ ಕಲ್ಯಾಣ ಇಲಾಖೆಯಲ್ಲಿ ಮಾದಿಗ ಜನಾಂಗದ ಕೆಲವರು ನೇಮಕವಾಗಿದ್ದರೂ ಕೆಳದರ್ಜೆಯ ಹುದ್ದೆಗಳಲ್ಲಿ ಹೆಚ್ಚಾಗಿ ಆಯ್ಕೆಯಾಗಿರುವರು. ಇಂತಹ ಹುದ್ದೆಗಳಲ್ಲಿ ಕೆಲವು ದಿನಗೂಲಿ ನೌಕರರಾಗಿ ಸೇರಿಕೊಂಡು ಆನಂತರದಲ್ಲಿ ಸಂಘಸಂಸ್ಥೆಗಳು ಹಾಗೂ ಸರ್ಕಾರದ ಸಹಕಾರದಿಂದ ಖಾಯಂ ಆಗಿದ್ದಾರೆ. ಈ ಜಿಲ್ಲೆಗೆ ಸಂಬಂಧಿಸಿದ ಮಾದಿಗ ಜನಾಂಗದ ಕೆಲವರು ನಿಯೋಜನೆ ಮೇರೆಗೆ ದಾವಣಗೆರೆ ಮತ್ತು ಜಗಳೂರುಗಳಲ್ಲಿ ಜಿಲ್ಲೆ ಮತ್ತು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಆಗಿರುವುದು ಕಂಡುಬರುತ್ತದೆ.

### ಕಂದಾಯ ಇಲಾಖೆ

ಮಾದಿಗ ಜನಾಂಗ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಹುದ್ದೆಗಳನ್ನು ಪಡೆದಿರುವುದು ಈ ಇಲಾಖೆಯಲ್ಲಿ. ಚಿತ್ರದುರ್ಗ ತಾಲ್ಲೂಕು ಕಂದಾಯ ಇಲಾಖೆಯಲ್ಲಿ ಒಟ್ಟು ಪರಿಶಿಷ್ಟ ಜಾತಿಗೆ ೧೬ ಹುದ್ದೆಗಳನ್ನು ನೀಡಲಾಗಿದ್ದು ಮಾದಿಗರು ೮, ಹೊಲೆಯರು ೧, ಬೋವಿ ೪, ಲಂಬಾಣಿ ೨ ಹಾಗೂ ಇತರೆ ೧ ಹುದ್ದೆಗಳನ್ನು ೧೯೭೧ ರಿಂದ ೧೯೯೦ರ ಅವಧಿಯಲ್ಲಿ ನೇಮಕಾತಿಯನ್ನು ಹೊಂದಿದ್ದಾರೆ. ಮೊಳಕಾಲೂರು ತಾಲ್ಲೂಕಿನಲ್ಲಿ ಕಾರ್ಯನಿರ್ವಾಹಕ ಸಿಬ್ಬಂದಿಯಲ್ಲಿ ೪ ಹುದ್ದೆಗಳು ಮತ್ತು ಗ್ರಾಮಲೆಕ್ಕಾಧಿಕಾರಿಗಳು ೧ ಹುದ್ದೆಯನ್ನು ಪಡೆದುಕೊಂಡಿದ್ದಾರೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕು ಕಂದಾಯ ಇಲಾಖೆಯಲ್ಲಿ ಪರಿಶಿಷ್ಟ ಜಾತಿಯ ೭ ಹುದ್ದೆಗಳಲ್ಲಿ ಮಾತ್ರವಿದ್ದು ಅವುಗಳಲ್ಲಿ ೫ ಹುದ್ದೆಗಳು ಮಾದಿಗರಿಗೆ, ೧ ಹೊಲೆಯರಿಗೆ ಹಾಗೂ ಮತ್ತೊಂದು ಬೋವಿ ಜನಾಂಗದವರು ಪಡೆದುಕೊಂಡಿದ್ದಾರೆ. ಈ ಆಯ್ಕೆಯ ೧೯೬೬ ರಿಂದ ೧೯೯೪ರ ಅವಧಿಯದಾಗಿರುತ್ತದೆ. ಉಳಿದ ತಾಲ್ಲೂಕು ಮತ್ತು ಜಿಲ್ಲಾ ಕಛೇರಿಗಳಲ್ಲಿ ಮಾದಿಗ ಜನಾಂಗದ ಕೆಲವರು ಇರುವುದು ಕಂಡುಬಂದರು ಅದಕ್ಕೆ ಸಂಬಂಧಿಸಿದ ಮಾಹಿತಿ ಲಭ್ಯವಿರುವುದಿಲ್ಲ.

## ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ

ಮಹಿಳೆಯರ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ಈ ಇಲಾಖೆ ಸ್ಥಾಪಿತವಾಗಿದ್ದು ಇವರ ಬಗ್ಗೆ ವಿಶೇಷ ಕಾಳಜಿಯನ್ನು ವಹಿಸಲಾಗಿದೆ. ಈ ಇಲಾಖೆಯಲ್ಲಿ ಖಾಯಂ ಹಾಗೂ ಖಾಯಂ ಆಗಿರದೆ ಇರುವ ನೌಕರರು ಇದ್ದಾರೆ. ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನಲ್ಲಿ ಈ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಂಗನವಾಡಿ ಕಾರ್ಯಕರ್ತರು ಮತ್ತು ಸಹಾಯಕರಲ್ಲಿ ಒಟ್ಟು ೨೬೮ರಲ್ಲಿ ೬೧ ಪರಿಶಿಷ್ಟ ಜಾತಿಯವರಾಗಿದ್ದಾರೆ. ಇವುಗಳಲ್ಲಿ ೨೫ಕ್ಕೂ ಹೆಚ್ಚು ಮಾದಿಗ ಜನಾಂಗದ ಮಹಿಳೆಯರು ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಇದೇ ರೀತಿಯಲ್ಲಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನಲ್ಲಿ ೮೨ ಜನ ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕರು ಇರುವರು ಅವರಲ್ಲಿ ಮಾದಿಗ ಜನಾಂಗದ ೨೫ಕ್ಕೂ ಹೆಚ್ಚು ಮಹಿಳೆಯರು ಕಾರ್ಯನಿರ್ವಹಿಸುತ್ತಿದ್ದಾರೆ.

ಈ ಹಿನ್ನೆಲೆಯಲ್ಲಿ ಎರಡು ಜಿಲ್ಲೆಯ ಪ್ರತಿಯೊಂದು ತಾಲ್ಲೂಕಿನಲ್ಲೂ ಈ ರೀತಿ ಕಾರ್ಯನಿರ್ವಹಿಸುತ್ತಿರುವ ಮಾದಿಗ ಜನಾಂಗದ ಮಹಿಳೆಯರು ಕಂಡುಬರುವುದನ್ನು ಅಲ್ಲಗಳೆಯಲಾಗದು. ಆಯ್ಕೆಯು ಹೆಚ್ಚಾಗಿ ವಿವಾಹಿತರಿಗೆ ಆದ್ಯತೆ ನೀಡಲಾಗಿದೆ. ಹೊಸಪೇಟೆ ತಾಲ್ಲೂಕಿನಲ್ಲಿ ಕೆಲವು ದೇವದಾಸಿಯರಿಗೆ ಈ ಕಾರ್ಯ ನಿರ್ವಹಿಸಲು ನೇಮಕಮಾಡಿರುವುದು ಕಂಡುಬರುತ್ತದೆ.

ಸರ್ಕಾರದ ಈ ಇಲಾಖೆಗಳು ಮಾತ್ರವಲ್ಲದೆ ಮಾದಿಗರು ವಿವಿಧ ಇಲಾಖೆಗಳಲ್ಲಿ ಸರ್ಕಾರದಿಂದ ನೇಮಕಾತಿಯಾಗಿರುವುದು ಕಂಡುಬರುತ್ತದೆ. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲಿಯೂ ಮಾದಿಗ ಜನಾಂಗದ ಅನೇಕರು ಸರ್ಕಾರಿ ಹುದ್ದೆಗಳನ್ನು ಪಡೆದುಕೊಂಡಿರುವುದನ್ನು ನೋಡಬಹುದು. ಆರೋಗ್ಯ ಇಲಾಖೆ, ಪೊಲಿಸ್ , ಮಿಲಿಟರಿ, ಲೋಕೋಪಯೋಗಿ ಇಲಾಖೆ, ಕೃಷಿ ಇಲಾಖೆ, ಬ್ಯಾಂಕ್, ಸಹಕಾರ ಸಂಘ ಕೈಗಾರಿಕಾ ಮುಂತಾದ ಇಲಾಖೆಗಳಲ್ಲಿ ನೇಮಕವಾಗಿರುವುದು ಕಂಡುಬರುತ್ತದೆ. ಅಧ್ಯಯನಕ್ಕೆ ಒಳಪಡಿಸಿದ ಚಿತ್ರದುರ್ಗ ಜಿಲ್ಲೆಯ ೩ ಹಳ್ಳಿಗಳನ್ನು ಹೊರತುಪಡಿಸಿದರೆ ಉಳಿದೆಲ್ಲಾ ಗ್ರಾಮಗಳಲ್ಲಿ ಸರ್ಕಾರಿ ನೌಕರಿಯಲ್ಲಿ ಇರುವವರು ಕಂಡುಬರುತ್ತಾರೆ. ಬಳ್ಳಾರಿ ಜಿಲ್ಲೆಯಲ್ಲಿ ೧೦ ಗ್ರಾಮಗಳಲ್ಲಿ ಸರ್ಕಾರಿ ನೌಕರಿಲ್ಲ ಉಳಿದ ಗ್ರಾಮಗಳಲ್ಲಿ ಕನಿಷ್ಟ ಒಬ್ಬರಾದರೂ ಸರ್ಕಾರಿ ನೌಕರಿಯಲ್ಲಿ ಇರುವುದು ಕಂಡುಬಂದಿತು.

## ಉನ್ನತವಾದ ಹುದ್ದೆಗಳು

ಕೆಲವು ಮಾದಿಗ ಜನಾಂಗದವರು ಇರುವುದು ಸಹ ಕಂಡುಬರುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಮಾದಿಗ ಜನಾಂಗದವರಲ್ಲಿ ಐ.ಎ.ಎಸ್ ಮಾಡಿದ ಮೊದಲಿಗರೆಂದರೆ ಹಿರಿಯೂರು ತಾಲ್ಲೂಕಿನ ಹೆಚ್.ಆರ್.ತಿಪ್ಪಯ್ಯ ಅವರು ಜಿಲ್ಲಾಧಿಕಾರಿಗಳಾಗಿದ್ದರು. ಅವರ ನಂತರದಲ್ಲಿ ಅವರ ಮಗಳಾದ

ಮುಕ್ತಾಂಬಾ ಅವರು ಕೂಡ ಐ.ಎ.ಎಸ್ ಮಾಡಿದ್ದಾರೆ. ಅವರ ತಂಗಿಯಾದ ಜಯಮ್ಮನವರು ಕೂಡ ಕೆ.ಎ.ಎಸ್ ಮಾಡಿ ಇವರಿಬ್ಬರು ಬೆಂಗಳೂರಿನ ವಿವಿಧ ಇಲಾಖೆಗಳಲ್ಲಿ ಅಧಿಕಾರಿಗಳಾಗಿರುವುದು ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಕಮಲ್‌ನಾಬನ್ ಎಂಬುವರು ಸಿಓಡಿ, ಎಸ್‌ಪಿಯಾಗಿರುವುದು ಕಂಡುಬರುತ್ತದೆ.

## ೪.೭ ಸರ್ಕಾರದ ವಿವಿಧ ಯೋಜನೆಗಳು

ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದಿರುವ ಪರಿಶಿಷ್ಟ ಜಾತಿ ಮತ್ತು ವರ್ಗದ ಜನರ ಅಭಿವೃದ್ಧಿಯ ಬಗ್ಗೆ ಸರ್ಕಾರ ವಿಶೇಷ ಕಾಳಜಿಯನ್ನು ವಹಿಸಿತು. ಆ ವರ್ಗದ ಜನರಿಗೆ ಶಿಕ್ಷಣ, ಉದ್ಯೋಗ, ವಸತಿ, ಆರೋಗ್ಯ ಮುಂತಾದ ಅಂಶಗಳ ಬಗ್ಗೆ ಆ ಮೂಲಕ ಅವರ ಅಭಿವೃದ್ಧಿಯನ್ನು ಹೊಂದುವಂತೆ ಮಾಡಲು ಅನೇಕ ಕ್ರಮಗಳನ್ನು ಕೈಗೊಳ್ಳಲಾಗಿದೆ. ಸರ್ಕಾರಿ ಉದ್ಯೋಗದಲ್ಲಿ ಮೀಸಲಾತಿ, ಭೂಹೀನರಿಗೆ ಭೂಹಂಚಿಕೆ ಮಾತ್ರವಲ್ಲದೆ ಅವರ ಶಿಕ್ಷಣ ಮತ್ತು ಆರ್ಥಿಕ ಅಭಿವೃದ್ಧಿ ಮಾಡಲು, ಈ ವರ್ಗದ ಜನರ ಕಲ್ಯಾಣಗಳನ್ನು ಸಮಾಜಕಲ್ಯಾಣ ಇಲಾಖೆ ಮತ್ತು ಪರಿಶಿಷ್ಟ ಜಾತಿ ಮತ್ತು ವರ್ಗದ ಅಭಿವೃದ್ಧಿ ನಿಗಮ ಮುಂತಾದ ಇಲಾಖೆಗಳನ್ನು ಸ್ಥಾಪಿಸಿ ಕ್ರಮಕೈಗೊಳ್ಳುವಂತೆ ಅವುಗಳಿಗೆ ನಿರ್ದೇಶನ ಮಾಡಲಾಯಿತು. ಈ ವರ್ಗದ ಜನರನ್ನು ಶೈಕ್ಷಣಿಕ ಮತ್ತು ಆರ್ಥಿಕವಾಗಿ ಅಭಿವೃದ್ಧಿಗೊಳಿಸುವಲ್ಲಿ ಇವು ಪ್ರಮುಖ ಪಾತ್ರವಹಿಸಿವೆ. ಇವು ಕೇಂದ್ರ ಮತ್ತು ರಾಜ್ಯ ಸರ್ಕಾರದ ಯೋಜನೆಗಳನ್ನು ಜಾರಿಗೆ ತರುವ ಹೊಣೆಗಾರಿಕೆ ಹೊತ್ತಿರುತ್ತವೆ. ಇದರೊಂದಿಗೆ ಕೇಂದ್ರ ಸರ್ಕಾರವು ಪರಿಶಿಷ್ಟ ಜಾತಿಯ ಜನರ ಆರ್ಥಿಕ ಅಭಿವೃದ್ಧಿಗಾಗಿ ವಿಶೇಷ ಯೋಜನೆಗಳನ್ನು ಮನಗಂಡು ೧೯೮೦-೮೧ನೇ ಸಾಲಿನಲ್ಲಿ ಭಾರತ ಸರ್ಕಾರವು ಪರಿಶಿಷ್ಟ ಜಾತಿಯ ಬಡವರ ಆರ್ಥಿಕಾಭಿವೃದ್ಧಿಗಾಗಿ ವಿಶೇಷ ಘಟಕ ಯೋಜನೆಯನ್ನು ಭಾರತದಾದ್ಯಂತ ಪ್ರಾರಂಭ ಮಾಡಲಾಯಿತು. ವಿಶೇಷ ಘಟಕ ಯೋಜನೆಯಡಿಯಲ್ಲಿ ಹಲವಾರು ಅಭಿವೃದ್ಧಿ ಇಲಾಖೆಗಳು ತಮ್ಮ ಇಲಾಖೆಯ ಒಟ್ಟು ಆಯವ್ಯಯದಲ್ಲಿ ಶೇ ೧೫ರಷ್ಟು ಹಣವನ್ನು ತಮ್ಮ ಇಲಾಖೆಯಿಂದ ರೂಪಿಸಿದ ಆರ್ಥಿಕ ಅಭಿವೃದ್ಧಿ ಯೋಜನೆಗಳಿಗೆ ವೆಚ್ಚ ಮಾಡುತ್ತಾ ಬರಲಾಯಿತು[೩೩] ಹೀಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಪರಿಶಿಷ್ಟಜಾತಿ ಮತ್ತು ವರ್ಗದ ಜನರನ್ನು ಅಭಿವೃದ್ಧಿಗೊಳಿಸುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡಿರುವ ವಿವಿಧ ಯೋಜನೆಗಳು ಈ ವರ್ಗದಲ್ಲಿ ಒಂದಾದ ಮಾದಿಗ ಜನಾಂಗಕ್ಕೆ ಎಷ್ಟರ ಮಟ್ಟಿಗೆ ತಲುಪಿವೆ. ಈ ಯೋಜನೆಗಳು ಜನಾಂಗವನ್ನು ಅಭಿವೃದ್ಧಿಗೊಳಿಸುವಲ್ಲಿ ಎಷ್ಟರಮಟ್ಟಿಗೆ ತಮ್ಮ ಪಾತ್ರವನ್ನು ನಿರ್ವಹಿಸುತ್ತವೆ ಎಂಬುದನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ.

### ವಸತಿ ಯೋಜನೆ

ಪ್ರಜಾಪ್ರಭುತ್ವ ವ್ಯವಸ್ಥೆಯ ಈ ನೆಲದಲ್ಲಿ ವಾಸಿಸುವ ಪ್ರತಿಯೊಂದು ದುರ್ಬಲ ವರ್ಗದ ಜನರಿಗೆ ಮೂಲಭೂತ ಸೌಕರ್ಯ ಕಲ್ಪಿಸಿಕೊಡುವುದು ಸರ್ಕಾರದ ನೈತಿಕ ಹೊಣೆಗಾರಿಕೆ. ಈ ಹಿನ್ನೆಲೆಯಲ್ಲಿ

ಆರ್ಥಿಕವಾಗಿ ಹಿಂದುಳಿದಿರುವ ಪರಿಶಿಷ್ಟ ಜಾತಿ ಮತ್ತು ವರ್ಗದ ಜನರ ಆರೋಗ್ಯ ಶಿಕ್ಷಣ. ವಸತಿಗೆ ಸಂಬಂಧಿಸಿದಂತೆ ಸರ್ಕಾರ ವಿವಿಧ ಯೋಜನೆಗಳನ್ನು ಜಾರಿಗೊಳಿಸಿದೆ. ಇಂಥಹ ಯೋಜನೆಗಳಲ್ಲಿ 'ವಸತಿ ಯೋಜನೆ'ಯು ಅತಿಮುಖ್ಯವಾದುದು. 'ಸೂರಿಲ್ಲದ ಜನರಿಗೆ ಸೂರು ಒದಗಿಸುವ' ಕಾರ್ಯಕ್ರಮಗಳು ಆರಂಭಗೊಂಡಿದ್ದು ಬಹುಶಃ ಸ್ವಾತಂತ್ರ್ಯನಂತರ. ಸ್ವಾತಂತ್ರ್ಯನಂತರದ ಈ ಸಂಬಂಧ ಕೈಗೊಂಡ ಯೋಜನೆಗಳೆಂದರೆ 'ಹರಿಜನ ಗೃಹನಿರ್ಮಾಣ ಯೋಜನೆ' 'ಜನತಾ ಗೃಹ ನಿರ್ಮಾಣ ಯೋಜನೆ' 'ಹುಡ್ಕೊ ಯೋಜನೆ' 'ಇಂದಿರಾ ಆವಾಸ್ ಯೋಜನೆ' ಆಶ್ರಯ ಹಾಗೂ ಅಂಬೇಡ್ಕರ್ ವಸತಿ ಯೋಜನೆಗಳು. ಈ ಯೋಜನೆಗಳು ಅತ್ಯಂತ ಬಡತನದಿಂದ ಗುಡಿಸಲುಗಳಲ್ಲಿ ಬದುಕುತ್ತಿದ್ದ ಕೆಳಜಾತಿಗಳಲ್ಲಿ ಒಂದಾದ ಮಾದಿಗ ಜನಾಂಗಕ್ಕೆ ಉಪಕಾರ ಮಾಡಿವೆ. ಹಿಂದೊಮ್ಮೆ ಯಾವುದೇ ಗ್ರಾಮಗಳಿಗೆ ಹೋದರೂ ಮಾದಿಗ ಜನಾಂಗದವರ ಮನೆಗಳೆಂದರೆ ಬರಿ ಗುಡಿಸಲುಗಳೇ ಆಗಿದ್ದವು. ಆದರೆ ಸಂಪೂರ್ಣವಾಗಿ ಗುಡಿಸಲುಗಳು ಇರಲಾರದೆ ಹೋದರೂ ಕನಿಷ್ಟ ಪ್ರಮಾಣದಲ್ಲಾದರೂ ಮಾಳಿಗೆ ಮನೆ, ಹೆಂಚಿನ ಮನೆ, ಸೀಮೆಂಟ್ (RCC) ಮನೆಗಳು ಇಂದು ಕಂಡುಬರುತ್ತಿದ್ದರೆ ಅದು ಸರ್ಕಾರ ಕೈಗೊಂಡಂಥ ಕಾರ್ಯಕ್ರಮಗಳ ಫಲ ಎನ್ನಲಡ್ಡಿಯಿಲ್ಲ. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಪ್ರದೇಶಗಳಲ್ಲಿ ನೆಲೆಸಿರುವ ಮಾದಿಗ ಜನಾಂಗದ ಅಭಿವೃದ್ಧಿಯಲ್ಲಿ ಸರ್ಕಾರದ ವಸತಿ ಯೋಜನೆಗಳ ಪಾತ್ರವನ್ನು ದೊರಕಿರುವ ಮಾಹಿತಿ ಆಧರಿಸಿ ವಿವರಿಸಲಾಗಿದೆ.

**ಹರಿಜನ ಗಿರಿಜನ ಗೃಹ ನಿರ್ಮಾಣ ಯೋಜನೆ**

ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಸರ್ಕಾರವು ಹರಿಜನ ಗಿರಿಜನರಿಗೆ ವಸತಿ ಕಲ್ಪಿಸಿಕೊಡಲು ಕೈಗೊಂಡಂಥ ಮೊದಲ ಯೋಜನೆ ಇದಾಗಿದೆ. ಇದಕ್ಕೆ ಮೊದಲು ಈ ವರ್ಗದ ಜನರು ೧೯೫೭ಕ್ಕೆ ಮೊದಲು ಯಾವುದೇ ಉದ್ದೇಶಗಳಿಗೆ ಮೀಸಲಿಡದ ಸರ್ಕಾರದ ಭೂಮಿಯಲ್ಲಿ ಮನೆಗಳನ್ನು ನಿರ್ಮಾಣ ಮಾಡಿಕೊಂಡಿರುವರೋ ಅವರಿಗೆಲ್ಲ ಆ ಸ್ಥಳದ(ನಿವೇಶನ) ಹಕ್ಕು ಪತ್ರ ನೀಡುವ ಕಾರ್ಯಕ್ರಮವನ್ನು ೧೯೫೯ರಲ್ಲಿ ಸರ್ಕಾರ ಜಾರಿಗೆ ತಂದಿತು. ೧೯೬೦ರಲ್ಲಿ ಜಾರಿಗೆ ಬಂದ ಕಾರ್ಯಕ್ರಮದ ಪ್ರಕಾರ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟಿನವರು ಕಟ್ಟುವ ಮನೆಗಳು ಸಹಾಯಕ್ಕೆ ಅನುಕೂಲ ಮಾಡಿಕೊಡುವ ಯೋಜನೆ ರೂಪುಗೊಂಡಿತ್ತು. ಈ ಉದ್ದೇಶದ ಸಫಲತೆಗೆ ಮನೆ ಕಟ್ಟುವ ಪ್ರತಿ ಪರಿಶಿಷ್ಟ ಜಾತಿಗೆ ೪೦೦ ರೂಗಳನ್ನು ಪ್ರತಿ ಬುಡಕಟ್ಟು ಜನಾಂಗಕ್ಕೆ ೮೦೦ ರೂಗಳನ್ನು ಮಧ್ಯವರ್ತಿ ಗುತ್ತಿಗೆದಾರನ ಮೂಲಕ ನೀಡಬೇಕೆಂಬ ನಿಯಮವನ್ನು ಸರ್ಕಾರ ಒಪ್ಪಿಕೊಂಡಿತು. ೧೯೬೭ರಲ್ಲಿ ಸಹಾಯಧನ ೬೦೦ ರೂಗಳಿಗೆ ಹೆಚ್ಚಿಸಿ, ಪ.ಜಾತಿ ಮತ್ತು ಬುಡಕಟ್ಟುಗಳಿಗೆ ಏಕರೀತಿಯಲ್ಲಿ ಅನ್ವಯಿಸುವಂತೆ ನಿಯಮವನ್ನು ಬದಲಾವಣೆ ಮಾಡಿತು. ಈ ಮೊತ್ತದ ಹಣದಲ್ಲಿ ೭೦೦ ರೂಗಳನ್ನು ಅರಣ್ಯ ಇಲಾಖೆಯಿಂದ ದೊರಕಿಸಲು ಸರ್ಕಾರ ಕಾರ್ಯನಿರತವಾಯಿತು[೫೪] ಈ ಕಾರ್ಯಕ್ರಮವಲ್ಲದೇ ಗೃಹ ಮಂಡಲಿಯು ಶೇ.೧೮ರಷ್ಟು ಮನೆಗಳನ್ನು ಪರಿಶಿಷ್ಟ ಜನಾಂಗಗಳಿಗೆ ಮೀಸಲೆಂದು ೧೯೭೨ರಲ್ಲಿ

ಘೋಷಿಸಿತು. ೧೯೭೯-೮೦ರಲ್ಲಿ ೦.೫೦ ಲಕ್ಷ ರೂ.ಗಳನ್ನು ಪರಿಶಿಷ್ಟ ವರ್ಗಗಳಿಗೆ ಗೃಹ ನಿವೇಶನ ಒದಗಿಸಲು ಸರ್ಕಾರ ವೆಚ್ಚಮಾಡಿತು.[೫೫] ಈ ರೀತಿ ಸರ್ಕಾರ ಕೈಗೊಂಡ ಕಾರ್ಯಕ್ರಮಗಳು ಮಾದಿಗ ಜನಾಂಗದ ಅನೇಕರಿಗೆ ಅನುಕೂಲ ಮಾಡಿಕೊಟ್ಟಿತೆಂದು ೧೯೭೯-೮೦ರ ಸಂದರ್ಭದಲ್ಲಿ ಚಿತ್ರದುರ್ಗ ಜಿಲ್ಲಾ ಹರಿಜನ ಗಿರಿಜನ ಗೃಹ ನಿರ್ಮಾಣ ಸಹಕಾರ ಸಂಘದ ಅಧ್ಯಕ್ಷರಾಗಿದ್ದ ಮಾದಿಗ ಜನಾಂಗದ ಎಂ.ಹನುಮಂತಪ್ಪ ತಿಳಿಸಿದರು.

### ಜನತಾಗೃಹ ನಿರ್ಮಾಣ ಯೋಜನೆ

ದೇವರಾಜ ಅರಸು ಸರ್ಕಾರದ ಆಡಳಿತದ ಸಂದರ್ಭದಲ್ಲಿ ಹರಿಜನ-ಗಿರಿಜನ ಗೃಹನಿರ್ಮಾಣ ಯೋಜನೆಯನ್ನು ತೆಗೆದು ಹಾಕಿ ಜನತಾ ಗೃಹ ನಿರ್ಮಾಣ ಯೋಜನೆಯನ್ನು ಜಾರಿಗೆ ತಂದಿತು. ರಾಜ್ಯದಲ್ಲಿ ಈ ಕಾರ್ಯಕ್ರಮದ ಪ್ರಕಾರ ೧೯೮೧ರ ಮುಕ್ತಾಯಕ್ಕೆ ೧೬೪೭೪ ನಿವೇಶನಗಳನ್ನು ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳಿಗೆ ಹಂಚಲಾಯಿತು.[೫೬] ಬಹುಶಃ ಈ ಸಂದರ್ಭದಲ್ಲಿಯೇ ನಿರ್ಮಾಣವಾದ ಜನತಾಮನೆಗಳು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕಂಡುಬರುತ್ತವೆ. ಅಧ್ಯಯನಕ್ಕೊಳಪಡಿಸಿದ ಅನೇಕ ಹಳ್ಳಿಗಳಲ್ಲಿ ಜನತಾ ಮನೆಗಳು ಇರುವುದು ತಿಳಿದುಬಂದಿತು. ಇಂದು (ಕೆಲವು ಕಡೆ ಬಿದ್ದುಹೋಗಿವೆ) ಜನತಾಮನೆಗಳು ಕಂಡುಬರುವ ಕೆಲವು ಗ್ರಾಮಗಳು ಈ ರೀತಿ ಇವೆ. ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲ್ಲೂಕಿನ ಪಂಡರಹಳ್ಳಿಯಲ್ಲಿ ೪ ಮನೆಗಳು, ಸಿಂಗಾಪುರ ೫ ಮನೆಗಳು ಮಾದಿಗ ಜನಾಂಗಕ್ಕೆ ದೊರೆತಿರುವುದು ಕಂಡುಬಂದರೆ ಚಳ್ಳಕೆರೆ ತಾಲ್ಲೂಕಿನಲ್ಲಿ ಕುರುಡಿಹಳ್ಳಿ-೧೦, ಹಿರೇಹಳ್ಳಿ ೩೦, ಮೊಳಕಾಲ್ಮೂರು ತಾಲ್ಲೂಕಿನ ಬಿ.ಜಿ.ಕೆರೆ ೮೦, ರಾಯಪುರ ೩೦, ಹೊಳಲ್ಕೆರೆ ತಾಲ್ಲೂಕಿನ ಶಿವಗಂಗೆ ಗ್ರಾಮದಲ್ಲಿ ೩, ಟಿ.ನೂಲೆನೂರು ೨೫, ಹೊಸದುರ್ಗ ತಾಲ್ಲೂಕಿನಲ್ಲಿ ದೇವಿಗೆರೆ ೬, ಬೀಸನಹಳ್ಳಿ ೧೨, ಮಧುರೆ ೭, ಹಿರಿಯೂರು ತಾಲ್ಲೂಕಿನ ಬಗ್ಗನಡು ಗ್ರಾಮದಲ್ಲಿ ೧೪, ಕಾಟನಾಯಕನಹಳ್ಳಿ ೫, ಪಟ್ರೆಹಳ್ಳಿ ೮, ನಂದಿಹಳ್ಳಿ ೨೦, ಕಸ್ತೂರಿ ರಂಗಪ್ಪನಹಳ್ಳಿ ೨೩ ಜನತಾಮನೆಗಳು ದೊರೆತಿರುವುದು ಕಂಡುಬಂದರೆ, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಬಣವಿಕಲ್ಲು ಗ್ರಾಮದಲ್ಲಿ ೨೦, ಸಿರುಗುಪ್ಪ ತಾಲ್ಲೂಕಿನ ದೇವಲಾಪುರ ೨೦, ಕೆಂಚನಗುಡ್ಡ ೨೦, ಯರಕಲ್ಲು ೮, ನಿಟ್ಟೂರು ೩, ಇಬ್ರಾಹಿಂಪುರ ೫, ಬಳ್ಳಾರಿ ತಾಲ್ಲೂಕಿನ ಸಂಗನಕಲ್ಲು ೩, ಸಿರವಾರ ಗ್ರಾಮದಲ್ಲಿ ೬ ಜನತಾಮನೆಗಳು, ಹೊಸಪೇಟೆ ತಾಲ್ಲೂಕಿನ ಬಸವನದುರ್ಗ ೩, ನಾಗೇನಹಳ್ಳಿ ೬ ಈ ರೀತಿಯಲ್ಲಿ ಜನತಾ ಗೃಹ ನಿರ್ಮಾಣ' ಯೋಜನೆಯಡಿಯಲ್ಲಿ ನಿರ್ಮಾಣ ಮಾಡಿರುವ ಮನೆಗಳಲ್ಲಿ ಮಾದಿಗ ಜನಾಂಗದವರಿಗೂ ದೊರೆತಿರುವುದನ್ನು ಮೇಲಿನ ಅಂಕಿ ಅಂಶಗಳು ಖಚಿತಪಡಿಸುತ್ತವೆ. ಈ ಹಿನ್ನೆಲೆಯಲ್ಲಿ ಈ ಎರಡು ಜಿಲ್ಲೆಗಳಲ್ಲಿ ಮಾದಿಗ ಜನಾಂಗದ ಅನೇಕರು ಈ ಸೌಲಭ್ಯವನ್ನು ಪಡೆದಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.

**ಇಂದಿರಾ ಆವಾಸ್ ಯೋಜನೆ**

ಇಂದಿರಾ ಆವಾಸ್ ಯೋಜನೆ ಕೂಡ ಒಂದು ವಸತಿ ಯೋಜನೆಯೇ ಆಗಿದೆ. ೧೯೮೯ರಲ್ಲಿ ಆರಂಭಗೊಂಡ ಜವಾಹರ್ ರೋಜಗಾರ್ ಯೋಜನೆಯ ಒಂದು ಮುಖ್ಯ ಭಾಗವಾಗಿದ್ದು ಬಡತನ ರೇಖೆಯ ಕೆಳಗಿರುವ ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಹಾಗೂ ಹಿಂದುಳಿದವರಿಗೆ ಮನೆಗಳನ್ನು ನಿರ್ಮಾಣ ಮಾಡಿಕೊಡುವ ಯೋಜನೆ ಇದಾಗಿದೆ. ಜೀತ ವಿಮುಕ್ತರಿಗೂ ಯೋಜನೆಯ ಲಾಭ ಪಡೆಯಲು ಅವಕಾಶ ಮಾಡಲಾಗಿದೆ. ಇದು ಕೇವಲ ಗ್ರಾಮೀಣ ಪ್ರದೇಶದ ವಸತಿ ಹೀನರಿಗೆ ಮಾತ್ರವೇ ನಿರ್ಮಿಸಿಕೊಡುವುದಾಗಿತ್ತು. ಈ ಯೋಜನೆಯಡಿಯಲ್ಲಿ ಗೃಹ ನಿರ್ಮಾಣ ಸೌಲಭ್ಯವನ್ನು ಪಡೆದುಕೊಂಡ ಮಾದಿಗ ಜನಾಂಗದ ಅನೇಕ ಕುಟುಂಬಗಳು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಗ್ರಾಮೀಣ ಪ್ರದೇಶದಲ್ಲಿ ಕಂಡುಬರುತ್ತವೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ೧೯೯೪-೯೫ರಿಂದಲೂ ಇಂದಿರಾ ಆವಾಸ್ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣ ನಡೆದಿರುತ್ತದೆ. ಅವುಗಳಲ್ಲಿ ಮಾದಿಗ ಜನಾಂಗದವರು ಪಡೆದ ಮನೆಗಳ ಸಂಖ್ಯೆ ಈ ರೀತಿ ಇದೆ. ೧೯೯೪-೯೫ರಲ್ಲಿ ೪೫ ಮನೆಗಳು, ೧೯೯೫-೯೬ರಲ್ಲಿ ೧೨೫, ೧೯೯೬-೯೭ರಲ್ಲಿ ೭೨, ೧೯೯೭-೯೮ ಮತ್ತು ೧೯೯೮-೯೯ರಲ್ಲಿ ಮಾದಿಗರು ಪಡೆದಿರುವ ಮನೆಗಳ ಸಂಖ್ಯೆ ನಿಖರವಾಗಿ ತಿಳಿಯುವುದಿಲ್ಲವಾದರೂ ಆ ಅವಧಿ ನೀಡಿರುವ ಮನೆಗಳಲ್ಲಿ ಹೆಚ್ಚಿನ ಪ್ರಮಾಣ ಮಾದಿಗರಿಗೆ ತಲುಪಿವೆ ಎನ್ನಬಹುದಾಗಿದೆ. ೨೦೦೦-೦೧ರಲ್ಲಿ ೭೧ ಮನೆಗಳು ಮಾದಿಗ ಜನಾಂಗದವರಿಗೆ ದೊರಕಿವೆ. ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಸೊನ್ನ ಮತ್ತು ದಶ್ಮಾಪುರ ಗ್ರಾಮಪಂಚಾಯಿತಿಯಲ್ಲಿ ೧೯೯೫-೯೬ನೇ ಸಾಲಿನಲ್ಲಿ ಮಾದಿಗರಿಗೆ ೧, ೧೯೯೬-೯೭ರಲ್ಲಿ ೭, ೧೯೯೭-೯೮ರಲ್ಲಿ ೧, ೧೯೯೯-೨೦೦೦ರಲ್ಲಿ ೯ ಮನೆಗಳು ದೊರಕಿರುವುದು ಕಂಡುಬರುತ್ತದೆ.(ಕಾರ್ಯ ನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯಿತಿ ಹಗರಿಬೊಮ್ಮನಹಳ್ಳಿ) ಅಧ್ಯಯನಕ್ಕೊಳಪಡಿಸಿದ ಗ್ರಾಮಗಳಲ್ಲಿ ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲ್ಲೂಕಿನ ಇಬ್ರಾಹಿಂಪುರ ೫ ಮನೆಗಳು, ಬಳ್ಳಾರಿ ತಾಲ್ಲೂಕಿನ ಸಂಗನಕಲ್ಲು ೧೦ ಮನೆಗಳು ಮಾದಿಗ ಜನಾಂಗದವರಿಗೆ ದೊರಕಿವೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಚಿತ್ರದುರ್ಗ, ಹಿರಿಯೂರು, ಮೊಳಕಾಲ್ಮೂರು ಹಾಗೂ ಹೊಸದುರ್ಗ ತಾಲ್ಲೂಕುಗಳಲ್ಲಿ ಇಂದಿರಾ ಆವಾಸ್ ಯೋಜನೆಯಡಿ ನಿರ್ಮಾಣವಾಗಿರುವ ಮನೆಗಳ ಸೌಲಭ್ಯವನ್ನು ಮಾದಿಗಜನಾಂಗದ ಕೆಲವರು ಪಡೆದುಕೊಂಡಿರುವುದು ಅಧ್ಯಯನಕ್ಕೊಳಪಡಿಸಿದ ಗ್ರಾಮಗಳಲ್ಲಿ ಕಂಡುಬಂದಿದೆ. ಚಿತ್ರದುರ್ಗ ತಾಲ್ಲೂಕಿನ ಪಂಡರಹಳ್ಳಿಯಲ್ಲಿ ೧೦, ಸಿಂಗಾಪುರದಲ್ಲಿ ೫ ಮನೆಗಳು, ಹಿರಿಯೂರು ತಾಲ್ಲೂಕಿನ ಕಾಟನಾಯಕನಹಳ್ಳಿ ೨, ಪಟ್ರೆಹಳ್ಳಿ ೫, ಹಾಗೂ ನಂದಿಹಳ್ಳಿ ಗ್ರಾಮದಲ್ಲಿ ೪ ಮನೆಗಳು, ಹೊಸದುರ್ಗ ತಾಲ್ಲೂಕಿನ ದೇವಿಗೆರೆ ೪, ಬೀಸನಹಳ್ಳಿ ಗ್ರಾಮದಲ್ಲಿ ೧ಮನೆ, ಹೊಳಲ್ಕೆರೆ

ತಾಲ್ಲೂಕಿನ ಟಿ.ನೂಲೆನೂರು ೨೦ ಹಾಗೂ ಮೊಳಕಾಲ್ಮೂರು ತಾಲ್ಲೂಕಿನ ಬಿ.ಜಿ.ಕೆರೆ ಗ್ರಾಮದಲ್ಲಿ ೨೦ ಮನೆಗಳು ಈ ಯೋಜನೆಯಡಿ ಸೌಲಭ್ಯಪಡೆದಿರುತ್ತಾರೆ. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರ ಗ್ರಾಮೀಣ ಪ್ರದೇಶಗಳಲ್ಲಿ ಅನೇಕ ವಸತಿಹೀನ ಮಾದಿಗ ಕುಟುಂಬಗಳು ಮನೆಗಳನ್ನು ಪಡೆದಿರುತ್ತಾರೆ ಎಂದು ಸ್ಪಷ್ಟವಾಗಿ ತಿಳಿದುಬರುತ್ತದೆ.

**ಆಶ್ರಯ ಯೋಜನೆ**

ಆಶ್ರಯ ಯೋಜನೆಗೆ ಮೊದಲು 'ಹುಡ್ಕೊಯೋಜನೆ' ಎನ್ನುವ ಮತ್ತೊಂದು ವಸತಿಯೋಜನೆ ಇತ್ತು. ಇದನ್ನು ಕೈಬಿಟ್ಟು ೧೯೯೦-೯೧ನೇ ಸಾಲಿಗೆ ಆಶ್ರಯ ಯೋಜನೆಯನ್ನು ಸರ್ಕಾರ ಜಾರಿಗೊಳಿಸಿತು. ಈ ಯೋಜನೆಯು ಬಡತನದಲ್ಲಿ ಬದುಕುತ್ತಿರುವ ಜನರಿಗೆ ನಿವೇಶನ ಹಾಗೂ ಮನೆಗಳನ್ನು ನಿರ್ಮಿಸಿಕೊಡುವುದಾಗಿದೆ. ಸಾಲ ಮತ್ತು ಸಹಾಯದ ಮೂಲಕ ಮನೆಗಳನ್ನು ನಿರ್ಮಾಣ ಮಾಡಿಕೊಡುವ ಯೋಜನೆಯಾಗಿದೆ. ಈ ಯೋಜನೆ ಇದಾಗಿದೆ. ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳೆರಡಕ್ಕೂ ಅನ್ವಯವಾಗುತ್ತದೆ. ಈ ಯೋಜನೆಯಂತೆ ವಸತಿಹೀನರಿಗೆ ನಿವೇಶನ ಮತ್ತು ಮನೆಗಳ ನಿರ್ಮಾಣ ಮಾಡಲು ತಾಲ್ಲೂಕು ಪಂಚಾಯಿತಿ ಮತ್ತು ಪೌರಸೇವಾ ಸಂಸ್ಥೆಗಳು ವಿತರಣೆಯ ಹೊಣೆಗಾರಿಕೆಯನ್ನು ಹೊತ್ತಿವೆ. ಈ ಎರಡು ಸಂಸ್ಥೆಗಳ ಮೂಲಕ ಹಂಚಿರುವ ನಿವೇಶನ ಮತ್ತು ಮನೆಗಳನ್ನು ಪಡೆದಿರುವ ಮಾದಿಗರ ಅನೇಕ ಕುಟುಂಬಗಳು ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳಲ್ಲಿ ಕಂಡುಬರುತ್ತವೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಆಶ್ರಯ ಯೋಜನೆಯಡಿ ನಿವೇಶನ ಹಾಗೂ ಮನೆಗಳನ್ನು ತಾಲ್ಲೂಕು ಪಂಚಾಯಿತಿ ಮತ್ತು ಪೌರಸೇವಾ ಸಂಸ್ಥೆಗಳು ನೀಡಿರುವುದು ಕಂಡುಬರುತ್ತವೆ. ಚಿತ್ರದುರ್ಗ ನಗರ ಸಭೆಯು ೧೯೯೬-೯೭ರಲ್ಲಿ ಒಟ್ಟು ೨೩೭ ಮನೆಗಳನ್ನು ನೀಡಲಾಗಿದ್ದು ಅವುಗಳಲ್ಲಿ ಮಾದಿಗರು ೩೩ ಮನೆಗಳನ್ನು ಪಡೆದಿದ್ದಾರೆ. ೧೯೯೭-೯೮ರಲ್ಲಿ ೬೪೫ ಆಶ್ರಯ ನಿವೇಶನಗಳಲ್ಲಿ ೧೨೮ನ್ನು ಅದೇ ವರ್ಷದಲ್ಲಿ ನೀಡಿದ ೫೭ ಮನೆಗಳಲ್ಲಿ ೨೯ ಮನೆಗಳನ್ನು, ೧೯೯೮ರಲ್ಲಿ ನೀಡಿದ ೪೧ರಲ್ಲಿ ೨೯(ನಿವೇಶನ ಅಥವಾ ಮನೆಗಳು ತಿಳಿದುಬಂದಿಲ್ಲ)ನ್ನು ೨೦೦೦-೦೧ನೇ ಸಾಲಿಗೆ ೬೦೮ರಲ್ಲಿ ೭೦ ಮನೆಗಳನ್ನು ಚಿತ್ರದುರ್ಗ ನಗರ ಪ್ರದೇಶದಲ್ಲಿ ನೆಲೆಸಿರುವ ಮಾದಿಗ ಜನಾಂಗ ಪಡೆದುಕೊಂಡಿದೆ. ಮೊಳಕಾಲ್ಮೂರು ಪಟ್ಟಣ ಪಂಚಾಯಿತಿಯಲ್ಲಿ ೧೯೯೬-೯೭ಲ್ಲಿ ನೀಡಿದ ೪೦ರಲ್ಲಿ ೯, ೧೯೯೭-೯೮ರಲ್ಲಿ ೧೧, ೧೯೯೯-೨೦೦೦ರಲ್ಲಿ ೩, ಹಾಗೂ ೨೦೦೦-೦೧ರಲ್ಲಿ ೨೮ ನಿವೇಶನ ಹಾಗೂ ಮನೆಗಳನ್ನು ಪಟ್ಟಣ ಪ್ರದೇಶದ ಮಾದಿಗರು ಪಡೆದುಕೊಂಡಿರುವುದು ಕಂಡುಬಂದರೆ ಚಿತ್ರದುರ್ಗ ಜಿಲ್ಲೆ ಮತ್ತು ಬಳ್ಳಾರಿ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ವಿವಿಧ ತಾಲ್ಲೂಕುಗಳಲ್ಲಿ ಗ್ರಾಮಗಳಾದ ಸಿಂಗಾಪುರದಲ್ಲಿ ೫, ಬಿ.ಜಿ.ಕೆರೆ ೨೦, ಶಿವಗಂಗ ೮, ಮಧುರೆ ೧, ಬಗ್ಗನಡು ೧೦, ಪಟ್ರೆಹಳ್ಳಿ, ಇಬ್ರಾಹಿಂಪುರ ೫,

ಸಂಗನಕಲ್ಲು ೫, ಆಶ್ರಯ ಯೋಜನೆಯ ಫಲಾನುಭವಿಗಳು ಈ ಜನಾಂಗದವರೆಂಬುದು ಅಧ್ಯಯನಕ್ಕೊಳಪಡಿಸಿದ್ದ ಕೆಲವು ಗ್ರಾಮಗಳಲ್ಲಿ ಕಂಡುಬಂತು.

ಬಳ್ಳಾರಿ ಜಿಲ್ಲೆಯ ಪೌರಸೇವಾ ಸಂಸ್ಥೆಗಳ ಮೂಲಕ ಈ ಯೋಜನೆಯಡಿ ನಿವೇಶನ ಮತ್ತು ಮನೆಗಳನ್ನು ನೀಡಿರುವುದು ಈ ರೀತಿ ಕಂಡುಬರುತ್ತದೆ. ಹೊಸಪೇಟೆ ನಗರಸಭೆಯಲ್ಲಿ ೧೯೯೧-೯೨ರಲ್ಲಿ ೧೨ ಫಲಾನುಭವಿಗಳು ಈ ಜನಾಂಗದವರಾಗಿದ್ದರೆ ೧೯೯೫-೯೬ರಲ್ಲಿ ೭೮, ೧೯೯೭-೯೮ರಲ್ಲಿ ೪೫, ೧೯೯೯-೨೦೦೦ ಮತ್ತು ೨೦೦೦-೦೧ದಲ್ಲಿ ಖಚಿತ ಸಂಖ್ಯೆ ತಿಳಿದಿಬಂದಿಲ್ಲ. ಆದರೂ ಈ ಸಂದರ್ಭದಲ್ಲಿ ಮಾದಿಗ ಜನಾಂಗದ ಫಲಾನುಭವಿಗಳಿಲ್ಲ ಎನ್ನಲಾಗದು. ಬಳ್ಳಾರಿ ನಗರಸಭೆಯಲ್ಲಿ ೧೯೯೯-೨೦೦೦ರಲ್ಲಿ ೧೬೩, ೨೦೦೦-೦೧ರಲ್ಲಿ ೪೧ ಫಲಾನುಭವಿಗಳು ಈ ಜನಾಂಗದವರು ಇದ್ದಾರೆ. ಈ ರೀತಿಯಲ್ಲಿ ಉಳಿದ ಪುರಸಭೆ ಹಾಗೂ ಪಟ್ಟಣ ಪಂಚಾಯತಿಗಳಲ್ಲಿಯೂ ಮಾದಿಗ ಜನಾಂಗದ ಫಲಾನುಭವಿಗಳು ಕೆಲವರು ಪಡೆದುಕೊಂಡಿರಬಹುದಾದ ಸಾಧ್ಯತೆ ಇಲ್ಲದಿಲ್ಲ. ಇದು ಪಟ್ಟಣ ಪ್ರದೇಶದಲ್ಲಿ ಆಶ್ರಯ ಯೋಜನೆಯಡಿಯಲ್ಲಿ ಹಂಚಿಕೆಯಾಗಿರುವ ನಿವೇಶನ ಮತ್ತು ಮನೆಗಳ ಚಿತ್ರಣವಾದರೆ ಗ್ರಾಮೀಣ ಪ್ರದೇಶದಲ್ಲಿ ಈ ಯೋಜನೆಯಡಿ ಸೌಲಭ್ಯ ಪಡೆದುಕೊಂಡ ಮಾದಿಗ ಜನಾಂಗದ ಫಲಾನುಭವಿಗಳ ಸಂಖ್ಯೆ ಹೀಗಿದೆ. ಹೊಸಪೇಟೆ ತಾಲ್ಲೂಕು ಪಂಚಾಯಿತ್ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಹಂಚಿಕೆಯಾಗಿರುವ ಆಶ್ರಯ ನಿವೇಶನ ಮತ್ತು ಮನೆಗಳು ೧೯೯೪-೯೫ರಲ್ಲಿ ಪರಿಶಿಷ್ಟ ಜಾತಿಗೆ ೨೧ ನೀಡಿದ್ದು, ಅದರಲ್ಲಿ ೨೧, ೧೯೯೫-೯೬ ಮತ್ತು ೧೯೯೬-೯೭ರಲ್ಲಿ ಪರಿಶಿಷ್ಟ ಜಾತಿಗೆ ೮೫ ನೀಡಲಾಗಿದೆ. (ಅದಕ್ಕೆ ಸಂಬಂಧಿಸಿದ ಜಾತಿವಾರು ಮಾಹಿತಿ ದೊರಕಿಲ್ಲ) ಅವುಗಳಲ್ಲಿಯೂ ಮಾದಿಗ ಜನಾಂಗದ ಫಲಾನುಭವಿಗಳಿರುವುದನ್ನು ಇಲ್ಲ ಎನ್ನಲಾಗದು. ೧೯೯೭-೯೮ರಲ್ಲಿ ೩೧, ೧೯೯೮-೧೯೯೯ರಲ್ಲಿ ಒಟ್ಟು ೫೫ ಪ.ಜಾತಿಗೆ ನೀಡಿದ. (ಜಾತಿವಾರು ಮಾಹಿತಿ ಇಲ್ಲ) ೨೦೦೦-೦೨ನೇ ಸಾಲಿನ ಆಶ್ರಮ ಯೋಜನೆಯ ಒಟ್ಟು ೫೫ ಪ.ಜಾತಿಗೆ ನೀಡಿದೆ(ಜಾತಿವಾರು ಮಾಹಿತಿ ಇಲ್ಲ) ೨೦೦೦-೦೧ನೇ ಸಾಲಿನ ಆಶ್ರಯ ಯೋಜನೆಯ ಫಲಾನುಭವಿಗಳಲ್ಲಿ ೧೨೫ ಜನ ಮಾದಿಗರು ಇದ್ದಾರೆ. ಹಗರಿಬೊಮ್ಮನಹಳ್ಳಿಯಲ್ಲಿ ಸೊನ್ನ ಮತ್ತು ದಶ್ಮಾಪುರ ಗ್ರಾಮಪಂಚಾಯಿತಿಗಳಲ್ಲಿ ೧೯೯೬-೯೭ರಲ್ಲಿ ೫, ೧೯೯೭-೯೮-೯೯ರಲ್ಲಿ ೭ಜನ ಮಾದಿಗ ಜನಾಂಗದ ಫಲಾನುಭವಿಗಳು ಕಂಡುಬರುತ್ತಾರೆ.

ಈ ಮೇಲಿನ ಅಂಕಿ-ಅಂಶಗಳು ಮಾತ್ರವಲ್ಲದೆ ಅಧ್ಯಯನಕ್ಕೊಳಪಡಿಸಿದ ಬಳ್ಳಾರಿ ಜಿಲ್ಲೆಯ ಕೆಲವು ಗ್ರಾಮಗಳಲ್ಲಿ ಈ ಯೋಜನೆಯ ಫಲಾನುಭವಿಗಳು ಈ ಜನಾಂಗದವರು ಇರುವುದು ಕಂಡುಬರುತ್ತದೆ. ಸಂಗನಕಲ್ಲು ೫, ಇಬ್ರಾಹಿಂ ಪುರ ೫, ಫಲಾನುಭವಿಗಳು ಇದ್ದಾರೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಈ ಯೋಜನೆಯಡಿ ಮಾದಿಗ ಜನಾಂಗದ ಅನೇಕರು ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ಸೌಲಭ್ಯ ಪಡೆದಿರುವುದನ್ನು ಸ್ಪಷ್ಟಪಡಿಸುತ್ತವೆ.

**ಅಂಬೇಡ್ಕರ್ ವಸತಿ ಯೋಜನೆ**

ಡಾ.ಬಿ.ಆರ್.ಅಂಬೇಡ್ಕರ್ ಅವರ ಜನ್ಮಶತಾಬ್ದಿಯ ಅಂಗವಾಗಿ ಈ ಯೋಜನೆಯನ್ನು ಜಾರಿಗೆ ತರಲಾಯಿತು. ಈ ಯೋಜನೆಯು ಕೇವಲ ಪರಿಶಿಷ್ಟ ಜಾತಿ ಮತ್ತು ವರ್ಗದ ವಸತಿಹೀನ ಜನರಿಗೆ ಮಾತ್ರವೇ ಮನೆಗಳನ್ನು ನಿರ್ಮಾಣ ಮಾಡುವ ಉದ್ದೇಶ ಹೊಂದಿದೆ. ಇದು ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡಲ್ಲಿ ಜಾರಿಯಲ್ಲಿದೆ. ಈ ಯೋಜನೆಯಡಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಮಾದಿಗ ಜನಾಂಗದ ಅನೇಕ ಕುಟುಂಬಗಳು ಸೌಲಭ್ಯ ಪಡೆದಿರುವುದು ಕಂಡುಬರುತ್ತದೆ.

ಚಿತ್ರದುರ್ಗ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ಈ ಯೋಜನೆಯಡಿ ಮನೆ ಹಂಚಿಕೆಮಾಡಿರುವುದನ್ನು ಅಧ್ಯಯನಕ್ಕೊಳಪಡಿಸಿದ ಅನೇಕ ಗ್ರಾಮಗಳು ಈ ಅಂಶವನ್ನು ಖಚಿತಪಡಿಸುತ್ತವೆ. ಅವುಹೀಗಿವೆ.: ಚಿತ್ರದುರ್ಗ ತಾಲ್ಲೂಕಿನ ಪಂಡರಹಳ್ಳಿ-೫,.ಸಿಂಗಾಪುರ ೫, ಮೊಳಕಾಲ್ಮೂರು ತಾಲ್ಲೂಕಿನ ಬಿ.ಜಿ.ಕೆರೆಯಲ್ಲಿ ೧೫, ಹೊಳಲ್ಕೆರೆ ತಾಲ್ಲೂಕಿನ ಟಿ.ನೂಲೆನೂರು ೧೦, ಹೊಸದುರ್ಗ ತಾಲ್ಲೂಕಿನ ದೇವಿಗೆರೆ ೬, ಮಧುರೆ ೭, ಹಿರಿಯೂರು ತಾಲ್ಲೂಕಿನ ಕಾಟನಾಯಕನಹಳ್ಳಿ ೧೧, ಪಟ್ರೆಹಳ್ಳಿ ೮, ನಂದಿಹಳ್ಳಿ ೨, ಕಸ್ತೂರಿರಂಗಪ್ಪನಹಳ್ಳಿ ೨೦ ಮನೆಗಳು ಮಾದಿಗ ಜನಾಂಗದವರಿಗೆ ದೊರಕಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ಗ್ರಾಮಗಳಲ್ಲಿ ಈ ಯೋಜನೆಯ ಸೌಲಭ್ಯವನ್ನು ಪಡೆದಿರುವವರಲ್ಲಿ ಮಾದಿಗ ಜನಾಂಗದ ಅನೇಕ ಕುಟುಂಬಗಳು ಇವೆ.

ಈ ಜಿಲ್ಲೆಯ ನಗರ ಪ್ರದೇಶಗಳಿಗೆ ಬಂದರೆ ಚಿತ್ರದುರ್ಗ ನಗರಸಭೆಯು ೧೯೯೬-೯೭ರಲ್ಲಿ ಈ ಯೋಜನೆಯಡಿ ಒಟ್ಟು ೧೦೩ ಮನೆಗಳನ್ನು ನಿರ್ಮಾಣ ಮಾಡಿದ್ದು, ಅವುಗಳಲ್ಲಿ ಮಾದಿಗರು ೮೧ ಮನೆಗಳನ್ನು ಪಡೆದಿರುತ್ತಾರೆ. ಆನಂತರ ೧೯೯೬-೯೭, ೯೭-೯೮, ೯೮-೯೯ರಲ್ಲಿ ಒಟ್ಟು ೧೫೮ರಲ್ಲಿ ೫೬ ಮನೆಗಳು ದೊರಕಿವೆ. ಚಳ್ಳಕೆರೆ ಪುರಸಭೆಯು ೧೯೯೭-೯೮ರಲ್ಲಿ ೭೩ರಲ್ಲಿ ೩೭ ಮನೆಗಳನ್ನು ಮಾದಿಗರು ಪಡೆದುಕೊಂಡಿರುವುದನ್ನು ತಿಳಿಸುತ್ತವೆ. ಈ ಅಂಶಗಳ ಹಿನ್ನೆಲೆ ನೋಡಿದಾಗ ನಗರ ಪ್ರದೇಶಗಳಲ್ಲಿಯೂ ಈ ಯೋಜನೆಯಡಿ ಸೌಲಭ್ಯ ಪಡೆದ ಅನೇಕರು ಇರುವರು.

ಬಳ್ಳಾರಿ ಜಿಲ್ಲೆ ಗ್ರಾಮೀಣ ಪ್ರದೇಶದಲ್ಲಿ ಈ ಯೋಜನೆಯಡಿ ಸೌಲಭ್ಯ ಪಡೆದಿರುವ ಮಾದಿಗರ ಸಂಖ್ಯೆ ಹೀಗಿದೆ. ಹೊಸಪೇಟೆ ತಾಲ್ಲೂಕಿನಲ್ಲಿ ೧೯೯೩-೯೪ರಲ್ಲಿ ೧೧೨ರಲ್ಲಿ ೫೯, ೧೯೯೫-೯೬ರಲ್ಲಿ ೧೧೯ರಲ್ಲಿ ೬೪, ೧೯೯೬-೯೭ರಲ್ಲಿ ಪರಿಶಿಷ್ಟ ಜಾತಿಗೆ ೧೮೭ ನೀಡಿದೆ. ಇಲ್ಲಿ ಮಾದಿಗರ ಸಂಖ್ಯೆ ಖಚಿತವಾಗಿ ತಿಳಿಯುದಿಲ್ಲವಾದರೂ ಈ ಸೌಲಭ್ಯವನ್ನು ಅವರು ಪಡೆದಿಲ್ಲ ಎನ್ನಲಾಗದು, ೧೯೯೭-೯೮ರಲ್ಲಿ ಪರಿಶಿಷ್ಟಜಾತಿಗೆ ೧೦೫ರಲ್ಲಿ ೭೦, ೧೯೯೮-೯೯ರಲ್ಲಿ ೮೧ ನೀಡಿದೆ.(ನಿಖರವಾಗಿ ಮಾದಿಗ ಜನಾಂಗದ ಫಲಾನುಭವಿಗಳ ಸಂಖ್ಯೆ ದೊರೆತ್ತಿಲ್ಲ), ೧೯೯೯-೦೦ರಲ್ಲಿ ೮೭ರಲ್ಲಿ ೫೦, ೨೦೦೦-೦೧ರಲ್ಲಿ

೧೯೯ರಲ್ಲಿ ೬೬ ಮನೆಗಳು ಮಾದಿಗ ಜನಾಂಗದವರು ಪಡೆದುಕೊಂಡಿರುವುದು ತಿಳಿದಿರುತ್ತದೆ. ಕೂಡ್ಲಿಗಿ ತಾಲ್ಲೂಕಿನ ಉಜ್ಜಿನಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಗ್ರಾಮಗಳಿಗೆ ೧೯೯೫-೯೬ರಲ್ಲಿ ೨, ೧೯೯೬-೯೭ರಲ್ಲಿ ೧, ೧೯೯೭-೯೮ರಲ್ಲಿ ೯, ಹಾಗೂ ೧೯೯೮-೯೯ರಲ್ಲಿ ೪ ಮನೆಗಳು ಮಾದಿಗ ಜನಾಂಗದವರಿಗೆ ದೊರಕಿವೆ. ಮತ್ತು ಅಧ್ಯಯನಕ್ಕೊಳಪಡಿಸಿದ ಬಳ್ಳಾರಿ ತಾಲ್ಲೂಕಿನ ಸಂಗನಕಲ್ಲು ಸಿರುಗುಪ್ಪ ತಾಲ್ಲೂಕಿನ ತಾಲ್ಲೂಕಿನ ಇಬ್ರಾಹಿಂಪುರದಲ್ಲಿ ೫ ಮನೆಗಳು ಈ ಜನಾಂಗಕ್ಕೆ ದೊರಕಿವೆ. ಈ ರೀತಿ ಜಿಲ್ಲೆಯ ಗ್ರಾಮೀಣ ಪ್ರದೇಶದ ಅನೇಕ ಗ್ರಾಮಗಳಲ್ಲಿ ಈ ಯೋಜನೆಯಡಿ ಫಲಾನುಭವಿಗಳಲ್ಲಿ ಮಾದಿಗರು ಸಹ ಪಡೆದುಕೊಂಡಿರುವುದನ್ನು ಖಚಿತಪಡಿಸುತ್ತವೆ.

ಪಟ್ಟಣ-ನಗರ ಪ್ರದೇಶಗಳಲ್ಲಿಯೂ ಈ ಯೋಜನೆಯಡಿ ಸೌಲಭ್ಯವನ್ನು ಪಡೆದುಕೊಂಡ ಮಾದಿಗರು ಇದ್ದಾರೆ. ಹೊಸಪೇಟೆ ನಗರಸಭೆಯಲ್ಲಿ ೧೯೯೭-೯೮ರಲ್ಲಿ ೧೦೨ ಮನೆಗಳ ನಿರ್ಮಾಣದಲ್ಲಿ ಮಾದಿಗರಿಗೆ ೬೨ ಮನೆಗಳು ದೊರಕಿವೆ. ಇದೇ ರೀತಿ ಉಳಿದ ಪಟ್ಟಣ ಪ್ರದೇಶಗಳಲ್ಲಿ ಮಾದಿಗ ಜನಾಂಗದ ಫಲಾನುಭವಿಗಳು ಇಲ್ಲ ಎನ್ನಲಾಗದು. ಏಕೆಂದರೆ ಈ ಭಾಗದಲ್ಲಿಯೂ ಮಾದಿಗ ಜನಾಂಗ ಹೆಚ್ಚಿನ ಪ್ರಮಾಣದಲ್ಲಿ ನೆಲೆಸಿರುವುದರಿಂದ ಈ ಯೋಜನೆಯಡಿ ಮನೆಗಳನ್ನು ಪಡಿದಿದ್ದಾರೆ. ಈ ರೀತಿ ಎರಡು ಜಿಲ್ಲೆಗಳಲ್ಲಿ ಪರಿಶಿಷ್ಟ ಜಾತಿಯಲ್ಲಿ ಒಂದಾದ ಮಾದಿಗರು ಹೆಚ್ಚಿನ ಪ್ರಮಾಣದಲ್ಲಿ ಈ ಸೌಲಭ್ಯವನ್ನು ಬಳಸಿಕೊಂಡಿದ್ದಾರೆ.

## ೪.೮ ಕೃಷಿಗೆ ಅಭಿವೃದ್ಧಿಗೆ ಸಂಬಂಧಿಸಿದ ಯೋಜನೆಗಳು ಮತ್ತು ಇತರೆ

೧೯೭೪ರ ಭೂ ಸುಧಾರಣಾ ಕಾಯಿದೆ ಜಾರಿಯಲ್ಲಿ ಬಂದ ನಂತರ ಪರಿಶಿಷ್ಟ ಜಾತಿಯವರನ್ನು ಆರ್ಥಿಕವಾಗಿ ಸಬಲರನ್ನಾಗಿ ಮಾಡಲು ಸರ್ಕಾರವು ಕೃಷಿಗೆ ಸಂಬಂಧಿಸಿದಂತೆ ವಿವಿಧ ಯೋಜನೆಗಳನ್ನು ಜಾರಿ ತಂದಿತು. ಅದರಲ್ಲಿ ಭೂ ಒಡೆತನ ಯೋಜನೆ, ಗಂಗಾಕಲ್ಯಾಣ ಯೋಜನೆ, ವೈಯಕ್ತಿಕ ಕೊಳವೆ ಬಾವಿ ಯೋಜನೆ, ಏತ ನೀರಾವರಿ ಯೋಜನೆ ಮುಂತಾದ ಕ್ರಮಗಳು ಪ್ರಮುಖವಾಗಿವೆ. ಇವು ಅತ್ಯಂತ ಬಡತನದಲ್ಲಿ ಬದುಕು ಸಣ್ಣಪುಟ್ಟ ಜಮೀನು ಹೊಂದಿರುವ ಜನರಿಗೆ ತಮ್ಮ ಜಮೀನುಗಳನ್ನು ನೀರಾವರಿ ವ್ಯವಸ್ಥೆಗೆ ಒಳಪಡಿಸಿ ಕೃಷಿ ಮಾಡಲು ಅನುಕೂಲ ಮಾಡಿಕೊಡಲು ಪ್ರಯತ್ನಿಸಿವೆ. ಇಂತಹ ಯೋಜನೆಗಳಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ವಾಸಿಸುವ ಬಡರೈತದ ಮಾದಿಗ ಜನಾಂಗದವರು ಎಷ್ಟರ ಮಟ್ಟಿಗೆ ಈ ಪ್ರಯೋಜನ ಪಡೆದಿರುವರೆನ್ನುವ ಅಂಶವನ್ನು ತಿಳಿಯಲು ಇಲ್ಲಿ ಪ್ರಯತ್ನಿಸಲಾಗಿದೆ.

### ಗಂಗಾಕಲ್ಯಾಣ ಯೋಜನೆ

ರಾಜ್ಯ ಸರ್ಕಾರವು ೧೯೮೪-೮೫ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ಸೇರಿದ ಸಣ್ಣ ಮತ್ತು ಅತಿಸಣ್ಣ ರೈತರ ಸ್ಥಿತಿ-ಗತಿಗಳನ್ನು ಸುಧಾರಿಸಲು ಒಂದು ಸಣ್ಣ ನೀರಾವರಿ

ಯೋಜನೆಯನ್ನು ಜಾರಿಗೆ ತರಲಾಯಿತು. ಅದೇ 'ಗಂಗಾ ಕಲ್ಯಾಣ ಯೋಜನೆ'. ಈ ಯೋಜನೆಯಲ್ಲಿ ಒಂದೇ ಕಡೆ ಜಮೀನುಗಳನ್ನು ಹೊಂದಿರುವ ಸಣ್ಣ ರೈತ ಭೂಮಿಗಳನ್ನು ಒಂದು ಘಟಕವನ್ನಾಗಿ ಪರಿಗಣಿಸಿ ಅಲ್ಲಿ ಕೊಳವೆ ಬಾವಿಗಳನ್ನು ಸಹಾಯಧನದ ಮೂಲಕ ನಿರ್ಮಿಸಿಕೊಡಲಾಗುವುದು. ಇಂತಹ ಯೋಜನೆಗಳನ್ನು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲೂ ಜಾರಿಯಲ್ಲಿ ತರಲಾಗಿದೆ. ಈ ಯೋಜನೆಯಲ್ಲಿ ಮಾದಿಗ ಜನಾಂಗದ ಅನೇಕ ಫಲಾನುಭವಿಗಳು ಇರುವುದು ಕಂಡುಬರುತ್ತದೆ. ಇದು ಒಂದು ರೀತಿಯಲ್ಲಿ ಸಾಮೂಹಿಕ ವ್ಯವಸಾಯದ ಮಾದರಿಯಲ್ಲಿದೆ. ಬಳ್ಳಾರಿ ಜಿಲ್ಲೆಯಲ್ಲಿ ೧೯೯೫ರಿಂದ ೯೮ರವರೆಗೆ ಒಟ್ಟು ೨೨೫ ಕೊಳವೆ ಬಾವಿಗಳನ್ನು ಪರಿಶಿಷ್ಟ ಜಾತಿ ಮತ್ತು ವರ್ಗದ ಸಣ್ಣ ರೈತರ ಜಮೀನಿನಲ್ಲಿ ಕೊರೆಯಲು ಯೋಜಿಸಿದ್ದು ೧೭೦ ಘಟಕಗಳಿಗೆ ಕೊಳವೆ ಬಾವಿಗಳನ್ನು ಕೊರೆಯಲಾಗಿದೆ. ಅವುಗಳಲ್ಲಿ ಹೂವಿನಹಡಗಲಿ ತಾಲ್ಲೂಕು ೯೭, ಹಗರಬೊಮ್ಮನಹಳ್ಳಿ ೬೩, ಕೂಡ್ಲಿಗಿ ೬, ಹಾಗೂ ಹೊಸಪೇಟೆ-೦೪ ಕೊಳವೆಬಾವಿಗಳನ್ನು ಕೊರೆಯಲಾಗಿದ್ದು, ಅವುಗಳಲ್ಲಿ ೨೦ಕ್ಕೂ ಹೆಚ್ಚು ಫಲಾನುಭವಿಗಳು ಮಾದಿಗ ಜನಾಂಗದವರಾಗಿದ್ದಾರೆ. ಇದೇ ರೀತಿ ೨೦೦೦ರ ನೇ ಸಾಲಿಗೆ ಈ ಯೋಜನೆಯಡಿಯಲ್ಲಿ ೭ ಘಟಕಗಳಿಗೆ ಕೊಳವೆ ಬಾವಿಗಳನ್ನು ನಿರ್ಮಿಸಿಕೊಡಲಾಗಿದೆ. ೩ ಘಟಕಗಳಲ್ಲಿ ಮಾದಿಗ ಜನಾಂಗದ ಫಲಾನುಭವಿಗಳ ಇರುವುದು ಕಂಡುಬರುತ್ತದೆ. ಇದೇ ವರ್ಷದಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ೨೦ ಘಟಕಗಳಲ್ಲಿ ಕೊಳವೆ ಬಾವಿಗಳನ್ನು ಕೊರೆಯಲಾಗಿದ್ದು ಅವುಗಳಲ್ಲಿ ೮ ಘಟಕಗಳಲ್ಲಿ ಮಾದಿಗ ಜನಾಂಗದ ಫಲಾನುಭವಿಗಳು ಕಂಡುಬರುತ್ತಾರೆ.

ಈ ರೀತಿ ಗಂಗಾಕಲ್ಯಾಣ ಯೋಜನೆಯಲ್ಲಿ ಇತ್ತೀಚೆಗೆ ಮಾದಿಗ ಜನಾಂಗದ ಸಣ್ಣ ರೈತರು ಅದರ ಫಲಾನುಭವಿಗಳಾಗಿರುವುದು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲಿಯೂ ಕಂಡುಬರುವರು.

**ವೈಯಕ್ತಿಕ ಕೊಳವೆ ಬಾವಿಯೋಜನೆ**

ಪರಿಶಿಷ್ಟ ಜಾತಿಯ-ವರ್ಗದ ಸಣ್ಣ ರೈತರಿಗೆ ತಮ್ಮ ಜಮೀನನ್ನೂ ನೀರಾವರಿಗೆ ಒಳಪಡಿಸಲು ಈ ವರ್ಗದ ಅಭಿವೃದ್ಧಿ ನಿಗಮದಿಂದ ವೈಯಕ್ತಿಕ ಕೊಳವೆ ಬಾವಿಗಳನ್ನು ನಿರ್ಮಿಸಿಕೊಡುವುದಾಗಿದೆ. ಇದರ ಒಟ್ಟು ಖರ್ಚಿನ ಶೇ.೭೫ರಷ್ಟು ಸಹಾಯಧನವನ್ನು ನಿಗಮದಿಂದ ಕೊಡಲಾಗುತ್ತದೆ. ಉಳಿದ ಶೇ.೨೫ರಷ್ಟು ಹಣವನ್ನು ಬ್ಯಾಂಕ್‌ನಲ್ಲಿ ಸಾಲದ ರೂಪದಲ್ಲಿ ಇಲ್ಲವೇ ಸ್ವಂತ ಭರಿಸತಕ್ಕದ್ದು. ಈ ಯೋಜನೆಯಲ್ಲಿ ಪ್ರಯೋಜನ ಪಡೆದ ಫಲಾನುಭವಿಗಳು ಮಾದಿಗ ಜನಾಂಗದಲ್ಲಿ ಇರುವುದು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲಿ ಕಂಡುಬರುವರು. ಬಳ್ಳಾರಿ ಜಿಲ್ಲೆಯಲ್ಲಿ ಈ ಯೋಜನೆಯು ೧೯೯೧ ರಿಂದ ವೈಯಕ್ತಿಕವಾಗಿ ಕೊಳವೆ ಬಾವಿಗಳನ್ನು ಕೊರೆಯಲಾಗಿದೆ. ೧೯೯೧ ರಿಂದ ೧೯೯೮ರವರೆಗೆ ಪರಿಶಿಷ್ಟ ಜಾತಿಗೆ ೩೨೫ ಕೊಳವೆ ಬಾವಿಗಳನ್ನು ನಿರ್ಮಿಸಿಕೊಡುವ ಗುರಿಯನ್ನು ಹೊಂದಿದ್ದು ಅದರಲ್ಲಿ ೨೦೮ ಕೊಳವೆ ಬಾವಿಗಳನ್ನು ಕೊರೆಸಲಾಗಿದೆ. ಅವುಗಳಲ್ಲಿ ಬಳ್ಳಾರಿ ೨೮,

ಸಂಡೂರು ೧, ಹಗರಿಬೊಮ್ಮನಹಳ್ಳಿ ೨೦, ಕೂಡ್ಲಿಗಿ ೭೦ ಹಾಗೂ ಹಡಗಲಿ ತಾಲ್ಲೂಕುಗಳಲ್ಲಿ ೮೯ ಕೊಳವೆ ಬಾವಿಗಳನ್ನು ವೈಯಕ್ತಿಕವಾಗಿ ಕೊರೆಯಲಾಗಿದೆ. ಇವುಗಳಲ್ಲಿ ಸುಮಾರು ೭೦ಕ್ಕೂ ಹೆಚ್ಚು ಮಾದಿಗ ಜನಾಂಗದ ಫಲಾನುಭವಿಗಳು ಇರುವುದು ಕಂಡುಬರುತ್ತದೆ. ಹಾಗೆಯೇ ೨೦೦೦ನೇ ಸಾಲಿಗೆ ನಿಗಮದಿಂದ ಪರಿಶಿಷ್ಟ ಜಾತಿಯ ೨೫ ರೈತರಿಗೆ ಸಹಾಯ ಮಾಡಿದ್ದು, ಅದರಲ್ಲಿ ೧೦ ರೈತರು ಮಾದಿಗ ಜನಾಂಗದವರಾಗಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ವೈಯಕ್ತಿಕ ಕೊಳವೆ ಬಾವಿ ಯೋಜನೆಯು ೧೯೮೪-೮೫ರಿಂದಲೂ ಜಾರಿಯಲ್ಲಿದ್ದು ಅಲ್ಲಿಂದ ೧೯೯೯ರವರೆಗೆ ಪರಿಶಿಷ್ಟ ಜಾತಿಗಾಗಿ ೧೨೫೪ ಕೊಳವೆ ಬಾವಿಗಳನ್ನು ಕೊರೆಯಲಾಗಿದ್ದು ಈ ಯೋಜನೆಯು ಹೆಚ್ಚಿನ ಪ್ರಮಾಣದಲ್ಲಿ ಹಿರಿಯೂರು, ಚಳ್ಳಕೆರೆ, ಚಿತ್ರದುರ್ಗ, ಹೊಳಲ್ಕೆರೆ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿಯ ಫಲಾನುಭವಿಗಳಿದ್ದಾರೆ. ಉಳಿದಂತೆ ಹೊಸದುರ್ಗ ಮತ್ತು ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ತುಂಬಾ ಕಡಿಮೆ. ಈ ಬಗೆಯ ಯೋಜನೆಗಳಲ್ಲಿ ಮಾದಿಗರು ಹೆಚ್ಚಿನ ಪ್ರಮಾಣದಲ್ಲಿ ಈ ಲಾಭವನ್ನು ಪಡೆದಿರುತ್ತಾರೆ.

**ಭೂ ಒಡೆತನ ಯೋಜನೆ**

ಪರಿಶಿಷ್ಟ ಜಾತಿ ಮತ್ತು ವರ್ಗದ ಭೂರಹಿತರಿಗೆ ಭೂ ಒಡೆತನ ನೀಡುವ ಯೋಜನೆ ಇದಾಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಚಿತ್ರದುರ್ಗ, ಚಳ್ಳಕೆರೆ, ಹಿರಿಯೂರು ಹಾಗೂ ಹೊಸದುರ್ಗ ತಾಲ್ಲೂಕುಗಳಲ್ಲಿ ಮಾತ್ರವೇ ಈ ಯೋಜನೆಯಡಿ ಭೂಮಿಗಳನ್ನು ನೀಡಲಾಗಿದೆ. ಚಿತ್ರದುರ್ಗ ತಾಲ್ಲೂಕಿನಲ್ಲಿ ೧೯೯೧ ರಿಂದ ೧೯೯೯ರವರೆಗೆ ಈ ಯೋಜನೆಯಡಿ ೧೦೪ ಪರಿಶಿಷ್ಟ ಜಾತಿಯ ಭೂರಹಿತರಿಗೆ ಭೂಮಿ ನೀಡಲಾಗಿದ್ದು, ಅವುಗಳಲ್ಲಿ ೪೦ ಫಲಾನುಭವಿಗಳು ಮಾದಿಗರಾಗಿದ್ದಾರೆ. ಚಳ್ಳಕೆರೆ ತಾಲ್ಲೂಕಿನಲ್ಲಿ ೧೯೯೭-೯೮ರಿಂದ ೧೯೯೯ರ ಅವಧಿಯಲ್ಲಿ ೪೬ ಜನರಿಗೆ ನೀಡಲಾಗಿದ್ದು ಅವುಗಳಲ್ಲಿ ೨೨ ಜನರು, ಹಿರಿಯೂರು ತಾಲ್ಲೂಕಿನಲ್ಲಿ ೧೯೯೩-೯೪ರಿಂದ ೧೯೯೯ರವರೆಗೆ ಒಟ್ಟು ೧೯೯ ಜನರಿಗೆ ನೀಡಿದ್ದು, ಅವುಗಳಲ್ಲಿ ೧೦೩ ಫಲಾನುಭವಿಗಳೂ, ಹೊಸದುರ್ಗ ತಾಲ್ಲೂಕಿನಲ್ಲಿ ೧೯೯೫ರಿಂದ ೨೦೦೦ ಅವಧಿಯಲ್ಲಿ ನೀಡಿದ ೩೬ ಫಲಾನುಭವಿಗಳಲ್ಲಿ ೨೨ ಜನರು ಮಾದಿಗ ಜನಾಂಗದ ಫಲಾನುಭವಿಗಳಿರುವುದು ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ೨೦೦೦-೦೧ನೇ ಸಾಲಿನಲ್ಲಿ ನೀಡಿದ ಒಟ್ಟು ೭೫ ಜನ ಫಲಾನುಭವಿಗಳಲ್ಲಿ ಮಾದಿಗ ಜನಾಂಗದ ೩೨ ಫಲಾನುಭವಿಗಳು ಈ ಯೋಜನೆಯ ಸೌಲಭ್ಯ ಪಡೆದಿರುತ್ತಾರೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಭೂರಹಿತ ಮಾದಿಗ ಜನಾಂಗವು ಈ ಸೌಲಭ್ಯವನ್ನು ಪಡೆದಿದ್ದಾರೆಂದು ತಿಳಿಯುತ್ತದೆ. ಈ ಯೋಜನೆಯಡಿ ಕಪ್ಪಗಲ್ಲು ಗ್ರಾಮದ ೨೦ ದೇವದಾಸಿಯರಿಗೆ ೧ ಎಕರೆಯಂತೆ ಜಮೀನು ನೀಡಿರುವುದು ಅಧ್ಯಯನ ಸಂದರ್ಭದಲ್ಲಿ ಕಂಡುಬಂದಿತು.

ಏತ ನೀರಾವರಿ ಯೋಜನೆ ಪರಿಶಿಷ್ಟ ಜಾತಿಯ ಸಣ್ಣ ರೈತರು ತಮ್ಮ ಜಮೀನನ್ನು ನೀರಾವರಿಗೆ ಒಳಪಡಿಸಲು ಏತ ನೀರಾವರಿ ಯೋಜನೆ ಜಾರಿಗೊಳಿಸಲಾಗಿದೆ. ಈ ಯೋಜನೆಯಡಿ ಸಹಾಯ ಧನಕ್ಕೆ

ಅವಕಾಶವಿದೆ. ಈ ಯೋಜನೆಯು ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬರುವುದಿಲ್ಲ. ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿ, ಸಿರುಗುಪ್ಪ, ಹೊಸಪೇಟೆ ಹಾಗೂ ಹೂವಿನಹಡಗಲಿ ತಾಲ್ಲೂಕುಗಳಲ್ಲಿ ಈ ಯೋಜನೆಯಡಿ ಸಹಾಯಧನ ನೀಡಿರುವುದು ಕಂಡುಬರುತ್ತದೆ. ೧೯೯೬ ರಿಂದ ೨೦೦೦ ಎಕರೆಗೆ ಈ ಭಾಗಗಳಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗದ ೨೩೭ ರೈತರಿಗೆ ಈ ಸೌಲಭ್ಯ ಪಡೆದಿದ್ದಾರೆ. ಅವುಗಳಲ್ಲಿ ೫೦ಕ್ಕೂ ಹೆಚ್ಚು ಮಾದಿಗ ಜನಾಂಗದ ಫಲಾನುಭವಿಗಳು ಇರುವರು.

ಜಿಲ್ಲಾ ಪರಿಶಿಷ್ಟ ಜಾತಿ ವರ್ಗದ ಅಭಿವೃದ್ಧಿ ನಿಗಮದಿಂದ ನೇರಸಾಲ ಸೌಲಭ್ಯವನ್ನು ನಿರುದ್ಯೋಗಿಗಳಿಗೆ ನೀಡಿದೆ. ಇಂತಹ ಸೌಲಭ್ಯವನ್ನು ಪಡೆದು ಸ್ವಯಂ ಉದ್ಯೋಗ ಕೈಗೊಂಡ ಅನೇಕರು ಈ ಎರಡು ಜಿಲ್ಲೆಗಳಲ್ಲಿದ್ದಾರೆ. ಪಟ್ಟಣ ಪ್ರದೇಶಗಳಲ್ಲಿ ಅನೇಕರು ಆಟೋ, ಟೆಂಪೂ ಟ್ರಾಕ್ಸ್, ಜೆರಾಕ್ಸ್, ಮುಂತಾದವುಗಳನ್ನು ನಡೆಸುತ್ತಿರುವುದು ಕಂಡುಬರುತ್ತಿದ್ದಾರೆಯಾದರೂ ಇಂಥಹ ಸೌಲಭ್ಯವನ್ನು ಪಡೆದವರು ಹೆಚ್ಚಿನ ಪ್ರಮಾಣದಲ್ಲಿ ನಗರವಾಸಿಗಳಾಗಿದ್ದಾರೆ.

**ಅಡಿಟಿಪ್ಪಣಿಗಳು**

೧. ಬೋಧಿವೃಕ್ಷದ ಕೆಳಗೆ, ಜಿ.ಎನ್. ಮಲ್ಲಿಕಾರ್ಜುನ, ೧೯೯೪, ಪು.೫೯-೬೦

೨. ಚಿತ್ರದುರ್ಗ ಪ್ರದೇಶದ ಭೂ ಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ಬಸವರಾಜಪ್ಪ ಎಚ್.ಇ, ೨೦೦೦, ಪು.೧೫೯

೩. ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ಲಕ್ಷ್ಮಣ್ ತೆಲಗಾವಿ, ೧೯೯೯, ಪು.೭೩

೪. ಅದೇ, ಪು.೭೪

೫. ಸಾಧನೆಗಳ ಸರದಾರ ಡಿ.ದೇವರಾಜ ಅರಸು, ೧೯೯೭, ಪು.೯೫

೬. ಚಿತ್ರದುರ್ಗ ಪ್ರದೇಶದ ಭೂ ಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ೨೦೦೦, ಪು. ೧೪೨

೭. ಕರ್ನಾಟಕ ಅಭಿವೃದ್ಧಿ ಮಾಹಿತಿಕೋಶ, ಟಿ.ಆರ್.ಚಂದ್ರಶೇಖರ್, ೧೯೯೯, ಪು.೫೩

೮. ಕನ್ನಡ ಜಾನಪದ ವಿಶ್ವಕೋಶ, ಚಂದ್ರಶೇಖರ್ ಕಂಬಾರ, ೧೯೮೫, ಪು.೧೪೯

೯. ಕರ್ನಾಟಕದಲ್ಲಿ ಭೂ ಸುಧಾರಣೆಗಳು, ಎಂ.ಎ.ಎಸ್.ರಾಜನ್, ೧೯೮೭, ಪು.೯೧

೧೦. ಕರ್ನಾಟಕ ಅಭಿವೃದ್ಧಿ ಮಾಹಿತಿಕೋಶ, ೧೯೯೯, ಪು.೫೩

೧೧. ಚಿತ್ರದುರ್ಗ ಪ್ರದೇಶದ ಭೂಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ೨೦೦೦, ಪು.೬೧

೧೨. ಅದೇ, ಪು.೧೫೦

೧೩. ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ೧೯೯೯, ಪು.೭೭

೧೪. ಪಾಂಡರಂಗ ವಕೀಲರು, ಬಳ್ಳಾರಿ ಜಿಲ್ಲಾ ನ್ಯಾಯಾಲಯ

೧೫. ಚಿತ್ರದುರ್ಗ ಪ್ರದೇಶದ ಭೂ ಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ೨೦೦೦, ಪು.೩೯

೧೬. ಅದೇ, ಪು.೧೧೧

೧೭. ದಿ: ೧೩.೭.೯೫ ರಂದು ಮರಡಿಹಳ್ಳಿ ಗ್ರಾಮಸ್ಥರು ಸಾಗುವಳಿ ನೀಡುವಂತೆ ಮುಖ್ಯಮಂತ್ರಿಗೆ ಸಲ್ಲಿಸಿದ ಮನವಿ ಪತ್ರದಿಂದ

೧೮. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೨೧೭-೨೧೮

೧೯. ಪರಿಶಿಷ್ಟ ಜನಾಂಗದ ಕ್ಷೇಮಾಭಿವೃದ್ಧಿ (೧೯೮೬-೮೭) ಪು.

೨೦. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೨೧೭

೨೧. ಸಾಹಿತ್ಯ ಚರಿತ್ರೆ, ಪು.೧೩೩

೨೨. ಕರ್ನಾಟಕದಲ್ಲಿ ಭೂ ಸುಧಾರಣೆಗಳು, ಎಂ.ಎ.ಎಸ್.ರಾಜನ್, ೧೯೮೭, ಪು.೨೬

೨೩. ಅದೇ, ಪು.೨೯

೨೪. ಸಾಧನೆಗಳ ಸರದಾರ ಡಿ.ದೇವರಾಜ ಅರಸು, ೧೯೯೭, ಪು.೯

೨೫. ಕರ್ನಾಟಕದಲ್ಲಿ ಭೂ ಸುಧಾರಣೆಗಳು, ಎಂ.ಎ.ಎಸ್.ರಾಜನ್, ೧೯೮೭, ಪು.೫೧-೫೨

೨೬. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೨೧೮

೨೭. ಚಿತ್ರದುರ್ಗ ಪ್ರದೇಶದ ಭೂ ಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ ೨೦೦೦, ಪು.

೨೮. ಪರಿಶಿಷ್ಟ ಜಾತಿ ಜನಾಂಗದವರ ಕ್ಷೇಮಾಭಿವೃದ್ಧಿ (೧೯೮೬-೮೭) ಪು.೧೪

೨೯. ಭೂ ಮಂಜೂರಾತಿಗಳ ಕಂದಾಯ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು

೩೦. ಚಿತ್ರದುರ್ಗ ಪ್ರದೇಶದ ಭೂ ಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ ೨೦೦೦, ಪು. ೧೧೧

೩೧. ಭಾರತ ಸಮಾಜಕಾರ್ಯ ವಿಶ್ವಕೋಶ, ಮರುಳಸಿದ್ದಯ್ಯ, ೧೯೯೪, ಪು.೪೦೯

೩೨. ಅದೇ, ಪು.೪೧೦

೩೩. ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ಬಿ.ಎಂ.ಎಂ.ಆರಾಧ್ಯ, ೧೯೯೫, ಪು.೯೮

೩೪. ಭಾರತದಲ್ಲಿ ಜಾತಿಪದ್ಧತಿ, ಹಮೀಲ ಪೊರಕರ್ ಜೆ.ಎಲ್., ೧೯೯೨, ಪು.೧೫-೧೬

೩೫. ಭಾರತದ ಸಂವಿಧಾನ, ೧೯೮೫, ಪು.೩೦

೩೬. ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ಬಿ.ಎಂ.ಎಂ.ಆರಾಧ್ಯ, ೧೯೯೫, ಪು.೧೦೬

೩೭. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೨೪೮

೩೮. ಭಾರತ ಸಮಾಜಕಾರ್ಯ ವಿಶ್ವಕೋಶ, ಮರುಳಸಿದ್ದಯ್ಯ, ೧೯೯೪, ಪು.೪೧೭

೩೯. ಪರಿಶಿಷ್ಟ ಜಾತಿ-ಜನಾಂಗದವರ ಕ್ಷೇಮಾಭಿವೃದ್ಧಿ (೧೯೮೬-೮೭), ಪು.೧೫

೪೦. ವಿಜಯ ಕರ್ನಾಟಕ ದಿನಪತ್ರಿಕೆ ದಿ: ೧೬.೭.೨೦೦೧

೪೧. ಭಾರತದಲ್ಲಿ ಜಾತಿ ಹೋರಾಟಗಳು, ಗಂಗಾಧರಮೂರ್ತಿ(ಅನು), ೧೯೯೪, ಪು.೯

೪೨. ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು, ಡಿ.ಸಿ.ರಾಜಪ್ಪ, ೧೯೯೫, ಪು. ೩೪-೩೮

೪೩. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ಎಸ್.ಚಂದ್ರಶೇಖರ್, ೧೯೮೫, ಪು.೫೪

೪೪. ಮೈಸೂರು ಬಸವಯ್ಯ, ಎಚ್.ದೇವಿರಪ್ಪ, ೧೯೮೫, ಪು.೪೧

೪೫. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ಎಸ್.ಚಂದ್ರಶೇಖರ್, ೧೯೮೫, ಪು.೭೨

೪೬. ಅದೇ, ಪು. ೭೪

೪೭. ಶೋಷಿತ ಜಂಗಮರ ಮೀಸಲಾತಿ, ದಾಸನೂರು ಕೂಸಣ್ಣ, ೧೯೯೯, ಪು.೫೪-೫೫

೪೮. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ಎಸ್.ಚಂದ್ರಶೇಖರ್, ೧೯೮೫, ಪು.೬೯

೪೯. ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ಬಿ.ಎಂ.ಎಂ.ಆರಾಧ್ಯ, ೧೯೯೫, ಪು.೨೦೧

೫೦. ಭಾರತದ ಸಂವಿದಾನ, ೧೯೮೫, ಪು.೧೦

೫೧. ಅದೇ, ಪು.೧೦

೫೨. ಸಾಧನೆಗಳ ಸರದಾರ ಡಿ.ದೇವರಾಜ ಅರಸು, ೧೯೯೭, ಪು.೧೪

೫೩. ಕರ್ನಾಟಕ ರಾಜ್ಯಪತ್ರ, ಗುರುವಾರ ೨೭, ೨೦೦೧, ಪು.೨೫೯೪

೫೪. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ಎರಡು, ಪು.೨೧೯

೫೫. ಅದೇ, ಪು.೨೧೯

೫೬. ಅದೇ, ಪು.೨೧೯

ಅಧ್ಯಾಯ ೫

# ಮಾದಿಗರ ಶೈಕ್ಷಣಿಕ ಪ್ರಗತಿ

೫.೧ ಸ್ವಾತಂತ್ರ್ಯ ಪೂರ್ವದಲ್ಲಿನ ಅಸ್ಪೃಶ್ಯರ ಶೈಕ್ಷಣಿಕ ಸ್ಥಿತಿ-ಗತಿಗಳು
೫.೨ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಮಾದಿಗ ಜನಾಂಗದ ಶೈಕ್ಷಣಿಕ ಪ್ರಗತಿ
೫.೩ ಮಾದಿಗರ ಶೈಕ್ಷಣಿಕ ಅಭಿವೃದ್ಧಿಯಲ್ಲಿ ವಿದ್ಯಾರ್ಥಿನಿಲಯಗಳ ಪಾತ್ರ
೫.೪ ಶೈಕ್ಷಣಿಕ ಅಭಿವೃದ್ಧಿಯಲ್ಲಿ ಸಮಾಜ ಕಲ್ಯಾಣ ಇಲಾಖೆ ಪಾತ್ರ
೫.೫ ಖಾಸಗಿ ಶಿಕ್ಷಣ ಸಂಸ್ಥೆಗಳು ಮತ್ತು ಮಾದಿಗರು

ಶಿಕ್ಷಣ ಮಾನವನ ಮೂಲಭೂತ ಅವಶ್ಯಕತೆಗಳಲ್ಲೊಂದು. ಇದು ಅವನಲ್ಲಿ ಜ್ಞಾನವನ್ನು ವೃದ್ಧಿಸುವುದರೊಂದಿಗೆ ಜೀವನ ಮೌಲ್ಯಗಳನ್ನು ಬೆಳಸಿಕೊಳ್ಳಲು ಸಹಕಾರಿಯಾಗಿದೆ. ಶಿಕ್ಷಣವು ಮನುಷ್ಯನಲ್ಲಿರುವ ಮೌಢ್ಯತೆ,ಅಂಧಕಾರಗಳನ್ನು ಹೊಡೆದೋಡಿಸಿ ಅವರಲ್ಲಿ ವೈಜ್ಞಾನಿಕ ಹಾಗೂ ವೈಚಾರಿಕವಾಗಿ ಆಲೋಚನೆ ಮಾಡುವ ಸಾಮಾರ್ಥ್ಯವನ್ನು ಒದಗಿಸುತ್ತದೆ. ಇದು ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನೂ ಸುಧಾರಿಸಿಕೊಳ್ಳಲು ಸಹಾಯ ಮಾಡುತ್ತದೆ. ಈ ಹಿನ್ನೆಲೆಯಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ಶಿಕ್ಷಣದ ಅವಶ್ಯಕತೆ ಅನಿವಾರ್ಯ.

ಒಂದು ಕಾಲದಲ್ಲಿ ಶಿಕ್ಷಣವು ಕೇವಲ ಬ್ರಾಹ್ಮಣ ವರ್ಗದವರಿಗೆ ಮಾತ್ರವೇ ಸೀಮಿತವಾಗಿದ್ದು, ಶಿಕ್ಷಣ ಕಲಿಯುವ ಮತ್ತು ಬೋಧಿಸುವ ಹಕ್ಕು ಇವರಿಗೆ ಮಾತ್ರವೇ ಸೇರಿತ್ತು. ವರ್ಣಾಶ್ರಮ ಧರ್ಮದೊಂದಿಗೆ ಅಂದು ಅಸ್ತಿತ್ವದಲ್ಲಿದ್ದ ಬ್ರಾಹ್ಮಣ, ಕ್ಷತ್ರೀಯ, ವೈಶ್ಯ ಹಾಗೂ ಶೂದ್ರ ವರ್ಗಗಳಿಗೆ ಮನು ಧರ್ಮಶಾಸ್ತ್ರವು ನಿರ್ಧಿಷ್ಟ ವೃತ್ತಿಗಳನ್ನು ಕೈಗೊಳ್ಳುವಂತೆ ನಿರ್ದೇಶನ ಮಾಡಲಾಗಿತ್ತು. ಬ್ರಾಹ್ಮಣರು ಪೂಜೆ ಪುನಸ್ಕಾರ ಹಾಗೂ ವೇದಾಧ್ಯಯನ ಮಾಡಲು ತೊಡಗುವುದು, ಕ್ಷತ್ರಿಯರು ರಾಷ್ಟ್ರರಕ್ಷಣೆಯಲ್ಲಿ, ವೈಶ್ಯರು ವ್ಯಾಪಾರ ವಾಣಿಜ್ಯ ಹಾಗೂ ಶೂದ್ರರು ಕೃಷಿಯಲ್ಲಿ ತೊಡಗುವಂತೆಯೂ ಮಾಡಿದ್ದರಿಂದ ಈ ನಾಲ್ಕು ವರ್ಣಗಳು ತಾವು ಕೈಗೊಳ್ಳಬೇಕಾದ ವೃತ್ತಿಯನ್ನು ತಮ್ಮ ಹಕ್ಕುಗಳೆಂದು ಭಾವಿಸಿಕೊಂಡಿದ್ದರು. ಈ ನಾಲ್ಕು ವರ್ಣಗಳ ಆಚೆಗೆ ಮತ್ತೊಂದು ವರ್ಗ ಇದ್ದು ಅದು ಅಸ್ಪೃಶ್ಯವರ್ಗವೆಂದು ಪರಿಗಣಿಸಲಾಗಿತ್ತು. ಈ ಮೇಲಿನ ನಾಲ್ಕು ವರ್ಗಗಳ ಸೇವೆಯನ್ನು ಮಾಡುವ ಕರ್ತವ್ಯವನ್ನು ಇವರ ಮೇಲೆ ಏರಲಾಗಿತ್ತು. ಈ ರೀತಿ ಪ್ರತಿಯೊಂದು ವರ್ಗವೂ ಒಂದೊಂದು ವೃತ್ತಿಯನ್ನು ಕೈಗೊಂಡಿದ್ದರಿಂದ ಒಂದು ವರ್ಗ ಮತ್ತೊಂದು ವರ್ಗದ ವೃತ್ತಿಯನ್ನು ಕೈಗೊಳ್ಳದಂತೆ ನಿರ್ಬಂಧ ಏರಲಾಗಿತ್ತು. ಪರಿಣಾಮವಾಗಿ ಬ್ರಾಹ್ಮಣರ ಹೊರತಾಗಿ ಉಳಿದ ವರ್ಗಗಳು ಬಹುಕಾಲ ಶಿಕ್ಷಣದಿಂದ ವಂಚಿತರಾಗಿದ್ದವು. ಕೆಲವು ರಿಯಾಯಿತಿಗಳು ರಾಜವಂಶದವರಿಗೆ ಇದ್ದು ಅವರು ಮಾತ್ರವೇ ಶಿಕ್ಷಣ ಕಲಿಯುವ ಅವಕಾಶ ಪಡೆದಿದ್ದರು. ಈ ರೀತಿಯ ವೃತ್ತಿ ವಿಭಜನೆಯೊಂದಿಗೆ ಅಸ್ಪೃಶ್ಯ ವರ್ಗ ಮತ್ತು ಮಹಿಳೆಯರು ಅಂದಿನ ಸಮಾಜದಲ್ಲಿ ಹೆಚ್ಚು ಶೋಷಣೆಗೆ ಒಳಗಾಗಿದ್ದರು. ಈ ಬಗೆಯಲ್ಲಿ ಶೋಷಣೆಗೆ ಒಳಗಾದ ಶೋಷಿತರು ಮತ್ತು ಮಹಿಳೆಯರಿಗೆ ಸಾಮಾಜಿಕ ಸಮಾನತೆಯನ್ನು ತಂದು ಕೊಡಬೇಕೆನ್ನುವ ನಿಟ್ಟಿನಲ್ಲಿ ಪ್ರಯತ್ನಗಳು ಬುದ್ಧನ ಕಾಲದಿಂದ ಆರಂಭಗೊಂಡ ಈ ಪ್ರಯತ್ನ ಇಂದಿನವರೆಗೂ ಮುಂದುವರಿದುಕೊಂಡು ಬಂದಿದೆ. ಈ ಅವಧಿಯ ವಿವಿಧ ಕಾಲಘಟ್ಟಗಳಲ್ಲಿ ಶೋಷಿತರ ಮತ್ತು ಮಹಿಳೆಯರ ಪರ ಧ್ವನಿಗಳು ಬುದ್ಧ, ಬಸವ, ಅಂಬೇಡ್ಕರ್ ಮೂಲಕ ಹೊರಟವು.

ಸಾಮಾಜಿಕ ಸಮಾನತೆಯ ಜೊತೆಯಲ್ಲಿ ಸಾವಿರಾರು ವರುಷಗಳಿಂದ ಶಿಕ್ಷಣದಿಂದ ವಂಚಿತರಾಗಿದ್ದ ಇವರಿಗೆ ಅವುಗಳನ್ನು ದೊರಕಿಸುವ ನಿಟ್ಟಿನಲ್ಲಿ ಪ್ರಯತ್ನ ಮಾಡಿದರು. ಇವರಲ್ಲದೇ ಜ್ಯೋತಿರಾವ್ ಬಾಪುಲೆ, ಶಾಹುಮಹರಾಜ್,ಗಾಂಧಿ ಮುಂತಾದವರು ಕೂಡ ಮಾಡಿರುವ ಕಾರ್ಯಗಳು ಕೂಡ ಶ್ಲಾಘನೀಯ. ಈ ರೀತಿ ಅನೇಕ ಮಹಾನ್ ವ್ಯಕ್ತಿಗಳ ಪ್ರಯತ್ನದ ಫಲವಾಗಿ ಇಂದು ಶಿಕ್ಷಣ ಪ್ರತಿಯೊಬ್ಬರಿಗೆ ಸಿಗುವಂತಾಗಿದೆ. ಈ ರೀತಿ ದೊರೆತ ಶೈಕ್ಷಣಿಕ ಅವಕಾಶಗಳನ್ನು ಶೋಷಿತ ಜಾತಿಗಳಲ್ಲಿ ಒಂದಾದ ಮಾದಿಗ ಜನಾಂಗ ಎಷ್ಟರಮಟ್ಟಿಗೆ ಪಡೆಯಲು ಸಾಧ್ಯವಾಗಿದೆ ಎಂಬ ಅಂಶವನ್ನು ಇಲ್ಲಿ ಮುಖ್ಯವಾಗಿ ಗಮನಿಸಲಾಗಿದೆ.

**ಆಧುನಿಕ ಶಿಕ್ಷಣ ಪದ್ಧತಿ**

ಆಧುನಿಕ ಶಿಕ್ಷಣ ಪದ್ಧತಿಯು ವಸಾಹತುಶಾಹಿ ಕಾಲಘಟ್ಟದಿಂದ ಆರಂಭವಾಯಿತೆನ್ನಬಹುದು. ಈ ಆಧುನಿಕ ಶಿಕ್ಷಣ ಆರಂಭಗೊಳ್ಳುವ ಮೊದಲು ಸಾಂಪ್ರದಾಯಿಕ ಶಿಕ್ಷಣ ಪದ್ಧತಿ ಅಸ್ತಿತ್ವದಲ್ಲಿದ್ದುದು ಕಂಡುಬರುತ್ತದೆ. ಅಂದಿನ ಶಿಕ್ಷಣ ಕೇಂದ್ರಗಳಾದ ಅಗ್ರಹಾರ, ಮಠಮಾನ್ಯ, ಚರ್ಚ್, ಮಸೀದಿ ಮುಂತಾದವು ಕೇವಲ ಧಾರ್ಮಿಕ ವಿಷಯಗಳ ಕುರಿತಾದ ಶಿಕ್ಷಣ ನೀಡುತ್ತಿದ್ದವು. ವಸಾಹತುಶಾಹಿ ಆಡಳಿತ ಸಂದರ್ಭದಲ್ಲಿ ಭಾರತವು ವಿವಿಧ ಪ್ರಾಂತ್ಯಗಳ ಆಡಳಿತಕ್ಕೆ ಒಳಪಟ್ಟಿದ್ದವು. ಕರ್ನಾಟಕದಲ್ಲಿ ಪ್ರಮುಖ ಪ್ರದೇಶವಾಗಿದ್ದ ಮೈಸೂರು ಪ್ರಾಂತ್ಯದಲ್ಲಿ ಸರ್ ಚಾರ್ಲ್ಸ್‌ವುಡ್‌ನ ವರದಿಯ ಫಲವಾಗಿ ಭಾರತದ ಇತರ ಭಾಗಗಳಂತೆ ಇಲ್ಲಿಯೂ ಆಧುನಿಕ ಶಿಕ್ಷಣ ವ್ಯವಸ್ಥಿತವಾಗಿ ಆರಂಭವಾಯಿತು. ಈ ವರದಿಯ ಆಧಾರದ ಮೇಲೆ ಈಸ್ಟ್ ಇಂಡಿಯಾ ಕಂಪನಿಯ ನಿರ್ದೇಶಕರು ಆಧುನಿಕ ಶಿಕ್ಷಣವನ್ನು ರೂಪಿಸಿದ್ದರು[5] ಹೀಗೆ ಆರಂಭಗೊಂಡ ಆಧುನಿಕ ಶಿಕ್ಷಣ ವಿಸ್ತಾರಗೊಳ್ಳುತ್ತಾ ಹೋಯಿತು. ಆ ಕಾಲಕ್ಕೆ ಕರ್ನಾಟಕದ ವಿವಿಧ ಭಾಗಗಳು ವಿವಿಧ ಪ್ರಾಂತ್ಯಗಳಲ್ಲಿ ಹಂಚಿಹೋಗಿದ್ದವು. ಆದರಲ್ಲಿ ಚಿತ್ರದುರ್ಗ ಜಿಲ್ಲೆ ಮೈಸೂರು ಪ್ರಾಂತ್ಯದಲ್ಲಿ ಬಳ್ಳಾರಿ ಜಿಲ್ಲೆಯು ಮದ್ರಾಸ್ ಪ್ರಾಂತ್ಯದ ಆಡಳಿತಕ್ಕೆ ಒಳಪಟ್ಟಿದ್ದವು. ಈ ರೀತಿ ವಿವಿಧ ಪ್ರಾಂತ್ಯಗಳಲ್ಲಿ ಹಂಚಿ ಹೋಗಿದ್ದರಿಂದ ಇದು ಒಂದು ಏಕರೂಪವಾದ ಶಿಕ್ಷಣ ಪದ್ಧತಿಯನ್ನು ಎಲ್ಲಾ ಭಾಗಗಳಲ್ಲಿ ಜಾರಿಗೆ ತರಲು ಅಡ್ಡಿಯಾಗಿತ್ತು. ಸ್ವಾತಂತ್ರ್ಯ ನಂತರ ಅದರಲ್ಲೂ ಏಕೀಕರಣ ಕರ್ನಾಟಕ ನಿರ್ಮಾಣವಾದ ನಂತರದಲ್ಲಿ ಈ ಸಮಸ್ಯೆಯನ್ನು ಬಗೆಹರಿಸಲು ಸರ್ಕಾರ ಮುಂದಾಯಿತು. ಕರ್ನಾಟಕದ ರಾಜ್ಯದ ಎಲ್ಲಾ ಭಾಗಗಳಲ್ಲಿ ಏಕರೂಪವಾದ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದಿತು. ಅಲ್ಲಿಂದ ಶಿಕ್ಷಣದ ಸ್ವರೂಪ, ಪಠ್ಯಪುಸ್ತಕ, ಆಡಳಿತ ವ್ಯವಸ್ಥೆ ಮುಂತಾದವುಗಳಲ್ಲಿ ಅಗಾಧವಾದ ಬದಲಾವಣೆ ಕಂಡು ಬಂದಿತು. ಒಂದು ಕ್ರಮವಾದ ಶಿಕ್ಷಣ ರೂಪುಗೊಂಡು ಪೂರ್ವ ಪ್ರಾಥಮಿಕ, ಪ್ರಾಥಮಿಕ, ಪ್ರೌಢಶಾಲಾ, ಕಾಲೇಜು ಹಾಗೂ ಉನ್ನತ ಶಿಕ್ಷಣವಲ್ಲದೆ ಅನೇಕ ವೃತ್ತಿತರಬೇತಿ ಶಿಕ್ಷಣ ಮುಂತಾದವುಗಳನ್ನು ಜಾರಿಗೊಳಿಸಿತು.

ಈ ರೀತಿ ಆಧುನಿಕ ಶಿಕ್ಷಣ ಪದ್ಧತಿಯೊಂದಿಗೆ ಸಾವಿರಾರು ವರುಷಗಳಿಂದ ಶೈಕ್ಷಣಿಕ ಅವಕಾಗಳಿಂದ

ವಂಚಿತರಾದ ಅಸ್ಪೃಶ್ಯ ಜಾತಿಗಳಿಗೆ ಶಿಕ್ಷಣ ಕಲಿಯಲು ಅವಕಾಶವಾದದ್ದು ಮುಖ್ಯ ಬೆಳವಣಿಗೆಯಾಗಿದೆ. ಆ ವರ್ಗಕ್ಕೆ ೧೯ನೇ ಶತಮಾನದ ಆರಂಭದಲ್ಲಿ ಶಿಕ್ಷಣ ಪಡೆಯುವ ಅವಕಾಶವನ್ನು ನೀಡಲಾಗಿದ್ದರೂ ಈ ಹಕ್ಕನ್ನು ಸಂವಿಧಾನಾತ್ಮಕಗೊಳಿಸಿದ ನಂತರವೇ ಹೆಚ್ಚಿನ ಪ್ರೋತ್ಸಾಹ ದೊರೆಯಿತು. ಅಲ್ಲಿಂದ ಅಸ್ಪೃಶ್ಯ ಜಾತಿಗಳಲ್ಲಿ ಒಂದಾದ ಮಾದಿಗ ಜನಾಂಗವು ಶಿಕ್ಷಣ ಪಡೆಯಲು ಮುಂದಾಯಿತು. ಆದರೆ ಹೆಚ್ಚಿನ ಪ್ರಮಾಣದಲ್ಲಿ ಇವರು ಶಿಕ್ಷಣ ಪಡೆಯಲು ಮುಂದಾಗಿದ್ದು ೭೦ರ ದಶಕದ ನಂತರವೇ. ಆಧುನಿಕ ಶಿಕ್ಷಣವನ್ನು ಮಾದಿಗ ಜನಾಂಗವು ಎಷ್ಟರಮಟ್ಟಿಗೆ ಪಡೆಯಲು ಸಾಧ್ಯವಾಯಿತು ಆ ಮೂಲಕ ಮಾದಿಗರ ಶೈಕ್ಷಣಿಕ ಪ್ರಗತಿ ಹೇಗಿದೆ ಎಂಬುದನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಏಕೆಂದರೆ ಶೈಕ್ಷಣಿಕ ಪ್ರಗತಿಯು ದುರ್ಬಲ ವರ್ಗದವರಿಗೆ ಶೋಷಣೆಯನ್ನು ಪ್ರತಿಭಟಿಸುವ ಸಾಮಾರ್ಥ್ಯವನ್ನು ನೀಡುತ್ತದೆ. ಕೇರಳ ರಾಜ್ಯದಲ್ಲಿ ಕೆಳವರ್ಗದವರು ರಾಜಕೀಯ ಸಂಘಟನೆಗಳ ಮೂಲಕ ಸಮಾಜದಲ್ಲಿಯ ಜಾತಿ, ಲಿಂಗ, ವರ್ಗಧಾರಿತ ಅಸಮಾನತೆಯನ್ನು ನಿವಾರಿಸುವ ಪ್ರಯತ್ನದಲ್ಲಿ ಮಹತ್ವದ ಪಾತ್ರ ವಹಿಸುತ್ತಿದ್ದಾರೆ. ಈ ಮಹತ್ವದ ಪಾತ್ರದ ಹಿಂದಿರುವ ಪ್ರೇರಕ ಶಕ್ತಿಯೆಂದರೆ ಸಾಕ್ಷರತೆಯೇ ಆಗಿದೆ. ಕೆಳವರ್ಗದ ಜನತೆ ಆರ್ಥಿಕ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಲು ರಾಜಕೀಯ ಸಂಘಟನೆ ಅಗತ್ಯವಾಗಿದೆ. ರಾಜಕೀಯ ಸಂಘಟನೆಗೆ ಸಾಕ್ಷರತೆಯು ಅತ್ಯಾವಶ್ಯಕವಾಗಿದೆ[೨] ಎಂಬ ಅಮರ್ತ್ಯಸೇನ್‌ರ ಮಾತುಗಳು ಅರ್ಥಗರ್ಭಿತವಾಗಿವೆ. ಈ ಹಿನ್ನೆಲೆಯಲ್ಲಿ ಮಾದಿಗರ ಶೈಕ್ಷಣಿಕ ಅಭಿವೃದ್ಧಿಯನ್ನು ಸಮಗ್ರವಾಗಿ ತಿಳಿಯುವ ಸಲುವಾಗಿ ಅವುಗಳನ್ನು ವಿಭಾಗಿಸಿಕೊಂಡು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

### ಸ್ವಾತಂತ್ರ್ಯ ಪೂರ್ವದಲ್ಲಿನ ಅಸ್ಪೃಶ್ಯರ ಶೈಕ್ಷಣಿಕ ಸ್ಥಿತಿಗತಿಗಳು

ಬ್ರಿಟಿಷರ ಕಾಲದಲ್ಲಿ ಆಧುನಿಕ ಶಿಕ್ಷಣವನ್ನು ಭಾರತೀಯರಿಗೆ ನೀದ್ದುದು ತಮ್ಮ ಆಡಳಿತದ ಅನುಕೂಲಕ್ಕಾಗಿ ಎಂಬುದಂತೂ ಸತ್ಯ. ಬ್ರಿಟಿಷರ್ ಅನೇಕ ಶಾಲೆಗಳನ್ನು ತೆರೆದು ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟರು. ಇಂತಹ ಅವಕಾಶವನ್ನು ಮೊದಲು ಬಳಸಿಕೊಂಡಿದ್ದು ಬ್ರಾಹ್ಮಣರು ಹಾಗೂ ಮೇಲುಜಾತಿಗಳು ಮಾತ್ರ. ಆದರೆ ಹಿಂದುಳಿದ ಮತ್ತು ಶೋಷಿತ ಕೆಳಜಾತಿ ಹಾಗೂ ಮಹಿಳೆಯರಿಗೆ ಶಿಕ್ಷಣ ಕಲಿಯುವ ಅವಕಾಶ ಒದಗಿಬರಲಿಲ್ಲ. ಅದರಲ್ಲೂ ಮಾದಿಗ ಹೊಲೆಯರು ಶಿಕ್ಷಣ ಕಲಿಯುವುದಲ್ಲಿರಲಿ ಅದರಿಂದ ಮಾರು ದೂರು ಇದ್ದರು. ಆಗ ಎಂತಹ ಸ್ಥಿತಿ ಇತ್ತೆಂದರೆ ಹರಿಜನರೆಂದು ಹೆಸರಾಗಿರುವ ಹೊಲೆಯ, ಮಾದಿಗ, ಚಲವಾದಿ ಮುಂತಾದ ಕೀಳು ಕುಲದವರ ಮಕ್ಕಳು ಸರ್ಕಾರದವರೇ ನಡೆಸುತ್ತಿದ್ದ ಪ್ರೈಮರಿ ಶಾಲೆಗಳಿಗೆ ಹೋಗುವುದಿರಲಿ ಅವುಗಳ ಮೆಟ್ಟಿಲನ್ನು ಹತ್ತುವಂತಿರಲಿಲ್ಲ"[೩] ಸಾಮಾಜಿಕ ಸ್ಥಿತಿ ಹೀಗಿರುವಾಗ ಮಾದಿಗರು ಹೇಗೆ ಶಿಕ್ಷಣ ಕಲಿಯಲು ಸಾಧ್ಯ. ಆದರೂ ಅಸ್ಪೃಶ್ಯರಿಗೆ ಶಿಕ್ಷಣ ಕಲಿಯಲು ಅವಕಾಶ ನೀಡಿದ್ದು ೧೯ನೇ ಶತಮಾನದ ಕೊನೆಯ ಎರಡು ದಶಕಗಳಿಂದ ಎನ್ನಬಹುದು. ಆ ಕಾಲಘಟ್ಟಗಳಲ್ಲಿ ದಕ್ಷಿಣ ಭಾರತದ ವಿವಿಧ ರಾಜ್ಯಗಳಲ್ಲಿ

ಸರ್ಕಾರದಿಂದ ಕ್ರೈಸ್ತ ಮಿಷನರಿ ಮತ್ತು ಸಮಾಜ ಸುಧಾರಕರು ಅಸ್ಪೃಶ್ಯರಿಗೆ ಶಿಕ್ಷಣ ದೊರಕಿಸಿಕೊಡಲು ಪ್ರಯತ್ನಿಸಿದರು. ಈ ನಿಟ್ಟಿನಲ್ಲಿ ಕ್ರಮ ಕೈಗೊಂಡ ರಾಜ್ಯಗಳಲ್ಲಿ ಮೊದಲನೆಯದು ಮೈಸೂರು ಪ್ರದೇಶ ಎನ್ನಬಹುದು. ಪರಿಣಾಮವಾಗಿ ೧೮೮೧ರಲ್ಲಿ ಅಸ್ಪೃಶ್ಯರಿಗಾಗಿ ಕೇವಲ ೩ ಶಾಲೆಗಳಿದ್ದು ೧೯೦೦ ರ ವೇಳೆಗೆ ೬೫ ಆಗಿದ್ದು ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಿನ ಶಾಲೆಗಳನ್ನು ಸ್ಥಾಪಿಸಿ ರಿಯಾಯಿತಿ ಮತ್ತು ವೇತನಗಳನ್ನು ಕೊಟ್ಟಿದ್ದು[೪]’’ ಕಾಣಬಹುದು. ಹೀಗೆ ಅಸ್ಪೃಶ್ಯರಿಗೆ ಶಿಕ್ಷಣ ಒದಗಿಸಿಕೊಡಲು ಮೈಸೂರು ಅರಸರು ಆಸಕ್ತಿ ತಳೆದರು. ಜೊತೆಗೆ ಶಿಕ್ಷಣದ ಬಗ್ಗೆ ಅರಿವು ಮೂಡಿಸಿ ಶಿಕ್ಷಣ ಕಲಿಯಲು ಮುಂದಾಗುವಂತೆ ಪ್ರಚಾರ ಮಾಡುವ ಸಂಸ್ಥೆಯೊಂದು ಮೈಸೂರು ಭಾಗದಲ್ಲಿ ಹುಟ್ಟಿಕೊಂಡಿತು. “೧೯೧೩ ರಲ್ಲಿ ಮೈಸೂರು ನಗರದಲ್ಲಿ ಆರಂಭವಾದ ‘ನಿಮ್ನ ವರ್ಗಗಳ ಶಿಕ್ಷಣ ಪ್ರಚಾರ ಸಂಸ್ಥೆ’ ಆ ಜನ ಸಮುದಾಯಕ್ಕೆ ತಮ್ಮ ಸ್ಥಿತಿ ಸುಧಾರಿಸಿಕೊಳ್ಳಲು ಸೇವಾ ಕಾರ್ಯ ಆರಂಭಿಸಿತು. ೧೯೧೫ರ ವೇಳೆಗೆ ಈ ಸಂಸ್ಥೆ ೧೨ ಶಾಲೆಗಳನ್ನು ತೆರೆದಿತ್ತು. ಹೀಗೆ ಸರ್ಕಾರಿ ಮತ್ತು ಖಾಸಗಿಯವರು ಶಾಲೆಗಳನ್ನು ತೆರೆದುದರ ಪರಿಣಾಮವಾಗಿ ಅಸ್ಪೃಶ್ಯರು ಶಿಕ್ಷಣ ಕಲಿಯಲು ಮುಂದಾದರು. ಈ ಪ್ರಯೋಜನವನ್ನು ಮೊದಲು ಪಡೆದುಕೊಂಡವರು ನಗರ ಪ್ರದೇಶದ ಅಸ್ಪೃಶ್ಯರು. ನಂತರ ಗ್ರಾಮೀಣ ಪ್ರದೇಶದಲ್ಲಿಯೂ ಅದರ ಪ್ರಯೋಜನ ಪಡೆಯಲು ಮುಂದಾಗಲು ಅಲ್ಲಿ ಅನೇಕ ಸಾಮಾಜಿಕ ನಿರ್ಬಂಧಗಳು ಅಡ್ಡಿಯಾಗಿದ್ದವು.

ಮೈಸೂರು ರಾಜ್ಯದಲ್ಲಿ ೧೯೧೦-೧೧ರಲ್ಲಿ ಪಂಚಮರಿಗಾಗಿ ೬೭ ಸರ್ಕಾರಿ ಶಾಲೆಗಳು ಮತ್ತು ೩೭ ಅನುದಾನಿತ ಶಾಲೆಗಳು ಹಾಗೂ ೪ ಅನುದಾನರಹಿತ ಶಾಲೆಗಳಿದ್ದರೆ ೧೯೧೫-೧೬ರಲ್ಲಿ ೧೭೧ ಸರ್ಕಾರಿ ಶಾಲೆಗಳು ಮತ್ತು ೧೦೮ ಅನುದಾನಿತ ಶಾಲೆಗಳು ಹಾಗೂ ೮೮ ಅನುದಾನರಹಿತ ಶಾಲೆಗಳಿದ್ದವು[೬] ಹೀಗೆ ಇವರಿಗಾಗಿ ತೆರೆದ ಶಾಲೆಗಳ ಸಂಖ್ಯೆ ಹೆಚ್ಚಾಗುತ್ತಲೆ ಹೋಯಿತು. ೧೯೧೫ರಲ್ಲಿ ಸರ್ಕಾರವು ಆಜ್ಞೆ ಹೊರಡಿಸಿ ಅಸ್ಪೃಶ್ಯರಿಗೆ ರಾಜ್ಯದ ಎಲ್ಲಾ ಶಾಲೆಗಳಲ್ಲಿ ಪ್ರವೇಶವಕಾಶವನ್ನು ನೀಡಬೇಕೆಂದು ಸಾರಿತು[೭]. ಇದು ಅಸ್ಪೃಶ್ಯರ ಶೈಕ್ಷಣಿಕ ಚರಿತ್ರೆಯಲ್ಲಿ ಅತ್ಯಂತ ಮಹತ್ವ ಪಡೆದುಕೊಂಡ ಘಟನೆಯಾಗಿದೆ. ಈ ಘಟನೆ ಶೃಂಗೇರಿ ಆಜ್ಞೆ ಯೆಂದೇ ಖ್ಯಾತಿಗಳಿಸಿದೆ. ಸರ್ಕಾರದ ಈ ಕ್ರಮ ಮೇಲ್ವರ್ಗಗಳಿಗೆ ಸಹಿಸಲು ಅಸಾಧ್ಯವಾಯಿತು. ಅದರಲ್ಲಿ ಪುರೋಹಿತವರ್ಗವಂತೂ ಕೆಂಡಮಂಡಲವಾಯಿತು. ಈ ಆಜ್ಞೆಯನ್ನು ವಿರೋಧಿಸಿದ ಸಂಪ್ರದಾಯವಾದಿಗಳು ಪ್ರತಿಭಟನೆ ಮಾಡಿದಾಗ ಮೈಸೂರು ಅರಸರು ತಮ್ಮ ಸರ್ಕಾರದ ಕ್ರಮವನ್ನು ಸಮರ್ಥಿಸಿಕೊಂಡರು. ಹಾಗೆಯೇ ಈ ಆಜ್ಞೆಗೆ ತಿದ್ದುಪಡಿ ಮಾಡಿ ಅಂಥವರಿಗೆ ಶಾಲೆಗಳನ್ನು ಪ್ರತ್ಯೇಕವಾಗಿ ನಡೆಸಲು ಅನುಮತಿ ನೀಡಿದರು. ಆದರೆ ಸರ್ಕಾರಿ ಅನುದಾನವನ್ನು ಕೊಡಲು ನಿರಾಕರಿಸಿದರು[೮] ಸರ್ಕಾರದ ಕ್ರಮವನ್ನು ವಿರೋಧಿಸಿ ಪ್ರತಿಭಟನೆಯಲ್ಲಿ ಮುಸ್ಲಿಮರು ಸೇರಿದಂತೆ ಬೇರೆಲ್ಲರೂ ಚಳವಳಿ ನಡೆಸಿ ಈ ಶಾಲೆಯಿಂದ ತಮ್ಮ ಮಕ್ಕಳನ್ನು ಹಿಂತೆಗೆದುಕೊಂಡರು. ರಾಷ್ಟ್ರೀಯ ಶಾಲೆಗಳನ್ನು ಮೇಲ್ವರ್ಗಗಳಿಗಾಗಿ ಸ್ಥಾಪಿಸಿದರು. ಇಂತಹದೇ ಘಟನೆ ಚಿತ್ರದುರ್ಗ

ಜಿಲ್ಲೆಯಲ್ಲೂ ನಡೆದಿರುವುದು ಕಂಡುಬರುತ್ತದೆ. ೧೯೧೮-೧೯ರಲ್ಲಿ ಚಿತ್ರದುರ್ಗದ ಆಂಗ್ಲೋ ವರ್ನಾಕ್ಯೂಲರ್ ಶಾಲೆಗೆ ಮಾದಿಗರ ಹುಡುಗನೊಬ್ಬನನ್ನು ಮುಖ್ಯೋಪಾಧ್ಯಾಯರು ಒತ್ತಾಸೆ ನೀಡಿ ಸೇರಿಸಿದಾಗಲೂ ಇದೇ ರೀತಿ ಪ್ರತಿಭಟನೆ ವ್ಯಕ್ತವಾಯಿತು. ಆಗ ಬಹುತೇಕ ಸವರ್ಣೀಯರು ಈ ಪ್ರತಿಭಟನೆಯಲ್ಲಿ ಸೇರಿದ್ದರು.[೯] ಅವರು ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ ಹೊಲೆಯರು ಮತ್ತು ಮಾದಿಗರನ್ನು ಬಿಟ್ಟು ಸವರ್ಣೀಯರಾದ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಲಿಂಗಾಯತರು, ರಂಗಾರೆ, ಚಿತ್ರಗಾರ, ಲಾಡರು, ಒಕ್ಕಲಿಗರು, ಹಾಲು ಮತದವರು, ಗಂಗೆಮಕ್ಕಳು, ಕೆಲಸಿಗ, ಕುಂಬಾರ, ಕೊರಚ, ಲಂಬಾಣಿ ಈ ಯಾವ ಪಂಗಡದವರನ್ನು ಶಾಲೆಗೆ ಸೇರಿಸಲು ಅಭ್ಯಂತರವಿಲ್ಲವೆಂದು ತಿಳಿಸಲಾಗಿತ್ತು.[೧೦] ಹೀಗೆ ಅಸ್ಪೃಶ್ಯರಿಗೆ ಎಲ್ಲರಂತೆ ಸಮಾನವಾಗಿ ಕುಳಿತು ಶಿಕ್ಷಣ ಪಡೆಯಲು ಅವಕಾಶ ಕಲ್ಪಿಸಿದ್ದನ್ನು ಮೇಲ್ವರ್ಗದ ಜನತೆ ವಿರೋಧಿಸಿರುವುದು ತಿಳಿಯುತ್ತದೆ.

ಅಸ್ಪೃಶ್ಯರಿಗೆ ನೀಡುತ್ತಿರುವ ಶಿಕ್ಷಣ ಸೌಲಭ್ಯಗಳು ಮತ್ತಷ್ಟು ಹೆಚ್ಚುವಂತಾಗಲು ಕಾರಣವಾದುದು ಮಿಲ್ಲರ್ ಸಮಿತಿ. ೧೯೧೮ರಲ್ಲಿ ಸರ್ಕಾರವು ಹಿಂದುಳಿದ ವರ್ಗಗಳನ್ನು ಕುರಿತು ಅಧ್ಯಯನ ನಡೆಸಲು ನ್ಯಾಯಮೂರ್ತಿ ಮಿಲ್ಲರ್ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಕಮಾಡಿತು. ಇದು ಅಧ್ಯಯನ ಕೈಗೊಂಡು ಸರ್ಕಾರಿ ಸೇವಾ ಕ್ಷೇತ್ರದಲ್ಲಿ ಇವರ ಪ್ರಾತಿನಿಧ್ಯ ಇಲ್ಲದಿರುವುದನ್ನು ತಿಳಿಸಿತು. ಈ ಹಿನ್ನೆಲೆಯಲ್ಲಿ ಆ ಸಮಿತಿ ಅಸ್ಪೃಶ್ಯರಿಗೆ ಹೆಚ್ಚಿನ ಶಿಕ್ಷಣ ಸೌಲಭ್ಯ ದೊರಕಬೇಕೆಂದು ಅದು ನೀಡಿದ ಸಲಹೆಗಳಲ್ಲಿ ಅತಿ ಹಿಂದುಳಿದ ಹರಿಜನರಿಗಾಗಿಯೇ ಪ್ರತ್ಯೇಕವಾಗಿ ಪಂಚಮ ಸ್ಕೂಲುಗಳನ್ನು ಆರಂಭಿಸಬೇಕು. ಅವರೆಲ್ಲರಿಗೂ ವಿದ್ಯಾರ್ಥಿವೇತನ ನೀಡಬೇಕು[೧೧] ಎನ್ನುವುದು ಒಂದಾಗಿತ್ತು. ಇದರ ಪರಿಣಾಮವಾಗಿ ಪಂಚಮ ಬೋರ್ಡಿಂಗ್ ಹಾಸ್ಟೆಲ್‌ಗಳು ತೆರೆಯುವಂತಾಯಿತು. ದಿವಾನ್ ಶೇಷಾದ್ರಿ ಅಯ್ಯರ್ ಅವರ ಕಾಲದಲ್ಲಿಯೇ ಪಂಚಮರಿಗೆ ಪ್ರತ್ಯೇಕ ಶಾಲೆಯನ್ನು ತೆರೆಯಲಾಗಿತ್ತು. ಮುಂದೆ ಸೆಂಟ್ರಲ್ ಪಂಚಮ ಇನ್ಸ್‌ಟಿಟ್ಯೂಟ್‌ನ್ನು ಮೈಸೂರಿನಲ್ಲಿ ಸ್ಥಾಪಿಸಿ ಪಂಚಮ ವಿದ್ಯಾರ್ಥಿಗಳಿಗಾಗಿ ಹಾಸ್ಟಲ್ ಸೌಲಭ್ಯ ನೀಡಲು ಯೋಜನೆ ಹಾಕಲಾಗಿತ್ತು. ಮೈಸೂರು, ಬೆಂಗಳೂರು, ತುಮಕೂರು, ಚಿಕ್ಕಮಗಳೂರುಗಳಲ್ಲಿ ಶಾಲಾ ಬೋರ್ಡಿಂಗ್‌ಗಳನ್ನು ತೆರೆಯಲಾಗಿತ್ತು. ಕನಿಷ್ಟ ೨೫ ವಿದ್ಯಾರ್ಥಿಗಳಿರುವಲ್ಲಿ ಪಂಚಮರಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆಯುವ ಅಧಿಕಾರವನ್ನು ಇನ್ಸ್‌ಪೆಕ್ಟರ್ ಜನರಲ್ ಆಫ್ ಏಜುಕೇಶನ್ ಅವರಿಗೆ ನೀಡಲಾಗಿತ್ತು[೧೨] ಜೊತೆಗೆ ಹೆಚ್ಚು ಜನ ಪಂಚಮರನ್ನು ಶಾಲೆಗಳಿಗೆ ಆಕರ್ಷಿಸಲು ಸರ್ಕಾರ ತಲಾ ೫ ರೂಪಾಯಿಗಳಷ್ಟು ಭತ್ಯೆ ಕೊಡಲು ಮುಂದೆ ಬಂದಿತು. ಬೇರೆಯವರಿಗೆ ಮಾಧ್ಯಮಿಕ ಹಂತದವರಿಗೆ ಉಚಿತ ವಿದ್ಯಾಭ್ಯಾಸ ಕೊಟ್ಟರೆ, ದಲಿತರಿಗೆ ಮೆಟ್ರಿಕ್ಯುಲೇಷನ್‌ವರೆಗೆ ಉಚಿತ ವಿದ್ಯಾಭ್ಯಾಸ, ವಸತಿ ಕೊಡಲಾಯಿತು.[೧೩] ಹೀಗೆ ಪ್ರತ್ಯೇಕ ಹಾಗೂ ಸಾರ್ವಜನಿಕ ಶಾಲೆಗಳಲ್ಲಿ ಪ್ರವೇಶ ನೀಡಲು ಮಾಡಿದ ಆಜ್ಞೆಯಿಂದಾಗಿ "ಆ ಹೊತ್ತಿಗೆ ಹರಿಜನರಿಗೆ

ಪ್ರತ್ಯೇಕವಾದ ಶಾಲೆಗಳಲ್ಲಿ ಸುಮಾರು ೧೬,೫೭೫ ವಿದ್ಯಾರ್ಥಿಗಳೂ ಉಳಿದ ಶಾಲೆಗಳಲ್ಲಿ ೪,೩೦೬ವಿದ್ಯಾರ್ಥಿಗಳು ಏಕ ಕಾಲಕ್ಕೆ ಕಲಿಯತೊಡಗಿದರು."[೧೪]

ಅಂದಿನ ಸರ್ಕಾರ ಹೀಗೆ ಅಸ್ಪೃಶ್ಯರ ಶೈಕ್ಷಣಿಕ ಅಭಿವೃದ್ಧಿಗಾಗಿ ಪ್ರತ್ಯೇಕ ಶಾಲೆಗಳ ವಸತಿ ವ್ಯವಸ್ಥೆ, ಫೀ ರೀಯಾಯಿತಿ ಹಾಗೂ ಇತರೆ ಶಾಲೆಗಳಲ್ಲಿ ಅವರಿಗೆ ಪ್ರವೇಶ ಕೊಡಲು ಆಜ್ಞೆ ಹೀಗೆ ಸರ್ಕಾರ ಕೈಗೊಂಡು ಅನೇಕ ಕ್ರಮಗಳು ಅಸ್ಪೃಶ್ಯರು ವಿದ್ಯಾವಂತರಾಗಲು ಅವಕಾಶ ಮಾಡಿಕೊಟ್ಟಿವೆ. ಮೈಸೂರು ರಾಜ್ಯದಲ್ಲಿ ೧೯೩೧-೩೨ರಲ್ಲಿ ನಿಮ್ನ ವರ್ಗದವರಿಗಾಗಿಯೇ ಆರಂಭಿಸಲಾಗಿದ್ದ ವಿಶೇಷ ಶಾಲೆಗಳ ಸಂಖ್ಯೆ ೬೭೦, ೧೯೪೦-೪೧ ರಲ್ಲಿ ಅವುಗಳ ಸಂಖ್ಯೆ ೪೧೯, ೧೯೪೩-೪೪ರ ಸಮಯದಲ್ಲಿ ಆ ಶಾಲೆಗಳ ಸಂಖ್ಯೆ ೪೦೬ ಆಗಿದ್ದಿತು"[೧೫] ಹೀಗೆ ಇತರೆ ಶಾಲೆಗಳಲ್ಲಿ ಪ್ರವೇಶ ದೊರೆತಂತೆ ಇವರಿಗಾಗಿಯೇ ಇದ್ದಂತಹ ಪ್ರತ್ಯೇಕ ಶಾಲೆಗಳು ಕಡಿಮೆಯಾಗತೊಡಗಿದವು. ಪಂಚಮ ಬೋರ್ಡಿಂಗ್ ಎಂಬುದಾಗಿ ಕರೆಯುವುದರಿಂದ ಅವರನ್ನು ಇನ್ನು ಕೆಳಮಟ್ಟದಲ್ಲೇ ಗುರುತಿಸುವಂತಾಗುತ್ತದೆಂದು ತಿಳಿದು ಪಂಚಮ ಎಂಬ ಹೆಸರನ್ನು ತೆಗೆದು ಹಾಕಿ ಜನರಲ್ ಸ್ಕೂಲ್ ಮತ್ತು ಜನರಲ್ ಹಾಸ್ಟೆಲ್ ಎಂಬುದಾಗಿ ಬದಲಾವಣೆ ಮಾಡಿದರು. ೧೯೩೩ ೩೪ರಲ್ಲಿ ಒಂದು ನಿರ್ಣಯ ಮಾಡಿ ಪಂಚಮ ಸ್ಕೂಲ್‌ಗಳನ್ನು ಅಬಾಲಿಷ್ ಮಾಡಿದರು[೧೬] ಆ ನಂತರದಲ್ಲಿ ಅಸ್ಪೃಶ್ಯರಿಗೆ ಪ್ರವೇಶ ನೀಡಿದ ಶಾಲೆಗಳಲ್ಲಿ ಮತ್ತೊಂದು ರೀತಿಯ ತಾರತಮ್ಯ ಭಾವ ಇದ್ದುದು ತಿಳಿದುಬರುತ್ತದೆ. ಅಸ್ಪೃಶ್ಯರಿಗೆ ಪ್ರವೇಶ ನೀಡಿರುವ ಶಾಲೆಗಳಲ್ಲಿ ಅವರನ್ನು ಪ್ರತ್ಯೇಕವಾಗಿ ಕೂಡಿಸಲಾಗುತ್ತಿತ್ತು. ಚಿತ್ರದುರ್ಗ ಜಿಲ್ಲೆಯ ಸ್ಕೂಲ್‌ಲ್ಲಿ ಮಾದಿಗ ಜನಾಂಗದ ಹುಡುಗರು ಕೆಳಗಡೆ ಕುಳಿತುಕೊಳ್ಳಬೇಕಿತ್ತು. ಅದಕ್ಕೆ ಸ್ಕೂಲ್‌ಗೆ ಕೆಲವರು ಹೋಗಲೇ ಇಲ್ಲ. ನಾನು ಕೂಡ ಆ ಕಾರಣದಿಂದ ಹೋಗಲಿಲ್ಲ ಎಂದು ಸ್ವಾತಂತ್ರ್ಯ ಹೋರಾಟಗಾರರಾದ ಚಿಕ್ಕಜಾಜೂರು ರಂಗಪ್ಪ ತಿಳಿಸಿದರು. ಹಾಗೆಯೇ "ಪಂಚಮ ಸ್ಕೂಲ್‌ಗಳನ್ನು ಅಬಾಲಿಷ್ ಮಾಡಿದಾಗ ಅನೇಕ ಹರಿಜನ-ಗಿರಿಜನರು ಗುಡಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದವರು ಶಾಲೆಗಳನ್ನು ಬಿಟ್ಟು ಊರಿನಲ್ಲಿ ದನ ಕಾಯುವುದಕ್ಕೆ ಸೇರಿಕೊಂಡರು. ಏಕೆಂದರೆ ಇವರು ಬೇರೆ ಊರಿಗೆ ಹೋಗಿ ವಿದ್ಯಾಭ್ಯಾಸವನ್ನು ಮಾಡಬೇಕಿತ್ತು ಇದು ಅವರಿಗೆ ಕಷ್ಟದ ಕೆಲಸವಾಗಿತ್ತು.[೧೭] ಆದರೂ ಅಸ್ಪೃಶ್ಯರ ಶಿಕ್ಷಣ ಕಲಿಯುವ ಪ್ರಮಾಣ ಹೆಚ್ಚಾಗುತ್ತಾ ನಡೆದಿರುವುದು ಕಾಣುತ್ತದೆ. ಮೈಸೂರು ರಾಜ್ಯದಲ್ಲಿ "೧೯೪೧ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಸ್ಥಳೀಯ ಸಂಸ್ಥೆಗಳಿಂದ ಬೇರ್ಪಡಿಸಿ ಶಿಕ್ಷಣ ಇಲಾಖೆಯ ನಿಯಂತ್ರಣಕ್ಕೆ ಒಳಪಡಿಸಿದಾಗ ನಿಮ್ನ ವರ್ಗದ ವಿದ್ಯಾರ್ಥಿಗಳಾರೂ ಇಲ್ಲದ ಶಾಲೆಗಳ ಸಂಖ್ಯೆ ೧,೪೮೨ ಆಗಿತ್ತು. ೧೯೪೪ರಲ್ಲಿ ಇಂತಹ ಶಾಲೆಗಳ ಸಂಖ್ಯೆ ೧೭೪ಕ್ಕೆ ಇಳಿಯಿತು. ಈ ಶಾಲೆಗಳು ದೇವಸ್ಥಾನ ಮತ್ತು ಇತರ ಸ್ಥಳಗಳಲ್ಲಿ ನಡೆಯುತ್ತಿದ್ದವು"[೧೮] ಅಸ್ಪೃಶ್ಯರಿಗೆ ಸಾರ್ವಜನಿಕ ಶಾಲೆಗಳಲ್ಲಿ ಪ್ರವೇಶ ನೀಡುತ್ತಾ ಹೋದರೂ ಅಸ್ಪೃಶ್ಯತೆಯ ಆಚರಣೆ ಶಾಲೆಗಳಲ್ಲಿತಾಂಡವವಾಡುತ್ತಿತ್ತು. ದೇವಾಲಯಗಳಿಗೆ ಪ್ರವೇಶವೇ ಇರಲಿಲ್ಲವಾದ್ದರಿಂದ ಅಲ್ಲಿ ನಡೆಯುವಂತಹ ಶಾಲೆಗಳಲ್ಲಿ ಶಿಕ್ಷಣ ಕಲಿಯುವ ಅವಕಾಶ ಇನ್ನೆಲ್ಲಿಂದ ಬರುತ್ತದೆ.

ಅಸ್ಪೃಶ್ಯರಿಗೆ ಶಿಕ್ಷಣ ಒದಗಿಸುವ ಸಲುವಾಗಿ ಮದ್ರಾಸ್ ಪ್ರಾಂತ್ಯದಲ್ಲಿ ನಿಮ್ನ ವರ್ಗಗಳ ವಿದ್ಯಾರ್ಥಿಗಳಿಗೊಸ್ಕರ ಪ್ರತ್ಯೇಕ ಶಾಲೆಗಳನ್ನು ತೆರೆಯಲಾಯಿತು. ೧೯೨೧-೪೭ರ ಕಾಲಾವಧಿಯಲ್ಲಿ ಕಾರ್ಮಿಕ ಇಲಾಖೆಯು ನಿಮ್ನವರ್ಗದ ವಿದ್ಯಾರ್ಥಿಗಳ ಶಿಕ್ಷಣದ ಮೇಲ್ವಿಚಾರಣೆಯ ಹೊಣೆ ಹೊತ್ತಿದ್ದರಿಂದ ಅದು ಆ ಜನಗಳ ಮಕ್ಕಳಿಗೆ ಪ್ರತ್ಯೇಕ ಶಾಲೆಗಳನ್ನು ತೆರೆಯಿತು.[೧೯] ಹೀಗೆ ಮದ್ರಾಸ್ ಪ್ರಾಂತ್ಯದಲ್ಲಿಯೂ ಕೂಡ ಸ್ವಾತಂತ್ರ್ಯ ಪೂರ್ವದಲ್ಲಿ ಅಸ್ಪೃಶ್ಯರಿಗೆ ಶಿಕ್ಷಣ ಒದಗಿಸಲು ಮುಂದಾಗಿರುವುದು ಕಂಡುಬರುತ್ತದೆ. ಬಳ್ಳಾರಿಯ ೪೭ ಶಾಲೆಗಳಲ್ಲಿ ೧,೨೬೯ ವಿದ್ಯಾರ್ಥಿಗಳಿದ್ದರು. ಇದೇ ಕಾಲದಲ್ಲಿ ಖಾಸಗಿಯಾಗಿ ಮತ್ತು ಸ್ಥಳೀಯ ಸಂಸ್ಥೆಗಳ ಆಶ್ರಯದಲ್ಲಿ ಅನೇಕ ಶಾಲೆಗಳು ನಿಮ್ನ ವರ್ಗಗಳಿಗಾಗಿ ಪ್ರಾರಂಭವಾದವು. ಈ ಜಾತಿಯ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲು ನಿರಾಕರಿಸಿದ ಶಾಲೆಗಳಿಗೆ ಸರ್ಕಾರ ಸಹಾಯಧನವನ್ನು ತಡೆ ಹಿಡಿಯಿತು.[೨೦] ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಬಣವಿಕಲ್ಲು ಗ್ರಾಮದ ಹರಿಜನಕೇರಿಯಲ್ಲಿ ಸರ್ಕಾರವೇ ನಡೆಸುತ್ತಿದ್ದ ಒಂದು ಲೇಬರ್ ಸ್ಕೂಲು ಇತ್ತು. ಅದಕ್ಕೆ ಬೇಕಾದ ಕಟ್ಟಡವನ್ನು ಇವರೇ (ಮಾದಿಗ ಜನಾಂಗದ ಓದೊ ದುರ್ಗಪ್ಪ) ಕಟ್ಟಿಸಿಕೊಟ್ಟಿದ್ದರೆಂಬ ಅಂಶವು ಕಂಡುಬರುತ್ತದೆ. ಇದೇ ರೀತಿ ಹೊಸಪೇಟೆ ತಾಲೂಕು ಕಮಲಾಪುರ ಗ್ರಾಮದಲ್ಲಿ ಮಾದಿಗ ಜನಾಂಗದವರು ಕಟ್ಟಿಸಿದ ಶಾಲಾ ಕಟ್ಟಡ ಅವಶೇಷವನ್ನು ಇಂದಿಗೂ ಕಾಣಬಹುದು. ಹೀಗೆ ಮೈಸೂರು ಮತ್ತು ಮದ್ರಾಸ್ ಪ್ರದೇಶಗಳೆರಡರಲ್ಲಿ ಅಸ್ಪೃಶ್ಯರಿಗೆ ಶಿಕ್ಷಣ ನೀಡಲು ಸರ್ಕಾರದೊಂದಿಗೆ ಖಾಸಗಿಯವರು ಸಹ ಶಾಲೆಗಳನ್ನು ತೆರೆದು ಸಹಾಯ ಮಾಡಿರುವುದು ತಿಳಿದುಬರುತ್ತದೆ.

ಈ ಮೊದಲು ಹರಿಜನ ವಿದ್ಯಾರ್ಥಿಗಳಿಗಾಗಿ ತೆರದ ಶಾಲೆಗಳಿಗೆ ಕಲಿಸುವ ಶಿಕ್ಷಕರೇ ಸಿಗುವುದು ಕಷ್ಟವಾಯಿತು. ಹರಿಜನರ ಶಾಲೆಗಳಲ್ಲಿ ಕಲಿಸುವವರಿಗೆ ಹೆಚ್ಚು ಸಂಬಳವನ್ನು ಕೊಡಬೇಕೆಂಬ ಒತ್ತಾಯವನ್ನು ಸರಕಾರಕ್ಕೆ ಮಾಡಲಾಯಿತು.[೨೧] ಈ ಅಂಶದಿಂದ ಅಸ್ಪೃಶ್ಯರಿಗಾಗಿಯೇ ತೆರೆದ ಶಾಲೆಗಳಿಗೆ ಮೇಲು ಜಾತಿಯ ಶಿಕ್ಷಕರು ಬರಲು ಹಿಂಜರಿಯುತ್ತಿದ್ದುದು ತಿಳಿದುಬರುತ್ತದೆ. ಮದ್ರಾಸ್ ಪ್ರಾಂತ್ಯದಲ್ಲಿ ಪ್ರೌಢಶಾಲೆಗಳಲ್ಲಿ ಮಾತ್ರವೇ ದೈಹಿಕ ಶಿಕ್ಷಣ ಶಿಕ್ಷಕರ ನೇಮಕವಾಗಿ ಕೆಳವರ್ಗದ ಶಾಲೆಗಳಲ್ಲಿ ಸಾಮಾನ್ಯ ಶಿಕ್ಷಕರೇ ಈ ಕಾರ್ಯ ನಿರ್ವಹಿಸುವಂತೆ ನಿಗಧಿಸಲಾಯಿತು.[೨೨] ಇದರಿಂದಾಗಿ ಕೆಲವೊಂದು ವಿಶೇಷ ಶಿಕ್ಷಕರ ಕೊರತೆಯನ್ನು ಕೆಳವರ್ಗದ ಶಾಲೆಗಳು ಅನುಭವಿಸುತ್ತಿದ್ದವು. ೧೯೩೧ ರಲ್ಲಿ ನಡೆದ ಜನಗಣತಿಯು ಸಹ ಪಂಚಮರನ್ನು ಎಲ್ಲ ಶಾಲೆಗಳಿಗೆ ಸೇರಿಸಿಕೊಳ್ಳಲು ಇನ್ನೂ ಸಾಧ್ಯವಾಗಿಲ್ಲ[೨೩] ಎಂದು ತಿಳಿಸುತ್ತದೆ. ಈಗಾಗಲೇ ಈ ಹಿಂದೆ ಸಾರ್ವಜನಿಕ ಶಾಲೆಗಳಲ್ಲಿ ಅಸ್ಪೃಶ್ಯರಿಗೆ ಪ್ರವೇಶ ನಿರಾಕರಿಸಬಾರದೆಂದು ಆಜ್ಞೆ ಮಾಡಿದ್ದರೂ ಅದು ಪರಿಣಾಮಕಾರಿಯಾಗಿ ಜಾರಿಯಾಗಿಲ್ಲ ಎಂಬ ಸತ್ಯವನ್ನು ಜನಗಣತಿ ತಿಳಿಸಿದೆ. ಈ ಎಲ್ಲಾ ತಾರತಮ್ಯ, ಕೊರತೆಗಳನ್ನು ಮನಗಂಡು, ಅಸ್ಪೃಶ್ಯರು ಕೀಳರಿಮೆಯನ್ನು ತೊರೆದು ಎಲ್ಲರಂತೆ ಶಿಕ್ಷಣ ಪಡೆಯಲು ಸರ್ಕಾರ ಸಾರ್ವತ್ರಿಕ ಶಾಲೆಗಳಲ್ಲಿ ಅಸ್ಪೃಶ್ಯರಿಗೆ ಪ್ರವೇಶವನ್ನು ಕಟ್ಟುನಿಟ್ಟಾಗಿ ಜಾರಿಗೆ ತರುವಂತೆ ಪ್ರಯತ್ನಿಸಿತು. ಈ ಹಿನ್ನೆಲೆಯಲ್ಲಿ

೧೭೩೯ರ ವೇಳೆಗೆ ಪಂಚಮರ ಶಾಲೆಗಳೆಲ್ಲಾ ಮುಚ್ಚಿದವು. ಆ ವಿದ್ಯಾರ್ಥಿಗಳೆಲ್ಲಾ ಇತರರಿಗೆ ನಡೆಸುವ ಶಾಲೆಗಳಲ್ಲೆ ಮುಕ್ತ ಪ್ರವೇಶ ಪಡೆದರು. ಸರ್ಕಾರದಿಂದ ವಿದ್ಯಾರ್ಥಿಗಳಿಗೆ ಉಡುಪು ಮತ್ತು ಪುಸ್ತಕಗಳು ಕೊಡಲ್ಪಟ್ಟವು. ಅವರಲ್ಲಿ ಅರ್ಹರಿಗೆ ವಿದ್ಯಾರ್ಥಿವೇತನವೂ ಮಂಜೂರಾಯಿತು[೨೪]

ಹೀಗೆ ಸರ್ಕಾರವು ಅಸ್ಪೃಶ್ಯರಿಗೆ ಶಿಕ್ಷಣ ಒದಗಿಸಿಕೊಡಲು ಸ್ವಾತಂತ್ರ್ಯ ಪೂರ್ವದಲ್ಲಿ ವಿವಿಧ ಬಗೆಯ ಕ್ರಮಗಳನ್ನು ಕೈಗೊಂಡಿತು. ಆದರೆ ಮೌಢ್ಯತೆ, ಬಡತನ, ಶೋಷಣೆಯಿಂದ ನರಳುತ್ತಿರುವ ಮಾದಿಗ ಹೊಲೆಯ ಜಾತಿಯ ಜನರು ಶಿಕ್ಷಣ ಕಲಿಯಲು ಮುಂದಾದಾಗ ಶಾಲೆಗಳಲ್ಲಿನ ತಾರತಮ್ಯ ಅವರ ಉತ್ಸಾಹವನ್ನು ಕುಗ್ಗಿಸುತ್ತಿತ್ತು. ಆದರೂ ಹೆಚ್ಚಿನ ಪ್ರಮಾಣದಲ್ಲಿ ಶಿಕ್ಷಣ ಪಡೆಯದೆ ಹೋದರೂ ಸ್ವಲ್ಪಮಟ್ಟಿನ ಸುಧಾರಣೆ ಕಾಣುತ್ತದೆ. ಮಿಲ್ಲರ್ ವರದಿಯಲ್ಲಿ ದಾಖಲಾಗಿರುವಂತೆ ೧೯೧೮-೧೯ರ ಸಮಯದಲ್ಲಿ ಮೈಸೂರು ರಾಜ್ಯದಲ್ಲಿ ನಿಮ್ನ ವರ್ಗಗಳಲ್ಲಿ ೩೧೪೬೭ ಜನ ಅಕ್ಷರಸ್ಥರು ಇದ್ದರೆಂದು ಆ ವರದಿ ತಿಳಿಸುತ್ತದೆ[೨೫] ೧೯೩೫ರ ಹೊತ್ತಿಗೆ ಹೈಸ್ಕೂಲು ತರಗತಿಗಳಲ್ಲಿ ಕೇವಲ ೫೦ಕ್ಕೂ ಕಡಿಮೆಯಿದ್ದ ಸಂಖ್ಯೆ ೫೫೦ಕ್ಕೆ ಏರಿತು[೨೬] ಆದರೆ ಚಿತ್ರದುರ್ಗ ಜಿಲ್ಲೆಯಲ್ಲಿ ಅಲ್ಲಲ್ಲಿ ಒಂದು ಎರಡು ಅಥವಾ ೩ ಜನ, ೨ ಅಥವಾ ೩ನೇ ತರಗತಿಯವರಿಗೆ ಮಾತ್ರವೇ ವಿದ್ಯಾಭ್ಯಾಸ ಮಾಡಿರುವುದು ಅಧ್ಯಯನದ ಸಂದರ್ಭದಲ್ಲಿ ಕಂಡುಬಂದಿತು.

## ೫.೨. ಸ್ವಾತಂತ್ರ್ಯೋತ್ತರ ಕಾಲದ ಮಾದಿಗ ಜನಾಂಗದ ಶೈಕ್ಷಣಿಕ ಪ್ರಗತಿ

### ಪೂರ್ವ ಪ್ರಾಥಮಿಕ ಶಿಕ್ಷಣ ಮತ್ತು ಮಾದಿಗರು

ಪೂರ್ವ ಪ್ರಾಥಮಿಕ ಶಿಕ್ಷಣವು ಮಕ್ಕಳ ಪ್ರಾರಂಭದ ಹಂತದ ಅಥವಾ ಪ್ರಾಥಮಿಕ ಶಾಲಾ ಶಿಕ್ಷಣ ಪೂರ್ವದ ಶಿಕ್ಷಣವಾಗಿದ್ದು ಇಂತಹ ಶಿಕ್ಷಣವನ್ನು ನೀಡುವ ಸರ್ಕಾರ ಮೊದಲು ಆಸಕ್ತಿ ತಳೆದಿರಲಿಲ್ಲ. ಸ್ವಾತಂತ್ರ್ಯ ನಂತರದಲ್ಲಿ ಕೆಲವೊಂದು ಖಾಸಗಿ ಸಂಸ್ಥೆಗಳಿಗೆ ಪೂರ್ವ ಪ್ರಾಥಮಿಕ ಶಿಕ್ಷಣ ನೀಡಲು ಶಾಲೆಗಳನ್ನು ತೆರೆಯಲು ಸರ್ಕಾರ ಅನುಮತಿ ನೀಡಿತ್ತು. ಇದರಿಂದಾಗಿ ಖಾಸಗಿ ಸಂಸ್ಥೆಗಳು ಅನೇಕ ಪ್ರಮುಖ ಭಾಗಗಳಲ್ಲಿ ಶಾಲೆಗಳನ್ನು ತೆರೆದವು. ಹೀಗೆ ಪೂರ್ವ ಪ್ರಾಥಮಿಕ ಶಿಕ್ಷಣವು ಮೊದಲು ಖಾಸಗಿಯವರಿಂದ ಆರಂಭಗೊಂಡು ನಂತರದಲ್ಲಿ ಸರ್ಕಾರ ಈ ಬಗ್ಗೆ ಆಸಕ್ತಿ ತಾಳಿ ಮಕ್ಕಳಿಗೆ ಆರಂಭಿಕ ಶಿಕ್ಷಣ ನೀಡುವ ಪೂರ್ವ ಪ್ರಾಥಮಿಕ ಶಾಲೆ ಅಥವಾ ಶಿಶುವಿಹಾರಗಳನ್ನು ತೆರೆಯಲು ಮುಂದಾಯಿತು. ಈ ಹಂದೆ ಶಿಕ್ಷಣಕ್ಕೆ ಸಂಬಂಧಿಸಿದಂತೆ ಶಾಲೆಗಳನ್ನು ಸರ್ಕಾರ ತೆರೆಯದೆ ಹೋದರೂ ಅಂತಹ ಶಿಕ್ಷಣ ನೀಡುವ ಸಂಸ್ಥೆಗಳಿಗೆ ಗ್ರಾಂಟ್ ನೀಡುವುದರ ಮೂಲಕ ಪರೋಕ್ಷವಾಗಿ ಶಿಕ್ಷಣಕ್ಕೆ ಬೆಂಬಲ ನೀಡಿದೆ. ಇದರ ಪರಿಣಾಮವಾಗಿ ೧೯೫೬ ರ ಹೊತ್ತಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ ೪ ಶಿಶು ಶಾಲೆಗಳು ಮಾತ್ರವೇ ಇರುವುದು ಕಂಡು ಬರುತ್ತದೆ.[೨೭] ಕರ್ನಾಟಕ ಏಕೀಕರಣಗೊಂಡ ನಂತರ ಚಿತ್ರದುರ್ಗ ಜಿಲ್ಲೆಯಲ್ಲಿ ೧೯೬೪-೬೫ರ ಹೊತ್ತಿಗೆ ೫೦ ನರ್ಸರಿ ಶಾಲೆಗಳಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣವನ್ನು ನೀಡುತ್ತಿದ್ದರು. ಅವುಗಳಲ್ಲಿ ಒಟ್ಟು ೨೦೦೦ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು.[೨೮] ಹಾಗೆಯೇ ಬಳ್ಳಾರಿ

ಜಿಲ್ಲೆಯಲ್ಲಿ ೧೯೭೦-೭೧ ರ ವೇಳೆಗೆ ೨೦ ನರ್ಸರಿ ಶಾಲೆಗಳಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣವನ್ನು ನೀಡಲಾಗುತ್ತಿತ್ತು.[೨೯] ಮೊದಲು ಖಾಸಗಿ ಸಂಸ್ಥೆಗಳಿಂದ ಆರಂಭಗೊಂಡ ನರ್ಸರಿ ಶಾಲೆಗಳು ಕೇವಲ ಆರ್ಥಿಕವಾಗಿ ಪ್ರಬಲವಾಗಿರುವಂತಹ ವರ್ಗದ ಮಕ್ಕಳಿಗೆ ಮಾತ್ರವೇ ಈ ಶಿಕ್ಷಣ ಪಡೆಯಲು ಅವಕಾಶ ಮಾಡಿಕೊಟ್ಟವು. ಅಲ್ಲದೇ ಇವುಗಳು ಪ್ರಮುಖ ಪಟ್ಟಣ ಪ್ರದೇಶಗಳಲ್ಲಿ ಮಾತ್ರವೇ ಸ್ಥಾಪನೆಗೊಂಡಿದ್ದವು. ಈ ರೀತಿ ಶಿಕ್ಷಣ ನೀಡುವ ಸಂಸ್ಥೆಗಳಿಗೆ ಫೀಯನ್ನು ಒದಗಿಸಲು ಆರ್ಥಿಕ ದುರ್ಬಲವಾಗಿರುವ ಮಾದಿಗ ಜನಾಂಗದವರು ಭರಿಸಲು ಸಾಧ್ಯವಾಗುತ್ತಿರಲಿಲ್ಲ. ಆದರೂ ಸರ್ಕಾರವು ಗ್ರಾಂಟ್ ನೀಡುವಾಗ ಕೆಲವೊಂದು ಷರತ್ತುಗಳನ್ನು ಖಾಸಗಿ ಸಂಸ್ಥೆಯವರ ಮೇಲೆ ವಿಧಿಸಿತ್ತು. ನರ್ಸರಿ ಶಾಲೆಗಳ ಒಟ್ಟು ಸಂಖ್ಯೆಯಲ್ಲಿ ೩/೧ ಬಡತನದಲ್ಲಿರುವ ಮಕ್ಕಳಿಗೆ ಮೀಸಲುಗೊಳಿಸಬೇಕೆಂದು ತಿಳಿಸಿತ್ತು.[೩೦] ಇದರಿಂದಾಗಿ ದುರ್ಬಲ ವರ್ಗದ ಮಕ್ಕಳಿಗೆ ಪ್ರವೇಶ ಪಡೆಯಲು ಅವಕಾಶ ದೊರಕಿದೆ. ಇಂತಹ ಅವಕಾಶವನ್ನು ಬಳಸಿಕೊಂಡವರಲ್ಲಿ ಮಕ್ಕಳಿಗೆ ಶಿಕ್ಷಣ ಕಲಿಯಲು ಅವಶ್ಯಕವಾಗಿ ಬೇಕಾಗುವ ವಸ್ತುಗಳನ್ನು ಖರೀದಿ ಮಾಡಲು ಸಾಮಾರ್ಥ್ಯ ಇರುವಂತಹವರು ಮಾತ್ರ. ಅಂಥವರಲ್ಲಿ ಮಾದಿಗ ಜನಾಂಗದವರು ಅಪರೂಪವೆಂದೇ ಹೇಳಬಹುದು.

ಪಂಚವಾರ್ಷಿಕ ಯೋಜನೆಗಳು ಶಿಕ್ಷಣಕ್ಕೆ ನೀಡಿದ ವಿಶೇಷ ಮಹತ್ವದಿಂದಾಗಿ ರಾಜ್ಯ ಸರ್ಕಾರಗಳು ಸಹ ಆ ಯೋಜನೆ ಅನ್ವಯ ಶೈಕ್ಷಣಿಕ ಪ್ರಗತಿ ಸಾಧಿಸಲು ಮುಂದಾದವು. ಆಗ ಸರ್ಕಾರವು ಪೂರ್ವ ಪ್ರಾಥಮಿಕ ಶಿಕ್ಷಣಕ್ಕೂ ಗಮನಹರಿಸಿತು. ರಾಜ್ಯದಲ್ಲಿ ೧೯೫೮ರಲ್ಲಿ ಪರಿಶಿಷ್ಟ ಜಾತಿಗಳ ಮಕ್ಕಳ ಕಲ್ಯಾಣಕ್ಕಾಗಿ ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕಲ್ಯಾಣ ಕೇಂದ್ರಗಳು ಆರಂಭವಾದವು.[೩೧] ಅಲ್ಲಿಂದ ಮಾದಿಗ ಜನಾಂಗವು ಸಹ ತಮ್ಮ ಮಕ್ಕಳಿಗೆ ಪೂರ್ವ ಪ್ರಾಥಮಿಕ ಶಿಕ್ಷಣ ಕೊಡಿಸಲು ಅವಕಾಶ ಪಡೆಯಿತು. ಈ ರೀತಿ ಸರ್ಕಾರ ಪೂರ್ವಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಟ್ಟಿದ್ದರಿಂದ ಎರಡನೆಯ ಯೋಜನೆಯಲ್ಲಿ (೧೯೫೬-೬೧) ೧೬೫ ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕಲ್ಯಾಣ ಕೇಂದ್ರಗಳನ್ನು ಪರಿಶಿಷ್ಟ ಜಾತಿಗಳ ಅನುಕೂಲಕ್ಕೆ ತೆರೆಯಲಾಯಿತು. ನಾಲ್ಕನೆಯ ಯೋಜನೆಯ(೧೯೬೯-೭೪) ಮುಕ್ತಾಯದ ವೇಳೆಗೆ ೧೯೭೩-೭೪ರಲ್ಲಿ ರಾಜ್ಯದಲ್ಲಿ ೩೪೧ ಶಿಶುವಿಹಾರ ಗಳನ್ನೊಳಗೊಂಡ ಮಹಿಳಾ ಕೇಂದ್ರಗಳು ಕಾರ್ಯನಿರತವಾಗಿದ್ದವು.[೩೨] ಇಂತಹ ಕೇಂದ್ರಗಳನ್ನು ಪ್ರಮುಖವಾಗಿ ಆ ವರ್ಗದವರು ವಾಸಿಸುವ ಸ್ಥಳದಲ್ಲಿ ಇಲ್ಲವೇ ಆದಕ್ಕೆ ಹತ್ತಿರದ ಸ್ಥಳಗಳಲ್ಲಿ ತೆರೆಯುವಂತೆ ತಿಳಿಸಿತು. ಇದರಿಂದಾಗಿ ಆ ವರ್ಗದ ಮಕ್ಕಳು ಶಿಶುವಿಹಾರಗಳಿಗೆ ಹೋಗಲು ಅನುಕೂಲವಾಯಿತು. ಹೀಗೆ ಮಕ್ಕಳಿಗೆ ಪ್ರಾಥಮಿಕ ಪೂರ್ವ ಶಿಕ್ಷಣ ನೀಡಲು ತೆರೆದ ಕೇಂದ್ರಗಳಲ್ಲಿ ಕೆಲವು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿದ್ದವು. ಇದರಿಂದಾಗಿ ಈ ಭಾಗದಲ್ಲಿ ಮಾದಿಗ ಜನಾಂಗದ ಮಕ್ಕಳು ಆರಂಭಿಕ ಶಿಕ್ಷಣ ಪಡೆಯಲು ಸಾಧ್ಯವಾಯಿತು. ಈ ಹಂತದ ಶಿಕ್ಷಣವನ್ನು ಸರ್ಕಾರದಿಂದ ತೆರೆದಿರುವ ಕೇಂದ್ರಗಳಲ್ಲಿ ಬಹುಸಂಖ್ಯೆಯಲ್ಲಿ ಮಾದಿಗ ಜನಾಂಗದ ಮಕ್ಕಳು ಪಡೆಯುತ್ತಿದ್ದರೆ, ಇದೇ ಶಿಕ್ಷಣವನ್ನು ಖಾಸಗಿ ಸಂಸ್ಥೆಗಳು ನಡೆಸುತ್ತಿರುವ ಕೇಂದ್ರಗಳಲ್ಲಿ ಪ್ರಮುಖವಾಗಿ ಈ ಜನಾಂಗದ

ಮಧ್ಯಮ ವರ್ಗದ ಮಕ್ಕಳು ಕಡಿಮೆ ಸಂಖ್ಯೆಯಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ಸಮಾಜ ಕಲ್ಯಾಣ ಇಲಾಖೆಯ ಪರಿಶಿಷ್ಟ ಜಾತಿಯ ಮಹಿಳೆ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ೨೦೦೦-೦೧ನೇ ಸಾಲಿನ ಹೊತ್ತಿಗೆ ರಾಜ್ಯದಲ್ಲಿ ೪೫೦ ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕೇಂದ್ರಗಳು ಅಸ್ತಿತ್ವದಲ್ಲಿದ್ದರೆ ಅವುಗಳಲ್ಲಿ ೧೧ ಚಿತ್ರದುರ್ಗ ಜಿಲ್ಲೆಯಲ್ಲಿ ಮತ್ತು ೨೨ ಬಳ್ಳಾರಿ ಜಿಲ್ಲೆಯಲ್ಲಿವೆ.[೩೩]

**ಪ್ರಾಥಮಿಕ ಶಿಕ್ಷಣ ಮತ್ತು ಮಾದಿಗ ಜನಾಂಗ**

ಸ್ವಾತಂತ್ರ್ಯ ನಂತರದಲ್ಲಿ ಪಂಚವಾರ್ಷಿಕ ಯೋಜನೆಗಳ ಅನ್ವಯ ರಾಜ್ಯ ಸರ್ಕಾರವು ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಮಹತ್ವ ನೀಡಲಾರಂಭಿಸಿತು. ರಾಜ್ಯದ ಅನೇಕ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚು ಹೆಚ್ಚು ಪ್ರಾಥಮಿಕ ಶಾಲೆಗಳನ್ನು ತೆರೆದು ಆಯಾ ಭಾಗದ ಜನರಿಗೆ ಶಿಕ್ಷಣ ಕಲಿಯಲು ಅವಕಾಶ ಮಾಡಿಕೊಟ್ಟಿತು. ಪ್ರಾಥಮಿಕ ಶಿಕ್ಷಣ ಕಲಿಯಲು ಅನುಕೂಲವಾಗುವಂತೆ ದುರ್ಬಲ ವರ್ಗದ ಮಕ್ಕಳಿಗೆ ಕೆಲವೊಂದು ವಿಶೇಷ ಶಾಲೆಗಳನ್ನು ತೆರೆಯಿತು. ಮೈಸೂರು ರಾಜ್ಯದಲ್ಲಿ ಪರಿಶಿಷ್ಟ ವರ್ಗದ ಜನರಿಗಾಗಿ ೧೯೪೭-೪೮ ರಿಂದ ೧೩೪೭ ಪ್ರಾಥಮಿಕ ಶಾಲೆಗಳನ್ನು ೬ ಮಾಧ್ಯಮಿಕ ಶಾಲೆಗಳನ್ನು ತೆರೆಯಲಾಗಿತ್ತು. ಬಡ ಮಕ್ಕಳಿಗೆ ಶಾಲೆಗಳಲ್ಲಿ ಉಚಿತವಾಗಿ ಪುಸ್ತಕ ಮತ್ತು ಹಲಗೆಗಳನ್ನು ಒದಗಿಸಲಾಗುತ್ತಿತ್ತು. ಇಂತಹ ಶಾಲೆಗಳು ಮೊದಲು ಪಟ್ಟಣ ಪ್ರಮುಖ ಪ್ರದೇಶಗಳಿಂದ ಆರಂಭಗೊಂಡು ಗ್ರಾಮೀಣ ಪ್ರದೇಶಗಳಲ್ಲಿ ವಿಸ್ತಾರಗೊಂಡವು. ಅಲ್ಲದೇ ಅನೇಕ ಸೌಲಭ್ಯಗಳನ್ನು ಈ ವರ್ಗದ ಜನರಿಗೆ ಒದಗಿಸಿದ್ದರಿಂದ ಆ ವರ್ಗದಲ್ಲಿ ಒಂದಾದ ಮಾದಿಗ ಜನಾಂಗದವರು ಸಹ ಪ್ರಾಥಮಿಕ ಶಿಕ್ಷಣ ಕಲಿಯಲು ಅನುಕೂಲವಾಯಿತು. ಬಳ್ಳಾರಿ ಜಿಲ್ಲೆಯ ೧೯೫೩ರವರೆಗೂ ಮೈಸೂರು ರಾಜ್ಯಕ್ಕೆ ಸೇರ್ಪಡೆಗೊಂಡಿರಲಿಲ್ಲ. ಆಗ ಮತ್ತು ಸೇರ್ಪಡೆಗೊಂಡ ನಂತರದಲ್ಲಿ ಮಾದಿಗ ಹೊಲೆಯರ ಅಭಿವೃದ್ಧಿಗೆಂದೇ ಸ್ಥಾಪಿತಗೊಂಡಿದ್ದ ಹರಿಜನ ಕಲ್ಯಾಣ ಇಲಾಖೆಯು ಇವರಿಗಾಗಿ ಪ್ರತ್ಯೇಕ ಶಾಲೆಗಳನ್ನು ನಡೆಸುತ್ತಿತ್ತು. ಅವುಗಳನ್ನು 'ವೆಲ್‌ಫೇರ್ ಬೋರ್ಡ್ ಸ್ಕೂಲು' ಗಳೆಂದು ಕರೆಯಲಾಗುತ್ತಿದ್ದು, ಇಂತಹ ಶಾಲೆಗಳು ೧೯೫೩-೫೪ರ ಹೊತ್ತಿಗೆ ಬಳ್ಳಾರಿ ಜಿಲ್ಲೆಯಲ್ಲಿ ೧೮ ವೆಲ್‌ಫೇರ್ ಬೋರ್ಡ್ ಪ್ರೈಮರಿ ಶಾಲೆಗಳಿದ್ದವು. ಅದರಲ್ಲಿ ೮೧೭ ಬಾಲಕರು ಮತ್ತು ೨೬೮ ಬಾಲಕಿಯರು ವಿದ್ಯಾಭ್ಯಾಸ ಮಾಡುತ್ತಿದ್ದರು. ಅದರ ಸಂಖ್ಯೆ ೧೯೫೬-೫೭ರ ಹೊತ್ತಿಗೆ ೮೪೭ ಜನ ಬಾಲಕರು ಮತ್ತು ೩೧೧ ಬಾಲಕಿಯರು ಪ್ರಾಥಮಿಕ ಶಾಲಾ ಶಿಕ್ಷಣ ಪಡೆಯುತ್ತಿದ್ದರು. ೧೯೬೨ ರ ಹೊತ್ತಿಗೆ ೩೯ ವೆಲ್‌ಫೇರ್ ಬೋರ್ಡ್ ಸ್ಕೂಲುಗಳು ಬಳ್ಳಾರಿ ಜಿಲ್ಲೆಯಲ್ಲಿದ್ದು ಆ ಶಾಲೆಗಳಲ್ಲಿ ೧೯೪೩ ಬಾಲಕರು ಮತ್ತು ೯೯೭ ಬಾಲಕಿಯರು ವಿದ್ಯಾಭ್ಯಾಸ ಮಾಡುತ್ತಿದ್ದರು.[೩೪] ಹೀಗೆ ಸರ್ಕಾರವು ಇವರಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆಯುವುದರ ಮೂಲಕ ಅವರ ವಿದ್ಯಾಭ್ಯಾಸಕ್ಕೆ ಅನುಕೂಲಮಾಡಿ ಕೊಟ್ಟಿತು. ಇದರಿಂದಾಗಿ ಈ ಭಾಗದಲ್ಲಿ ಮಾದಿಗ ಜನಾಂಗದ ಮಕ್ಕಳು ಪ್ರಾಥಮಿಕ ಶಾಲಾ ಶಿಕ್ಷಣ ಕಲಿಯಲು ಅವಕಾಶವಾಯಿತು. ಹಾಗಿದ್ದೂ ಪ್ರಾಥಮಿಕ ಶಾಲಾ ಶಿಕ್ಷಣ ಪಡೆಯುವಲ್ಲಿ ಮಾದಿಗ ಜನಾಂಗದವರು ಮುಂದೆ ಬಂದಿದ್ದು ಆಗ ಸ್ವಲ್ಪ ಪ್ರಮಾಣದಲ್ಲಿ ಮಾತ್ರ ಎನ್ನಬಹುದು.

ಕಡ್ಡಾಯ ಪ್ರಾಥಮಿಕ ಶಿಕ್ಷಣ ನೀತಿ ಜಾರಿಗೆ ಬರುವುದರೊಂದಿಗೆ ಎಲ್ಲ ವರ್ಗದ ಮಕ್ಕಳಿಗೂ ಶಿಕ್ಷಣ ಒದಗಿಸುವ ನಿಟ್ಟಿನಲ್ಲಿ ಸರ್ಕಾರ ಕ್ರಮ ಕೈಗೊಂಡಿತು. ಅಸ್ಪೃಶ್ಯರಿಗೆ ಎಲ್ಲರಂತೆ ಸಮಾನ ಅವಕಾಶ ನೀಡಲು ಸರ್ಕಾರ ಮುಂದಾದಾಗ ಸವರ್ಣೀಯರ ಪ್ರತಿಭಟನೆ ನಡೆಸಿದರು. ಆದರೆಸರ್ಕಾರ ಕಠಿಣ ಕ್ರಮಕೈಗೊಳ್ಳುವುದನ್ನು ಮುಂದುವರಿಸಿದಂತೆ ಮಾದಿಗರು ಮತ್ತು ಹೊಲೆಯರು ಸಾರ್ವಜನಿಕ ಶಾಲೆಗಳಲ್ಲಿಯೇ ಶಿಕ್ಷಣ ಪಡೆಯಲು ಅವಕಾಶವಾಯಿತು. ಬಹುಶಃ ಆ ಸಂದರ್ಭದ ಅಸ್ಪೃಶ್ಯರಿಗಾಗಿಯೇ ಪ್ರತ್ಯೇಕವಾಗಿ ತೆರೆದಿದ್ದ ಶಾಲೆಗಳನ್ನು ರದ್ದುಪಡಿಸಿರಬೇಕೆನಿಸುತ್ತದೆ. ಇಂತಹ ಸಂದರ್ಭದಲ್ಲಿ ಇತರೆ ಶಾಲೆಗಳಿಗೆ ಎಲ್ಲರಂತೆ ಸಮಾನವಾಗಿ ಶಿಕ್ಷಣ ಕಲಿಯಲು ಮುಂದಾಗಲು ಹೊರಟರೆ, ಮೇಲು ಜಾತಿಯ ಜನರ ವಕ್ರದೃಷ್ಟಿಗೆ ಬೀಳುತ್ತೇವೆ ಎಂದು ಮೊದಮೊದಲು ಹಿಂಜರಿದರೂ ಆ ನಂತರದಲ್ಲಿ ಎಲ್ಲರೂ ಒಂದು ಕಡೆ ಕುಳಿತು ಶಿಕ್ಷಣ ಕಲಿಯುವುದು ಆರಂಭವಾಯಿತು. ಆದರೂ ಶಿಕ್ಷಣ ಕಲಿಸಲು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವ ಪೋಷಕರನ್ನು ಒಂದು ರೀತಿಯಲ್ಲಿ ನೋಡುವುದು ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಕಂಡುಬರುತ್ತದೆ. ಶಿಕ್ಷಣ ಕಲಿಯುವವರ ಸಂಖ್ಯೆ ಹೆಚ್ಚಾಗುತ್ತಾ ನಡೆದಂತೆ ಹೊಸ ಹೊಸ ಶಾಲೆಗಳು ಅನೇಕ ಗ್ರಾಮೀಣ ಪ್ರದೇಶದಲ್ಲಿ ಸ್ಥಾಪನೆಗೊಂಡವು. ಈ ರೀತಿಯ ಬೆಳವಣಿಗೆಯಿಂದಾಗಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳು ಹೆಚ್ಚಿನ ಸಂಖ್ಯೆಯಲ್ಲಿ ಪ್ರಾಥಮಿಕ ಶಾಲೆಗಳನ್ನು ಹೊಂದುವಂತಾಯಿತು.

ಈ ರೀತಿ ಸ್ಥಾಪಿತಗೊಂಡ ಶಾಲೆಗಳಲ್ಲಿ ಶಿಕ್ಷಣ ಕಲಿಯಲು ಸರ್ಕಾರ ಪರಿಶಿಷ್ಟ ಜಾತಿ ವರ್ಗದ ಮಕ್ಕಳಿಗೆ ಫೀ ರಿಯಾಯಿತಿ, ಪಠ್ಯ ಪುಸ್ತಕಗಳ ವಿತರಣೆ, ಬಟ್ಟೆಯ ವಿತರಣೆ ಮುಂತಾದ ಕ್ರಮಗಳನ್ನು ಕೈಗೊಳ್ಳುತ್ತಾ ಹೋದಂತೆ ವಿದ್ಯಾಭ್ಯಾಸ ಮಾಡಲು ಈ ವರ್ಗಕ್ಕೆ ಅನುಕೂಲವಾಯಿತು. ಈ ಹಿನ್ನೆಲೆಯಲ್ಲಿ ಈ ಎರಡು ಜಿಲ್ಲೆಗಳಲ್ಲಿ ಶಿಕ್ಷಣ ಕಲಿಯಲು ಮಾದಿಗ ಜನಾಂಗವು ಹೆಚ್ಚಿನ ಪ್ರಮಾಣದಲ್ಲಿ ಮುನ್ನುಗ್ಗಲು ಸಹಾಯವಾಯಿತು. ೧೯೯೮ ರಲ್ಲಿ ೧ ರಿಂದ ೭ ನೆಯ ತರಗತಿಯವರಿಗೆ ದಾಖಲಾದ ಪರಿಶಿಷ್ಟ ಜಾತಿಯ ಮಕ್ಕಳ ಸಂಖ್ಯೆ ಈ ರೀತಿ ಇದೆ. ಚಿತ್ರದುರ್ಗ ಜಿಲ್ಲೆ ಬಾಲಕರು ೬೪,೮೩೨, ಬಾಲಕಿಯರು ೩೧,೧೫೮ಇದ್ದರೆ, ಬಳ್ಳಾರಿ ಜಿಲ್ಲೆಯಲ್ಲಿ ಬಾಲಕರು ೬೨,೦೩೭ ಬಾಲಕಿಯರು ೨೬,೮೨೦[೩೫]ಇದ್ದರು. ಇವುಗಳಲ್ಲಿ ಮಾದಿಗ ಜನಾಂಗದವರು ಸಹ ಇದ್ದಾರೆ.

೨೦೦೦-೨೦೦೧ರಲ್ಲಿ ಚಿತ್ರದುರ್ಗ ಜಿಲ್ಲೆಯು ಒಟ್ಟು ೧೭೯೫ ಪ್ರಾಥಮಿಕ ಶಾಲೆಗಳನ್ನು ಹೊಂದಿದ್ದು ಚಿತ್ರದುರ್ಗ ೩೯೦, ಚಳ್ಳಕೆರೆ ೩೪೬, ಹಿರಿಯೂರು ೨೬೭, ಹೊಳಲ್ಕೆರೆ ೩೪೩, ಹೊಸದುರ್ಗ ೩೦೮ ಹಾಗೂ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೧೪೧ ಪ್ರಾಥಮಿಕ ಶಾಲೆಗಳನ್ನು ತೆರೆಯಲಾಗಿತ್ತು. ೧೯೯೯-೨೦೦೦ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೧೪೯೨ ಪ್ರಾಥಮಿಕ ಶಾಲೆಗಳಿದ್ದು ಅವುಗಳು ಬಳ್ಳಾರಿ ತಾಲ್ಲೂಕಿನಲ್ಲಿ ೩೪೯, ಹಡಗಲಿ ೧೫೨, ಹಗರಿಬೊಮ್ಮನಹಳ್ಳಿ ೧೩೦, ಹೊಸಪೇಟೆ ೨೩೯, ಕೂಡ್ಲಿಗಿ ೨೮೩, ಸಂಡೂರು ೧೫೭ ಹಾಗೂ ಸಿರುಗುಪ್ಪ ತಾಲ್ಲೂಕಿನಲ್ಲಿ ೧೭೨ ಪ್ರಾಥಮಿಕ

ಶಾಲೆಗಳು ಇದ್ದವು. ಈ ಶಾಲೆಗಳ ಅಂಕಿ-ಅಂಶಗಳನ್ನು ಗಮನಿಸಿದರೆ ಬಳ್ಳಾರಿ ಜಿಲ್ಲೆಗಿಂತ ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಾಥಮಿಕ ಶಾಲೆಗಳು ಹೆಚ್ಚಾಗಿ ಇರುವುದು ಕಂಡುಬರುತ್ತದೆ. ಪ್ರಾಥಮಿಕ ಶಾಲೆಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅಧ್ಯಯನಕ್ಕೊಳಪಡಿಸಿದ ಗ್ರಾಮಗಳಲ್ಲಿ ಪ್ರಾಥಮಿಕ ಶಿಕ್ಷಣ ಪಡೆಯುತ್ತಿರುವ ಮಾದಿಗ ಜನಾಂಗದ ಸಂಖ್ಯೆ ಈ ರೀತಿ ಇದೆ.

೧. ಚಿತ್ರದುರ್ಗ ಜಿಲ್ಲೆ

| ಕ್ರ.ಸಂ. | ತಾಲೂಕು | ಗ್ರಾ.ಸಂಖ್ಯೆ | ಬಾಲಕರು | ಬಾಲಕಿಯರು | ಒಟ್ಟು |
|---|---|---|---|---|---|
| ೧ | ಚಿತ್ರದುರ್ಗ | ೩ | ೧೨೦ | ೬೦ | ೧೮೦ |
| ೨ | ಚಳ್ಳಕೆರೆ | ೬ | ೪೨೫ | ೨೫೦ | ೬೭೫ |
| ೩ | ಹಿರಿಯೂರು | ೫ | ೩೧೫ | ೧೪೫ | ೪೬೦ |
| ೪ | ಹೊಳಲ್ಕೆರೆ | ೨ | ೪೦ | ೨೦ | ೬೦ |
| ೫ | ಹೊಸದುರ್ಗ | ೪ | ೧೮೦ | ೬೫ | ೨೪೫ |
| ೬ | ಮೊಳಕಾಲ್ಮೂರು | ೩ | ೩೦೦ | ೭೫ | ೩೭೫ |
| | ಒಟ್ಟು | ೨೩ | ೧೩೮೦ | ೪೧೫ | ೧೯೯೫ |

೨ ಬಳ್ಳಾರಿ ಜಿಲ್ಲೆ

| ಕ್ರ.ಸಂ. | ತಾಲೂಕು | ಗ್ರಾ.ಸಂಖ್ಯೆ | ಬಾಲಕರು | ಬಾಲಕಿಯರು | ಒಟ್ಟು |
|---|---|---|---|---|---|
| ೧ | ಬಳ್ಳಾರಿ | ೩ | ೧೫೫ | ೮೮ | ೨೪೩ |
| ೨ | ಕೂಡ್ಲಿಗಿ | ೫ | ೧೦೧ | ೫೫ | ೧೫೬ |
| ೩ | ಸಿರುಗುಪ್ಪ | ೫ | ೮೫ | ೩೨ | ೧೧೭ |
| ೪ | ಹೊಸಪೇಟೆ | ೩ | ೧೫೦ | ೩೦ | ೧೮೦ |
| ೫ | ಸಂಡೂರು | ೨ | ೨೬ | ೧೫ | ೪೧ |
| ೬ | ಹಗರಿಬೊಮ್ಮನಹಳ್ಳಿ | ೨ | ೩೨ | ೧೬ | ೪೮ |
| ೭ | ಹೂವಿನಹಡಗಲಿ | ೨ | ೨೮ | ೧೨ | ೪೦ |
| | ಒಟ್ಟು | ೨೨ | ೫೭೭ | ೨೪೮ | ೮೨೫ |

ಅಧ್ಯಯನಕೊಳಪಡಿಸಿದ ಒಟ್ಟು ೪೫ ಗ್ರಾಮಗಳಲ್ಲಿ ಪ್ರಾಥಮಿಕ ಶಾಲೆಯ ಶಿಕ್ಷಣವನ್ನು ಪಡೆಯುತ್ತಿರುವವರ ಸಂಖ್ಯೆ ಚಿತ್ರದುರ್ಗ ಜಿಲ್ಲೆಯಲ್ಲಿ ೧೩೮೦ ಬಾಲಕರು ಮತ್ತು ೪೧೫ ಬಾಲಕಿಯರು ಇದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ೫೭೭ ಬಾಲಕರು ಮತ್ತು ೨೪೮ ಬಾಲಕಿಯರು ಶಿಕ್ಷಣ ಪಡೆಯುತ್ತಿರುವುದು ಕಂಡುಬಂದಿದೆ. ಆದರೆ ಸಿರುಗುಪ್ಪ ತಾಲ್ಲೂಕಿನ ನಿಟ್ಟೂರು ಗ್ರಾಮದಲ್ಲಿ ಒಬ್ಬ ಬಾಲಕಿಯೂ ಪ್ರಾಥಮಿಕ ಶಿಕ್ಷಣ ಪಡೆಯದೆ ಇರುವುದು ಕಂಡುಬಂದಿತು. ಈ ಎರಡು ಜಿಲ್ಲೆಗಳಲ್ಲಿನ ಪ್ರಾಥಮಿಕ ಶಾಲೆಯ ಶಿಕ್ಷಣ ಪಡೆಯುತ್ತಿರುವ ಮಾದಿಗ ಜನಾಂಗದ ವಿದ್ಯಾರ್ಥಿಗಳ ಸಂಖ್ಯೆಯನ್ನು

ಗಮನಿಸಿದರೆ ಚಿತ್ರದುರ್ಗ ಜಿಲ್ಲೆಯಲ್ಲಿ ಈ ಜನಾಂಗದವರು ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಣ ಪಡೆಯುತ್ತಿರುವುದು ಕಂಡುಬರುತ್ತದೆ. ಆದರೆ ಬಳ್ಳಾರಿ ಜಿಲ್ಲೆಯಲ್ಲಿ ಈ ಸಂಖ್ಯೆ ಕಡಿಮೆಯಿದ್ದರೂ ಇನ್ನು ಅನೇಕ ಭಾಗಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ಕಲಿಯವಾಗದ ಸ್ಥಿತಿಯಲ್ಲಿ ಬದುಕುತ್ತಿದ್ದಾರೆ.

**ಪ್ರೌಢ ಶಿಕ್ಷಣ ಮತ್ತು ಮಾದಿಗ ಜನಾಂಗ**

ಪ್ರಾಥಮಿಕ ಶಾಲೆಯ ನಂತರದ ಶಿಕ್ಷಣವೇ ಪ್ರೌಢಶಿಕ್ಷಣವಾಗಿದೆ. ಈ ಶಿಕ್ಷಣ ರಾಜ್ಯದಲ್ಲಿ ಮೊದಲು ಆರಂಭಗೊಂಡಿದ್ದು ಬೆಂಗಳೂರಿನಲ್ಲಿ. ಸ್ವಾತಂತ್ರ್ಯ ಪೂರ್ವದಲ್ಲಿ ಖಾಸಗಿ ಸಂಸ್ಥೆಯವರು ಪ್ರೌಢಶಾಲಾ ಶಿಕ್ಷಣ ಆರಂಭಿಸಿದರು. ಹಾಗೆಯೇ ೧೯೪೮ ರಲ್ಲಿ ಜಿಲ್ಲಾ ಬೋರ್ಡ್‌ಗಳು ಪ್ರೌಢಶಾಲೆಗಳನ್ನು ಆರಂಭಿಎಸಿದವು. ರಾಜ್ಯದಲ್ಲಿ ಪ್ರೌಢಶಿಕ್ಷಣ ವಿಸ್ತರಿಸಲು ಇದು ಕಾರಣವಾಯಿತು. [೫೬] ಹೀಗೆ ಸರ್ಕಾರ ಖಾಸಗಿ ಸಂಸ್ಥೆಗಳು ಹಾಗೂ ಸ್ಥಳೀಯ ಸಂಸ್ಥೆಗಳು ಪ್ರೌಢಶಾಲೆಗಳನ್ನು ತೆರೆಯುವುದರ ಮೂಲಕ ಪ್ರೌಢ ಶಿಕ್ಷಣಕ್ಕೆ ಅವಕಾಶ ಮಾಡಿಕ್ಕೊಟ್ಟರು. ಆನಂತರದ ಪ್ರೌಢಶಿಕ್ಷಣವು ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಮಹತ್ವವನ್ನು ಪಡೆಯಿತು. ಮೈಸೂರು ರಾಜ್ಯದಲ್ಲಿ "೧೯೫೧-೫೨ ರಲ್ಲಿ ಬಾಲಕರಿಗಾಗಿ ೧೮೧, ಬಾಲಕಿಯರಿಗಾಗಿ ೩೬ ಪ್ರೌಢಶಾಲೆಗಳಿದ್ದು, ೧೯೫೫-೫೬ರ ಹೊತ್ತಿಗೆ ಇವು ಕ್ರಮವಾಗಿ ೨೧೯ ಮತ್ತು ೪೭ ಆಗಿದ್ದವು[೫೭] ಹೀಗೆ ಪ್ರೌಢಶಾಲೆಗಳು ಪ್ರಮುಖವಾಗಿ ಪಟ್ಟಣ ಪ್ರದೇಶಗಳಲ್ಲಿ ಮಾತ್ರವೇ ಮೊದಲು ತೆರೆಯಲಾಯಿತು. ಈ ರೀತಿ ಸ್ಥಾಪನೆಗೊಂಡ ಪ್ರೌಢಶಾಲೆಗಳಲ್ಲಿ ೧೯೫೬ರ ಹೊತ್ತಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ ಬಾಲಕರಿಗೆ ೨೧, ಬಾಲಕಿಯರಿಗಾಗಿ ೩ ಪ್ರೌಢಶಾಲೆಗಳು ಸ್ಥಾಪಿತಗೊಂಡಿದ್ದವು[೫೮] ಈ ರೀತಿ ಪ್ರೌಢಶಾಲಾ ಶಿಕ್ಷಣ ನೀಡುವ ಸಲುವಾಗಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಸರ್ಕಾರ, ಖಾಸಗಿಸಂಸ್ಥೆ ಹಾಗೂ ಸ್ಥಳೀಯ ಬೋರ್ಡ್‌ಗಳು ಪ್ರೌಢಶಾಲೆಗಳನ್ನು ಬಾಲಕ-ಬಾಲಕಿಯರಿಗಾಗಿ ಕೆಲವೊಂದು ಪ್ರದೇಶದಲ್ಲಿ ತೆರೆದಿದ್ದಾರೆ. ಇಂತಹ ಶಾಲೆಗಳಲ್ಲಿ ಶಿಕ್ಷಣ ಪಡೆಯಲು ಅನುಕೂಲವಾಗುವಂತೆ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಫೀ ರೀಯಾಯಿತಿಯೊಂದಿಗೆ ಹಾಸ್ಟೆಲ್ ಮತ್ತು ವಿದ್ಯಾರ್ಥಿವೇತನದ ಸೌಲಭ್ಯಗಳನ್ನು ಸರ್ಕಾರ ಒದಗಿಸಿಕೊಟ್ಟಿದೆ.

ಮೈಸೂರು ರಾಜ್ಯ ಏಕೀಕರಣಗೊಂಡು ಬಳ್ಳಾರಿ ಜಿಲ್ಲೆಯು ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಗುವುದರ ಮೂಲಕ ಅದು ಮೈಸೂರು ರಾಜ್ಯದ ಆಡಳಿತಕ್ಕೆ ಒಳಪಟ್ಟಿತು. ಈ ರೀತಿ ಸೇರ್ಪಡೆಗೊಂಡ ಪ್ರದೇಶಗಳು ಮತ್ತು ಹಳೆಯ ಮೈಸೂರು ಪ್ರದೇಶದಲ್ಲಿ ಪ್ರೌಢಶಿಕ್ಷಣ ಪದ್ಧತಿಯಲ್ಲಿ ಭಿನ್ನತೆ ಇದ್ದು, ಇದನ್ನು ಹೋಗಲಾಡಿಸಲು ಸರ್ಕಾರ ಕೈಗೊಂಡ ಕ್ರಮದಿಂದ ೧೯೬೨-೬೩ರ ಹೊತ್ತಿಗೆ ಪ್ರೌಢಶಾಲಾ ಶಿಕ್ಷಣದಲ್ಲಿ ಏಕರೂಪತೆ ಬಂದು ಪಠ್ಯವಸ್ತು ಮತ್ತು ಪರೀಕ್ಷೆಯು ಎಲ್ಲಾ ಶಾಲೆಗಳಿಗೂ ಒಂದೇ ಆದವು.[೫೯] ಹೀಗೆ ಪ್ರೌಢಾಶಾಲಾ ಶಿಕ್ಷಣ ಪದ್ಧತಿಯಲ್ಲಿ ಕೆಲವು ಬದಲಾವಣೆಯೊಂದಿಗೆ ೧೯೫೬-೫೭ರಲ್ಲಿ ೫೩೫ ಇದ್ದ ಪ್ರೌಢಶಾಲೆಗಳು ೧೯೬೮-೬೯ ರಲ್ಲಿ ೧,೮೩೩ ಆದವು.[೬೦] ಈ ಸಂಖ್ಯೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿರುವ ಪ್ರೌಢಶಾಲೆಗಳು ಸಹ ಸೇರಿಕೊಂಡಿವೆ. ಚಿತ್ರದುರ್ಗ

ಜಿಲ್ಲೆಯಲ್ಲಿ ೧೯೬೫ರ ಹೊತ್ತಿಗೆ ಒಟ್ಟು ೬೯ ಪ್ರೌಢಶಾಲೆಗಳು ನಡೆಯುತ್ತಿದ್ದು ಇವುಗಳಲ್ಲಿ ಹೈಯರ್ ಸೆಕಂಡರಿ ಹಾಗೂ ವಿವಿಧೋದ್ದೇಶ ಶಾಲೆಗಳೂ ಸೇರಿಕೊಂಡಿವೆ. ಅವುಗಳಲ್ಲಿ ೭ ಸರ್ಕಾರದಿಂದಲೂ, ೭ ವಿವಿಧ ಭಾಗದ ಪೌರಸಭೆಗಳಿಂದಲೂ, ೭ ತಾಲ್ಲೂಕು ಬೋರ್ಡ್‌ಗಳಿಂದಲೂ ಹಾಗೂ ೪೩ ಖಾಸಗಿ ಸಂಸ್ಥೆಗಳಿಂದಲೂ ನಡೆಯುತ್ತಿದ್ದವು.[೪೧] ೧೯೬೨ ರ ಹೊತ್ತಿಗೆ ಬಳ್ಳಾರಿ ಜಿಲ್ಲೆಯಲ್ಲಿ ಪ್ರೌಢ ಶಿಕ್ಷಣ ನೀಡುತ್ತಿದ್ದ ಹೈಯರ್ ಎಲಿಮೆಂಟರಿ ಶಾಲೆಗಳು ಒಟ್ಟು ೯೭ ಶಾಲೆಗಳು ಈ ಜಿಲ್ಲೆಯಲ್ಲಿದ್ದವು.[೪೨]

ಹೀಗೆ ಸ್ಥಾಪಿತಗೊಂಡು ನಡೆಯುತ್ತಿದ್ದ ಪ್ರೌಢ ಶಾಲೆಗಳಲ್ಲಿ ಸರ್ಕಾರಿ ಶಾಲೆಗಳಲ್ಲಿ ಮಾತ್ರವೇ ಹೆಚ್ಚಿನ ಸಂಖ್ಯೆಯಲ್ಲಿ ಮಾದಿಗ ಜನಾಂಗದ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು. ಖಾಸಗಿ ಸಂಸ್ಥೆಗಳಲ್ಲಿ ಕೆಲವೊಂದು ಫೀ ರಿಯಾಯಿತಿ ಇದ್ದರೂ ಖಾಸಗಿ ಸಂಸ್ಥೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾಭ್ಯಾಸ ನಡೆಸಿಲ್ಲವೆಂದೇ ಹೇಳಬಹುದು. ಅಲ್ಲದೆ ಪ್ರೌಢಶಾಲಾ ಶಿಕ್ಷಣ ಕಲಿಯುತ್ತಿದ್ದವರ ಸಂಖ್ಯೆ ಬಹಳ ಕಡಿಮೆ. ಕೇವಲ ಪ್ರಾಥಮಿಕ ಶಾಲಾ ಶಿಕ್ಷಣವನ್ನು ಮಾತ್ರವೇ ಹೆಚ್ಚಿನ ಪ್ರಮಾಣದಲ್ಲಿ ಪಡೆಯಲು ಸಾಧ್ಯವಾಗಿದೆ. ಅದಕ್ಕೆ ಅನೇಕ ಕಾರಣಗಳಿದ್ದು, ಸಾಮಾಜಿಕ ಸಂದರ್ಭ, ಬಡತನ, ಅನಾರೋಗ್ಯ, ಮೌಢ್ಯತೆ ಮುಂತಾದವುಗಳು ಮಾದಿಗ ಜನಾಂಗ ಮಕ್ಕಳು ಹೆಚ್ಚಿನ ಶಿಕ್ಷಣ ಪಡೆಯಲು ಅಡ್ಡಿಪಡಿಸಿವೆ. ಆದರೆ ಇಂದು ಸರ್ಕಾರದ ವತಿಯಿಂದ ಹೆಚ್ಚಿನ ಸೌಲಭ್ಯಗಳು ದೊರೆತು ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಡಲಾಗಿದೆ. ಇದರಿಂದಾಗಿ ಮಾದಿಗ ಜನಾಂಗದ ಅನೇಕ ವಿದ್ಯಾರ್ಥಿಗಳು ಅಂದರೆ ಬಹು ಸಂಖ್ಯೆಯಲ್ಲಿ ಪ್ರೌಢ ಶಿಕ್ಷಣವನ್ನು ಪಡೆಯುತ್ತಿರುವುದು ಇವೆರಡು ಜಿಲ್ಲೆಗಳಲ್ಲಿಯೂ ಕಂಡುಬರುತ್ತದೆ.

ಸರ್ಕಾರ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳು ಶೈಕ್ಷಣಿಕ ಸೇವಾ ಉದ್ದೇಶದಿಂದ ಸ್ಥಾಪಿಸಿದ ಅನೇಕ ಪ್ರೌಢಶಾಲೆಗಳು ಪಟ್ಟಣ ಪ್ರದೇಶದಲ್ಲಿ ಮಾತ್ರವಲ್ಲದೇ ಗ್ರಾಮೀಣ ಪ್ರದೇಶದ ಕೆಲವು ಭಾಗಗಳಿಗೂ ವಿಸ್ತರಿಸುತ್ತಾ ಹೋದವು. ಪರಿಣಾಮವಾಗಿ ಚಿತ್ರದುರ್ಗ ಜಿಲ್ಲೆಯಲ್ಲಿ ೨೦೦೦-೦೧ರ ಸಾಲಿಗೆ ಒಟ್ಟು ೩೧೮ ಪ್ರೌಢಶಾಲೆಗಳು ಇರುವುದು ಕಂಡುಬಂದಿದೆ. ಅವುಗಳಲ್ಲಿ ಚಿತ್ರದುರ್ಗ ತಾಲ್ಲೂಕು ೮೧, ಚಳ್ಳಕೆರೆ ೬೫, ಹಿರಿಯೂರು ೩೬, ಹೊಳಲ್ಕೆರೆ ೬೬, ಹೊಸದುರ್ಗ ೫೦, ಹಾಗೂ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೨೦ ಪ್ರೌಢಶಾಲೆಗಳಿವೆ ಬಳ್ಳಾರಿ ಜಿಲ್ಲೆಯಲ್ಲಿ ೧೯೯೯-೨೦೦೦ ಸಾಲಿಗೆ ಒಟ್ಟು ೧೯೯ ಪ್ರೌಢಶಾಲೆಗಳನ್ನು ಸ್ಥಾಪಿಸಲಾಗಿತ್ತು. ಅವುಗಳಲ್ಲಿ ಬಳ್ಳಾರಿ ತಾಲ್ಲೂಕಿನಲ್ಲಿ ೫೦, ಹಡಗಲಿ ೨೨, ಹಗರಿಬೊಮ್ಮನಹಳ್ಳಿ ೨೦, ಹೊಸಪೇಟೆ ೩೭, ಕೂಡ್ಲಿಗಿ ೩೭, ಸಂಡೂರು ೧೭ ಹಾಗೂ ಸಿರುಗುಪ್ಪ ತಾಲ್ಲೂಕಿನಲ್ಲಿ ೧೬ ಪ್ರೌಢಶಾಲೆಗಳು ಇರುವುದು ಕಂಡು ಬರುತ್ತದೆ. ಈ ಅಂಕಿ-ಅಂಶಗಳು ಪ್ರೌಢಶಾಲಾ ಶಿಕ್ಷಣಕ್ಕೆ ಬಳ್ಳಾರಿಗಿಂತಲೂ ಚಿತ್ರದುರ್ಗ ಜಿಲ್ಲೆಯಲ್ಲಿ ಹೆಚ್ಚಿನ ಮಹತ್ವ ನೀಡುರುವುದದನ್ನು ಸೂಚಿಸುತ್ತವೆ. ಜೊತೆಗೆ ಶಿಕ್ಷಣ ಕಲಿಯುವವರ ಸಂಖ್ಯೆ ಹೆಚ್ಚಾಗುತ್ತಿರುವುದನ್ನು ಸೂಚಿಸುತ್ತದೆ. ಈ ರೀತಿ ಸ್ಥಾಪನೆಗೊಂಡ ಶಾಲೆಗಳಲ್ಲಿ ಪ್ರೌಢ ಶಿಕ್ಷಣವನ್ನು ಕಲಿಯಲು ಮುಂದಾದ ಮಾದಿಗ ಜನಾಂಗದ ವಿದ್ಯಾರ್ಥಿಗಳನ್ನು ತಮ್ಮ ಗ್ರಾಮದಲ್ಲಿ ಇಲ್ಲವೇ ಅಕ್ಕಪಕ್ಕದ ಗ್ರಾಮಗಳಲ್ಲಿ

ಸ್ಥಾಪಿತಗೊಂಡ ಶಾಲೆಗಳಿಗೆ ಮಾತ್ರವೆ ಅವರ ಪೋಷಕರು ಕಳುಹಿಸಿ ಕೊಡುತ್ತಾರೆ. ಕೆಲವೊಂದು ಪ್ರದೇಶಗಳಲ್ಲಿ ಹಾಸ್ಟಲ್ ಸೌಲಭ್ಯ ಇರುವ ಕಡೆ ಹೆಚ್ಚು ಜನ ತಮ್ಮ ಮಕ್ಕಳನ್ನು ಸೇರಿಸಲು ಇಷ್ಟಪಡುತ್ತಾರೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಚಿತ್ರದುರ್ಗ ಜಿಲ್ಲೆಯಲ್ಲಿ ೨೦೦೦-೦೧ರ ಹೊತ್ತಿಗೆ ಮೆಟ್ರಿಕ್ ಪೂರ್ವ ಬಾಲಕರ ೩೯ ಮತ್ತು ಬಾಲಕಿಯರ ೧೧ ಹಾಸ್ಟಲ್‌ಗಳು ಇದ್ದು ಇಂತಹ ಹಾಸ್ಟಲ್ ಸೌಲಭ್ಯ ಪಡೆದು ಮಾದಿಗರು ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಕಲಿಯಲು ಮುಂದಾಗಿದ್ದಾರೆ. ಅಂತಹ ಹಾಸ್ಟಲ್‌ಗಳಲ್ಲಿ ಹಡಗಲಿ ಮತ್ತು ಹಗರಿಬೊಮ್ಮನಹಳ್ಳಿ ಬಿಟ್ಟರೆ ಹೆಚ್ಚಿನ ಪ್ರಮಾಣದಲ್ಲಿ ಮಾದಿಗ ಜನಾಂಗದ ವಿದ್ಯಾರ್ಥಿಗಳು ಪ್ರೌಢಶಾಲಾ ಶಿಕ್ಷಣ ಪಡೆಯುತ್ತಿದ್ದಾರೆ ಎನ್ನಬಹುದು. ಅಧ್ಯಯನಕ್ಕೊಳಪಡಿಸಿದ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಕೆಲವು ಗ್ರಾಮಗಳಲ್ಲಿ ಪ್ರೌಢಶಾಲಾ ಶಿಕ್ಷಣ ಪಡೆಯುತ್ತಿರುವ ಮಾದಿಗ ಜನಾಂಗದ ಬಾಲಕ ಮತ್ತು ಬಾಲಕಿಯ ಸಂಖ್ಯೆ ಈ ರೀತಿಯಿದೆ.

### ೧. ಚಿತ್ರದುರ್ಗ ಜಿಲ್ಲೆ

| ಕ್ರ.ಸಂ. | ತಾಲೂಕು | ಗ್ರಾ.ಸಂಖ್ಯೆ | ಬಾಲಕರು | ಬಾಲಕಿಯರು | ಒಟ್ಟು |
|---|---|---|---|---|---|
| ೧ | ಚಿತ್ರದುರ್ಗ | ೩ | ೩೭ | ೧೮ | ೫೫ |
| ೨ | ಚಳ್ಳಕೆರೆ | ೬ | ೧೨೦ | ೭೨ | ೧೯೨ |
| ೩ | ಹಿರಿಯೂರು | ೫ | ೪೮ | ೨೪ | ೭೨ |
| ೪ | ಹೊಳಲ್ಕೆರೆ | ೨ | ೨೪ | ೩೨ | ೫೬ |
| ೫ | ಹೊಸದುರ್ಗ | ೪ | ೨೯ | ೧೧ | ೪೦ |
| ೬ | ಮೊಳಕಾಲ್ಮೂರು | ೩ | ೨೪ | ೧೧ | ೩೫ |
| | ಒಟ್ಟು | ೨೩ | ೨೮೨ | ೧೬೮ | ೪೫೦ |

### ೨ ಬಳ್ಳಾರಿ ಜಿಲ್ಲೆ

| ಕ್ರ.ಸಂ. | ತಾಲೂಕು | ಗ್ರಾ.ಸಂಖ್ಯೆ | ಬಾಲಕರು | ಬಾಲಕಿಯರು | ಒಟ್ಟು |
|---|---|---|---|---|---|
| ೧ | ಬಳ್ಳಾರಿ | ೩ | ೫೫ | ೨೦ | ೭೫ |
| ೨ | ಕೂಡ್ಲಿಗಿ | ೫ | ೨೧ | ೦೯ | ೩೦ |
| ೩ | ಸಿರುಗುಪ್ಪ | ೫ | ೦೯ | ೦೫ | ೧೪ |
| ೪ | ಹೊಸಪೇಟೆ | ೩ | ೭೫ | ೨೫ | ೧೦೦ |
| ೫ | ಸಂಡೂರು | ೨ | ೧೮ | ೦೮ | ೨೬ |
| ೬ | ಹಗರಿಬೊಮ್ಮನಹಳ್ಳಿ | ೨ | ೧೯ | ೧೨ | ೩೧ |
| ೭ | ಹೂವಿನಹಡಗಲಿ | ೨ | ೧೫ | ೦೭ | ೨೨ |
| | ಒಟ್ಟು | ೨೨ | ೨೧೨ | ೮೬ | ೨೯೮ |

ಈ ಅಂಕಿ-ಅಂಶಗಳ ಹಿನ್ನೆಲೆಯಲ್ಲಿ ಪ್ರೌಢಶಾಲಾ ಶಿಕ್ಷಣದಲ್ಲಿ ಬಳ್ಳಾರಿ ಜಿಲ್ಲೆಯು ಚಿತ್ರದುರ್ಗ ಜಿಲ್ಲೆಗಿಂತ ಹಿಂದುಳಿದಿದೆ ಎನ್ನಬಹುದು. ಸಿರುಗುಪ್ಪ ತಾಲ್ಲೂಕಿನಲ್ಲಿ ಮಹಿಳೆಯರ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ಇಲ್ಲವೆಂಬ ಅಂಶ ತಿಳಿದುಬಂದಿತು. ಕೆಲವು ಗ್ರಾಮಗಳಲ್ಲಿ ಎಸ್.ಎಸ್.ಎಲ್.ಸಿ. ಅನುತ್ತೀರ್ಣ ಆಗಿರುವವರು ಸಹ ಕಂಡುಬಂದರು.

ಗ್ರಾಮೀಣ ಪ್ರದೇಶದಲ್ಲಿ ಮಾತ್ರವಲ್ಲದೇ ಪಟ್ಟಣ ಪ್ರದೇಶದಲ್ಲಿ ಮಾದಿಗ ಜನಾಂಗದ ಅನೇಕರು ತಮ್ಮ ಮಕ್ಕಳನ್ನು ವಿದ್ಯಾಭ್ಯಾಸ ಮಾಡಲು ತೊಡಗಿಸಿದ್ದಾರೆ. ಅವರಲ್ಲಿ ಮದ್ಯಮ ವರ್ಗದ ಮಾದಿಗ ಜನಾಂಗ ವಿದ್ಯಾರ್ಥಿಗಳೇ ಹೆಚ್ಚಿನ ಪ್ರಮಾಣದಲ್ಲಿರುತ್ತಾರೆ. ಏಕೆಂದರೆ ಪಟ್ಟಣ ಪ್ರದೇಶದಲ್ಲಿ ನೆಲೆಸಿರುವ ವಿದ್ಯಾರ್ಥಿಗಳಿಗೆ ಹಾಸ್ಟಲ್ ಸೌಲಭ್ಯ ಇಲ್ಲದಿರುವುದು ಒಂದು ಪ್ರಮುಖ ಕಾರಣ ಎನ್ನಬಹುದಾಗಿದೆ. ಇದರಿಂದಾಗಿ ಪಟ್ಟಣ ಪ್ರದೇಶದಲ್ಲಿ ಬಡತನದಿಂದ ನರಳುತ್ತಿರುವ ಈ ಜನಾಂಗದ ಅನೇಕರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವುದರ ಬದಲು ದುಡಿಮೆಗೆ ಕಳುಹಿಸುತ್ತಾರೆ. ಅದರಿಂದ ದಿನನಿತ್ಯದ ಜೀವನ ನಿರ್ವಹಣೆಗೆ ಹೆಚ್ಚು ಸಹಾಯವಾಗುತ್ತದೆ ಎಂಬ ದೃಷ್ಟಿ ಅವರದು. ಇನ್ನು ಅನೇಕ ಅಂಶಗಳು ಇವರು ಶಿಕ್ಷಣ ಪಡೆಯಲು ಅಡ್ಡಿಯಾದರೂ ಪ್ರೌಢ ಶಿಕ್ಷಣಕ್ಕೆ ಪ್ರಾಥಮಿಕ ಶಾಲೆಗಳ ಸಂಖ್ಯೆಗಿಂತ ಕಡಿಮೆಯಾಗಿದೆ. ಜನಸಂಖ್ಯಾ ದೃಷ್ಟಿಯಿಂದ ನೋಡಿದರೆ ಈಗ ಕಲಿಯುತ್ತಿರುವವರ ಸಂಖ್ಯೆ ತುಂಬಾ ಕಡಿಮೆಯೇ. ಇನ್ನು ಹೆಚ್ಚಿನ ರೀತಿಯಲ್ಲಿ ಸರ್ಕಾರ, ಪೋಷಕರು ಹಾಗೂ ಸಂಘ ಸಂಸ್ಥೆಗಳು ಪ್ರಯತ್ನ ಮಾಡಿದರೆ ಪ್ರೌಢಶಾಲಾ ಶಿಕ್ಷಣದಲ್ಲಿ ಈ ಜನಾಂಗ ಹೆಚ್ಚಿನ ಪ್ರಗತಿ ಸಾಧಿಸಲು ಸಾಧ್ಯವಾಗುತ್ತದೆ.

**ಕಾಲೇಜು ಶಿಕ್ಷಣ ಮತ್ತು ಮಾದಿಗರು**

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಕಾಲೇಜು ಶಿಕ್ಷಣಕ್ಕೆ ಹೆಚ್ಚು ಮಹತ್ವ ನೀಡಿ ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರ ಮತ್ತು ಖಾಸಗಿಯವರು ತೆರೆಯಲು ಆರಂಭಿಸಿದ್ದು ೭೦ ರ ದಶಕದ ಕೊನೆಯಲ್ಲಿ. ಅಲ್ಲಿಯವರೆಗೆ ಕಾಲೇಜು ಶಿಕ್ಷಣ ನೀಡುತ್ತಿದ್ದ ಕಾಲೇಜುಗಳ ಸಂಖ್ಯೆ ತುಂಬಾ ಕಡಿಮೆ ದಿನಾಂಕ ೧.೧೧.೧೯೫೬ರ ಪೂರ್ವ ಮೈಸೂರು ರಾಜ್ಯದ ೧೦ ಜಿಲ್ಲೆಗಳಲ್ಲಿ ವಿಶ್ವವಿದ್ಯಾನಿಲಯದ ಕಾಲೇಜು ಮತ್ತು ಸಂಸ್ಥೆಗಳು ಮೊದಲನೆಯದಾಗಿ ಸಾಮಾನ್ಯ ವಿದ್ಯಾಭ್ಯಾಸದ ಪದವೀಧರ ದರ್ಜೆ ಸಂಸ್ಥೆಗಳು ಪುರುಷರಿಗೆ ೮, ಮಹಿಳೆಯರಿಗೆ ೩, ಇಂಟರ್ ಮಿಡಿಯಟ್ ದರ್ಜೆ ಪುರುಷರಿಗೆ ೧೦, ಮಹಿಳೆಯರಿಗೆ ಇಲ್ಲ. ಎರಡನೆಯದಾಗಿ ಉದ್ಯೋಗ ಮತ್ತು ವಿಶೇಷ ರೀತಿಯ ವಿದ್ಯಾಭ್ಯಾಸದ ಕಾಲೇಜುಗಳು ಒಟ್ಟು, ಬಾಲಕರಿಗೆ ೧೨, ಮಹಿಳೆಯರಿಗೆ ೧ ಮಾತ್ರವೇ ಇದ್ದವು.[೪೬] ಈ ಹಿನ್ನೆಲೆಯಲ್ಲಿ ಪೂರ್ವದ ಹತ್ತು ಜಿಲ್ಲೆ ಗಳಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳು ಸೇರಿಕೊಂಡಿವೆ. ಚಿತ್ರದುರ್ಗ

ಜಿಲ್ಲೆಯಲ್ಲಿ ೧೯೪೮ರಲ್ಲಿ ಸರ್ಕಾರವು ಪ್ರಥಮ ದರ್ಜೆ ಕಾಲೇಜನ್ನು ಆರಂಭಿಸಿ ೧೯೫೮ರ ಹೊತ್ತಿಗೆ ಪಿ.ಯು.ಸಿ. ಒಳಗೊಂಡಂತೆ ಮೂರು ವರ್ಷದ ಪದವಿ ಶಿಕ್ಷಣವನ್ನು ನೀಡಲಾಗುತ್ತಿತ್ತು.[೪೪] ಸಾಮಾನ್ಯ ಶಿಕ್ಷಣದ ೧ ಕಾಲೇಜು ಮಾತ್ರವೇ ಕಂಡುಬರುತ್ತದೆ. ಅಲ್ಲದೇ ಚಿತ್ರದುರ್ಗ, ಶಿವಮೊಗ್ಗ ಹಾಗೂ ಬಳ್ಳಾರಿ ಜಿಲ್ಲೆಗಳಲ್ಲಿರುವ ಮಾದಿಗರು ಮತ್ತು ಹೊಲೆಯರಿಗಾಗಿಯೇ ಚಿತ್ರದುರ್ಗದಲ್ಲಿ ಸ್ಥಾಪಿತವಾಗಿದ್ದ ಪಂಚಮ ಬೋರ್ಡಿಂಗ್ ಹಾಸ್ಟಲ್ ಸುಮಾರು ೧೯೭೪ರವರೆಗೆ ಒಂದೇ ಇದ್ದುದರಿಂದ ಕಾಲೇಜು ಶಿಕ್ಷಣ ಪಡೆಯುತ್ತಿದ್ದ ಮಾದಿಗ ಜನಾಂಗದ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ. ಚಿತ್ರದುರ್ಗ ಜಿಲ್ಲೆಯ ದಾವಣಗೆರೆ, ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ, ಹೊಸದುರ್ಗ, ಹೊಳಲ್ಕೆರೆಯ ತಾಲ್ಲೂಕುಗಳಲ್ಲಿ ಆ ಸಂದರ್ಭದಲ್ಲಿ ಬೆರಳೆಣಿಕೆಯಷ್ಟು ವಿದ್ಯಾರ್ಥಿಗಳು ಮಾತ್ರವೇ ಕಾಲೇಜು ಶಿಕ್ಷಣ ಪಡೆದಿದ್ದಾರೆ. ಮಹಿಳೆಯರಂತೂ ಇಲ್ಲವೇ ಇಲ್ಲ. ೭೦ ರ ದಶಕದ ಕೊನೆಯಲ್ಲಿ ಕಾಲೇಜು ಶಿಕ್ಷಣ ನೀಡುವ ಪಡೆಯುವವರ ಸಂಖ್ಯೆ ಹೆಚ್ಚಾದಂತೆ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಕಾಲೇಜು ಶಿಕ್ಷಣ ನೀಡುವ ಕಾಲೇಜುಗಳನ್ನು ಮತ್ತು ಕೆಲವು ಹಾಸ್ಟಲ್‌ಗಳನ್ನು ಸ್ಥಾಪಿಸುತ್ತಾ ಹೋದರು. ಈ ಬೆಳವಣಿಗೆಯ ಪರಿಣಾಮ ಇಂದು ಚಿತ್ರದುರ್ಗ ಜಿಲ್ಲೆಯಲ್ಲಿ ೨೦೦೦-೦೧ರ ಸಾಲಿನ ಹೊತ್ತಿಗೆ ಒಟ್ಟು ಪದವಿಪೂರ್ವ ಕಾಲೇಜುಗಳು ೮೨ ಇವೆ. ಸಾಮಾನ್ಯ ಶಿಕ್ಷಣ ಪದವಿ ಕಾಲೇಜುಗಳು ಒಟ್ಟು ೧೪ ಇವೆ. ಅವುಗಳಲ್ಲಿ ಚಿತ್ರದುರ್ಗ ತಾಲ್ಲೂಕಿನಲ್ಲಿ ೨೭, ಚಳ್ಳಕೆರೆ ೧೮, ಹಿರಿಯೂರು ೧೪, ಹೊಳಲ್ಕೆರೆ ೧೩, ಹೊಸದುರ್ಗ ೨೦, ಹಾಗೂ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೪ ಕಾಲೇಜುಗಳು ಸ್ಥಾಪನೆಗೊಂಡಿವೆ ಬಳ್ಳಾರಿ ಜಿಲ್ಲೆಯಲ್ಲಿ ಪದವಿಪೂರ್ವ ಕಾಲೇಜುಗಳು ೩೬, ಸಾಮಾನ್ಯ ಶಿಕ್ಷಣ ಪದವಿ ಕಾಲೇಜುಗಳು ೧೯ ಇವೆ. ಅವುಗಳಲ್ಲಿ ಬಳ್ಳಾರಿ ತಾಲ್ಲೂಕಿನಲ್ಲಿ ಒಟ್ಟು ೧೭, ಹಡಗಲಿ ೫, ಹಗರಿಬೊಮ್ಮನಹಳ್ಳಿ ೬, ಹೊಸಪೇಟೆ ೧೩, ಕೂಡ್ಲಿಗಿ ೭, ಸಂಡೂರು ೩ ಹಾಗೂ ಸಿರುಗುಪ್ಪದಲ್ಲಿ ೬ ಕಾಲೇಜುಗಳು ಇವೆ ಇವುಗಳು ಕಾಲೇಜು ಶಿಕ್ಷಣ ಪಡೆಯಲು ಅವಕಾಶಮಾಡಿಕೊಟ್ಟಿವೆ.

ಸರ್ಕಾರವು ಕಾಲೇಜು ಶಿಕ್ಷಣ ಪಡೆಯುತ್ತಿರುವ ಪರಿಶಿಷ್ಟ ಜಾತಿ ೧ ವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ, ಕೆಲವು ಮುಖ್ಯ ಭಾಗಗಳಲ್ಲಿ ಹಾಸ್ಟಲ್ ವ್ಯವಸ್ಥೆ ಮಾಡಿಕೊಟ್ಟಿರುವುದರಿಂದ ಈ ಸೌಲಭ್ಯ ಬಳಸಿಕೊಂಡ ಅನೇಕರು ಎರಡು ಜಿಲ್ಲೆಗಳ ಎಲ್ಲಾ ತಾಲ್ಲೂಕುಗಳಲ್ಲಿ ಕಾಲೇಜು ಶಿಕ್ಷಣ ಪಡೆದಿರುವ ಅನೇಕರು ಕಂಡುಬರುತ್ತಾರಾದರೂ. ಅವರ ಸಂಖ್ಯೆ ಕಡಿಮೆ. ಚಿತ್ರದುರ್ಗ ಜಿಲ್ಲೆಯಲ್ಲಿ ಸರ್ಕಾರಿ ಹಾಸ್ಟಲ್‌ಗಳು ೭ ಇದ್ದು ಬಾಲಕಿಯರಿಗೆ ಒಂದು ಇದೆ. ಅವುಗಳಲ್ಲಿ ವಿದ್ಯಾಭ್ಯಾಸ ೨೦೦೧-೦೨ನೇ ಸಾಲಿಗೆ ಕಾಲೇಜು ಶಿಕ್ಷಣ ಪಡೆಯುತ್ತಿದ್ದ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಯ ಇತರರಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಕಾಲೇಜು ಶಿಕ್ಷಣ ಪಡೆದಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೭ ಸರ್ಕಾರಿ

ಕಾಲೇಜು ಮತ್ತು ೧ ಅನುದಾನಿತ ಕಾಲೇಜು ಹಾಸ್ಟಲ್ ಇದ್ದು ಅವುಗಳಲ್ಲಿ ಕಾಲೇಜು ಶಿಕ್ಷಣ ಪಡೆಯುತ್ತಿರುವ ಮಾದಿಗ ಜನಾಂಗದ ಸಂಖ್ಯೆಯು ಅತಿ ಕಡಿಮೆ. ಅಧ್ಯಯನಕ್ಕೊಳಪಡಿಸಿದ ಗ್ರಾಮಗಳ ಅಂಕಿ-ಅಂಶಗಳು ಈ ಅಂಶವನ್ನು ಸಾಬೀತು ಪಡಿಸುತ್ತವೆ. ಚಿತ್ರದುರ್ಗ ಜಿಲ್ಲೆಯು ೨೩ ಹಳ್ಳಿಗಳಲ್ಲಿ ಪದವಿಪೂರ್ವ ಶಿಕ್ಷಣ ಪುರುಷರು ೧೧೬ ಮಹಿಳೆಯರು ೩೦ ಪದವಿ ಶಿಕ್ಷಣ ಪಡೆಯುತ್ತಿರುವವರಲ್ಲಿ ಪುರುಷರು ೩೨, ಮಹಿಳೆಯರು ೧೩ ಕಂಡುಬಂದರೆ, ಬಳ್ಳಾರಿ ಜಿಲ್ಲೆಯ ೧೬ ಹಳ್ಳಿಗಳಲ್ಲಿ ಪದವಿಪೂರ್ವ ಶಿಕ್ಷಣ ಪಡೆದ ಬಾಲಕರು ೪೬, ಬಾಲಕಿಯರು ೨೨, ಪದವಿ ಶಿಕ್ಷಣವನ್ನು ಬಾಲಕರು ೧೯, ಬಾಲಕಿಯರು ಕೇವಲ ೫ ವಿದ್ಯಾರ್ಥಿಗಳು ಮಾತ್ರವೇ ಪಡೆಯುತ್ತಿರುವುದು ಕಂಡುಬರುತ್ತದೆ. ಪಿ.ಯು.ಸಿ. ಮುಗಿಸಿ ಮನೆಯಲ್ಲಿರುವವರು ಚಿತ್ರದುರ್ಗ ಜಿಲ್ಲೆಯಲ್ಲಿ ೨೭ ಜನ ಇದ್ದರೆ ಅನುತ್ತೀರ್ಣರಾಗಿರುವವರು ೨೫ ಜನ ಇದ್ದಾರೆ. ಪದವಿ ಶಿಕ್ಷಣ ಮುಗಿಸಿರುವವರು ೪೨ ಉತ್ತೀರ್ಣ ಮತ್ತು ಅನುತ್ತೀರ್ಣ ಜನ ಇದ್ದರೆ, ಬಳ್ಳಾರಿ ಜಿಲ್ಲೆಯಲ್ಲಿ ಪಿ.ಯು.ಸಿ. ೮, ಪದವಿ ೪೫ (ಉತ್ತೀರ್ಣ ಮತ್ತು ಅನುತ್ತೀರ್ಣ ಸೇರಿ) ವಿದ್ಯಾರ್ಥಿಗಳು ಇದ್ದಾರೆ. ಈ ಅಂಕಿ ಅಂಶಗಳ ಹಿನ್ನೆಲೆಯಲ್ಲಿ ಕಾಲೇಜು ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳ ಜನಾಂಗದ ಮಾದಿಗರ ಸಂಖ್ಯೆ ಕಡಿಮೆ ಎಂದು ತಿಳಿಯಬಹುದಾಗಿದೆ.

### ಉನ್ನತ ಶಿಕ್ಷಣ ಮತ್ತು ಮಾದಿಗರು

ಸ್ವಾತಂತ್ರ್ಯ ಪೂರ್ವದಲ್ಲಿ ಆರಂಭಗೊಂಡ ಕಾಲೇಜು ಶಿಕ್ಷಣ ಸ್ನಾತಕೋತ್ತರ ಶಿಕ್ಷಣಕ್ಕೆ ದಾರಿ ಹಾಕಿಕೊಟ್ಟಿತು. ಮೈಸೂರು ವಿಶ್ವವಿದ್ಯಾನಿಲಯದ(೧೯೧೬) ಸ್ಥಾಪನೆ ಕಾಲೇಜು ಮತ್ತು ಸ್ನಾತಕೋತ್ತರ ಶಿಕ್ಷಣಕ್ಕೆ ಪ್ರೇರಣೆಯಾಗಿತ್ತು. ಇದರ ಆಶ್ರಯದಲ್ಲಿ ಆರಂಭಗೊಂಡ ಉನ್ನತ ಶಿಕ್ಷಣವು ಹೆಚ್ಚು ಮಹತ್ವ ಪಡೆದದ್ದು ಸ್ವಾತಂತ್ರ್ಯಾನಂತರದ ಸಂದರ್ಭದಲ್ಲಿಯೇ. ಕೆಲವು ವಿಷಯಗಳ ಮೇಲೆ ಸ್ನಾತಕೋತ್ತರ ಶಿಕ್ಷಣ ನೀಡಲು ಆರಂಭಿಸಿತು. ಮೊದಲು ಈ ವಿಶ್ವವಿದ್ಯಾಲಯವೊಂದೇ ಉನ್ನತ ಶಿಕ್ಷಣ ನೀಡುವ ಕೇಂದ್ರವಾಗಿದ್ದು ಆನಂತರ ವಿವಿಧ ಭಾಗಗಳಲ್ಲಿ ಅನೇಕ ವಿಶ್ವವಿದ್ಯಾಲಯ ಗಳು ಅಸ್ತಿತ್ವಕ್ಕೆ ಬಂದವು. ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ(೧೯೫೨), ಬೆಂಗಳೂರು ವಿಶ್ವವಿದ್ಯಾಲಯ(೧೯೬೪), ಕೃಷಿ ವಿಶ್ವವಿದ್ಯಾಲಯ(೧೯೬೪-೬೫), ಗುಲ್ಬರ್ಗಾ ವಿಶ್ವವಿದ್ಯಾಲಯ(೧೯೮೦), ಮಂಗಳೂರು ವಿಶ್ವವಿದ್ಯಾಲಯ(೧೯೮೦), ಕುವೆಂಪು ವಿಶ್ವವಿದ್ಯಾಲಯ(೧೯೮೯-೯೦), ಹಾಗೂ ಹಂಪಿ ಕನ್ನಡ ವಿಶ್ವವಿದ್ಯಾಲಯ(೧೯೯೧-೯೨)ಗಳು ಅವಕಾಶ ಮಾಡಿಕೊಟ್ಟವು. ಇಂತಹ ಅವಕಾಶವನ್ನು ಬಳಸಿಕೊಂಡು ಉನ್ನತ ಶಿಕ್ಷಣವನ್ನು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ನೆಲೆಸಿರುವ ಮಾದಿಗ ಜನಾಂಗವು ಯಾವ ಬಗೆಯಲ್ಲಿ ಉನ್ನತ ಶಿಕ್ಷಣದಲ್ಲಿ ಪ್ರಗತಿಯನ್ನು ಸಾಧಿಸಿದೆ ಎಂದು ತಿಳಿಯಲು ಇಲ್ಲಿ ಪ್ರಯತ್ನಿಸಲಾಗಿದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಸ್ನಾತಕೋತ್ತರ ಪದವಿ ಶಿಕ್ಷಣ ಪಡೆಯಲು ಈ ಜನಾಂಗ ಮುಂದಾಗಿದ್ದು ೭೦ರ ದಶಕದಲ್ಲಿ. ಈ ಅವಧಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದವರು ಚಿತ್ರದುರ್ಗ, ಹಿರಿಯೂರು, ಸಿಂಗಾಪುರ, ತೋರಣಗಟ್ಟ, ರಾಮಗಿರಿ ಮುಂತಾದ ಕಡೆಗಳಲ್ಲಿ ಕೆಲವರು ಕಂಡುಬರುತ್ತಾರೆ. ಮೈಸೂರಿನಲ್ಲಿ ಹಾಸ್ಟಲ್ ವ್ಯವಸ್ಥೆಯನ್ನು ಹೊಂದಿದ್ದರ ಪರಿಣಾಮವಾಗಿ ಇವರು ಅಲ್ಲಿ ಹೋಗಿ ಶಿಕ್ಷಣ ಪಡೆಯಲು ಅವಕಾಶವಾಯಿತು. ಈ ಸೌಲಭ್ಯ ಪಡೆದು ಶಿಕ್ಷಣ ಪಡೆದವರು ಆಗ ಕೇವಲ ಬೆರಳೆಣಿಕೆಯಷ್ಟು ಮಾತ್ರವೇ ಆಗಿದ್ದರು. ಇಂದು ಅನೇಕರು ಮೈಸೂರು, ಬೆಂಗಳೂರು, ಶಿವಮೊಗ್ಗದ ಕುವೆಂಪು ವಿಶ್ವವಿದ್ಯಾಲಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಉನ್ನತ ಶಿಕ್ಷಣ ಪಡೆದು ಹೊರಬಂದಿದ್ದಾರೆ. ಕನ್ನಡ, ಚರಿತ್ರೆ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಇಂಗ್ಲೀಷ್ ಮುಂತಾದ ವಿಷಯಗಳ ಮೇಲೆ ಪದವಿ ಪಡೆದವರು ಚಿತ್ರದುರ್ಗದ ಎಲ್ಲಾ ತಾಲ್ಲೂಕುಗಳಲ್ಲಿಯೂ ಕಂಡುಬರುತ್ತಾರೆ. ಹೊರ ರಾಜ್ಯಕ್ಕೆ ಹೋಗಿ ಶಿವಾಜಿ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಶಿಕ್ಷಣ ಪಡೆದ ೨೦ ಕ್ಕೂ ಹೆಚ್ಚು ಜನರು ಈ ಜನಾಂಗದಲ್ಲಿ ಕಂಡುಬರುತ್ತಾರೆ. ಆದರೆ ಸ್ನಾತಕೋತ್ತರ ಪಡೆದವರಲ್ಲಿ ಹೆಚ್ಚು ಜನ ಪುರುಷರು. ಸ್ನಾತಕೋತ್ತರ ಪದವಿ ಶಿಕ್ಷಣ ಪಡೆದ ಮಹಿಳೆಯರ ಸಂಖ್ಯೆ ಅತ್ಯಂತ ಕಡಿಮೆ. ಅಧ್ಯಯನಕ್ಕೊಳಪಡಿಸಿದ ಈ ಜಿಲ್ಲೆಯ ೨೫ ಗ್ರಾಮಗಳಲ್ಲಿ ಉನ್ನತ ಶಿಕ್ಷಣ ಪಡೆದ ಪುರುಷರ ಸಂಖ್ಯೆ ೭. ಆದರೆ ಮಹಿಳೆಯರು ಒಬ್ಬರು ಮಾತ್ರವೇ ಕಂಡುಬರುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಒಟ್ಟು ಸ್ನಾತಕೋತ್ತರ ಪದವಿ ಪಡೆದಿರುವವರ ಸಂಖ್ಯೆ ೧೦೦ಕ್ಕೂ ಹೆಚ್ಚು ಜನರು ಈ ಜನಾಂಗದಲ್ಲಿ ಕಾಣಸಿಗುತ್ತಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಸ್ನಾತಕೋತ್ತರ ಶಿಕ್ಷಣ ಪಡೆಯಲು ಈ ಜನಾಂಗ ಮುಂದಾಗಿದ್ದು ೭೦ ರ ದಶಕದಲ್ಲಿ ಎನ್ನಬಹುದಾಗಿದ್ದರೂ. ಆ ಅವಧಿಯಲ್ಲಿ ಸ್ನಾತಕೋತ್ತರ ಪದವಿ ಪಡೆದವರ ಸಂಖ್ಯೆ ಅತ್ಯಂತ ಕಡಿಮೆ. ಈ ಅವಧಿಯಲ್ಲಿ ಸ್ನಾತಕೋತ್ತರ ಶಿಕ್ಷಣ ಪಡೆದವರಲ್ಲಿ ರಾಮಗಿರಿಯಲ್ಲಿ ಒಬ್ಬರು ಕಂಡುಬರುತ್ತಾರೆ. ಅನಂತರದಲ್ಲಿ ೯೦ ರ ದಶಕದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಈ ಶಿಕ್ಷಣ ಪಡೆದವರು ಕಂಡುಬರುತ್ತಾರೆ. ಅದರಲ್ಲೂ ಗುಲ್ಬರ್ಗಾ ವಿಶ್ವವಿದ್ಯಾಲಯವು, ಸಂಡೂರಿನ ಬಳಿ ನಂದಿಹಳ್ಳಿಯಲ್ಲಿ ಸ್ಥಾಪನೆ ಮಾಡಿದ ಸ್ನಾತಕೋತ್ತರ ಕೇಂದ್ರದ ಅನುಕೂಲತೆಯಿಂದಾಗಿ ಈ ಜನಾಂಗದಲ್ಲಿ ೫೦ಕ್ಕೂ ಹೆಚ್ಚು ಜನರು ಕನ್ನಡ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವುದು ಕಂಡುಬರುತ್ತದೆ. ಅಧ್ಯಯನಕ್ಕೊಳಪಡಿಸಿದ ಈ ಜಿಲ್ಲೆಯ ೧೬ ಹಳ್ಳಿಗಳಲ್ಲಿ ಸ್ನಾತಕೋತ್ತರ ಪಡೆದ ೬, ಪುರುಷರು ಮಹಿಳೆ ಒಬ್ಬರು ೧ ಮಾತ್ರವೇ ಕಂಡುಬರುತ್ತಾರೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಈ ಜಿಲ್ಲೆಯಲ್ಲಿಯೂ ಮಹಿಳೆಯರು ಸ್ನಾತಕೋತ್ತರ ಶಿಕ್ಷಣ ಪಡೆದಿರುವವರು ಕಡಿಮೆ.

ಉನ್ನತ ಶಿಕ್ಷಣ ಮಾತ್ರವಲ್ಲದೆ ಅನೇಕ ವೃತ್ತಿಪರ ಕೋರ್ಸ್‌ಗಳ ಶಿಕ್ಷಣವನ್ನು ಸಹ ಈ ಜನಾಂಗದವರು ಪಡೆದುಕೊಂಡಿರುವುದು ಕಂಡುಬರುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ೧೯೯೯

೨೦೦೧ರ ಅವಧಿಯಲ್ಲಿ ಬಿ.ಎಡ್, ಟಿ.ಸಿ.ಎಚ್, ಡಿಪ್ಲೋಮ ಮುಂತಾದ ಕೋರ್ಸ್‌ಗಳಿಗೆ ಪ್ರವೇಶ ಪಡೆಯಲು ಸಿಂಧುತ್ವ ಪ್ರಮಾಣಕ್ಕೆ ಅರ್ಜಿ ಸಲ್ಲಿಸಿದವರಲ್ಲಿ ಮಾದಿಗ ಜನಾಂಗದ ೧೨೯ ವಿದ್ಯಾರ್ಥಿಗಳು ಕಂಡು ಬರುತ್ತಾರೆ. ಅಧ್ಯಯನಕ್ಕೊಳಪಡಿಸಿದ ಈ ಜಿಲ್ಲೆಯ ೨೩ ಹಳ್ಳಿಗಳಲ್ಲಿ ಟಿ.ಸಿ.ಎಚ್ ಮಾಡಿದವರು ೨೧, ಐಟಿಐ ೫, ಜೆಒಸಿ ೨ ಹಾಗೂ ಬಿ.ಎಡ್ ಮಾಡಿರುವವರು ೩ ಜನ ಕಂಡುಬಂದರೆ, ಬಳ್ಳಾರಿ ಜಿಲ್ಲೆಯ ೧೬ ಹಳ್ಳಿಗಳಲ್ಲಿ ಐಟಿಐ ೫, ಟಿ.ಸಿ.ಎಚ್. ೧, ಹಾಗೂ ಬಿ.ಎಡ್ ೧ ಎಂಬುದಾಗಿ ಕಂಡುಬಂದಿದೆ. ಈ ಹಿನ್ನೆಲೆಯಲ್ಲಿ ತರಬೇತಿ ಶಿಕ್ಷಣವನ್ನು ಪಡೆದ ಅನೇಕರು ಈ ಎರಡು ಜಿಲ್ಲೆಗಳಲ್ಲೂ ಇರುವರು.

## ೫.೩. ಮಾದಿಗರ ಶೈಕ್ಷಣಿಕ ಅಭಿವೃದ್ಧಿಯಲ್ಲಿ ವಿದ್ಯಾರ್ಥಿನಿಲಯಗಳ ಪಾತ್ರ

ಮಾದಿಗ ಜನಾಂಗವು ಶೈಕ್ಷಣಿಕ ಪ್ರಗತಿಯ ಸಾಧಿಸುವಲ್ಲಿ ಸರ್ಕಾರ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳು ಸ್ಥಾಪಿಸಿದ ವಿದ್ಯಾರ್ಥಿನಿಲಯಗಳ ಪಾತ್ರ ಗಮನಾರ್ಹ. ಆರ್ಥಿಕವಾಗಿ ತೀರ ಹಿಂದುಳಿದು ಕಡು ಬಡತನದಲ್ಲಿ ಬದುಕುತ್ತಿದ್ದ ಕೆಳ ಜಾತಿಗಳಿಗೆ ತಮ್ಮ ಮಕ್ಕಳನ್ನು ಶಿಕ್ಷಣಕ್ಕೆ ಕಳುಹಿಸಲು ಪ್ರೇರಣೆ ಹಾಸ್ಟಲ್‌ಗಳಾಗಿವೆ. ಅಸ್ಪೃಶ್ಯರಿಗೆ ಶಿಕ್ಷಣ ಕಲಿಯಲು ಅವಕಾಶ ನೀಡಿದ ನಂತರದಲ್ಲಿ ಇವರಿಗಾಗಿ ಪಂಚಮ ಶಾಲೆಗಳು ಆರಂಭಗೊಂಡವು. ಆದರೆ ಇಂತಹ ಶಾಲೆಗಳು ಬೆರಳೆಣಿಕೆಯಷ್ಟು ಮಾತ್ರವೇ ಇದ್ದವು. ಈ ಶಾಲೆಗಳು ಸ್ಥಾಪಿತಗೊಂಡ ಪ್ರದೇಶದಲ್ಲಿ ನೆಲೆಸಿರುವ ಈ ವರ್ಗದ ಮಕ್ಕಳು ವಿದ್ಯಾಭ್ಯಾಸ ಮಾಡಲು ಮುಂದಾದರು. ಆದರೆ ಉಳಿದ ಪ್ರದೇಶಗಳಲ್ಲಿ ನೆಲೆಸಿರುವವರು ತಮ್ಮ ಮಕ್ಕಳನ್ನು ಪರಸ್ಥಳಕ್ಕೆ ಕಳುಹಿಸಿ ವಿದ್ಯಾಭ್ಯಾಸ ಮಾಡಿಸಲು ಸಾಧ್ಯವಾಗುತ್ತಿರಲಿಲ್ಲ ಅದಕ್ಕೆ ಕಾರಣವೂ ಇತ್ತು. ಸರ್ಕಾರ ಇವರಿಗೆ ಶಿಕ್ಷಣ ಕಲಿಯಲು ಅನೇಕ ರಿಯಾಯಿತಿಗಳನ್ನು ನೀಡಿದ್ದರು. ಬೇರೆ ಸ್ಥಳಕ್ಕೆ ತಮ್ಮ ಮಕ್ಕಳನ್ನು ಕಳುಹಿಸುವಷ್ಟು ಆರ್ಥಿಕ ಸಾಮರ್ಥ್ಯದ ಜೊತೆಯಲ್ಲಿ ಸಾಮಾಜಿಕ ಸ್ಥಿತಿ ಇನ್ನೂ ಸುಧಾರಿಸಿರಲಿಲ್ಲ. ಈ ಪರಿಸ್ಥಿತಿಯನ್ನು ಮನಗಂಡ ಜಾಗೃತ ಅಸ್ಪೃಶ್ಯರು ಸರ್ಕಾರಕ್ಕೆ ಮನವಿ ನೀಡಿ ಇವರಿಗಾಗಿ ಪ್ರತ್ಯೇಕ ಹಾಸ್ಟಲ್ ನಡೆಸಲು ಕೇಳಿಕೊಂಡಾಗ ಅದಕ್ಕೆ ಅವಕಾಶ ಮಾಡಿಕೊಡಲಾಯಿತು. ಆಗ ಮೊದಲು ಇವರಿಗಾಗಿಯೇ ಪ್ರತ್ಯೇಕ ಹಾಸ್ಟಲ್‌ಗಳು ಆರಂಭಗೊಂಡವು. ಅಲ್ಲಿ ಊಟ, ಬಟ್ಟೆ, ವಸತಿ ವ್ಯವಸ್ಥೆಯನ್ನು ನೀಡಲು ಮುಂದಾದಾಗ ಈ ವರ್ಗದ ಜನರು ತಮ್ಮ ಮಕ್ಕಳನ್ನು ಶಿಕ್ಷಣ ಕಲಿಯಲು ಹಾಸ್ಟಲ್‌ಗೆ ಸೇರಿಸಲು ಮುಂದಾದರು. ಅಲ್ಲಿಂದ ಹಾಸ್ಟಲ್‌ಗಳ ಚರಿತ್ರೆ ಆರಂಭಗೊಳ್ಳುತ್ತದೆ. ಒಂದೊಮ್ಮೆ ಈ ವರ್ಗದ ಮಕ್ಕಳಿಗಾಗಿಯೇ ಸ್ಥಾಪಿತಗೊಂಡ ಸಮೂದಾಯ ಹಾಸ್ಟಲ್‌ಗಳು ಇಂದು ಸಾರ್ವಜನಿಕ ಹಾಸ್ಟಲ್‌ಗಳಾಗಿ ಪರಿವರ್ತನೆಗೊಂಡು ಆ ಹಾಸ್ಟಲ್‌ನ ಸಂಖ್ಯೆಯಲ್ಲಿ ಶೇ ೭೫ ರಷ್ಟು ಪರಿಶಿಷ್ಟ ಜಾತಿಯವರಿಗೆ ಉಳಿದ ಶೇ ೨೫ ರಷ್ಟು ಇತರೆಯವರಿಗೆ ನೀಡಲಾಗುತ್ತಿದೆ. ಆದರೆ ಇಂದಿಗೂ ಅಂತಹ ಹಾಸ್ಟಲ್‌ಗಳಲ್ಲಿ ಮಾದಿಗರೇ ಹೆಚ್ಚಿನ ಸಂಖ್ಯೆಯಲ್ಲಿ ಇರುವುದು ಕಂಡುಬರುತ್ತದೆ. ಸ್ವಾತಂತ್ರ್ಯ

ಪೂರ್ವದಲ್ಲಿ ಕೇವಲ ಬೆರಳೆಣಿಕೆಯಷ್ಟು ವಿದ್ಯಾರ್ಥಿನಿಲಯಗಳು ಇದ್ದು ಸ್ವಾತಂತ್ರ್ಯನಂತರದ ಸುಮಾರು ೭೦ ರ ದಶಕದವರೆಗೂ ಅವುಗಳ ಸಂಖ್ಯೆ ಕಡಿಮೆ. ಆನಂತರದಲ್ಲಿ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟು ಜನರ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಡಲು ಅನೇಕ ವಿದ್ಯಾರ್ಥಿನಿಲಯಗಳು ಸರ್ಕಾರ ಮತ್ತು ಖಾಸಗಿಯವರ ಪ್ರಯತ್ನದಿಂದ ಹೆಚ್ಚು ಸ್ಥಾಪಿತಗೊಂಡವು. ಇಂತಹ ಪ್ರಯತ್ನಗಳ ಫಲವಾಗಿ ಇಂದು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿನಿಲಯಗಳು ಪಟ್ಟಣ ಪ್ರದೇಶಗಳಲ್ಲಿ ಮಾತ್ರವಲ್ಲದೆ ಗ್ರಾಮೀಣ ಪ್ರದೇಶದಲ್ಲಿಯೂ ಸ್ಥಾಪಿತಗೊಂಡಿವೆ. ಈ ರೀತಿಯ ಹಾಸ್ಟಲ್‌ಗಳು ಈ ಭಾಗದಲ್ಲಿ ಪರಿಶಿಷ್ಟ ಜಾತಿಯ ಇತರೆ ಜನಾಂಗಗಳಿಗಿಂತಲೂ ಹೆಚ್ಚಿನ ಸಂಖ್ಯೆಯ ನೆಲೆಸಿರುವ ಮಾದಿಗ ಜನಾಂಗವು ಶೈಕ್ಷಣಿಕ ಪ್ರಗತಿಯನ್ನು ಸಾಧಿಸುವಲ್ಲಿ ಪ್ರಮುಖ ಪಾತ್ರ ವಹಿಸಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಈ ಎರಡು ಜಿಲ್ಲೆಗಳಲ್ಲಿ ಸ್ಥಾಪನೆಗೊಂಡ ವಿದ್ಯಾರ್ಥಿನಿಲಯಗಳನ್ನು ಎರಡು ಭಾಗವಾಗಿ ವಿಂಗಡಿಸಿ ಇಲ್ಲಿ ಚರ್ಚಿಸಲಾಗಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಸ್ಥಾಪಿತಗೊಂಡ ವಿದ್ಯಾರ್ಥಿನಿಲಯಗಳು

ಸ್ವತಂತ್ರ್ಯ ಪೂರ್ವದಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಜಾಗೃತ ಮಾದಿಗ ಜನಾಂಗದ ಮುಖಂಡರು ಇತರೆ ಜನಾಂಗದ ಮುಖಂಡರ ಸಹಕಾರದೊಂದಿಗೆ ಹಾಸ್ಟಲ್ ಸ್ಥಾಪನೆಮಾಡಿರುವುದು ಕಂಡುಬರುತ್ತದೆ. ದೊಡ್ಡ ಸಿದ್ದವ್ವನಹಳ್ಳಿ ಆಟದ ಪೆನ್ನಯ್ಯನವರು ೧೯೨೫ರಲ್ಲಿ ಬೆಟ್ಟದ ನಾಗಯ್ಯ ಹಾಗೂ ಎಸ್.ವಿ.ಹನುಮಂತರಾಜು ಇವರುಗಳ ಸಹಾಯ ಸಹಕಾರದಿಂದ ಆದಿ ಕರ್ನಾಟಕ ಪಂಚಮ ಅಸೋಸಿಯೇಷನ್ ಸ್ಥಾಪಿಸಿ ಮುಂದೆ ಅವರ ಆಶ್ರಯದಲ್ಲಿಯೇ ೧೯೩೨ ರಲ್ಲಿ ಚಿತ್ರದುರ್ಗದಲ್ಲಿ ಹರಿಜನ ಹಾಸ್ಟಲ್ ಸ್ಥಾಪಿಸಿದರ[೪೫] ಈ ರೀತಿ ಹಾಸ್ಟಲ್ ಸ್ಥಾಪನೆಯು ಈ ಜಿಲ್ಲೆಯಲ್ಲಿ ಮಾದಿಗ ಜನಾಂಗದ ಅನೇಕರು ಶಿಕ್ಷಣ ಕಲಿಯಲು ಅನುಕೂಲಮಾಡಿಕೊಟ್ಟಿದೆ. ಈ ಜಿಲ್ಲೆಯಲ್ಲಿ ಪಂಚಮರಿಗಾಗಿ ತೆರೆದ ಮೊದಲ ಹಾಸ್ಟಲ್ ಇದು. ಸ್ವಾತಂತ್ರ್ಯಪೂರ್ವದ ಬಳ್ಳಾರಿಯು ಮದ್ರಾಸ್ ಪ್ರಾಂತ್ಯದಲ್ಲಿದ್ದು ಆ ಜಿಲ್ಲೆಯಲ್ಲಿ ಸತ್ಯವಂತರಾವ್ ಮಲೆಬೆನ್ನೂರು ಎಂಬುವರು ಬಳ್ಳಾರಿ ನಗರದ ಮಿಲ್ಲರ್ ಪೇಟೆಯಲ್ಲಿ ೧೯೪೯ ರಲ್ಲಿ ಹರಿಜನ ಬಾಲಕಿಯರಿಗಾಗಿ ಹಾಸ್ಟಲ್ ತೆರೆದರ[೪೬] ಈ ಅಂಶವು ಚಿತ್ರದುರ್ಗಕ್ಕಿಂತಲೂ ಬಳ್ಳಾರಿ ಜಿಲ್ಲೆಯಲ್ಲಿ ಈವರ್ಗದ ವಿದ್ಯಾರ್ಥಿಗಳಿಗೆ ಅದರಲ್ಲೂ ಮಹಿಳೆಯರಿಗಾಗಿ ಮೊದಲು ಹಾಸ್ಟಲ್ ತೆರೆದಿರುವುದನ್ನು ತಿಳಿಸುತ್ತದೆ. ಈ ರೀತಿಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಸರ್ಕಾರದ ಅನುದಾನದಿಂದ ಮಾದಿಗರ ಮತ್ತು ಇತರೆಯವರ ಸಹಾಯ ಸಹಕಾರದಿಂದ ಅಸ್ಪೃಶ್ಯರು ಶಿಕ್ಷಣ ಕಲಿಯಲು ಅನುಕೂಲವಾಗಿದ್ದರಿಂದ ಆ ಸಂದರ್ಭದಲ್ಲಿ ವಿದ್ಯೆ ಕಲಿತವರ ಸಂಖ್ಯೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಾದಿಗರು ಇರುವರು. ಆದರೆ ಅತ್ಯಂತ ಕಡಿಮೆ ಸಂಖ್ಯೆಯ ಮಾದಿಗರು ಮಾತ್ರವೇ ವಿದ್ಯಾಭ್ಯಾಸ ಮಾಡಲಾಗಿದೆ. ಇದಕ್ಕೆ ಕಾರಣಗಳು ಇಲ್ಲದಿಲ್ಲ. ಆಗ ಈ ಜನಾಂಗದಲ್ಲಿದ್ದ ಅನಕ್ಷರತೆ, ಮೌಢ್ಯತೆ ತುಂಬಿದ್ದರಿಂದ ಶಿಕ್ಷಣ ಕಲಿತು ಏನಾಗಬೇಕು ಎಂಬ

ಅಭಿಪ್ರಾಯ ಇವರಲ್ಲಿತ್ತು. ಅಲ್ಲದೇ ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಕಳುಹಿಸಲು ಆರಂಭಿಸುತ್ತಿದ್ದಂತೆ ಮೇಲು ಜಾತಿಗಳ ವಕ್ರದೃಷ್ಟಿ ಅವರ ಮೇಲೆ ಬೀಳುತ್ತಿತ್ತು. ಈ ಕಾರಣಗಳಿಂದಾಗಿ ಅವರು ಶಿಕ್ಷಣ ಕಲಿಯಲು ತಮ್ಮ ಮಕ್ಕಳನ್ನು ಕಳುಹಿಸಲು ಮುಂದಾಗಲಿಲ್ಲ. ಅವರಲ್ಲಿಯೇ ಕೆಲವರು ತಮ್ಮ ಮಕ್ಕಳನ್ನು ವಿದ್ಯಾಭ್ಯಾಸ ಮಾಡಿಸಲು ಕಳುಹಿಸಿದರು.

ಸ್ವಾತಂತ್ರ ಚಳವಳಿಯ ಕಾಲದಲ್ಲಿ ಅದರಲ್ಲೂ 'ಪೂನಾ ಒಪ್ಪಂದ' ದ ನಂತರದಲ್ಲಿ ಅಸ್ಪೃಶ್ಯರ ಬಗ್ಗೆ ಹೆಚ್ಚಿನ ಗಮನಹರಿಸಿ ಅವರ ಅಭಿವೃದ್ಧಿಗೆ ಶ್ರಮಿಸಲು ಗಾಂಧಿ ಮತ್ತು ಕಾಂಗ್ರೆಸ್ ಮುಂದಾಯಿತು. ಅದಕ್ಕೂ ಮೊದಲು ಈ ರಾಜ್ಯದ ರಾಜಧಾನಿ ಬೆಂಗಳೂರಿನಲ್ಲಿ "ಆದಿ ಜಾಂಬವ ವಿದ್ಯಾರ್ಥಿ ನಿಲಯ ೧೯೩೦ರಲ್ಲಿ ಅಯ್ಯರ್ ಅವರಿಂದ ಆರಂಭಗೊಂಡಿತು. ಆದರೆ ೧೯೩೪ ರಲ್ಲಿ ಗಾಂಧೀಜಿ ಶಿಲಾನ್ಯಾಸ ಮಾಡಿದ ನಂತರ ಬಾಪೂ ಅವರ ಹೆಸರನ್ನು ಧರಿಸಿತು.[೪೭] ಅಂದರೆ ಬಾಪೂಜಿ ವಿದ್ಯಾ ಸಂಸ್ಥೆಯಂದೇ ಹೆಸರಾಗಿದೆ. ಈ ಹಾಸ್ಟಲ್‌ನಲ್ಲಿ ಚಿತ್ರದುರ್ಗ ಜಿಲ್ಲೆಯ ಅನೇಕರು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಈ ಹಾಸ್ಟಲ್‌ನಲ್ಲಿ ಸೇರಿಕೊಂಡು ವಿದ್ಯಾಭ್ಯಾಸ ಮಾಡಿದ್ದಾರೆ. ಈ ರೀತಿ ಬೆಂಗಳೂರಿನಲ್ಲಿ ಸ್ಥಾಪನೆಗೊಂಡ ಆದಿಜಾಂಬವರ ವಿದ್ಯಾರ್ಥಿ ನಿಲಯದ ಸ್ಥಾಪನೆಯ ಕಾಲದಲ್ಲಿಯೇ ಪ್ರತಿ ಜಿಲ್ಲಾ ಕೇಂದ್ರಗಳಲ್ಲಿ (ಮಂಡ್ಯ ಮತ್ತು ಚಿತ್ರದುರ್ಗವನ್ನು ಬಿಟ್ಟು) ೧೯೩೩-೪೪ ರ ವೇಳೆಗೆ ಊಟದ ವ್ಯವಸ್ಥೆಯನ್ನು ಹೊಂದಿದ ಒಂದು ಶಾಲೆಯೇ ಅಥವಾ ಸರ್ಕಾರಿ ವಿದ್ಯಾರ್ಥಿನಿಲಯವೋ ಆರಂಭಿಸಲ್ಪಟ್ಟವು.[೪೮] ಇವು ಬೇರೆ ಭಾಗದಲ್ಲಿರುವ ಅನೇಕ ಅಸ್ಪೃಶ್ಯರಿಗೆ ವಿದ್ಯಾಭ್ಯಾಸ ಮಾಡಲು ಅನುಕೂಲ ಮಾಡಿಕೊಟ್ಟವು. ೧೯೩೪ರ ವೇಳೆಯಲ್ಲಿಯೇ ಚಿತ್ರದುರ್ಗ ಜಿಲ್ಲೆಯಲ್ಲಿ ಮತ್ತೊಂದು ಹಾಸ್ಟಲ್ ಸ್ಥಾಪನೆಗೊಂಡಿರುವುದು ಕಂಡುಬರುತ್ತದೆ. ದಾವಣಗೆರೆಯಲ್ಲಿ ಮಹಾತ್ಮಗಾಂಧಿಯವರಿಂದ ೧೯೩೪ರಲ್ಲಿ ಶಂಕು ಸ್ಥಾಪನೆಗೊಂಡು ಮಹಾತ್ಮಾಗಾಂಧಿ ಹಾಸ್ಟಲ್ (ಎಂ.ಜಿ.ಹಾಸ್ಟಲ್ ಎಂದೇ ಖ್ಯಾತಿ ಹೊಂದಿದೆ) ಎಂದು ಕರೆಸಿಕೊಂಡಿದೆ. ಇದು ಕೂಡ ಈ ಜಿಲ್ಲೆಯಲ್ಲಿ ಮಾದಿಗ ಜನಾಂಗದವರ ವಿದ್ಯಾಭ್ಯಾಸಕ್ಕೆ ಹೆಚ್ಚು ಅನುಕೂಲ ಮಾಡಿಕೊಟ್ಟಿದೆ. ಈ ರೀತಿಯಲ್ಲಿ ಚಿತ್ರದುರ್ಗ ಜಿಲ್ಲೆಯ ಹಾಸ್ಟಲ್‌ಗಳಲ್ಲಿ ವಿದ್ಯಾಭ್ಯಾಸ ಮಾಡಿದ ಅನೇಕರು ಪ್ರಮುಖ ರಾಜಕಾರಿಣಿಗಳು ಮತ್ತು ಅಧಿಕಾರಿಗಳು ಆಗಿಹೋಗಿದ್ದಾರೆ. ಮಾದಿಗ ಜನಾಂಗಕ್ಕೆ ಸೇರಿದ ಡಿ.ಮಂಜುನಾಥ್, ದುಗ್ಗಪ್ಪ, ಚೌಡಪ್ಪ, ಬಿ.ಎಂ.ತಿಪ್ಪೇಸ್ವಾಮಿ,ಶ್ಯಾಮಣ್ಣ ಮುಂತಾದವರ ಉನ್ನತ ವಿದ್ಯಾಭ್ಯಾಸ ಮಾಡಿದ ಹಾಸ್ಟಲ್ ಇದಾಗಿದೆ. ಶಿಕ್ಷಣ ಪಡೆಯಲು ಬೆಂಗಳೂರಿನ ಆದಿಜಾಂಬವ ಹಾಸ್ಟಲ್ ಸಹ ಸೇರಿಕೊಂಡು ವಿದ್ಯಾಭ್ಯಾಸ ಮಾಡಿದವರಲ್ಲಿ ಚಿತ್ರದುರ್ಗ ಜಿಲ್ಲೆಯ ಮಾದಿಗರನೇಕರು ಉಂಟು.

ಮೈಸೂರು ಪ್ರಾಂತದಲ್ಲಿ ನಿಮ್ನವರ್ಗದವರ ಕಲ್ಯಾಣಕ್ಕೋಸ್ಕರ ಒಂದು ಸಲಹಾ ಸಮಿತಿ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರ ಅಧ್ಯಕ್ಷತೆಯಲ್ಲಿ ೧೯೩೫ ರಲ್ಲಿ ಅಸ್ತಿತ್ವಕ್ಕೆ ಬಂದಿತು. ನಿಮ್ನ ವರ್ಗದ ಜನಗಳೂ ಇತರರೂ ಈ ಸಮಿತಿಯ ಸದಸ್ಯರಾಗಿದ್ದರು. ವರ್ಷಕ್ಕೆ ಮೂರು ಬಾರಿ ಈ ಸಲಹಾ

ಸಮಿತಿ ಸಭೆ ಸೇರಿ ನಿಮ್ನ ವರ್ಗಗಳ ಸಮಸ್ಯೆಗಳನ್ನು ಕುರಿತು ಚರ್ಚಿಸುತ್ತಿತ್ತು. ರಾಜ್ಯದಲ್ಲಿ ಈ ವರ್ಗದ ಶಿಕ್ಷಣಕ್ಕೆ ಸಂಬಂಧಿಸಿದಂತೆ ಸಲಹೆಗಳನ್ನು, ಕಾಯಿದೆಗಳನ್ನು ಕುರಿತ ಪ್ರಶ್ನೆಗಳ ಬಗೆಗೆ ಅಭಿಪ್ರಾಯವನ್ನು ವ್ಯಕ್ತಪಡಿಸುವ ಕಾರ್ಯ ಸಲಹಾ ಸಮಿತಿಯದಾಗಿತ್ತು.[೪೯] ಈ ರೀತಿಯಲ್ಲಿ ನಿಮ್ನ ವರ್ಗದ ಶಿಕ್ಷಣಕ್ಕಾಗಿ ಹಲವು ರೀತಿಯಲ್ಲಿ ಸರ್ಕಾರ ಪ್ರಯತ್ನಿಸುತ್ತಿತ್ತೆಂದು ತಿಳಿದುಬರುತ್ತದೆ.

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ಪಟ್ಟಣ ಪ್ರದೇಶದಲ್ಲಿ ಈ ಭಾಗದ ಮಾದಿಗರ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಡಬೇಕೆನ್ನುವ ಉದ್ದೇಶದಿಂದ ಮಾದಿಗ ಜನಾಂಗದ ಮುಖಂಡರಾದ ಹೆಚ್. ಆರ್. ತಿಪ್ಪಯ್ಯ, ಪಿ.ರಂಗಪ್ಪ, ಗಂಗಪ್ಪ ಮುಂತಾದವರು ಈ ನಿಟ್ಟಿನಲ್ಲಿ ಪ್ರಯತ್ನಿಸಿಡಿದರು. ಆ ಪ್ರಯತ್ನದ ಫಲವಾಗಿ ಆದಿಜಾಂಬವ ವಿದ್ಯಾ ಸಂಸ್ಥೆ ಆರಂಭಗೊಂಡು ಅದರಡಿಯಲ್ಲಿ ಆದಿಜಾಂಬವ ವಿದ್ಯಾರ್ಥಿ ನಿಲಯವೊಂದು ಹಿರಿಯೂರಲ್ಲಿ ಸ್ಥಾಪನೆಗೊಂಡಿತು. ಈ ಹಾಸ್ಟಲ್ ಸ್ಥಾಪನೆ ಹಿರಿಯೂರು ತಾಲ್ಲೂಕಿನ ಮಾದಿಗ ಜನಾಂಗದವರಿಗೆ ಶಿಕ್ಷಣ ಪಡೆಯಲು ತುಂಬಾ ಅನುಕೂಲ ಮಾಡಿಕೊಟ್ಟಿದೆ. ಈ ರೀತಿಯಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಚಿತ್ರದುರ್ಗ, ದಾವಣಗೆರೆ, ಹಿರಿಯೂರು ಪಟ್ಟಣಗಳಲ್ಲಿನ ಹಾಸ್ಟಲ್‌ಗಳು ಮತ್ತು ಬಳ್ಳಾರಿಯಲ್ಲಿ ಸ್ಥಾಪನೆಗೊಂಡ ಬಾಲಕಿಯರ ಹಾಸ್ಟಲ್ ಸ್ಥಾಪನೆ ಮಾದಿಗ ಜನಾಂಗದ ಬಾಲಕ-ಬಾಲಕಿಯರು ವಿದ್ಯಾಭ್ಯಾಸ ಮಾಡಲು ಪ್ರಮುಖ ಪಾತ್ರವಹಿಸಿವೆ.

**ಸ್ವಾತಂತ್ರ್ಯನಂತರದ ವಿದ್ಯಾರ್ಥಿ ನಿಲಯಗಳು**

ಸ್ವಾತಂತ್ರ್ಯ ನಂತರದಲ್ಲಿ ಸರ್ಕಾರವು ಅಸ್ಪೃಶ್ಯರ ಕಲ್ಯಾಣಕ್ಕಾಗಿ ವಿವಿಧ ಕಾರ್ಯಕ್ರಮಗಳನ್ನು ರೂಪಿಸಿತು. ಇವರು ಅಭಿವೃದ್ಧಿಗೆ ಸಂಬಂಧಿಸಿದಂತೆ ಪಂಚವಾರ್ಷಿಕ ಯೋಜನೆಗಳಲ್ಲಿ ವಿಶೇಷ ಮಹತ್ವ ನೀಡಿದ್ದರಿಂದ ಎಲ್ಲ ಕಡೆಗಳಲ್ಲಿ ಸರ್ಕಾರ ಇವರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಮಹತ್ವ ನೀಡಲಾರಂಭಿಸಿತು. ಈ ಹಿನ್ನೆಲೆಯಲ್ಲಿ ಕರ್ನಾಟಕದ ಹಲವು ಪ್ರದೇಶಗಳಲ್ಲಿ ಹಾಸ್ಟಲ್‌ಗಳು ಸ್ಥಾಪಿತವಾದ ಇದರಿಂದಾಗಿ ೧೯೫೧-೫೨ರಲ್ಲಿ ೧೧ ಸರ್ಕಾರಿ ನಿಮ್ನ ವರ್ಗದ ವಿದ್ಯಾರ್ಥಿ ನಿಲಯಗಳು ಹಾಗೂ ೧,೮೧,೮೯ ರೂ.ಗಳ ಅನುದಾನ ಪಡೆವ ೫೬ ಖಾಸಗಿ ವಿದ್ಯಾರ್ಥಿ ನಿಲಯಗಳೂ ಕಾರ್ಯ ನಿರ್ವಹಿಸುತ್ತಿದ್ದವು.[೫೦] ಆನಂತರದಲ್ಲಿ ಹಳೆಯ ಮೈಸೂರು ಭಾಗದಲ್ಲಿ ೧೯೫೫-೫೬ರಲ್ಲಿದ್ದ ೬೧ ವಿದ್ಯಾರ್ಥಿ ನಿಲಯಗಳ ಪೈಕಿ ೧೧ ಸರ್ಕಾರದಿಂದ ಆರಂಭಿಸಲ್ಪಟ್ಟವು. ಅವುಗಳಲ್ಲಿ ೧೦ ಬಾಲಕರಿಗೂ, ಉಳಿದ ಒಂದು ಬಾಲಕಿಯರಿಗೂ ಸೇರಿತ್ತು. ಇನ್ನುಳಿದ ನಿಲಯಗಳು ಸಹಾಯಧನದ ಮೂಲಕ ನಡೆಯುತ್ತಿದ್ದವು.[೫೧] ಈ ಅಂಶಗಳಿಂದ ಸರ್ಕಾರದ ಮೇಲ್ವಿಚಾರಣೆಗಿಂತಲೂ ಖಾಸಗಿಯವರ ಮೇಲ್ವಿಚಾರಣೆಯಲ್ಲಿ ಸರ್ಕಾರದ ಅನುದಾನದಿಂದ ನಡೆಯುತ್ತಿದ್ದ ಹಾಸ್ಟಲ್‌ಗಳೇ ಹೆಚ್ಚಾಗಿದ್ದುದು ತಿಳಿದುಬರುತ್ತದೆ.

ಸ್ವಾತಂತ್ರ್ಯೋತ್ತರ ಕಾಲದ ಮೈಸೂರು ರಾಜ್ಯದಲ್ಲಿ ಎನ್.ರಾಚಯ್ಯನವರು ವ್ಯವಸಾಯ ಹಾಗೂ ಸಮಾಜ ಕಲ್ಯಾಣ ಸಚಿವರು ಆಗಿದ್ದರು. ಆ ಸಂದರ್ಭದಲ್ಲಿ ಮಾದಿಗ ಜನಾಂಗವು ಆರ್ಥಿಕವಾಗಿ

ಮಾತ್ರವಲ್ಲದೇ ಶೈಕ್ಷಣಿಕವಾಗಿ ಪ್ರಗತಿ ಸಾಧಿಸಲು ಮುಂದಾಗುವಂತೆ ಮಾಡಲು ಅವರು ಮಾಡಿದ ಕಾರ್ಯ ಶ್ಲಾಘನೀಯ. ಅವರ ಕಾಲದ ಭೂಹಂಚಿಕೆ ಅಲ್ಲದೇ ಅನೇಕ ಹಾಸ್ಟಲ್‌ಗಳು ಆರಂಭಗೊಂಡವು. ಅಂತಹ ಹಾಸ್ಟಲ್‌ಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಸ್ಥಾಪನೆಗೊಂಡಿರುವುದು ಕಂಡುಬರುತ್ತದೆ. ಅವುಗಳೆಂದರೆ ಚಳ್ಳಕೆರೆಯ ಆದಿಕರ್ನಾಟಕ ಹಾಸ್ಟಲ್ (೧೯೫೮), ಹೊಸದುರ್ಗದ ಆದಿಜಾಂಬವ ಹಾಸ್ಟಲ್ (೧೯೬೦) ಹಾಗೂ ಹೊಳಲ್ಕೆರೆಯ ಆದಿಜಾಂಬವ ಹರಿಜನ ಹಾಸ್ಟಲ್‌ಗಳು (೧೯೬೧) ಈ ಬಗೆಯ ಹಾಸ್ಟಲ್‌ಗಳ ಸ್ಥಾಪನೆ ಮಾದಿಗ ಜನಾಂಗದ ಶೈಕ್ಷಣಿಕ ಪ್ರಗತಿಗಾಗಿ ಸಾಕಷ್ಟು ಶ್ರಮಿಸಿವೆ. ಏಕೆಂದರೆ ಈ ಹಾಸ್ಟಲ್‌ಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಾದಿಗ ಜನಾಂಗದ ವಿದ್ಯಾರ್ಥಿಗಳೇ ಸೇರುತ್ತಿದ್ದುದು ಮತ್ತು ಇಂದಿಗೂ ಕೂಡ ಮಾದಿಗ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ಈ ರೀತಿಯಲ್ಲಿ ಶ್ರಮಿಸುತ್ತಿರುವ ಹಾಸ್ಟಲ್‌ಗಳಲ್ಲಿ ಒಂದಾದ ಚಳ್ಳಕೆರೆ ಆದಿಕರ್ನಾಟಕ ಹಾಸ್ಟಲ್ ಕಟ್ಟಡದಪ್ರಾರಂಭೋತ್ಸವಕ್ಕೆ ದಿ.೬-೭-೧೯೬೧ ರಂದು ಆಗಮಿಸಿದ್ದ ಸಮಾಜ ಕಲ್ಯಾಣ ಖಾತೆ ಸಚಿವ ಎನ್. ರಾಚಯ್ಯನವರನ್ನು ಅಭಿನಂದಿಸಿದ ಹಾಸ್ಟಲ್ ಕಮಿಟಿ ಅನೇಕ ಬೇಡಿಕೆಗಳನ್ನು ಮನವಿ ಪತ್ರದ ಮೂಲಕ ಭಿನ್ನವಿಸಿಕೊಂಡಿತು. ಕಟ್ಟಡ, ಕಾಂಪೌಂಡ್ ನಿರ್ಮಾಣ, ಹಾಸ್ಟಲ್ ಸಂಖ್ಯೆ ಏರಿಕೆ ಮುಂತಾದ ಅಂಶಗಳನ್ನು ಒಳಗೊಂಡಿದ್ದು ಅವುಗಳಲ್ಲಿ ಬಾಲಕಿಯರಿಗಾಗಿ ಪ್ರತ್ಯೇಕ ಹಾಸ್ಟಲ್ ಮಂಜೂರು ಮಾಡಲು ಸಹ ಮನವಿ ಮಾಡಿಕೊಂಡಿದ್ದುದು ಕಂಡುಬರುತ್ತದೆ.

ಮದ್ರಾಸ್ ಪ್ರಾಂತ್ಯದಲ್ಲಿದ್ದ ಬಳ್ಳಾರಿ ಜಿಲ್ಲೆಯು ೧೯೫೩ರಲ್ಲಿ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಯಿತು. ಅದಕ್ಕೂ ಮುಂಚೆ ಸ್ವಾತಂತ್ರ್ಯನಂತರದಲ್ಲಿ ಅಸ್ಪೃಶ್ಯರ ಕಲ್ಯಾಣಕ್ಕಾಗಿ ಅಲ್ಲಿಯ ಸರ್ಕಾರ ೧೯೪೯ರಲ್ಲಿ ಪ್ರತ್ಯೇಕ ಹರಿಜನ ಕಲ್ಯಾಣ ಇಲಾಖೆ ರಚಿಸಲ್ಪಟ್ಟಿತು. ಅದು ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ಕಲ್ಯಾಣವನ್ನು ಜಿಲ್ಲಾ ಕಲ್ಯಾಣ ಅಧಿಕಾರಿಯೇ(ಜಿಲ್ಲೆಯ ಆಡಳಿತ ಅಧಿಕಾರಿಯನ್ನು ಆ ರೀತಿ ಕರೆಯಲಾಗಿದೆ) ನೋಡಿಕೊಳ್ಳುವಂತಾಯಿತು.[೫೨] ಈ ರೀತಿ ಸ್ಥಾಪನೆಯಾದ ಹರಿಜನ ಕಲ್ಯಾಣ ಇಲಾಖೆಯು ಈ ಭಾಗದ ಜನರ ಕಲ್ಯಾಣಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ನಿರ್ವಹಿಸುತ್ತಾ ಬಂದಿದೆ. ೧೯೫೬ಕ್ಕೆ ಮುನ್ನ ಸೇರ್ಪಡೆಯಾದ ಪ್ರದೇಶದಲ್ಲಿ ಖಾಸಗಿ ಅನುದಾನ ವಸತಿ ನಿಲಯಗಳಿಗೆ ಸರ್ಕಾರ ಭಿನ್ನ ಪ್ರಮಾಣದಲ್ಲಿ ಸಹಾಯವನ್ನು ಮಾಡುತ್ತಿತ್ತು. ೧೯೭೨ರಿಂದ ೩೦ ರೂ.ಗಳ ಒಂದೇ ಪ್ರಮಾಣದ ತಿಂಗಳ ವೆಚ್ಚವನ್ನು ಪ್ರತಿ ವಿದ್ಯಾರ್ಥಿಯು ಊಟಕ್ಕಾಗಿ ಹತ್ತು ತಿಂಗಳ ವೆಚ್ಚವು ೪೦ ರೂಗಳಿಗೆ ಹೆಚ್ಚಿಸಲ್ಪಟ್ಟಿದೆ. ವಸತಿ ನಿಲಯಗಳಲ್ಲಿ ವಿದ್ಯಾರ್ಥಿಗಳ ಊಟದ ವೆಚ್ಚಕ್ಕೆ ೫೦ ರೂ.ಗಳ ಅನುದಾನ ನೀಡಲು ಸರ್ಕಾರ ಮುಂದಾಯಿತು. ಪೀಠೋಪಕರಣ, ಪಾತ್ರೆಗಳು, ಗ್ರಂಥಾಲಯದ ಪುಸ್ತಕಗಳು ಮುಂತಾದ ವೆಚ್ಚಕ್ಕೆಂದು ವಾಪಸ್ಸು ಪಡೆಯದ ಸಹಾಯಧನವನ್ನು ಐದು ವರ್ಷಕ್ಕೊಮ್ಮೆ ಗರಿಷ್ಟ ೧೦೦೦ ರೂ.ಗಳಂತೆ ಖಾಸಗಿ ವಿದ್ಯಾರ್ಥಿ ನಿಲಯಗಳಿಗೆ ಒದಗಿಸಲಾಯಿತು.[೫೩] ಹೀಗೆ ಸರ್ಕಾರ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗಾಗಿ ನಡೆಸುತ್ತಿರುವ ಹಾಸ್ಟಲ್‌ಗಳಿಗೆ ವಿವಿಧ ರೀತಿಯಲ್ಲಿ ಸಹಾಯ ಮಾಡುತ್ತಾ ಬಂದಿದೆ.

ಎರಡನೆಯ ಯೋಜನೆಯ ಮಧ್ಯಭಾಗದಲ್ಲಿ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಪ್ರಾಧನ್ಯತೆ ಕೊಟ್ಟಿದ್ದರಿಂದ ಅನೇಕ ವಸತಿ ನಿಲಯಗಳು ಆರಂಭಿಸಲ್ಪಟ್ಟವು. ಮಾರ್ಚ್ ೩೧ ೧೯೭೪ರ ವೇಳೆಗೆ ಸರ್ಕಾರ ೩೧೦ ವಸತಿನಿಲಯಗಳನ್ನು ಆರಂಭಿಸಿತ್ತು. ಅವುಗಳಲ್ಲಿ ೧೧೦ ಬಾಲಕಿಯರ ವಸತಿ ನಿಲಯಗಳಾಗಿದ್ದವು. ಎಲ್ಲಾ ವಸತಿ ನಿಲಯಗಳಿಂದ ೧೬,೯೬೮ ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆ ಯಾಗಿತ್ತು.[೫೪] ಇಂತಹ ವ್ಯವಸ್ಥೆಯಿಂದ ಕೂಡಿದ್ದ ಹಾಸ್ಟಲ್‌ಗಳಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ವಿದ್ಯಾರ್ಥಿ ನಿಲಯಗಳಲ್ಲಿ ಮಾದಿಗ ಜನಾಂಗದ ಅನೇಕ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸ ಮಾಡಲು ಅನುಕೂಲವಾಗಿದೆ.

ಈ ಹಿಂದೆ ಶಿಕ್ಷಣ ಇಲಾಖೆಯಿಂದ ನಡೆಸಲ್ಪಟ್ಟ ವಸತಿ ನಿಲಯಗಳನ್ನು ೧೯೭೪ನೇ ಸಾಲಿನಿಂದ ಸಮಾಜ ಕಲ್ಯಾಣ ಇಲಾಖೆಗೆ ವರ್ಗಾಯಿಸಲ್ಪಟ್ಟಿದ್ದು ಇವುಗಳನ್ನು ನಿಮ್ನವರ್ಗದ ವಸತಿ ನಿಲಯಗಳ ಬದಲಾಗಿ ಸಾಮಾನ್ಯ ವಸತಿ ನಿಲಯಗಳೆಂದು ಪರಿಗಣಿಸಿ ಶೇಕಡ ೭೫ರಷ್ಟು ವಸತಿಯನ್ನು ಪರಿಶಿಷ್ಟ ಜಾತಿಗಳಿಗೆ ಕೊಡಲಾಗುತ್ತಿದೆ. ಇವುಗಳಿಗೆ ಸಮಾಜ ಕಲ್ಯಾಣ ಇಲಾಖೆಯಿಂದ ಅನುದಾನ ಕೊಡಲಾಗುತ್ತಿದೆ. ೧. ಬೆಂಗಳೂರು(ನಗರ) ೨.ಬೆಂಗಳೂರು(ಗ್ರಾಮಾಂ) ೩.ಚಿತ್ರದುರ್ಗ ೪.ಶಿವಮೊಗ್ಗ ೫.ತುಮಕೂರು ೬.ಕೋಲಾರ ೭.ಮೈಸೂರು ೮.ದಕ್ಷಿಣ ಕನ್ನಡ ೯.ಹಾಸನ ೧೦.ಮಂಡ್ಯ ೧೧.ಬಿಜಾಪುರ ೧೨.ರಾಯಚೂರು ಈ ಜಿಲ್ಲೆಗಳಲ್ಲಿ ಒಟ್ಟು ೫೫ ನಿಮ್ನ ವರ್ಗದ ವಿದ್ಯಾರ್ಥಿ ನಿಲಯಗಳನ್ನು ಸಮಾಜ ಕಲ್ಯಾಣ ಇಲಾಖಾವತಿಯಿಂದ ನಡೆಸಲಾಗುತ್ತಿದೆ.[೫೫] ಅಲ್ಲಿಂದ ನಿಮ್ನ ವರ್ಗಗಳಿಗಾಗಿಯೇ ಸ್ಥಾಪನೆಗೊಂಡ ಶಾಲೆಗಳು 'ಸಾರ್ವಜನಿಕ ವಸತಿ ನಿಲಯ'ಗಳೆಂದು ಪರಿಗಣಿಸಲಾಯಿತು. ಅಲ್ಲಿ ಇರುವ ಒಟ್ಟು ಸಂಖ್ಯೆಯಲ್ಲಿ ೭೫ರಷ್ಟು ಮಾತ್ರವೇ ಅವಕಾಶ ಇದ್ದುದರಿಂದ ಪರಿಶಿಷ್ಟ ಜಾತಿಯ ಶೇ.೨೫ರಷ್ಟು ಸೀಟುಗಳು ಕಡಿಮೆಯಾದವು. ಇದರಿಂದ ಅಷ್ಟು ಪ್ರಮಾಣದಲ್ಲಿ ಪ.ಜಾತಿಯ ವಿದ್ಯಾರ್ಥಿಗಳು ಹಾಸ್ಟಲ್ ಸೌಲಭ್ಯದಿಂದ ವಂಚಿತರಾಗುವಂತಾಯಿತು. ಆ ಸೀಟುಗಳನ್ನು ಇತರೆ ಹಿಂದುಳಿದ ಜಾತಿಗಳಿಗೆ ಅವಕಾಶ ನೀಡಿದ್ದು ಈ ಅವಕಾಶವನ್ನು ಅವರು ಬಳಸಿಕೊಂಡು ಶೈಕ್ಷಣಿಕ ಅಭಿವೃದ್ಧಿ ಸಾಧಿಸಲು ಸಹಾಯವಾಯಿತು.

ಪಂಚಾವಾರ್ಷಿಕ ಯೋಜನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗದ ಕಲ್ಯಾಣಕ್ಕಾಗಿ ಸರ್ಕಾರ ಅವರ ಶೈಕ್ಷಣಿಕ ಅಭಿವೃದ್ಧಿಗೆ ಸಂಬಂಧಿಸಿದಂತೆ ಕೈಗೊಂಡ ಕ್ರಮಗಳು ಅವರ ಶೈಕ್ಷಣಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಿವೆ. ಪರಿಶಿಷ್ಟ ಜಾತಿ ಮತ್ತು ಬುಡಕಟ್ಟು ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಅನುಕೂಲತೆಗಾಗಿ ಸ್ಥಾಪನೆಗೊಂಡಿರುವ ಸಮಾಜ ಕಲ್ಯಾಣ ಇಲಾಖೆ ಆ ನಿಟ್ಟಿನಲ್ಲಿ ಶ್ರಮಿಸುತ್ತಿದೆ. ಇದು ಸರ್ಕಾರ ಮತ್ತು ಅನುದಾನಿತ ಹಾಸ್ಟಲ್‌ಗಳ ಮೇಲ್ವಿಚಾರಣೆ ಮಾಡುತ್ತದೆ. ೨೦೦೧-೦೨ನೇ ಸಾಲಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ ಈ ಇಲಾಖೆ ವತಿಯಿಂದ ನಡೆಯುತ್ತಿರುವ ಹಾಸ್ಟಲ್‌ಗಳ ವಿವರ ಹೀಗಿದೆ. ಸರ್ಕಾರ ಮತ್ತು ಅನುದಾನಿತ ಮೆಟ್ರಿಕ್‌ಪೂರ್ವ ಬಾಲಕ ಮತ್ತು ಬಾಲಕಿಯರ ವಿದ್ಯಾರ್ಥಿ ನಿಲಯಗಳು ಚಿತ್ರದುರ್ಗ ತಾಲ್ಲೂಕಿನಲ್ಲಿ ಬಾಲಕರಿಗಾಗಿ ೧೧, ಬಾಲಕಿಯರಿಗೆ ೪, ಚಳ್ಳಕೆರೆಯಲ್ಲಿ

೨೦ ಬಾಲಕರರಿಗೆ, ಬಾಲಕಿಯರಿಗೆ ೨, ಹೊಸದುರ್ಗ ಬಾಲಕರಿಗೆ ೩, ಬಾಲಕಿಯರಿಗೆ ೨ ಹಾಗೂ ಮೊಳಕಾಲ್ಮೂರಿನಲ್ಲಿ ಬಾಲಕರಿಗಾಗಿ ೮, ಬಾಲಕಿಯರಿಗೆ ೧ ವಿದ್ಯಾರ್ಥಿ ನಿಲಯಗಳು ಇದ್ದರೆ ಬಳ್ಳಾರಿ ಜಿಲ್ಲೆಯಲ್ಲಿ ಇದೇ ಸಾಲಿಗೆ ಸರ್ಕಾರಿ ಮತ್ತು ಖಾಸಗಿ ಸೇರಿ ಬಳ್ಳಾರಿ ತಾಲ್ಲೂಕಿನಲ್ಲಿ ಬಾಲಕರಿಗಾಗಿ ೭ ಬಾಲಕಿಯರಿಗೆ ೧, ಹಡಗಲಿ ಬಾಲಕರಿಗೆ ೧೦ ಬಾಲಕಿಯರಿಗೆ ೨, ಹಗರಿಬೊಮ್ಮನ ಹಳ್ಳಿ ಬಾಲಕರಿಗೆ ೧ ಬಾಲಕಿಯರಿಗೆ ೧, ಹೊಸಪೇಟೆ ಬಾಲಕರಿಗಾಗಿ ೫, ಬಾಲಕಿಯರಿಗೆ ೨, ಕೂಡ್ಲಿಗಿ ಬಾಲಕರಿಗೆ ೬, ಬಾಲಕಿಯರಿಗೆ ೩, ಸಿರುಗಪ್ಪ ಬಾಲಕರಿಗೆ ೪, ಬಾಲಕಿಯರಿಗೆ ೧, ಸಂಡೂರು ತಾಲ್ಲೂಕಿನಲ್ಲಿ ಬಾಲಕರಿಗೆ ೪ ಬಾಲಕಿಯರಿಗೆ ೧, ವಿದ್ಯಾರ್ಥಿನಿಲಯಗಳ ಇರುವುದು ಕಂಡುಬರುತ್ತದೆ. ಈ ರೀತಿಯಲ್ಲಿ ಹಾಸ್ಟಲ್‌ಗಳ ಸ್ಥಾಪನೆಯು ಹೆಚ್ಚಾಗಿ ೧೯೮೦ರ ದಶಕದ ನಂತರ ಹೆಚ್ಚಾಗಿ ಸ್ಥಾಪನೆಗೊಂಡಿವೆ. ಬಳ್ಳಾರಿ ಜಿಲ್ಲೆಯಲ್ಲಿ ಯಾವುದೇ ನಿಮ್ನ ವರ್ಗದ ಹಾಸ್ಟಲ್‌ಗಳು ಇರುವುದು ಕಂಡುಬರುವುದಿಲ್ಲ.

ಈ ರೀತಿಯಾಗಿ ಪರಿಶಿಷ್ಟ ಜಾತಿ ಮತ್ತು ವರ್ಗದ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಅನುಕೂಲವಾಗಲೆಂದು ಸ್ಥಾಪನೆಗೊಂಡಿರುವ ಹಾಸ್ಟಲ್‌ಗಳಲ್ಲಿ ಕೆಲವೊಂದು ಇತರೆ ಜನಾಂಗದ ಹೆಸರಲ್ಲಿ ಸ್ಥಾಪಿತವಾಗಿರುವ ಹಾಸ್ಟಲ್‌ಗಳಲ್ಲಿ ಮಾದಿಗ ಜನಾಂಗದ ವಿದ್ಯಾರ್ಥಿಗಳು ಕಂಡುಬರುವುದಿಲ್ಲ.(ಲಂಬಾಣಿ ಮತ್ತು ಚಲವಾದಿ, ಬೋವಿ ಇತರೆ) ಕಂಡುಬಂದರೂ ಅದು ಎರಡು ಇಲ್ಲವೇ ೩ ವಿದ್ಯಾರ್ಥಿಗಳು ಮಾತ್ರ. ಈ ಜನಾಂಗದ ಹೆಸರಲ್ಲಿ ಸ್ಥಾಪಿತವಾಗಿರುವ ವಿದ್ಯಾರ್ಥಿನಿಲಯಗಳಲ್ಲಿ ಶೇ.೭೫ ಅವರೆ ತುಂಬಿರುತ್ತಾರೆ. ಉಳಿದಂತೆ ಇತರೆ ಸರ್ಕಾರಿ ಮತ್ತು ಖಾಸಗಿ ಹಾಸ್ಟಲ್‌ಗಳಲ್ಲಿ ಪರಿಶಿಷ್ಟ ಜಾತಿಗೆ ಮೀಸಲಿರುವ ಶೇ.೭೫ರಲ್ಲಿ ಅರ್ಧದಷ್ಟು ವಿದ್ಯಾರ್ಥಿಗಳು ಈ ಜನಾಂಗದವರೆ ಇರುತ್ತಾರೆ. ಈ ಹಿನ್ನೆಲೆಯಲ್ಲಿ ಹಾಸ್ಟಲ್‌ಗಳು ಮಾದಿಗ ಜನಾಂಗದ ವಿದ್ಯಾರ್ಥಿಗಳ ಶಿಕ್ಷಣ ಪ್ರಗತಿಯಲ್ಲಿ ಪ್ರಮುಖ ಪಾತ್ರವಹಿಸಿರುವುದನ್ನು ಅಲ್ಲಗಳೆಯಲಾಗದು.

**ಕಾಲೇಜು ವಿದ್ಯಾರ್ಥಿ ನಿಲಯಗಳು**

ಕಾಲೇಜು ಶಿಕ್ಷಣ ತುಂಬಾ ತಡವಾಗಿಯೇ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಆರಂಭಗೊಂಡಿತು. ಅದರಲ್ಲೂ ಬಳ್ಳಾರಿ ಜಿಲ್ಲೆಯಲ್ಲಿ ಇನ್ನು ತಡವಾಗಿಯೇ ಕಾಲೇಜು ವಿದ್ಯಾರ್ಥಿ ನಿಲಯಗಳು ಆರಂಭಗೊಂಡಿವೆ. ಅದಕ್ಕೆ ಕಾರಣವು ಇಲ್ಲದಿಲ್ಲ. ಸ್ವಾತಂತ್ರ್ಯಾನಂತರದಲ್ಲಿ ಕಾಲೇಜು ಕಲಿಯಲು ಮಾದಿಗರು ಹೆಚ್ಚು ತೊಡಗಿಕೊಂಡಿದ್ದೆ ೭೦ರ ದಶಕದಲ್ಲಿ ಎನ್ನಬಹುದು. ಏಕೆಂದರೆ ಆ ಸಂದರ್ಭದಲ್ಲಿ ಕಾಲೇಜು ಶಿಕ್ಷಣ ಪಡೆಯುತ್ತಿದ್ದ ಎಂ.ಹನುಮಂತಪ್ಪನವರ ಪ್ರಕಾರ ಸುಮಾರು ೧೯೭೪ರವರೆವಿಗೂ ಚಿತ್ರದುರ್ಗದಲ್ಲಿ ಒಂದೇ ಒಂದು ಕಾಲೇಜು ಹಾಸ್ಟಲ್ ಇದ್ದು ಅದು ಚಿತ್ರದುರ್ಗ, ಬಳ್ಳಾರಿ ಹಾಗೂ ಶಿವಮೊಗ್ಗದ ಜಿಲ್ಲೆಗಳ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಅಂದರೆ ಕಾಲೇಜು ಶಿಕ್ಷಣ ಪಡೆಯಲು ಚಿತ್ರದುರ್ಗಕ್ಕೆ ಆಗಮಿಸಿದವರಿಗೆ ನೀಡಲಾಗುತ್ತಿತ್ತು.

ಇದರಿಂದಾಗಿ ಆ ಸಂದರ್ಭದ ಕಾಲೇಜು ಶಿಕ್ಷಣ ಕಲಿತ ಮಾದಿಗ ಜನಾಂಗದ ಸಂಖ್ಯೆ ಕಡಿಮೆಯಿದ್ದು, ಬಳ್ಳಾರಿ ಜಿಲ್ಲೆಯ ಮಾದಿಗರ ಸಂಖ್ಯೆ ಇನ್ನೂ ಕಡಿಮೆ. ಆದರೆ ಆನಂತರದ ಬೆಳವಣಿಗೆಯಿಂದ ಆರಂಭಗೊಂಡ ವಿದ್ಯಾರ್ಥಿನಿಲಯಗಳು ೨೦೦೧-೦೨ರ ಹೊತ್ತಿಗೆ ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರಿ ಮತ್ತು ಖಾಸಗಿ ಅನುದಾನಿತ ಕಾಲೇಜು ಹಾಸ್ಟಲ್‌ಗಳು ಆರಂಭಗೊಂಡಿರುವುದು ಕಂಡುಬರುತ್ತದೆ. ಅವುಗಳ ಸಂಖ್ಯೆ ಹೀಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಸರ್ಕಾರ ಮತ್ತು ಖಾಸಗಿ ಕಾಲೇಜು ವಿದ್ಯಾರ್ಥಿ ನಿಲಯಗಳು ಒಟ್ಟು ೩೧ರಲ್ಲಿ ಚಿತ್ರದುರ್ಗ ತಾಲ್ಲೂಕಿನಲ್ಲಿ ಬಾಲಕರಿಗೆ ೧೧, ಬಾಲಕಿಯರಿಗೆ ೨. ಚಳ್ಳಕೆರೆ ಬಾಲಕರಿಗೆ ೬, ಬಾಲಕಿಯರಿಗೆ ಇರುವುದಿಲ್ಲ, ಹಿರಿಯೂರು ಬಾಲಕರಿಗೆ ೨, ಬಾಲಕಿಯರಿಗೆ ೧, ಹೊಳಲ್ಕೆರೆ ಬಾಲಕರಿಗೆ ૩, ಬಾಲಕಿಯರಿಗೆ ಇಲ್ಲ. ಹೊಸದುರ್ಗ ಬಾಲಕರಿಗೆ ೪, ಬಾಲಕಿಯರಿಗೆ ೧ ಹಾಗೂ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಬಾಲಕರಿಗೆ ೧, ಬಾಲಕಿಯರಿಗೆ ಇಲ್ಲ. ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿ ತಾಲ್ಲೂಕಿನಲ್ಲಿ ಸರ್ಕಾರಿ ಮತ್ತು ಅನುದಾನಿತ ಕಾಲೇಜು ಹಾಸ್ಟಲ್‌ಗಳ ಸಂಖ್ಯೆ ಈ ರೀತಿ ಇದೆ. ಬಳ್ಳಾರಿ ತಾಲ್ಲೂಕಿನಲ್ಲಿ ೪, ಹಡಗಲಿ ೨, ಹಗರಿಬೊಮ್ಮನ ಹಳ್ಳಿ ೨, ಹೊಸಪೇಟೆ ೧, ಕೂಡ್ಲಿಗಿ ೧, ಸಿರುಗುಪ್ಪ ೧, ಸಂಡೂರು ೧, ಈ ಅಂಕಿ-ಸಂಖ್ಯೆಗಳನ್ನು ಗಮನಿಸಿದರೆ ಕಾಲೇಜು ಶಿಕ್ಷಣ ಕಲಿಯುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳ ಸಂಖ್ಯೆ ಬಳ್ಳಾರಿ ಜಿಲ್ಲೆಗಿಂತ ಚಿತ್ರದುರ್ಗ ಜಿಲ್ಲೆಯಲ್ಲಿಯೇ ಹೆಚ್ಚು. ಈ ಹಿನ್ನೆಲೆಯಲ್ಲಿ ಇಲ್ಲಿ ಕಾಲೇಜು ಶಿಕ್ಷಣ ಕಲಿತವರ ಸಂಖ್ಯೆ ಕಡಿಮೆಯೇ ಎನ್ನಬಹುದು. ಏಕೆಂದರೆ ಹಾಸ್ಟಲ್ ವ್ಯವಸ್ಥೆ ಇರುವ ಕಡೆ ಮಾದಿಗ ಜನಾಂಗ ಶಿಕ್ಷಣ ಕಲಿಯಲು ಮುಂದಾದರೆ ಈ ವ್ಯವಸ್ಥೆ ಇಲ್ಲದಿರುವ ಕಡೆ ಬೇರೆ ಕಡೆ ಹೋಗಿ ಶಿಕ್ಷಣ ಕಲಿಯಲು ಮನೆಯಲ್ಲಿ ಸಮ್ಮತಿಸುವುದು ಕಡಿಮೆ. ಬಾಲಕಿಯರು ಕಾಲೇಜು ಶಿಕ್ಷಣ ಚಿತ್ರದುರ್ಗ ಜಿಲ್ಲೆಯಲ್ಲಿ ಸ್ವಲ್ಪ ಪ್ರಮಾಣದಲ್ಲಿ ಕಂಡುಬಂದರೆ ಬಳ್ಳಾರಿ ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಎನ್ನಬಹುದು. ಇದರಿಂದಾಗಿ ಸ್ವಾತಂತ್ರ್ಯಪೂರ್ವ ಮತ್ತು ನಂತರದಲ್ಲಿ ಸ್ಥಾಪಿತಗೊಂಡ ವಿದ್ಯಾರ್ಥಿ ನಿಲಯಗಳು ಮಾದಿಗ ಜನಾಂಗದ ಶೈಕ್ಷಣಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸಿವೆ.

## ೫.೪ ಸಮಾಜ ಕಲ್ಯಾಣ ಇಲಾಖೆಯ ವಿಶೇಷ ಕಾರ್ಯಕ್ರಮಗಳು ಮತ್ತು ಮಾದಿಗರು

ಸಮಾಜಕಲ್ಯಾಣ ಇಲಾಖೆಯು ಪರಿಶಿಷ್ಟ ಜಾತಿಯ ಶೈಕ್ಷಣಿಕ ಅಭಿವೃದ್ಧಿಗೆ ಸಂಬಂಧಿಸಿದ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವ ಜೊತೆಗೆ ವಿಶೇಷವಾದ ಕಾರ್ಯಕ್ರಮವನ್ನು ಪಂಚವಾರ್ಷಿಕ ಯೋಜನೆಯ ಅಡಿಯಲ್ಲಿ ರೂಪಿಸಲಾಗಿದೆ. ಅವುಗಳಲ್ಲಿ ಪ್ರಮುಖವಾಗಿ ವಿದ್ಯಾರ್ಥಿವೇತನ, ವಸತಿ ಯೋಜನೆ, ಸಹಾಯಧನ ಮುಂತಾದವು ಸೇರಿವೆ. ಇವು ಎಷ್ಟರ ಮಟ್ಟಿಗೆ ಮಾದಿಗ ಜನಾಂಗದ ಶೈಕ್ಷಣಿಕ ಅಭಿವೃದ್ಧಿಗೆ ಸಹಕರಿಸಿವೆ ಎಂಬುದನ್ನು ತಿಳಿಯಲು ಇಲ್ಲಿ ಪ್ರಯತ್ನಿಸಲಾಗುವುದು.

ವಿದ್ಯಾರ್ಥಿ ವೇತನ

ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಶಿಕ್ಷಣ ಕಲಿಯುವಲ್ಲಿ ಸಹಾಯವಾಗಬೇಕೆನ್ನುವ ದೃಷ್ಟಿಯಿಂದ ವಿದ್ಯಾರ್ಥಿ ವೇತನ ನೀಡಲಾಗುವುದು. ಕೇವಲ ವಸತಿ ಸೌಲಭ್ಯ ಪಡೆದಿರುವವರಿಗೆ ಮಾತ್ರವಲ್ಲದೆ ಬಡತನದಲ್ಲಿ ನರಳುತ್ತಿರುವ ಹಾಸ್ಟಲ್ ಸೌಲಭ್ಯ ಬಳಸಿಕೊಳ್ಳದೆ ಇರುವವರಿಗೂ ಕೂಡ ವಿದ್ಯಾರ್ಥಿವೇತನವನ್ನು ಸರ್ಕಾರ ಕೊಡಲು ಮುಂದಾಗಿದೆ. ಈ ವೇತನವನ್ನು ಹಣದ ರೂಪದಲ್ಲಿ ವಿದ್ಯಾರ್ಥಿಗಳಿಗೆ ಶಿಕ್ಷಣ ಪಡೆಯುತ್ತಿರುವ ಆಯಾ ಶಿಕ್ಷಣ ಸಂಸ್ಥೆಯ ಮೂಲಕ ನೀಡಲಾಗುತ್ತದೆ. ಹಿರಿಯ ಪ್ರಾಥಮಿಕ ಶಾಲೆ ಹಾಗೂ ಪ್ರೌಢಶಾಲೆಗಳಲ್ಲಿ ಕಲಿಯುವ ಈ ವರ್ಗಗಳ ವಿದ್ಯಾರ್ಥಿಗಳಿಗಾಗಿ ಪ್ರೌಢ ಶಿಕ್ಷಣದ ಮುಂಚಿನ ವಿದ್ಯಾರ್ಥಿ ವೇತನವನ್ನು ಮೂರನೆಯ ಯೋಜನೆಯನ್ವಯ(೧೯೬೧-೬೬) ನೀಡಲಾಗುತ್ತಿದೆ.[೫೬] ಈ ರೀತಿ ವಿದ್ಯಾರ್ಥಿ ವೇತನ ನೀಡುವುದರ ಮೂಲಕ ಅವರ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಿತು. ಆದರೆ ಕರ್ನಾಟಕ ಏಕೀಕರಣಕ್ಕೆ ಮೊದಲು ಹಿಂದಿನ ಮತ್ತು ಹೊಸದಾಗಿ ಸೇರ್ಪಡೆಯಾದ ಪ್ರದೇಶಗಳಲ್ಲಿ ಈ ವರ್ಗದ ಮಕ್ಕಳಿಗಾಗಿ ನೀಡುತ್ತಿರುವ ವಿದ್ಯಾರ್ಥಿ ವೇತನ ಏಕರೂಪವಾಗಿರಲಿಲ್ಲ. ಅದನ್ನು ಸರಿಪಡಿಸಿ ೧೯೬೯ರ ನಂತರ ರಾಜ್ಯದಲ್ಲೆಲ್ಲೂ ಪ್ರೌಢ ಶಿಕ್ಷಣ ಪೂರ್ವ ವಿದ್ಯಾರ್ಥಿವೇತನದ ಮೊತ್ತವನ್ನು ಏಕರೂಪಕ್ಕೆ ತರಲಾಯಿತು.[೫೭] ಹೀಗೆ ಏಕರೂಪಗೊಳಿಸಿದ ನಂತರದಿಂದ ಬಾಲಕ ಬಾಲಕಿಯರಿಬ್ಬರಿಗೂ ವಿದ್ಯಾರ್ಥಿ ವೇತನ ನೀಡಲಾಗುತ್ತಿತ್ತು. ಹಿರಿಯ ಪ್ರಾಥಮಿಕ ಪಾಠಶಾಲೆಗಳಲ್ಲಿ ಕಲಿಯುವ ಬಾಲಕ ಬಾಲಕಿಯರಿಗಾಗಿ ೫೦ ರೂ.ಗಳ ವೇತನವನ್ನು ಪ್ರೌಢಶಾಲೆಯ ವಿದ್ಯಾರ್ಥಿಗಳಿಗೆ ೭೫ ರೂ.ಗಳ ವೇತನವನ್ನು ವರ್ಷಕ್ಕೊಮ್ಮೆ ನೀಡಲಾಗುತ್ತಿದೆ. ವಾರ್ಷಿಕ ಯೋಜನೆಯಲ್ಲಿ(೧೯೬೬-೬೯) ೩೪,೭೫೪ ವಿದ್ಯಾರ್ಥಿಗಳಿಗೂ ನಾಲ್ಕನೆಯ ಯೋಜನೆಯಲ್ಲಿ(೧೯೬೯-೭೪) ೧,೮೯,೭೯೭. ವಿದ್ಯಾರ್ಥಿಗಳು. ಪ್ರೌಢಶಿಕ್ಷಣ ಪೂರ್ವ ವಿದ್ಯಾರ್ಥಿ ವೇತನ ಪಡೆದರು. ೧೯೭೮-೭೯ರಲ್ಲಿ ೧,೧೧,೦೯೩ ವಿದ್ಯಾರ್ಥಿಗಳ ಪ್ರೌಢಶಿಕ್ಷಣ ವಿದ್ಯಾರ್ಥಿ ವೇತನವನ್ನು ಪಡೆದರೆ ೧೯೮೧-೮೨ರಲ್ಲಿ ಈ ಸೌಲಭ್ಯವನ್ನು ಪಡೆದ ವಿದ್ಯಾರ್ಥಿಗಳ ಸಂಖ್ಯೆ ೧,೬೩,೭೬೨ ಆಗಿದೆ.[೫೮]

ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಪೋಷಕರ ಆದಾಯವನ್ನು ಮಿತಿಗೊಳಿಸಿ ''ವಾರ್ಷಿಕ ಆದಾಯ ೭೫೦ ರೂ.ಗಿಂತ ಕಡಿಮೆ ಇದ್ದರೆ ಅವರ ಮಕ್ಕಳಿಗೆ ಭಾರತ ಸರ್ಕಾರದಿಂದ ಪ್ರೌಢಶಾಲೆಯ ನಂತರದ ವಿದ್ಯಾರ್ಥಿ ವೇತನವು ದೊರೆಯುತ್ತದೆ. ಈ ಸೌಲಭ್ಯವನ್ನು ಭಾರತ ಸರ್ಕಾರ ೧೯೪೪ರಲ್ಲೇ ಜಾರಿಗೆ ತಂದಿತು. ಈ ಕಾರ್ಯಕ್ರಮವನ್ನು ವಿಕೇಂದ್ರಿಕರಿಸಿ ೧೯೫೯-೬೦ರಿಂದ ರಾಜ್ಯಗಳೇ ಅದನ್ನು ನಿರ್ವಹಿಸುವಂತಾಯಿತು.[೫೯]ಈ ರಿತಿ ಭಾರತ ಸರ್ಕಾರ ಮತ್ತು ಕರ್ನಾಟಕ ರಾಜ್ಯ ಸರ್ಕಾರಗಳು ರಾಜ್ಯದಲ್ಲಿ ೧೯೮೧-೮೨ ಈ ರೀತಿ ಭಾರತ ಸರ್ಕಾರ ೨೨೫.೪೪ ಲಕ್ಷ ರೂ.ಗಳ ವಿದ್ಯಾರ್ಥಿ ವೇತನವನ್ನು ಪರಿಶಿಷ್ಟ ಜನಾಂಗಗಳ ೨೪,೯೯೩ ವಿದ್ಯಾರ್ಥಿಗಳಿಗೆ ದೊರಕಿಸಿತು. ರಾಜ್ಯ ಸರ್ಕಾರ ೦.೯೮

ಲಕ್ಷ ರೂ.ಗಳ ವಿದ್ಯಾರ್ಥಿ ವೇತನವನ್ನು ೨೫೨ ವಿದ್ಯಾರ್ಥಿಗಳಿಗೆ ನೀಡಲಾಯಿತು.[೬೦] ಹೀಗೆ ಪ್ರತಿವರ್ಷವು ಪ್ರೌಢಶಾಲಾ ನಂತರದ ಶೈಕ್ಷಣಿಕ ವಿದ್ಯಾರ್ಥಿ ವೇತನ ಸರ್ಕಾರ ನೀಡುತ್ತಾ ಪರಿಶಿಷ್ಟ ಜಾತಿಯ ಜನರ ಶೈಕ್ಷಣಿಕ ಅಭಿವೃದ್ಧಿ ಸಾಧಿಸಲು ಶ್ರಮಿಸಿದೆ. ಇದರೊಂದಿಗೆ ಐದನೆಯ ಯೋಜನೆಯಲ್ಲಿ(೧೯೭೪-೭೮) ಉನ್ನತ ವ್ಯಾಸಂಗ ಮಾಡಲು ವಿದ್ಯಾರ್ಥಿ ವೇತನ ಯೋಜಿಸಿದೆ. ಹೀಗೆ ಕೇವಲ ವಸತಿ ವ್ಯವಸ್ಥೆ ಮಾತ್ರ ಮಾಡದೆ ಆ ಸೌಲಭ್ಯ ಪಡೆಯದೆ ಇರುವವರಿಗೂ ಸಹ ವಿದ್ಯಾಭ್ಯಾಸಕ್ಕೆ ಅನುಕೂಲವಾಗಲೆಂದು ವಿದ್ಯಾರ್ಥಿ ವೇತನ ನೀಡುತ್ತಾ ಬಂದಿದೆ. ಇಂತಹ ಸಂದರ್ಭಗಳಲ್ಲಿ ರಾಜ್ಯದಾದ್ಯಂತ ಮಾದಿಗ ಜನಾಂಗದ ಅನೇಕ ವಿದ್ಯಾರ್ಥಿಗಳು ಈ ಸೌಲಭ್ಯ ಪಡೆದಿರುವರು ಅದರಲ್ಲೂ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ನೀಡುತ್ತಿರುವ ವಿದ್ಯಾರ್ಥಿ ವೇತನವನ್ನು ಹೆಚ್ಚಿನ ಪ್ರಮಾಣದಲ್ಲಿ ಪಡೆದಿದ್ದಾರೆ.

### ಪ್ರತಿಭಾ ವಿದ್ಯಾರ್ಥಿ ವೇತನ

ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳು ವಾರ್ಷಿಕ ಪರೀಕ್ಷೆಯಲ್ಲಿ ಹೆಚ್ಚು ಅಂಕಗಳನ್ನು ತೆಗೆದು ಉತ್ತೀರ್ಣರಾದವರಿಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ಪ್ರತಿಭಾ ವಿದ್ಯಾರ್ಥಿ ವೇತನ ನೀಡಲಾಗುತ್ತಿದೆ. ಇದು ಅವರಲ್ಲಿ ಸ್ಪರ್ಧಾ ಮನೋಭಾವನೆ ಬೆಳಸಿಕೊಂಡು ಉತ್ತಮ ಅಂಕಗಳಿಸಲು ಪ್ರಯತ್ನಿಸಲು ಪ್ರೇರಣೆ ನೀಡಿದೆ. ಈ ರೀತಿಯಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ಮೂರನೆಯ ಯೋಜನೆಯಲ್ಲಿ(೧೯೬೧-೬೬) ಪ್ರತಿಭಾ ವಿದ್ಯಾರ್ಥಿ ವೇತನವು ೨೩,೫೮೫ ವಿದ್ಯಾರ್ಥಿಗಳಿಗೆ ದೊರೆತರೆ ೧೯೭೪-೭೫ರ ಸಾಲಿನಲ್ಲಿ ಈ ವಿದ್ಯಾರ್ಥಿವೇತನವನ್ನು ಪಡೆದವರ ಸಂಖ್ಯೆ ೩.೦೫೦ ಆಗಿದ್ದಿತು. ೧೯೮೧-೮೨ರ ವೇಳೆಗೆ ಪ್ರತಿಭಾ ವಿದ್ಯಾರ್ಥಿ ವೇತನವನ್ನು ಪಡೆದವರ ಸಂಖ್ಯೆ ೧೮,೮೯೯ಕ್ಕೆ ಏರಿತು.[೬೧] ಇದೇ ರೀತಿ ಎಸ್.ಎಸ್.ಎಲ್.ಸಿಯಲ್ಲಿ ಮೊದಲ ಬಾರಿಗೆ ತೇರ್ಗಡೆಯಾದವರಿಗೆ ರೂ.೫೦೦ ಮತ್ತು ರ್‍ಯಾಂಕ್ ಹೊಂದಿದವರಿಗೆ ರೂ.೧೦೦೦ಗಳನ್ನು ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳು ಯಾವ ಕಾರಣಕ್ಕೂ ವ್ಯಾಸಂಗವನ್ನು ನಿಲ್ಲಿಸದಂತೆ ಪ್ರೋತ್ಸಾಹ ಪೂರ್ವಕ ನಗದು ಬಹುಮಾನ ಯೋಜನೆಯಲ್ಲಿ(೧೯೭೪-೭೮) ಈ ಕಾರ್ಯಕ್ರಮ ಆರಂಭವಾಯಿತು ೧೯೮೧-೮೨ರಲ್ಲಿ ೧೭೮ ವಿದ್ಯಾರ್ಥಿಗಳು ಈ ಕಾರ್ಯಕ್ರಮದ ಪ್ರಯೋಜನ ಪಡೆದಿದ್ದಾರೆ.[೬೨] ಪ್ರೌಢಶಿಕ್ಷಣ ನಂತರದ ಪಿ.ಯು.ಸಿ, ಪದವಿ, ಸ್ನಾತಕೋತ್ತರ ಪದವಿ, ಕೃಷಿ, ಪಶುವೈದ್ಯಕೀಯ, ವಿಜ್ಞಾನ, ಇಂಜಿನಿಯರಿಂಗ್, ವೈದಕೀಯ ಸೇವೆಗಳಲ್ಲಿ ಅಂತಿಮ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದವರಿಗೆ ನಿಗಧಿ ಪಡಿಸಿದ ಹಣವನ್ನು 'ಪ್ರೋತ್ಸಾಹ ಧನ'ವಾಗಿ ಪರಿಶಿಷ್ಟ ಜಾತಿಗಳಿಗೆ ನೀಡಲಾಗುತ್ತಿದ್ದು ಅದರ ಪ್ರಯೋಜನವನ್ನು ಮಾದಿಗ ಜನಾಂಗದ ಅನೇಕರು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲಿ ಕೆಲವೊಂದು ಕೋರ್ಸ್‌ಗಳನ್ನು ಹೊರತುಪಡಿಸಿದರೆ ಉಳಿದವುಗಳಲ್ಲಿ 'ಪ್ರೋತ್ಸಾಹ ಧನ' ಅಥವಾ ಪ್ರತಿಭಾ ವಿದ್ಯಾರ್ಥಿ ವೇತನ ಪಡೆದಿದ್ದಾರೆ. ಆದರೆ ನಿರ್ದಿಷ್ಟ ಸಂಖ್ಯೆಯ ಬಗ್ಗೆ ಮಾಹಿತಿ ದೊರೆತಿರುವುದಿಲ್ಲ.

**ವಸತಿ ಶಾಲೆಗಳು**

ಪರಿಶಿಷ್ಟ ಜಾತಿಯ ಬಡವರ ಮಕ್ಕಳಿಗಾಗಿ ಶೈಕ್ಷಣಿಕ ಅಭಿವೃದ್ಧಿಗಾಗಿ ಸಮಾಜ ಕಲ್ಯಾಣ ಇಲಾಖೆಯಿಂದ ವಸತಿ ಶಾಲಾ ವ್ಯವಸ್ಥೆಯನ್ನು ಕೈಗೊಳ್ಳಲಾಗಿದ್ದು ಒಂದರಿಂದ ನಾಲ್ಕನೆಯ ತರಗತಿಯವರೆಗೆ ಶಿಕ್ಷಣದ ಜೊತೆಗೆ ಉಚಿತ ಊಟ-ವಸತಿ ಸೌಲಭ್ಯ ಒದಗಿಸಲಾಗುವುದು. ಮೂರನೆಯ ಯೋಜನೆಯಲ್ಲಿ(೧೯೬೧-೬೬) ಒಟ್ಟು ೧೨ ವಸತಿ ಶಾಲೆಗಳು ಆರಂಭವಾದವು. ಮುಂದಿನ ಯೋಜನೆಗಳಲ್ಲಿ ಈ ಶಾಲೆಗಳನ್ನು ನಡೆಸಲು ಹಣವನ್ನು ಒದಗಿಸಲಾಗಿದೆ. ೧೯೮೦-೮೧ರಲ್ಲಿ ಹೊಸದಾಗಿ ಎರಡು ಶಾಲೆಗಳಿದ್ದು. ೧೯೮೧-೮೨ರಲ್ಲಿ ಇನ್ನೂ ಒಂಬತ್ತು ಶಾಲೆಗಳು ತೆರೆಯಲ್ಪಟ್ಟಿವೆ. ಒಟ್ಟು ೨೩ ಶಾಲೆಗಳು ರಾಜ್ಯದಲ್ಲಿ ನಿರತವಾಗಿದ್ದವು.[೬೩] ಅವುಗಳ ಸಂಖ್ಯೆ ಇಂದು ೨೦೦೦-೦೧ ನೇ ಸಾಲಿನ ಹೊತ್ತಿಗೆ ಒಟ್ಟು ೮೮ ವಸತಿ ಶಾಲೆಗಳಿದ್ದು ಅವುಗಳಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕ್ರಮವಾಗಿ ೩-೩ನ್ನು ಹೊಂದಿದೆ. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನಲ್ಲಿ ಒಂದು, ಬಳ್ಳಾರಿಯಲ್ಲೂ ಒಂದು ಇದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಇವೆ. ಈ ವಸತಿ ನಿಲಯಗಳಲ್ಲಿ ಮಾದಿಗ ಜನಾಂಗದ ಅನೇಕ ವಿದ್ಯಾರ್ಥಿಗಳು ಇದ್ದು ಈ ಸೌಲಭ್ಯವನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ.

**ಮುರಾರ್ಜಿ ದೇಸಾಯಿ ಮತ್ತು ನವೋದಯ ವಸತಿ ಶಾಲೆಗಳು :** ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಕೊಡುವ ಉದ್ದೇಶದಿಂದ ಮುರಾರ್ಜಿ ದೇಸಾಯಿ ಮತ್ತು ನವೋದಯ ವಸತಿ ಶಾಲೆಗಳು ಆರಂಭಗೊಂಡವು. ಅಲ್ಲಿ ಶಿಕ್ಷಣದ ಜೊತೆ ಉಚಿತ ಊಟ, ವಸತಿ, ಬಟ್ಟೆ, ಪುಸ್ತಕ ಹಾಗೂ ಇತರೆ ಸೌಲಭ್ಯಗಳನ್ನು ಸಮಾಜ ಕಲ್ಯಾಣ ಇಲಾಖೆಯಿಂದ ನೀಡಲಾಗುತ್ತದೆ. ಇಂತಹ ಸೌಲಭ್ಯ ಪಡೆಯಲು ಪರೀಕ್ಷೆಯನ್ನು ಏರ್ಪಡಿಸಿ ಉತ್ತಮ ಅಂಕಗಳಿಸಿದವರನ್ನು ಆಯ್ಕೆ ಮಾಡಲಾಗುವುದು. ಇಂತಹ ಶಾಲೆಗಳು ರಾಜ್ಯದಲ್ಲಿ ಒಟ್ಟು ೪೭ ಇದ್ದು ಚಿತ್ರದುರ್ಗ ಜಿಲ್ಲೆಯಲ್ಲಿ ಕೇವಲ ಒಂದು ಇದ್ದರೆ ಬಳ್ಳಾರಿ ಜಿಲ್ಲೆಯಲ್ಲಿ ೨ ಶಾಲೆಗಳಿವೆ. ಒಂದು ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಮತ್ತೊಂದು ಹೊಸಪೇಟೆ ತಾಲ್ಲೂಕಿನಲ್ಲಿದೆ. ಇಂತಹ ಶಾಲೆಗಳಲ್ಲಿ ಮಾದಿಗ ಜನಾಂಗದ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿರುವುದು ಕಂಡುಬರುತ್ತದೆ. ನವೋದಯ ವಸತಿ ಶಾಲೆಗಳು ಅಂಬೇಡ್ಕರ್ ಜನ್ಮಶತಾಬ್ದಿಯ ಅಂಗವಾಗಿ ತೆರೆಯಲಾದ ಶಾಲೆಗಳಾಗಿವೆ. ಇವು ರಾಜ್ಯದಲ್ಲಿ ಒಟ್ಟು ನಾಲ್ಕು ಮಾತ್ರವೇ ಇದೆ. ಅಂತಹ ಶಾಲೆಗಳಲ್ಲಿ ಮಾದಿಗ ಜನಾಂಗದ ಕೆಲವು ಬಾಲಕ-ಬಾಲಕಿಯರು ಶಿಕ್ಷಣ ಪಡೆದಿದ್ದಾರೆ.

**ಸಹಾಯಧನ**

ಸರ್ಕಾರವು ಸಮಾಜ ಕಲ್ಯಾಣ ಇಲಾಖೆಯಿಂದ ವಿವಿಧ ರೀತಿಯಲ್ಲಿ ಸಹಾಯಧನವನ್ನು ನೀಡುವುದರೊಂದಿಗೆ ಪರಿಶಿಷ್ಟ ಜಾತಿಯು ಶೈಕ್ಷಣಿಕ ಅಭಿವೃದ್ಧಿ ಹೊಂದುವಂತೆ ಮಾಡಲು ಪ್ರೋತ್ಸಾಹಿಸಿವೆ. ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳು ರಾಜ್ಯದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ವಿವಿಧ ವಿಷಯಗಳ

ಮೇಲೆ ಸಂಶೋಧನೆ ಕೈಗೊಂಡಿದ್ದರೆ ಅಂತಹ ವಿದ್ಯಾರ್ಥಿಗಳಿಗೆ ಸಂಶೋಧನೆಗೆ ಸಹಾಯಕವಾಗಲು ಧನ ಸಹಾಯವನ್ನು ಮಾಡಲಾಗುತ್ತಿದೆ. ಎಂ.ಫಿಲ್ ಮಾಡುವವರಿಗೆ ೮೦೦೦ ರೂ, ಪಿ.ಹೆಚ್.ಡಿ ಮಾಡುವವರಿಗೆ ೧೦,೦೦೦ ರೂ.ಗಳನ್ನು ನೀಡಲಾಗುವುದು ಇಂತಹ ಸೌಲಭ್ಯವನ್ನು ಸಂಶೋಧನೆಗೆ ತೊಡಗಿರುವ ಮಾದಿಗ ಜನಾಂಗದ ಅನೇಕ ವಿದ್ಯಾರ್ಥಿಗಳು ಪಡೆದಿದ್ದಾರೆ ಮತ್ತು ಪಡೆಯುತ್ತಲಿದ್ದಾರೆ. ಈ ರೀತಿಯ ಸಹಾಯಧನ ಪಡೆದವರಲ್ಲಿ ಮಾದಿಗ ಜನಾಂಗದ ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಕಂಡುಬರುತ್ತಾರೆ.(೬ ಜನ ಸಂಶೋಧನ ವಿದ್ಯಾರ್ಥಿಗಳು) ಇವರಲ್ಲದೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ೬ಕ್ಕೂ ಹೆಚ್ಚು ಕುವೆಂಪು ವಿಶ್ವವಿದ್ಯಾಲಯದಲ್ಲಿ ಚಿತ್ರದುರ್ಗ ಜಿಲ್ಲೆಯವರು ೬ ಜನ ಸಂಶೋಧನ ವಿದ್ಯಾರ್ಥಿಗಳು ಸಹಾಯಧನ ಪಡೆದಿರುವುದು ಕಂಡುಬರುತ್ತದೆ.

## ೫..೫. ಖಾಸಗಿ ಶಿಕ್ಷಣ ಸಂಸ್ಥೆಗಳು ಮತ್ತು ಮಾದಿಗರು

ಶಿಕ್ಷಣ ಕ್ಷೇತ್ರದಲ್ಲಿ ಸರ್ಕಾರ ಮಾತ್ರವಲ್ಲದೇ ಸರ್ಕಾರೇತರ ಸಂಘಸಂಸ್ಥೆಗಳು ಶೈಕ್ಷಣಿಕ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಸರ್ಕಾರದ ಅನುಧಾನದಲ್ಲಿ ಅನೇಕ ವಿದ್ಯಾಸಂಸ್ಥೆಗಳನ್ನು ತೆರೆದು ಶಿಕ್ಷಣ ಪಡೆಯಲು ಅನುಕೂಲ ಮಾಡಿಕೊಡಲಾಗಿದೆ. ಅವುಗಳ ಆಶ್ರಯದಲ್ಲಿ ಕೇವಲ ಶಾಲಾ ಕಾಲೇಜುಗಳಲ್ಲದೇ ವಿದ್ಯಾರ್ಥಿ ನಿಲಯಗಳನ್ನು ಸಹ ತೆರೆಯಲಾಗಿದೆ. ಇಂತಹ ಖಾಸಗಿ ಸಂಸ್ಥೆಗಳು ಪ್ರಾಚೀನ ಕಾಲದಿಂದಲೂ ಇರುವುದು ಕಂಡುಬರುತ್ತದೆ. ಪ್ರಾಚೀನ ಕರ್ನಾಟಕದಲ್ಲಿ ಉನ್ನತ ಶಿಕ್ಷಣ ಕೇಂದ್ರಗಳಾಗಿದ್ದ ಅಗ್ರಹಾರ, ಬ್ರಹ್ಮಪುರಿ, ದೇವಸ್ಥಾನ(ದೇವಸ್ಥಾನ ಕ್ರಮೇಣ ಮಠವೆಂಬ ಹೆಸರು ಪಡೆಯಿತು) ಹಾಗೂ ಘಟಿಕ ಸ್ಥಾನಗಳು ಸರ್ಕಾರದಿಂದ ಮತ್ತು ಸಾರ್ವಜನಿಕರಿಂದ ಅಗತ್ಯವಾದ ನೆರವನ್ನು ಪಡೆಯುತ್ತಿದ್ದರೂ ಸ್ವತಂತ್ರವಾಗಿ ಆಡಳಿತ ನಡೆಸುವ ಖಾಸಗಿ ಶಿಕ್ಷಣ ಸಂಸ್ಥೆಗಳಾಗಿದ್ದವು.[೬೪] (ಪ್ರಚಲಿತ ಶಿಕ್ಷಣ ಒಂದು ಚಿಂತನೆ ಪು.೪೧) ಇವುಗಳು ಕೇವಲ ಬ್ರಾಹ್ಮಣ ವರ್ಗಕ್ಕೆ ಮಾತ್ರ ಸೀಮಿತವಾಗಿದ್ದವು. ಆದರೆ ಆಧುನಿಕ ಕಾಲದ ಸಂದರ್ಭದಲ್ಲಿ ಬ್ರಾಹ್ಮಣೇತರರು ಸಹ ಅನೇಕ ಶೈಕ್ಷಣಿಕ ಕೇಂದ್ರಗಳನ್ನು ತೆರೆದಿರುವುದು ಕಂಡುಬರುತ್ತದೆ. ಈ ಕಾಲದಲ್ಲಿ ಅವಶ್ಯವಿರುವಷ್ಟು ಶಿಕ್ಷಣ ಕೇಂದ್ರಗಳು ಇರಲಿಲ್ಲ. ಬ್ರಿಟಿಷರು ಭಾರತವನ್ನು ಆಳುತ್ತಿದ್ದಾಗ ಭಾರತೀಯರಿಗೆ ಅವಶ್ಯವಿರುವಷ್ಟು ಶಿಕ್ಷಣ ಸಂಸ್ಥೆಗಳನ್ನು ಬ್ರಿಟಿಷ್ ಸರ್ಕಾರ ತೆರೆದಿರಲಿಲ್ಲ. ಈ ಕೊರತೆಯನ್ನು ತುಂಬಲು ಭಾರತೀಯರಿಗೂ ವಿದ್ಯಾಭ್ಯಾಸದ ಸೌಲಭ್ಯಗಳನ್ನು ವಿಸ್ತರಿಸುವ ಘನ ಉದ್ದೇಶದಿಂದ ಖಾಸಗಿ ಶಿಕ್ಷಣ ಸಂಸ್ಥೆಗಳು ಜನ್ಮತಾಳಿದವೆಂದು ತಿಳಿದುಬರುತ್ತದೆ.[೬೫] (ಪ್ರಚಲಿತ ಶಿಕ್ಷಣ ಪು.೫) ಅಲ್ಲಿಂದ ಆರಂಭಗೊಂಡ ಖಾಸಗಿ ಶಿಕ್ಷಣ ಸಂಸ್ಥೆಗಳು ಇಂದಿಗೂ ಸಹ ತೆರೆಯುತ್ತಲೇ ಹೋಗುತ್ತಿರುವುದು ಕಂಡುಬರುತ್ತದೆ. ಮೊದಲು ಇಂತಹ ಸಂಸ್ಥೆಗಳನ್ನು ಸ್ಥಾಪನೆ ಮಾಡಿದ್ದು ಕ್ರೈಸ್ತ ಮಿಷನರಿಗಳು. ಆನಂತರದಲ್ಲಿ ಮಠ-ಮಾನ್ಯಗಳು ಹಾಗೂ ವಿವಿಧ ಸಂಘಸಂಸ್ಥೆಗಳು ಈ ಮಾರ್ಗ

ಹಿಡಿದಿವೆ. ಈ ಹಿನ್ನೆಲೆಯಲ್ಲಿ ಇಂದು ಸರ್ಕಾರದಿಂದ ಅನುದಾನ ಪಡೆಯುವ ಮತ್ತು ಶಾಶ್ವತ ಅನುದಾನರಹಿತ ಶಿಕ್ಷಣ ಸಂಸ್ಥೆಗಳು ಇರುವುದು ಕಂಡುಬರುತ್ತದೆ. ಸ್ವಾತಂತ್ರ ಪೂರ್ವ ಮತ್ತು ನಂತರದ ಕರ್ನಾಟಕದಲ್ಲಿ ಸ್ಥಾಪನೆಗೊಂಡಂತೆ ಶೈಕ್ಷಣಿಕ ಸಂಸ್ಥೆಗಳನ್ನು ತೆರೆಯುವುದರಲ್ಲಿ ಪ್ರಮುಖ ಜಾತಿಗಳೆಂದರೆ ಲಿಂಗಾಯಿತರು ಮತ್ತು ಒಕ್ಕಲಿಗರು. ಈ ಜನಾಂಗದವರ ಮೇಲ್ವಿಚಾರಣೆಯಲ್ಲಿ ಶೈಕ್ಷಣಿಕ ಸಂಸ್ಥೆಗಳನ್ನು ಕರ್ನಾಟಕದ ಉದ್ದಗಲಕ್ಕೂ ಕಂಡುಬರುತ್ತವೆ. ಈ ರೀತಿಯಾಗಿ ಜಾತಿ ಸಂಘ-ಸಂಸ್ಥೆ, ಮಠಮಾನ್ಯಗಳು ಶೈಕ್ಷಣಿಕ ಸಂಸ್ಥೆಗಳ ಸ್ಥಾಪನೆ ಸ್ವಾತಂತ್ರ ಪೂರ್ವದಿಂದಲೇ ಆರಂಭಗೊಂಡಿವೆ. ಈ ಹಿನ್ನೆಲೆಯಲ್ಲಿ ಕೆಳಜಾತಿ ಮಠಗಳು ಸಂಘ-ಸಂಸ್ಥೆಗಳು ಶೈಕ್ಷಣಿಕ ಸಂಸ್ಥೆಗಳನ್ನು ತೆರೆಯಲು ಆರಂಭಿಸಿರುವುದು ಸ್ವಾತಂತ್ರ್ಯಪೂರ್ವದಲ್ಲಿ ಕಂಡುಬಂದರೂ ಅವು ಬೆರಳೆಣಿಕೆಯಷ್ಟು ಅದರಲ್ಲೂ ಅವು ಕೇವಲ ಸರ್ಕಾರದ ಅನುಧಾನವನ್ನೆ ಆಶ್ರಯಿಸಿ ನಡೆಯುವಂತವುಗಳಾಗಿದ್ದವು. ಈ ವರ್ಗ ಶೈಕ್ಷಣಿಕ ಸಂಸ್ಥೆಗಳನ್ನು ಹೆಚ್ಚು ಹೆಚ್ಚು ತೆರೆಯಲು ಅವಲಂಬಿಸಿದ್ದು ೮೦ರ ದಶಕದಲ್ಲಿ. ಅಲ್ಲಿಂದ ಇವರು ಅನೇಕ ಸಂಸ್ಥೆಗಳನ್ನು ತೆರೆದು ಶೈಕ್ಷಣಿಕ ಕ್ಷೇತ್ರಕ್ಕೆ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿವೆ. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಮಾದಿಗರು ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಸ್ಥಾಪನೆ ಮಾಡಿರುವ ವಿವಿಧ ಶೈಕ್ಷಣಿಕ ಸಂಸ್ಥೆಗಳ ಬಗ್ಗೆ ತಿಳಿಯಲು ಪ್ರಯತ್ನಿಸಲಾಗಿದೆ.

**ಚಿತ್ರದುರ್ಗ ಜಿಲ್ಲೆ :** ಈ ಜಿಲ್ಲೆಯಲ್ಲಿ ಮಾದಿಗ ಜನಾಂಗದವರು ವಿವಿಧ ಸಂಘ-ಸಂಸ್ಥೆಗಳ ಹೆಸರಲ್ಲಿ ಅನೇಕ ಶಾಲಾಕಾಲೇಜುಗಳು ಮತ್ತು ಹಾಸ್ಟಲ್‌ಗಳನ್ನು ತೆರೆದಿದ್ದಾರೆ. ಚಿತ್ರದುರ್ಗ, ಚಳ್ಳಕೆರೆ, ಹಿರಿಯೂರು, ಹೊಳಲ್ಕೆರೆ, ಹೊಸದುರ್ಗ, ಹಾಗೂ ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಮಾದಿಗರು ತೆರೆದಿರುವಂತಹ ಶೈಕ್ಷಣಿಕ ಸಂಸ್ಥೆಗಳು ಕಂಡುಬರುತ್ತವೆಯಾದರೂ ಹೆಚ್ಚಿನ ಸಂಖ್ಯೆಯಲ್ಲಿ ಚಿತ್ರದುರ್ಗ, ಹಿರಿಯೂರು ಹಾಗೂ ಚಳ್ಳಕೆರೆ ತಾಲ್ಲೂಕುಗಳಲ್ಲಿ ಮಾತ್ರವೇ ಕಂಡುಬರುತ್ತವೆ. ಇವು ಈ ಜಿಲ್ಲೆಯಲ್ಲಿ ಮಾದಿಗರು ಮಾತ್ರವಲ್ಲದೇ ಇತರೆ ಜನಾಂಗದ ಶೈಕ್ಷಣಿಕ ಪ್ರಗತಿಯಲ್ಲಿ ಪ್ರಮುಖ ಪಾತ್ರವಹಿಸಿವೆ. ಈ ಹಿನ್ನೆಲೆಯಲ್ಲಿ ಇಲ್ಲಿ ಮಾದಿಗ ಜನಾಂಗದ ಮೇಲ್ವಿಚಾರಣೆ ಹೊಂದಿರುವ ಶೈಕ್ಷಣಿಕ ವಿದ್ಯಾಸಂಸ್ಥೆಗಳ ಬಗ್ಗೆ ತಿಳಿಸಲಾಗಿದೆ. ಈಗಾಗಲೇ ಮಾದಿಗ ಜನಾಂಗದ ಶೈಕ್ಷಣಿಕ ಅಭಿವೃದ್ಧಿಯಲ್ಲಿ ಹಾಸ್ಟಲ್‌ಗಳ ಪಾತ್ರ ಎಂಬ ಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿರುವ ಕೆಲವು ಸಂಸ್ಥೆಗಳನ್ನು ಹೊರತು ಪಡಿಸಿ ಉಳಿದವುಗಳನ್ನು ಮಾತ್ರವೇ ವಿವರಿಸಲಾಗಿದೆ.

**ಬಾಪೂಜಿ ವಿದ್ಯಾಸಂಸ್ಥೆ :** ಬಾಪೂಜಿ ವಿದ್ಯಾಸಂಸ್ಥೆಯ ಚಿತ್ರದುರ್ಗ ಜಿಲ್ಲೆಯ ಒಂದು ಪ್ರಮುಖ ವಿದ್ಯಾಸಂಸ್ಥೆಯಾಗಿದೆ. ಇದರ ಸಂಸ್ಥಾಪಕರಲ್ಲಿ ಮಾದಿಗ ಜನಾಂಗದ ಒಬ್ಬರು ಮಾಜಿ ಸಚಿವ ಡಿ.ಮಂಜುನಾಥ್ ಇವರು ಸಂಸ್ಥೆಯ ಅಧ್ಯಕ್ಷರು ಕೂಡ. ಈ ಸಂಸ್ಥೆಯು ಚಿತ್ರದುರ್ಗ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ೧೨ಕ್ಕೂ ಹೆಚ್ಚು ಶಾಲಾ ಕಾಲೇಜುಗಳನ್ನು ಸ್ಥಾಪನೆ ಮಾಡಲಾಗಿದೆ. ಅವುಗಳು ಹೆಚ್ಚಿನ ಸಂಖ್ಯೆಯಲ್ಲಿ ಚಳ್ಳಕೆರೆ ಮತ್ತು ಚಿತ್ರದುರ್ಗದಲ್ಲಿವೆ. ಪ್ರೌಢಶಾಲೆ, ಪದವಿಪೂರ್ವ ಕಾಲೇಜು,

ವಿದ್ಯಾರ್ಥಿನಿಲಯ, ದೈಹಿಕ ಶಿಕ್ಷಣ ಕಾಲೇಜು, ಪ್ರಥಮ ದರ್ಜೆ ಕಾಲೇಜು ಮಾತ್ರವಲ್ಲದೆ ಆಯುರ್ವೇದಿಕ್ ಮೆಡಿಕಲ್ ಕಾಲೇಜನ್ನು ಸಹ ತೆರೆದಿದ್ದಾರೆ. ಇವುಗಳಲ್ಲಿ ಕೆಲವು ಪಟ್ಟಣ ಪ್ರದೇಶದಲ್ಲಿ ಮಾತ್ರವಲ್ಲದೇ ಗ್ರಾಮಾಂತರ ಪ್ರದೇಶಗಳಲ್ಲಿಯೂ ತೆರೆದಿರುವುದರಿಂದ ಆ ಭಾಗದಲ್ಲಿ ನೆಲೆಸಿರುವವರಿಗೆ ಶಿಕ್ಷಣ ಕಲಿಯಲು ಹೆಚ್ಚು ಅನುಕೂಲ ಮಾಡಿಕೊಟ್ಟಿವೆ.

**ವಿಮೋಚನಾ ವಿದ್ಯಾಸಂಸ್ಥೆ :** ಈ ಸಂಸ್ಥೆಯನ್ನು ಸ್ಥಾಪನೆ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿದವರು ದಲಿತ ಸಂಘರ್ಷ ಸಮಿತಿಯ ಮುಖಂಡರಾದ ಎಂ.ಜಯಣ್ಣ, ಡಿ.ದುರುಗೇಶ್ ಹಾಗೂ ಸಿ.ಕೆ.ಮಹೇಶ್ ಚಿತ್ರದುರ್ಗ ನಗರ ಪ್ರದೇಶದಲ್ಲಿ ಜೆ.ಜೆ.ಹಟ್ಟಿ ಕೊಳಗೇರಿಯಲ್ಲಿನ ಮಕ್ಕಳಿಗೆ ಶಿಕ್ಷಣ ಸೌಲಭ್ಯ ಕಲಿಸಿಕೊಡುವ ಉದ್ದೇಶದಿಂದ ಸ್ಥಾಪನೆ ಮಾಡಲಾಗಿದೆ. ಇದು ಒಂದು ಪ್ರೈಮರಿಶಾಲೆಯನ್ನು ಮಾತ್ರವೇ ಒಳಗೊಂಡಿದೆ.

**ದೇವರಾಜು ಅರಸ್ ವಿದ್ಯಾಸಂಸ್ಥೆ :** ಚಿತ್ರಧುರ್ಗ ಜಿಲ್ಲೆಯಲ್ಲಿ ಪ್ರಮುಖ ಸಂಸ್ಥೆಗಳಲ್ಲಿ ಇದು ಒಂದು. ಇದರ ಸಂಸ್ಥಾಪಕರು ಮಾದಿಗ ಜನಾಂಗಕ್ಕೆ ಸೇರಿದ ನಿಂಗಣ್ಣನವರು ಈ ಸಂಸ್ಥೆಯ ಅಡಿಯಲ್ಲಿ ಸುಮಾರು ೧೦ಕ್ಕೂ ಹೆಚ್ಚು ಶಾಲಾ ಕಾಲೇಜುಗಳು ಸ್ಥಾಪನೆಗೊಂಡು ಅವು ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳೆರಡರಲ್ಲಿಯೂ ಹರಡಿಕೊಂಡಿವೆ. ಚಿತ್ರದುರ್ಗ ನಗರದಲ್ಲಿ ಪಿ.ಯು.ಕಾಲೇಜು, ನರ್ಸಿಂಗ್ ತರಬೇತಿ, ಡಯರಿಂಗ್ ಡಿಪ್ಲಮೋ ಅಲ್ಲದೆ ಒಂದು ಆಯುರ್ವೇದಿಕ್ ಮೆಡಿಕಲ್ ಕಾಲೇಜನ್ನು ಹೊಂದಿರುವುದು ಸಹ ಕಂಡುಬರುತ್ತದೆ.

**ಮಾರುತಿ ವಿದ್ಯಾಸಂಸ್ಥೆ :** ಇದು ಹಿರಿಯೂರು ತಾಲ್ಲೂಕಿನ ಕಸ್ತೂರಿರಂಗಪ್ಪನಹಳ್ಳಿ ಗ್ರಾಮದಲ್ಲಿ ೧೯೮೬-೮೭ರಲ್ಲಿ ಸ್ಥಾಪನೆಗೊಂಡಿದೆ. ಇದರ ಸಂಸ್ಥಾಪಕರು ಅದೇ ಗ್ರಾಮದ ಪ್ರೈಮರಿ ಶಾಲಾ ಹೆಡ್ ಮಾಸ್ಟರ್ ಆಗಿದ್ದ ಹೆಚ್ .ರಾಮಚಂದ್ರಪ್ಪನವರು. ಈ ಸಂಸ್ಥೆಯು ಇಂದು ಆದಿವಾಲ ಗ್ರಾಮದಲ್ಲಿ ಒಂದು ಬಾಲಕರ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯವನ್ನು, ಹಿರಿಯೂರು ಪಟ್ಟಣದ ವೇದಾವತಿನಗರದಲ್ಲಿ ಒಂದು ಬಾಲಕಿಯರ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯವನ್ನು ಹೊಂದಿದೆ.

**ರಂಗನಾಥ ವಿದ್ಯಾಸಂಸ್ಥೆ :** ಈ ಸಂಸ್ಥೆಯು ೧೯೯೧ರಲ್ಲಿ ಸ್ಥಾಪನೆಗೊಂಡಿದ್ದು ಇದರ ಸಂಸ್ಥಾಪಕರು ಗೋವಿಂದರಾಜು.ಪಿ.ಕೆ, ಈ ಸಂಸ್ಥೆಯ ಆಶ್ರಯದಲ್ಲಿ ಬಾಲಕಿಯರ ಪ್ರೌಢಶಾಲೆ ನಡೆಯುತ್ತದೆ. (ಹಿರಿಯೂರು ತಾಲ್ಲೂಕು)

**ಮಾರುತಿ ವಿದ್ಯಾಸಂಸ್ಥೆ :** ಹಿರಿಯೂರು ತಾಲ್ಲೂಕಿನಲ್ಲಿ ಈ ಜನಾಂಗದವರೆ ನಡೆಸುತ್ತಿರುವ ಮತ್ತೊಂದು ಮಾರುತಿ ವಿದ್ಯಾಸಂಸ್ಥೆ ಇದ್ದು ಇದರ ಆಶ್ರಯದಲ್ಲಿ ಗುಯಿಲಾಳು ಗ್ರಾಮದಲ್ಲಿ ಮತ್ತು ಹಿರಿಯೂರಿನ ವೇದಾವತಿನಗರದಲ್ಲಿ ಒಂದೊಂದು ಪ್ರೌಢಶಾಲೆ ಹೊಂದಿದೆ.

**ಡಾ. ಬಿ.ಆರ್. ಅಂಬೇಡ್ಕರ್ ವಿದ್ಯಾಸಂಸ್ಥೆ :** ಈ ಸಂಸ್ಥೆಯು ಹಿರಿಯೂರು ಪಟ್ಟಣದಲ್ಲಿದ್ದು ಇದರ

ಆಶ್ರಯದಲ್ಲಿ ಒಂದು ಪದವಿಪೂರ್ವ ಕಾಲೇಜು ನಡೆಯುತ್ತಿದೆ. ಈ ಸಂಸ್ಥೆಯು ಬಿ.ಪಿ.ತಿಪ್ಪೇಸ್ವಾಮಿ ಅವರ ಮೇಲ್ವಿಚಾರಣೆಯಲ್ಲಿರುವುದು ಕಂಡುಬರುತ್ತದೆ.

**ಪಂಚಲಿಂಗೇಶ್ವರ ವಿದ್ಯಾ ಸಂಸ್ಥೆ :** ಹಿರಿಯೂರು ತಾಲ್ಲೂಕಿನ ಧರ್ಮಪುರ ಗ್ರಾಮದಲ್ಲಿ ಈ ಸಂಸ್ಥೆಯಿದ್ದು, ಈ ಸಂಸ್ಥೆಯ ಸ್ಥಾಪಕರು ಬಸಪ್ಪ ಎಂಬುವರು. ಇದರ ಆಶ್ರಯದಲ್ಲಿ ಇಂದು ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯ ನಡೆಯುತ್ತಿದೆ.

**ಡಾ. ಬಿ.ಆರ್. ಅಂಬೇಡ್ಕರ್ ವಿದ್ಯಾಸಂಸ್ಥೆ :** ಹಿರಿಯೂರು ತಾಲ್ಲೂಕಿನ ಧರ್ಮಪುರ ಗ್ರಾಮದಲ್ಲಿ ಈ ಸಂಸ್ಥೆ ಇದೆ. ಇದರ ಸಂಸ್ಥಾಪಕರು ಗೌರಿಶಂಕರ್. ಈ ಸಂಸ್ಥೆಯ ಆಶ್ರಯದಲ್ಲಿ ಪ್ರೈಮರಿ ಮತ್ತು ಪ್ರೌಢಶಾಲೆಗಳು ನಡೆಯುತ್ತಿವೆ.

**ದುರ್ಗಾ ಎಜುಕೇಷನ್ ಸೊಸೈಟಿ :** ಇದು ಮೊಳಕಾಲ್ಮೂರು ತಾಲ್ಲೂಕಿನಲ್ಲಿದೆ. ಮೂರ್ತಿ ಎಂಬುವರು ಇದರ ಸಂಸ್ಥಾಪಕರಾಗಿದ್ದು ಈ ಸಂಸ್ಥೆಯ ಆಶ್ರಯದಲ್ಲಿ ಒಂದು ಪ್ರೌಢಶಾಲೆ ನಡೆಯುತ್ತಿದೆ. ಇವುಗಳಿಗೆ ಅಲ್ಲದೆ ಇನ್ನು ಕೆಲವು ಖಾಸಗಿ ಸಂಸ್ಥೆಗಳನ್ನು ಮಾದಿಗ ಜನಾಂಗದವರು ಹಲವು ಕಡೆ ಸ್ಥಾಪಿಸಿ ವಿದ್ಯಾಭ್ಯಾಸಕ್ಕೆ ಅನುಕೂಲಮಾಡಿಕೊಟ್ಟಿದ್ದಾರೆ.

**ಬಳ್ಳಾರಿ ಜಿಲ್ಲೆ :** ಬಳ್ಳಾರಿ ಜಿಲ್ಲೆಯಲ್ಲಿ ಖಾಸಗಿ ಶೈಕ್ಷಣಿಕ ಸಂಸ್ಥೆಗಳನ್ನು ಮಾದಿಗರು ತೆರೆದಿರುವುದು ತುಂಬಾ ಕಡಿಮೆ ಎನ್ನಬಹುದು. ಆದರೂ ಕೆಲವು ಕಡೆ ತೆರೆದು ಶಿಕ್ಷಣ ಕಲಿಯಲು ಸಹಕರಿಸಿದ್ದಾರೆ. ಈ ಜಿಲ್ಲೆಯ ಕೆಲವು ಖಾಸಗಿ ಸಂಸ್ಥೆಗಳು ಹೀಗಿವೆ.

**ಡಾ.ಅಂಬೇಡ್ಕರ್ ವಿದ್ಯಾ ಸಂಸ್ಥೆ :** ಈ ಸಂಸ್ಥೆಯು ಸಿರುಗುಪ್ಪ ತಾಲ್ಲೂಕಿನ ತಾಳೂರು ಗ್ರಾಮದಲ್ಲಿ ಸ್ಥಾಪಿತವಾಗಿದೆ. ಇದರ ಸಂಸ್ಥಾಪಕರು ಬೇವಿನಮರದ ಈ ಸಂಸ್ಥೆಯ ಅಡಿಯಲ್ಲಿ ಒಂದು ಪ್ರೌಢಶಾಲೆ ನಡೆಯುತ್ತಿದೆ.

**ಶ್ರೀ ಬುದ್ಧ ವಿದ್ಯಾ ಸಂಸ್ಥೆ :** ಈ ಸಂಸ್ಥೆಯು ಸಿರುಗುಪ್ಪ ತಾಲ್ಲೂಕಿನ ಇಬ್ರಾಹಿಂಪುರ ಗ್ರಾಮದಲ್ಲಿದೆ. ಇದರ ಸಂಸ್ಥಾಪಕರು ಎಚ್‌ಬಿ.ಗಂಗಪ್ಪ. ಈ ಸಂಸ್ಥೆಯ ಅಡಿಯಲ್ಲಿ ಪ್ರಾಥಮಿಕ ಶಾಲೆ ತೆರೆಯಲಾಗಿದೆ.

**ಜೈಭೀಮ್ ವಿದ್ಯಾ ಸಂಸ್ಥೆ :** ಈ ಸಂಸ್ಥೆಯು ಹೊಸಪೇಟೆಯಲ್ಲಿದ್ದು, ಇದು ಹಂಪಿ ಚಿತ್ರಕಲಾ ಮಹಾವಿದ್ಯಾಲಯ ತೆರೆದು ಚಿತ್ರಕಲಾವಿದರಿಗೆ ಶಿಕ್ಷಣ ನೀಡುತ್ತಿದೆ. ೧೯೮೭-೮೮ರಲ್ಲಿ ಸ್ಥಾಪನೆಗೊಂಡ ಈ ಸಂಸ್ಥೆಯ ಸ್ಥಾಪಕರು ಮಾದಿಗ ಜನಾಂಗಕ್ಕೆ ಸೇರಿದ ಬಿ.ರಾಮಣ್ಣನವರು.

**ಪರುಶರಾಮ ಪ.ಜಾತಿ ಮಹಿಳೆ ಮಕ್ಕಳ ಅಭಿವೃದ್ಧಿ ಸಂಸ್ಥೆ :** ಈ ಸಂಸ್ಥೆಯನ್ನು ಇತ್ತೀಚೆಗೆ ಹೊಸಪೇಟೆ ನಗರದಲ್ಲಿ ತೆರೆಯಲಾಗಿದ್ದು ಇದರ ಸ್ಥಾಪಕರು ಶಿಕ್ಷಕರಾದ ಹನುಮಂತಪ್ಪನವರು. ಈ ಸಂಸ್ಥೆಯ ಅಡಿಯಲ್ಲಿ ಮದರ್ ಇಂಡಿಯಾ ಕಿರಿಯ ಪ್ರಾಥಮಿಕ ಶಾಲೆ ನಗರದಲ್ಲಿ ನಡೆಯುತ್ತದೆ.

ಇವುಗಳೇ ಅಲ್ಲದೇ ಇನ್ನೂ ಹಲವಾರು ಕಡೆ ಖಾಸಗಿ ಶಿಕ್ಷಣ ಸಂಸ್ಥೆಗಳು ಮಾದಿಗರಿಂಡ ಸ್ಥಾಪನೆಗೊಂಡು ಆ ಭಾಗದ ಮಕ್ಕಳ ಶೈಕ್ಷಣಿಕ ಸೌಲಭ್ಯ ಒದಗಿಸಿರುವುದು ಕಂಡು ಬರುತ್ತದೆ ಆದರೆ ಚಿತ್ರದುರ್ಗ ಜಿಲ್ಲೆಗೆ ಹೋಲಿಕೆ ಮಾಡಿ ನೋಡಿದರೆ ಬಳ್ಳಾರಿ ಜಿಲ್ಲೆಯಲ್ಲಿ ಮಾದಿಗರು ನಡೆಸುವ ಖಾಸಗಿ ಸಂಸ್ಥೆಗಳು ಕಡಿಮೆ.

**ಅಡಿಟಿಪ್ಪಣಿಗಳು**

೧. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೪

೨. ಮಾನವ ಅಭಿವೃದ್ಧಿಯ ಪ್ರಾದೇಶಿಕ ಆಯಾಮಗಳ ಅಧ್ಯಯನ, ಜೆ.ಕೃಷ್ಣ, ೨೦೦೧, ಪು.೨೨೬

೩. ಮೈಸೂರು ಬಸವಯ್ಯ, ಎಚ್.ದೇವಿರಪ್ಪ, ಪು.೬

೪. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ಎಸ್.ಚಂದ್ರಶೇಖರ್, ೧೯೮೫, ಪು.೨೮

೫. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೨೦೮

೬. ಹಿಂದುಳಿದ ವರ್ಗಗಗಳ ಮತ್ತು ದಲಿತ ಚಳವಳಿಗಳು, ಲಕ್ಷ್ಮಣ್ ತೆಲಗಾವಿ, ೧೯೯೩, ಪು.೭೩

೭. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೨೦೮

೮. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ೧೯೮೫, ಪು.೫೫

೯. ದಿವಾನ್ ಸರ್ ಎಂ.ವಿಶ್ವೇಶ್ವರಯ್ಯ, ಡಿ.ಎಸ್.ಜಯಪ್ಪಗೌಡ, ೧೯೯೪, ಪು.೧೧೨

೧೦. ಅದೇ, ಪು.೧೧೨

೧೧. ಮೈಸೂರು ಬಸವಯ್ಯ, ಎಚ್.ದೇವಿರಪ್ಪ, ಪು.೩೭

೧೨. ಇತಿಹಾಸದರ್ಶನ ಸಂ-೯, ಕರ್ನಾಟಕ ಇತಿಹಾಸ ಅಕಾಡೆಮಿ, ಪು.೨೨೯

೧೩. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ೧೯೮೫, ಪು.೮೦

೧೪. ಅದೇ, ಪು.೬೭

೧೫. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೨೦೮

೧೬. ಮುಟ್ಟಿಸಿಕೊಂಡವರು, ಬಿ.ವಿ.ವೀರಭದ್ರಪ್ಪ ಮತ್ತು ಬಿ.ಟಿ.ಜಾಹ್ನವಿ, ೧೯೯೮, ಪು.೧೭೫

೧೭. ಅದೇ, ಪು.೧೭೫

೧೮. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೧, ಪು.೨೦೯

೧೯. ಅದೇ, ಪು.೨೧೦

೨೦. ಅದೇ, ಪು.೨೧೦

೨೧. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ೧೯೮೫, ಪು.೬೬

೨೨. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೨, ೧೯೮೫, ಪು.೪೦೭

೨೩. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ೧೯೮೫, ಪು.೯೭

೨೪. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೨೧೧

೨೫. ಶೋಷಿತ ಜಂಗಮರ ಮೀಸಲಾತಿ, ದಾಸನೂರು ಕೂಸಣ್ಣ, ೧೯೯೯, ಪು.೫೫

೨೬. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ಎಸ್.ಚಂದ್ರಶೇಖರ್, ೧೯೮೫, ಪು.೮೨

೨೭. ಮೈಸೂರು ರಾಜ್ಯ, ೧೯೫೬, ಪು ೩೮೦

೨೮. ಅದೇ, ಪು.೫೩೨

೨೯. ಅದೇ, ಪು.೫೩೬

೩೦. ಅದೇ, ಪು.೩೩೨

೩೧. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೨೧೧

೩೨. ಅದೇ, ಪು.೨೧೨

೩೩. ಕ್ರಿಯಾ ಯೋಜನೆ, ೨೦೦೦-೦೧, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು, ಪು.೬

೩೪. ಮೈಸೂರು ರಾಜ್ಯ ಗ್ಯಾಸೆಟಿಯರ್, ಬಳ್ಳಾರಿ, ೧೯೭೨, ಪು.೫೪೩

೩೫. ಕರ್ನಾಟಕ ಅಭಿವೃದ್ಧಿ ಮಾಹಿತಿ ಕೋಶ, ಪು ೬೨

೩೬. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೧೬

೩೭. ಅದೇ, ಪು.೧೬

೩೮. ಮೈಸೂರು ರಾಜ್ಯ, ೧೯೫೬, ಪು.೩೮೭

೩೯. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೧೯

೪೦. ಅದೇ ಪು ೧೯

೪೧. ಮೈಸೂರು ರಾಜ್ಯ ಗ್ಯಾಸೆಟಿಯರ್, ಚಿತ್ರದುರ್ಗ, ೧೯೬೭, ಪು.೩೪೩

೪೨. ಅದೇ, ಪು.೫೪೨

೪೩. ಮೈಸೂರು ರಾಜ್ಯ, ೧೯೫೬, ಪು.೩೮೮

೪೪. ಮೈಸೂರು ರಾಜ್ಯ ಗ್ಯಾಸೆಟಿಯರ್, ಚಿತ್ರದುರ್ಗ, ೧೯೬೭, ಪು.೩೪೬

೪೫. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ತೃತೀಯ ಸಂಪುಟ, ಪು.೮೭೧

೪೬. ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಬಿ.ಶೇಷಾದ್ರಿ. ಟಿ.ಆರ್.ಚಂದ್ರಶೇಖರ್, ೧೯೯೮, ಪು.೯೨

೪೭. ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ಪ್ರೊ.ಲಕ್ಷ್ಮಣ ತೆಲಗಾವಿ, ೧೯೯೯, ಪು.೭೬

೪೮. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೨೦೯

೪೯. ಅದೇ, ಪು.೨೦೯

೫೦. ಅದೇ, ಪು.೨೦೯

೫೧. ಅದೇ, ಪು.೨೦೯

೫೨. ಅದೇ, ಪು.೨೧೦

೫೩. ಅದೇ, ಪು.೨೧೫

೫೪. ಅದೇ, ಪು.೨೧೪

೫೫. ಕ್ರಿಯಯೋಜನೆ ೨೦೦೦-೦೧, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು, ಪು.೩೮

೫೬. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ೧೯೮೬, ಪು.೨೧೨

೫೭. ಅದೇ, ಪು.೨೧೨

೫೮. ಅದೇ, ಪು.೨೧೨

೫೯. ಅದೇ, ಪು.೨೧೨-೨೧೩

೬೦. ಅದೇ, ಪು.೨೧೩

೬೧. ಅದೇ, ಪು.೨೧೨

೬೨. ಅದೇ, ಪು.೨೧೩

೬೩. ಅದೇ, ಪು.೨೧೨

೬೪. ಪ್ರಚಲಿತ ಶಿಕ್ಷಣ ಒಂದು ಚಿಂತನೆ, ರೇಣುಕ ಪ್ರಸನ್ನ ಮ.ಗಂ, ೧೯೭೯, ಪು.೪೧

೬೫. ಅದೇ. ಪು.೫

ಅಧ್ಯಾಯ ೬

# ಆಧುನಿಕ ರಾಜಕಾರಣ ಮತ್ತು ಮಾದಿಗರು

೬.೧ ವಸಾಹತು ಸಂದರ್ಭದ ಪ್ರಾತಿನಿಧಿಕ ಸಂಸ್ಥೆಗಳು ಮತ್ತು ಮಾದಿಗರು

೬.೨ ಸ್ವಾತಂತ್ರ್ಯಾನಂತರದ ಪ್ರಾತಿನಿಧಿಕ ಸಂಸ್ಥೆಗಳು ಮತ್ತು ಮಾದಿಗರು

೬.೩ ೧೯೭೩ರ ನಂತರದ ಸ್ಥಳೀಯ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಮಾದಿಗರು

೬.೪ ಶಾಸನ ಸಭೆ ಮತ್ತು ವಿವಿಧ ಬೋರ್ಡ್‌ಗಳಲ್ಲಿ ಮಾದಿಗರ ಪ್ರಾತಿನಿಧ್ಯ

೬.೫ ವಿವಿಧ ರಾಜಕೀಯ ಪಕ್ಷಗಳು ಮತ್ತು ಮಾದಿಗರು

೬.೬ ಮಾದಿಗರ ಪ್ರತ್ಯೇಕ ಮೀಸಲಾತಿ ಹೋರಾಟ ಮತ್ತು ವರ್ಗೀಕರಣ ಮೀಸಲಾತಿ ಹೋರಾಟ

ಭಾರತದ ರಾಜಕೀಯ ಚರಿತ್ರೆ ಎಂದರೆ ವಿವಿಧ ಕಾಲಘಟ್ಟಗಳಲ್ಲಿ ವಿವಿಧ ರಾಜವಂಶಗಳ ಆಳ್ವಿಕೆ ಮಾಡಿರುವ ವಿವರಗಳುಳ್ಳ ಬೃಹತ್ ಗ್ರಂಥ ಎನ್ನಬಹುದು. ಇಲ್ಲಿ ಕೇವಲ ರಾಜತ್ವ ಮತ್ತು ಪುರೋಹಿತಶಾಹಿಗಳ ಕುರಿತು ಸಮಗ್ರ ಚಿತ್ರಣ ದೊರೆಯುತ್ತದೆ. ಅಂದಿನ ಸಾಮಾಜಿಕ ಸಂದರ್ಭದಲ್ಲಿ ವಾಸಿಸುತ್ತಿದ್ದ ಜನಸಮುದಾಯಗಳ ಬಗೆಗೆ ಕೆಲವೊಂದು ಸಾಲು ಅಥವಾ ಪದಗಳಲ್ಲಿ ಉಲ್ಲೇಖವಾಗಿರುವುದು ಮಾತ್ರವೇ ಕಂಡುಬರುತ್ತದೆ. ರಾಜಪ್ರಭುತ್ವದಿಂದ ಹಿಡಿದು ವಸಾಹತುಶಾಹಿ ಕಾಲದವರೆಗೆ ರಾಜಕಾರಣದಲ್ಲಿ ಪ್ರಮುಖ ಪಾತ್ರವಹಿಸಿರುವವರು ಪುರೋಹಿತಶಾಹಿಗಳು. ಅನೇಕ ಸ್ವದೇಶಿ ರಾಜವಂಶಗಳು ಆಳ್ವಿಕೆ ನಡೆಸುತ್ತಿದ್ದ ಕಾಲಕ್ಕೆ ರಾಜಕರಣದಲ್ಲಿ ಪ್ರಮುಖ ಸಲಹೆಗಾರರನ್ನಾಗಿ ಬ್ರಾಹ್ಮಣ ವರ್ಗವನ್ನು ಆಯ್ಕೆ ಮಾಡಿಕೊಳ್ಳಲಾಗುತ್ತಿತ್ತು. ಈ ಕಾರಣದಿಂದಾಗಿ ಆ ಕಾಲಘಟ್ಟದಲ್ಲಿ ರಾಜತ್ವನ್ನು ಮತ್ತು ಪುರೋಹಿತಶಾಹಿಗಳ ಹೊರತು ಪಡಿಸಿ ಉಳಿದೆಲ್ಲಾ ಜನವರ್ಗಗಳೂ ರಾಜಕೀಯ ಪ್ರಜ್ಞೆಯಿಂದ ದೂರ ಉಳಿದುಕೊಂಡವು. ವಸಾಹತುಶಾಹಿ ಕಾಲಘಟ್ಟದಲ್ಲಿ ಆಧುನಿಕತೆ ಎನ್ನುವುದು ಆರಂಭವಾಗುತ್ತದೆ. ಕೇವಲ ವ್ಯಾಪಾರ ದೃಷ್ಟಿಯಿಂದ ಭಾರತಕ್ಕೆ ಬಂದ ಬ್ರಿಟಿಷರು ಇಲ್ಲಿಯ ಮೌಢ್ಯತೆ, ಅನಕ್ಷರತೆ, ಅನೈಕ್ಯತೆ, ಜಾತಿಪದ್ಧತಿ ಮುಂತಾದ ಅಂಶಗಳು ಇಲ್ಲಿ ಭದ್ರವಾಗಿ ನೆಲೆಯೂರಲು ಸಹಾಯಕವಾದವು. ಪರಿಣಾಮವಾಗಿ ಸುಮಾರು ಎರಡುನೂರಾ ಐವತ್ತು ವರ್ಷಗಳು ಈ ದೇಶವನ್ನು ಆಳ್ವಿಕೆ ಮಾಡಿದರು. ಇಂತಹ ಸಂದರ್ಭಗಳಲ್ಲೂ ಪ್ರಾಮುಖ್ಯತೆ ದೊರತದ್ದು ರಾಜಶಾಹಿ ವಂಶಸ್ಥರು ಹಾಗೂ ಪುರೋಹಿತಶಾಹಿಗೆ ಮಾತ್ರ. ಇವರ ಆಳ್ವಿಕೆಯ ಸಂದರ್ಭದಲ್ಲಿ ತಂದಂಥ ಅನೇಕ ಸುಧಾರಣೆಗಳು ಇಲ್ಲಿಯ ಜನ ಸಮುದಾಯಗಳಲ್ಲಿ ಜಾಗೃತಿಯನ್ನು ಮೂಡಿಸಿದವು. ಈ ಕಾಲಘಟ್ಟದಲ್ಲಿ ಆಧುನಿಕತೆಯ ಅಂಶಗಳಾದ ಆಧುನಿಕ ಶಿಕ್ಷಣ, ರೈಲ್ವೆ, ಟೆಲಿಫೋನ್, ರಸ್ತೆ ಮುಂತಾದ ಅಂಶಗಳ ಮೂಲಕ ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಪ್ರಗತಿಯನ್ನು ಸಾಧಿಸಿರುವ ದೇಶಗಳ ಪರಿಚಯವಾಯಿತು. ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದಾಗಿ ಭಾರತೀಯರು ವೈಜ್ಞಾನಿಕವಾಗಿ, ವೈಚಾರಿಕವಾಗಿ ಆಲೋಚನೆ ಮಾಡುವುದು ಆರಂಭವಾಯಿತು. ಅಲ್ಲಿಂದ ಅವರ ಆಲೋಚನ ಕ್ರಮವೇ ಬೇರೆಯಾಗಿ ಇಲ್ಲಿಯ ಸಾಮಾಜಿಕ ಅನಿಷ್ಟಗಳನ್ನು ವೈಜ್ಞಾನಿಕವಾಗಿ ಆಲೋಚನೆ ಮಾಡತೊಡಗಿದರು. ಜೊತೆಗೆ ವಿದೇಶಿಯರ ಕೈಯಲ್ಲಿ ಬಂಧಿತವಾಗಿರುವ ಭಾರತದ ಸ್ಥಿತಿಯನ್ನು ಕಂಡು ಮರುಗಿದರು. ಅಲ್ಲಿಂದ ಭಾರತೀಯರಿಗೆ ರಾಜಕೀಯ ಪ್ರಜ್ಞೆ ಜಾಗೃತಗೊಳ್ಳತೊಡಗಿತು.

ಆಧುನಿಕತೆಯ ಪರಿಣಾಮವಾಗಿ ಭಾರತೀಯರು ನಾವು ಬ್ರಿಟಿಷರ ಗುಲಾಮರಾಗಿದ್ದೇವೆ ಎಂಬುದನ್ನು ಮನಗಂಡು ಅವರ ವಿರುದ್ಧ ಹೋರಾಟ ಮಾಡುವ ಆಲೋಚನೆ ಮಾಡತೊಡಗಿದರು. ಈ ಹಿಂದೆ

ಅನೇಕ ದೇಶಿಯ ಅರಸರು ಬ್ರಿಟಿಷರ ವಿರುದ್ಧ ಹೋರಾಟ ಮಾಡಿದ್ದರೂ ಆ ಹೋರಾಟ ಕೇವಲ ರಾಜವಂಶ, ಪ್ರದೇಶ ಹಾಗೂ ಕೆಲವು ಹಕ್ಕುಗಳಿಗಾಗಿಯೇ ಸೀಮಿತವಾಗಿದ್ದರಿಂದ ಜಯ ಸಾಧಿಸಲಾಗಲಿಲ್ಲ. ಆದರೆ ೧೯ನೇ ಶತಮಾನದಲ್ಲೂ ಭಾರತೀಯರಲ್ಲಿ ಉಂಟಾದ ಜಾಗೃತಿ ಬ್ರಿಟಿಷರ ವಿರುದ್ಧ ಏಕತೆಯಿಂದ ಹೋರಾಟ ಮಾಡದ ಹೊರತು ಈ ದೇಶವನ್ನು ಬಿಡುಗಡೆ ಮಾಡಲು ಸಾಧ್ಯವಿಲ್ಲ ಎಂಬುದನ್ನು ಮನಗಂಡಿದ್ದರು. ಈ ಹಿನ್ನೆಲೆಯಲ್ಲಿ 'ಸ್ವಾತಂತ್ರ್ಯ ಹೋರಾಟ'ವನ್ನು ದೇಶದಾದ್ಯಂತ ಬ್ರಿಟಿಷರ ವಿರುದ್ಧ ಕಾಂಗ್ರೆಸ್ ನೇತೃತ್ವದಲ್ಲಿ ಮಾಡತೊಡಗಿದರು. ಇದೇ ಸಂದರ್ಭದಲ್ಲಿ ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದಿದ್ದ ಮೇಲು ಜಾತಿಗಳಿಂದ ವಿವಿಧ ರೀತಿಯಲ್ಲಿ ಶೋಷಣೆಗೆ ಗುರಿಯಾಗಿದ್ದ ಕೆಳಜಾತಿಗಳು ಮತ್ತೊಂದು ಕಡೆ ತಮ್ಮ ಮೇಲೆ ನಿರಂತರವಾಗಿ ನಡೆಯುತ್ತಿದ್ದ ಶೋಷಣೆಯ ವಿರುದ್ಧ ಡಾ.ಬಿ.ಆರ್.ಅಂಬೇಡ್ಕರ್ ನೇತೃತ್ವದಲ್ಲಿ ಸಾಮಾಜಿಕ ಸಮಾನತೆಗಾಗಿ ಕೆಳಜಾತಿಗಳು ಹೋರಾಟ ಆರಂಭಿಸಿದ್ದವು. ಒಂದು ವಿದೇಶಿಯರ ಆಳ್ವಿಕೆಯ ವಿರುದ್ಧದ ರಾಜಕೀಯ ಚಳವಳಿಯಾಗಿದ್ದರೆ ಮತ್ತೊಂದು ಸಾಮಾಜಿಕ ಸಮಾನತೆಗಾಗಿ ನಡೆದ ಚಳವಳಿಯಾಗಿದೆ. ಇದು ಸ್ವಾತಂತ್ರ್ಯ ಚಳವಳಿಯ ವಿರೋಧಿ ಅಲ್ಲ. ರಾಜಕೀಯ ಸ್ವಾತಂತ್ರ್ಯ ಎರಡನೆ ಮೆಟ್ಟಿಲಾದರೆ ಸಾಮಾಜಿಕ ಸ್ವಾತಂತ್ರ್ಯ ಮೊದಲನೆ ಮೆಟ್ಟಿಲಾಗಿದೆ. ಸಾಮಾಜಿಕವಾಗಿ ಉನ್ನತ ಸ್ಥಾನಮಾನಗಳನ್ನು ಹೊಂದಿರುವವರು ಸ್ವಾತಂತ್ರ್ಯ ಚಳುವಳಿಯಲ್ಲಿ ಹೆಜ್ಜೆ ಹಾಕಿದರೆ, ಸಾಮಾಜಿಕವಾಗಿ ಹಿಂದುಳಿದವರು ಸಾಮಾಜಿಕ ಸ್ವಾತಂತ್ರ್ಯ ಆಂದೋಲನದಲ್ಲಿ ಪಾಲ್ಗೊಂಡರು. ಆದರೂ ಕರ್ನಾಟಕದ ಸಂದರ್ಭದಲ್ಲಿ ಅನೇಕ ಕೆಳಜಾತಿಗಳು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿರುವುದು ಕಂಡುಬರುತ್ತದೆ.

ಸ್ವಾತಂತ್ರ್ಯ ಚಳುವಳಿಯು ತೀವ್ರವಾಗಿ ನಡೆದು ಭಾರತ ೧೯೪೭ ಆಗಸ್ಟ್ ೧೫ರಂದು ಸ್ವಾತಂತ್ರ್ಯಗಳಿಸಿತು. ಅಂಬೇಡ್ಕರ್ ಅವರ ಅಧ್ಯಕ್ಷತೆಯಲ್ಲಿ ಸ್ವಾತಂತ್ರ್ಯ ಭಾರತಕ್ಕೊಂದು ಸಂವಿಧಾನ ರಚನೆಯಾಯಿತು. ಇದು ಈ ನೆಲದಲ್ಲಿ ವಾಸಿಸುವ ಪ್ರತಿಯೊಬ್ಬರಿಗೂ ಸಮಾನವಾದ ಹಕ್ಕನ್ನು ದೊರಕಿಸಿಕೊಟ್ಟಿತು. ಜೊತೆಗೆ ಕೆಲವೊಂದು ರಾಜಕೀಯ ಹಕ್ಕುಗಳನ್ನು ಮೀಸಲಾತಿಯ ಮೂಲಕ ಶೋಷಿತ ಜಾತಿಗಳಿಗೆ ನೀಡಿದ್ದರಿಂದ ಇಂದು ರಾಜಕಾರಣದಲ್ಲಿ ಭಾಗವಹಿಸಲು ಅವಕಾಶವಾಗಿದೆ. ಇದರಿಂದಾಗಿ ಅನೇಕ ಕೆಳಜಾತಿಗಳ ಪ್ರತಿನಿಧಿಗಳು ರಾಜ್ಯ ಮತ್ತು ರಾಷ್ಟ್ರಮಟ್ಟದ ರಾಜಕೀಯ ಸಂಸ್ಥೆಗಳಲ್ಲಿ ಇರುವಂತಾಯಿತು. ಈ ರೀತಿ ಕೆಲವೊಂದು ರಾಜಕೀಯ ಹಕ್ಕುಗಳನ್ನು ಸಂವಿಧಾನಾತ್ಮಕಗೊಳಿಸಿದ್ದು ಮುಂದೆ ಅದು ಜಿಲ್ಲಾ, ತಾಲ್ಲೂಕು ಹಾಗೂ ಸ್ಥಳೀಯ ಸಂಸ್ಥೆಗಳಲ್ಲಿ ಕೆಲವು ವಿಶೇಷ ಸೌಲಭ್ಯ ಕಲ್ಪಿಸಿಕೊಟ್ಟಿದೆ. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಪೂರ್ವದಿಂದ ಇಂದಿನವರೆಗೆ ಕೆಳಜಾತಿಗಳಿಗೆ ನೀಡಿರುವ ವಿಶೇಷ ರಾಜಕೀಯ ಹಕ್ಕುಗಳನ್ನೂ ಮಾದಿಗ ಜನಾಂಗ ಎಷ್ಟರ ಮಟ್ಟಿಗೆ ಪಡೆದುಕೊಂಡಿದೆ ಎಂಬುದನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಮುಖ್ಯವಾಗಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳನ್ನು ಗಮನಿಸಲಾಗಿದೆ.

ವಸಾಹತು ಸಂದರ್ಭದಿಂದ ಇಂದಿನವರೆಗೆ ಮಾದಿಗರಿಗೆ ನೀಡಿರಬಹುದಾದ ಪ್ರಾತಿನಿಧ್ಯವನ್ನು ಮೂರು ಕಾಲಘಟ್ಟಗಳನ್ನಾಗಿ ಮಾಡಿಕೊಂಡು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

## ೬.೧. ವಸಾಹತು ಸಂದರ್ಭದ ಪ್ರಾತಿನಿಧಿಕ ಸಂಸ್ಥೆಗಳು ಮತ್ತು ಮಾದಿಗಳು

ಬ್ರಿಟಿಷರು ತಮ್ಮ ವಸಾಹತುಗಳ ಸ್ಥಾಪನೆಯೊಂದಿಗೆ ಆರಂಭಿಸಿ ಭಾರತದ ಬಹುತೇಕ ಎಲ್ಲಾ ಪ್ರದೇಶಗಳನ್ನು ವಶಪಡಿಸಿಕೊಂಡು ಅವುಗಳ ಆಡಳಿತದ ಅನುಕೂಲತೆಯ ದೃಷ್ಟಿಯಿಂದ ವಿವಿಧ ಭಾಗಗಳಾಗಿ ವಿಂಗಡಿಸಿಕೊಂಡಿದ್ದರು. ಕೆಲ ಪ್ರದೇಶಗಳನ್ನು ನೇರವಾಗಿಯೂ ಇನ್ನು ಕೆಲವು ಸ್ಥಳೀಯ ರಾಜ್ಯಗಳಿಗೆ ತಮ್ಮ ಪ್ರತಿನಿಧಿಗಳಾಗಿ ನೇಮಕ ಮಾಡಿ ಆಳ್ವಿಕೆ ಮಾಡುತ್ತಿದ್ದರು. ಈ ರೀತಿಯಾಗಿ ತಮ್ಮ ಆಡಳಿತದ ಕಾರ್ಯವ್ಯಾಪ್ತಿಯನ್ನು ಕೇಂದ್ರ ಪ್ರದೇಶದಿಂದ ಹಿಡಿದು ಗ್ರಾಮೀಣ ಪ್ರದೇಶದವರೆಗೆ ಹರಡಿಕೊಂಡಿದ್ದರು. ಹಾಗೆಯೇ ಅವುಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಸ್ಥಳೀಯರನ್ನೂ ಪ್ರಮುಖ ಸ್ಥಾನಗಳಿಗೆ ನೇಮಕ ಮಾಡಿಕೊಳ್ಳುತ್ತಿದ್ದರು. ಮೈಸೂರು ರಾಜರು ಬ್ರಿಟಿಷರ ಪ್ರತಿನಿಧಿಯಾಗಿ ಆಳ್ವಿಕೆ ಮಾಡುತ್ತಿದ್ದ ಕಾಲಕ್ಕೆ ಯಾವ ವರ್ಗಗಳಿಗೆ ಪ್ರಾತಿನಿಧ್ಯ ನೀಡಿದ್ದರು ಎಂಬುದನ್ನು ತಿಳಿಯಲು ಈ ಕೆಳಗಿನ ಅಂಶಗಳನ್ನು ಒಂದೊಂದನ್ನಾಗಿ ಚರ್ಚಿಸಿದರೆ ನಮಗೆ ಆ ಕಾಲದ ರಾಜಕೀಯ ಪ್ರಾತಿನಿಧಿಕ ಸಂಸ್ಥೆಗಳ ಪ್ರಾತಿನಿಧ್ಯದ ಬಗ್ಗೆ ಸಮಗ್ರ ಮಾಹಿತಿ ತಿಳಿಯಲು ಸಾಧ್ಯವಾಗುತ್ತದೆ.

### ಗ್ರಾಮ ಮಟ್ಟದ ಪಂಚಾಯತ್ ವ್ಯವಸ್ಥೆ

ಗ್ರಾಮ ಆಡಳಿತವು ಆಡಳಿತದ ಕೊನೆಯ ಘಟಕವಾಗಿದೆ. ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವ ಗ್ರಾಮ ಆಡಳಿತ ವ್ಯವಸ್ಥೆಯನ್ನೆ ವಸಾಹತು ಕಾಲದಲ್ಲೂ ಮುಂದುವರಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಇದಕ್ಕೆ ಚರಿತ್ರೆಯಲ್ಲಿ ದಾಖಲೆಗಳ ಸಾಕ್ಷ್ಯ ಸಿಗುತ್ತದೆ. ಅಶೋಕ, ಶಾತವಾಹನರ ಶಾಸನಗಳಲ್ಲಿ ಗುರುತರವಾದ ಮಾಹಿತಿಗಳು ಲಭ್ಯವಾಗದಿದ್ದರೂ ೬ನೇ ಶತಮಾನದ ಗಂಗರು, ಪಲ್ಲವರು, ನೊಳಂಬರು, ಚಾಲುಕ್ಯರು, ಹೊಯ್ಸಳರು ಮತ್ತು ವಿಜಯನಗರದ ಅರಸರ ಶಾಸನಗಳಲ್ಲಿ ಗ್ರಾಮ ಆಡಳಿತವನ್ನು ಗುರುತಿಸಬಹು ದಾಗಿದೆ.[1] (ಕರ್ನಾಟಕ?ವಿಕಾಸ-ಜೂನ್ ೨೦೦೦:ಪು.೨೨) ಇಂತಹ ಗ್ರಾಮ ಆಡಳಿತ ವ್ಯವಸ್ಥೆಯಲ್ಲಿ ಗೌಡ, ಗೊಂಚಿಗಾರ, ಶಾನುಭೋಗ, ತೋಟಿ, ತಳವಾರ ಹೀಗೆ ಐದು ಜನರು ಪ್ರಮುಖರಾಗಿದ್ದರು. ಹೆಚ್ಚು ಕಡಿಮೆ ಅದೇ ವ್ಯವಸ್ಥೆಯನ್ನೇ ಮುಂದುವರಿಸಿಕೊಂಡು ಹೋಗಿರುವುದು ಮೈಸೂರು ಪ್ರಾಂತ್ಯದಲ್ಲಿ ಕಂಡುಬರುತ್ತದೆ. ಮೈಸೂರು ಸರ್ಕಾರವು ೧೯೦೨ರಲ್ಲಿ ಮೈಸೂರು ಲೋಕಲ್ ಬೋರ್ಡ್ ರೆಗ್ಯುಲೇಷನ್ ಮೈಸೂರು ಜಿಲ್ಲಾ ಮಂಡಲಿಗಳ ನಿಬಂಧನೆಯಂತೆ ಗ್ರಾಮ ಮಟ್ಟದಲ್ಲಿ ಪಂಚಾಯಿತ್ ಸಂಸ್ಥೆಗಳು, ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಮಂಡಲಗಳು ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಮಂಡಲಿಗಳು ಸ್ಥಾಪಿತವಾದವು.[2]

ಇದರಲ್ಲಿ ಅಧಿಕಾರೇತರ ಸದಸ್ಯರನ್ನು ಪ್ರಥಮ ಬಾರಿಗೆ ಸೇರಿಸಲಾಯಿತು. ಮೊದಲು ಇದು ಹೆಸರಿಗೆ ಮಾತ್ರ ಎನ್ನುವಂತೆ ಇತ್ತು. ಹೀಗೆ ೧೯೦೨ರಲ್ಲಿ ೮ ಜಿಲ್ಲಾ ಬೋರ್ಡ್‌ಗಳಿದ್ದರೆ, ೧೯೦೩ರಲ್ಲಿ ೩೮ ಪಂಚಾಯತ್ ಯೂನಿಯನ್‌ಗಳಿದ್ದವು. ೧೯೧೬ರಲ್ಲಿ ೨೬೪ಕ್ಕೆ ಏರಿತು[೩] ನಂತರದಲ್ಲಿ ೧೯೧೯ರಲ್ಲಿ ಪ್ರತಿಯೊಂದು ಗ್ರಾಮ ಅಥವಾ ಗ್ರಾಮಗಳ ಗುಂಪಿಗೆ ಒಂದು ಗ್ರಾಮ ಪಂಚಾಯಿತಿಯನ್ನು ರಚಿಸಲಾಯಿತು. ಪ್ರತಿಯೊಂದು ಪಂಚಾಯಿತಿಗೆ ಪ್ರತ್ಯೇಕ ಸಂಪನ್ಮೂಲಗಳಿದ್ದು ಅವುಗಳಲ್ಲಿ ನಾಮಕರಣಗೊಂಡ ಅಧ್ಯಕ್ಷರಿರುತ್ತಿದ್ದರು. ಅವುಗಳ ಪ್ರಗತಿ ಸಮಾಧಾನಕರವಾಗಿದ್ದರೆ ಚುನಾವಣೆಯ ಹಕ್ಕನ್ನು ಕೊಡಲಾಗುತ್ತಿತ್ತು. ಪಂಚಾಯಿತಿ ಹತೋಟಿ, ಮೇಲ್ವಿಚಾರಣೆ, ಪರಿಶೀಲನೆಯ ಅಧಿಕಾರವನ್ನು ಅಮಲ್ದಾರ್ (ತಹಸಿಲ್ದಾರ್) ಅವರಿಗೆ ನೀಡಲಾಯಿತು.[೪] ಆನಂತರದಲ್ಲಿ ಪಂಚಾಯತ್ ವ್ಯವಸ್ಥೆಗೆ ಸಂಬಂಧಿಸಿದಂತೆ ಎರಡು ಕಾಯ್ದೆಗಳನ್ನು ರಚಿಸಲಾಗಿ ಇವುಗಳು ೧೯೨೭ರಿಂದ ಜಾರಿಗೆ ಬಂದವು. ಇದರ ಅನ್ವಯ ತಾಲ್ಲೂಕು ಬೋರ್ಡ್‌ಗಳನ್ನು ರದ್ದುಪಡಿಸುವುದು ಮತ್ತು ಗ್ರಾಮಪಂಚಾಯಿತಿಗಳು ಮತ್ತಷ್ಟು ವ್ಯಾಪಕವಾಗುವಂತಹ ವ್ಯವಸ್ಥೆಯನ್ನು ಪದ ನಿಮಿತ್ತ ಸದಸ್ಯರು, ನೇಮಿತ ಸದಸ್ಯರು ಮತ್ತು ಚುನಾಯಿತ ಸದಸ್ಯರು ಇರುವಂತೆಯೂ ಅದರಲ್ಲಿ ೨/೩ ಭಾಗ ಸದಸ್ಯರು ಚುನಾಯಿತರಾಗಬೇಕಾಗಿತ್ತು. ಅಧ್ಯಕ್ಷ ಮತ್ತು ಉಪಧ್ಯಾಕ್ಷ ಸ್ಥಾನವು ಚುನಾವಣೆಯ ಮೇರೆಗೆ ತುಂಬುವಂತಹದಾಗಿತ್ತು.[೫]

ಗ್ರಾಮ ಮಟ್ಟದ ರಾಜಕೀಯ ಸಂಸ್ಥೆ ಈ ರೀತಿಯಾದಂತ ಇಲ್ಲಿ ಪ್ರಮುಖವಾದ ಸ್ಥಾನವು ಊರಿನ ಗೌಡ ಮತ್ತು ಶಾನುಭೋಗರದಾಗಿತ್ತು. ಇವರು ಗ್ರಾಮ ಮಟ್ಟದ ಪ್ರಭುಗಳಾಗಿದ್ದರು. ಇಂತಹ ಹುದ್ದೆಗಳು ಸಮಾಜದ ಉನ್ನತವರ್ಗದವರಿಗೆ ಮಾತ್ರ ಸೀಮಿತವಾಗಿದ್ದು. ಶಾನುಭೋಗ ಹುದ್ದೆಯು ಕೇವಲ ಬ್ರಾಹ್ಮಣ ವರ್ಗಕ್ಕೆ ಮಾತ್ರ ಮೀಸಲಾಗಿತ್ತು. ಹೀಗಿರುವಾಗ ಗ್ರಾಮ ಮಟ್ಟದ ಪಂಚಾಯಿತ್ ಆಡಳಿತ ವ್ಯವಸ್ಥೆಯಲ್ಲಿ ವಸಾಹತು ಕಾಲಕ್ಕೆ ಮಾದಿಗರನ್ನೊಳಗೊಂಡಂತೆ ಇನ್ನುಳಿದ ಯಾವ ಕೆಳಜಾತಿಗಳಿಗೂ ಪ್ರಾತಿನಿಧ್ಯ [redacted] ದೊರಕಿಲ್ಲ ಎನ್ನಬಹುದು. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಪ್ರದೇಶಕ್ಕೆ ಸಂಬಂಧಿಸಿದಂತೆ, ಗ್ರಾಮಮಟ್ಟದಲ್ಲಿ ಯಾವುದೇ ರಾಜಕೀಯ ಅಧಿಕಾರ ಮಾದಿಗರಿಗೆ ದೊರೆತಿರಲಿಲ್ಲ. ಕೇವಲ ಊರಿನ ಸ್ವಚ್ಛತೆಯ ಕೆಲಸ, ಬಿಟ್ಟಿಕೆಲಸ, ಜೀತ ಮುಂತಾದ ಕೆಳಹಂತದ ಕಾರ್ಯಗಳನ್ನು ಮಾಡಲು ಇವರನ್ನು ತೊಡಗಿಸಿಕೊಂಡಿದ್ದರು.

ಇನ್ನು ಬಳ್ಳಾರಿ ಜಿಲ್ಲೆಗೆ ಬಂದರೆ ಈ ಪ್ರದೇಶವು ಅಂದು ಮದ್ರಾಸ್ ಪ್ರಾಂತ್ಯಾದಲ್ಲಿದ್ದು ಅಲ್ಲಿಯ ಪಂಚಾಯಿತ್ ವ್ಯವಸ್ಥೆಗೆ ಸಂಬಂಧಿಸಿದಂತೆ ೧೯೨೦ರಲ್ಲಿ ಮದ್ರಾಸ್ ವಿಲೇಜ್ ಪಂಚಾಯಿತ್ ಆಕ್ಟ್ ಜಾರಿಗೆ ಬಂತು. ಪ್ರತಿ ಕಂದಾಯ ಹಳ್ಳಿ ಕೂಡ ತನ್ನದೇ ಆದ ಪಂಚಾಯಿತ್ ಹೊಂದುವ ಅವಕಾಶ ಬಂತು. ಆದರೆ ಪಂಚಾಯಿತಿಯ ಅಧಿಕಾರ ಮತ್ತು ಕಾರ್ಯವ್ಯಾಪ್ತಿ ತುಂಬಾ ಸೀಮಿತವಾಗಿತ್ತು.

ಕಂದಾಯ ಸಂಗ್ರಹ ಮತ್ತು ಆದಾಯದ ಮೂಲಗಳಿಗೆ ಸಂಬಂಧಿಸಿದಂತೆ ಪಂಚಾಯತ್‌ಗೆ ಯಾವುದೇ ಹಕ್ಕು ಇರಲಿಲ್ಲ. ಅಂದ ಮಾತ್ರಕ್ಕೆ ಕಂದಾಯ ಸಂಗ್ರಹಕ್ಕಾಗಿ ವಸಾಹತು ಸರಕಾರ ಆಧುನಿಕ ಪರಿಕರ ಹುಡುಕಲಿಲ್ಲ. ನಮ್ಮದೇ ಸಂಸ್ಕೃತಿಯಲ್ಲಿ ಚಾರಿತ್ರಿಕವಾಗಿ ರೂಪುಗೊಂಡ ಅಧಿಕಾರಶಾಹಿಗಳಿಗೆ-ಗೌಡರು ಮತ್ತು ಶಾನಭೋಗರಿಗೆ ಕಂದಾಯ ವಸೂಲಿಯ ಜವಬ್ದಾರಿ ವಹಿಸಿತು. ಮತದಾನದ ಹಕ್ಕನ್ನು ಎಲ್ಲಾ ಸಾಮಾಜಿಕ ವರ್ಗಗಳಿಗೆ ವಿಸ್ತರಿಸಬೇಕೆಂಬ ಆದರ್ಶವಿದ್ದರೂ ಅದು ಕಾರ್ಯರೂಪದಲ್ಲಿ ಕೇವಲ ಭೂ ಕಂದಾಯ ಕಟ್ಟುವವರಿಗೆ ಮಾತ್ರವೇ ಸೀಮಿತವಾಗಿತ್ತು.[೬] ಈ ರೀತಿಯಾದ ವ್ಯವಸ್ಥೆ ವಸಾಹತು ಕಾಲದ ಸಂದರ್ಭದಲ್ಲಿದ್ದು ಮಾದಿಗರು ಸ್ಪರ್ಧಿಸುವುದು ಅಥವಾ ಆಯ್ಕೆ ಆಗುವುದಿರಲಿ ಮತದಾನ ಮಾಡುವ ಹಕ್ಕನ್ನೂ ಹೊಂದಿರಲಿಲ್ಲವೆಂಬುದು ತಿಳಿದುಬರುತ್ತದೆ.

### ಪ್ರಾಂತೀಯ ಮಟ್ಟದ ಪ್ರಾತಿನಿಧಿಕ ಸಂಸ್ಥೆಗಳು ಮತ್ತು ಮಾದಿಗರು

ಗ್ರಾಮ ಮಟ್ಟದಲ್ಲಿ ಸ್ಥಳೀಯ ಪಂಚಾಯಿತ್ ಸಂಸ್ಥೆಗಳು ಮಾತ್ರವಲ್ಲದೆ ತಾಲ್ಲೂಕು ಹಾಗೂ ಜಿಲ್ಲಾ ಮಂಡಲಿಗಳಲ್ಲಿಯೂ ಸಹ ಮಾದಿಗರಿಗೆ ಪ್ರಾತಿನಿಧ್ಯ ಇರಲಿಲ್ಲ. ಆನಂತರದಲ್ಲಿ ಪ್ರಾಂತೀಯ ಮಟ್ಟದಲ್ಲಿ ಎರಡು ಪ್ರಮುಖ ಪ್ರಾತಿನಿಧಿಕ ಸಭೆಗಳು ವಿವಿಧ ಕಾಲದಲ್ಲಿ ಸ್ಥಾಪಿತಗೊಂಡಿವೆ.

### ಪ್ರಜಾ ಪ್ರತಿನಿಧಿ ಸಭೆ

ಪ್ರಾಂತೀಯ ಮಟ್ಟದಲ್ಲಿ ಮೊದಲು ರಂಗಚಾರ್ಲು ದಿವಾನರಾಗಿದ್ದ ಕಾಲದಲ್ಲಿ ಪ್ರಜಾಪ್ರತಿನಿಧಿ ಸಭೆ ೧೮೮೧ರಲ್ಲಿ ಸ್ಥಾಪಿಸಲ್ಪಟ್ಟಿತು. ಇಂತಹ ವಿಶಿಷ್ಟ ರಾಜಕೀಯ ಸಂಸ್ಥೆಯೊಂದನ್ನು ಮೊಟ್ಟಮೊದಲಿಗೆ ತೆರೆದ ಕೀರ್ತಿ ಮೈಸೂರು ಸಂಸ್ಥಾನಕ್ಕೆ ಸೇರುತ್ತದೆ. ಇದು ಮೊದಲು ಮೈಸೂರು ಸಂಸ್ಥಾನದ ಎಲ್ಲಾ ತಾಲ್ಲೂಕುಗಳ ವ್ಯಾಪಾರಿಗಳ ಹಾಗೂ ರೈತರ ಪ್ರಾತಿನಿಧಿಕ ಸಭೆ' ಎಂದು ಹೆಸರಿಸಲಾಗಿತ್ತು. ಅದರ ಗುರಿ ಮೂಲತಃ ಜನತೆಯು ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುವಿಕೆ ಆಗಿರಲಿಲ್ಲ. ಬದಲಾಗಿ ಸರ್ಕಾರ ಕೈಗೊಳ್ಳುವ ಆಡಳಿತಾತ್ಮಕ ನಿರ್ಧಾರಗಳನ್ನು ಸಾರ್ವಜನಿಕರಿಗೆ ತಿಳಿಸುವ ಮತ್ತು ಅವರ ಸಹಕಾರ ಪಡೆವ ಗುರಿಯುಳ್ಳದಾಗಿತ್ತು. ಅದಕ್ಕೆ ಒಂದು ರಾಜಕೀಯ ಭದ್ರ ನೆಲೆ ಇರಲಿಲ್ಲ. ಅಲ್ಲದೆ ಕ್ರಿ.ಶ.೧೯೨೩ರವರೆಗೆ ಅದಕ್ಕೆ ಕಾನೂನುಬದ್ಧವಾದ ಯಾವುದೇ ಘೋಷಿತ ಅಧಿಕಾರವಿರಲಿಲ್ಲ. ವಾಸ್ತವವಾಗಿ ಅದು ಪ್ರಜಾಪ್ರಭುತ್ವ ತತ್ವವನ್ನೊಳಗೊಂಡ ಪ್ರಾತಿನಿಧಿಕ ಸ್ವರೂಪ ಪಡೆದಿರಲಿಲ್ಲ. ರಾಜ್ಯದ ದಿವಾನರು ಆ ಸಭೆಯ ಅಧ್ಯಕ್ಷತೆಯನ್ನು ವಹಿಸುತ್ತಿದ್ದರು.[೭] ಇದಕ್ಕೆ ಯಾವುದೇ ರೀತಿಯಿಂದಲೂ ಸ್ವಂತ ನಿರ್ಧಾರಕ್ಕೆ ಬರುವ ಇಲ್ಲವೆ ಚರ್ಚಿಸುವ ಅವಕಾಶಗಳು ಇದ್ದಂತೆ ತೋರುವುದಿಲ್ಲ. ಸುಮಾರು ಹತ್ತುವರ್ಷಗಳ ಕಾಲ ಮೂಕ ಪ್ರೇಕ್ಷಕರಾಗಿದ್ದರೂ ಸ್ಥಾಪಿತವಾದ ಒಂದು ದಶಕದ ನಂತರ ಕೆಲವು ಆಸಕ್ತರು(ಸದಸ್ಯರು) ಅಧಿಕಾರ ವಿಸ್ತರಣೆಯ ಬಗ್ಗೆ ಪ್ರಸ್ತಾಪ ಮಾಡಿದಾಗ ದಿವಾನರು ಈ ಸಭೆಯನ್ನು ಸ್ಥಾಪಿಸಿದ ಉದ್ದೇಶ ಸದಸ್ಯರು ಜನರ ಸಮಸ್ಯೆಗಳ ಬಗ್ಗೆ ಮನವಿ

ಅರ್ಪಿಸಲು ಅವಕಾಶ ಮಾಡಿಕೊಡುವುದಕ್ಕೆ ಮಾತ್ರ ಆಡಳಿತದ ಮೇಲೆ ಅಧಿಕಾರ ಚಲಾಯಿಸುವುದಕ್ಕಲ್ಲ.[೮] ಎಂಬ ಹೇಳಿಕೆಯು ಈ ಸಭೆಗೆ ಯಾವುದೇ ತೀರ್ಮಾನ ತೆಗೆದುಕೊಳ್ಳುವ ಅಧಿಕಾರ ಇರಲಿಲ್ಲವೆಂಬುದು ತಿಳಿದುಬರುತ್ತದೆ. ಇದು ಕೇವಲ ಸಾರ್ವಜನಿಕರ ಸಮಸ್ಯೆ ಬಗೆಗೆ ಅಹವಾಲನ್ನು ಸರ್ಕಾರಕ್ಕೆ ನೀಡುವ ಅವಕಾಶ ಮಾತ್ರವೇ ನೀಡಿತ್ತೆ ವಿನಃ ಯಾವುದೇ ಹಿಡಿತ ಆಡಳಿತದ ಮೇಲೆ ಹೊಂದಿರಲಿಲ್ಲವೆಂದು ತಿಳಿದುಬರುತ್ತದೆ. ಆನಂತರ ೧೯೨೩ರಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಸಂವೈವಿಧಾನಿಕ ಸ್ಥಾನ-ಮಾನವನ್ನು ಸೀಲ್ ಕಮಿಟಿಯ ಶಿಫಾರಸಿನಂತೆ ನೀಡಲಾಯಿತು. ಸಾರ್ವಜನಿಕ ಆಡಳಿತ ಮತ್ತು ಹಣಕಾಸಿನ ಆಯವ್ಯಯ ರೀತಿ-ನೀತಿಗಳ ಮೇಲೆ ಅಭಿಪ್ರಾಯ ನೀಡಲು ಪ್ರಜಾಪ್ರತಿನಿಧಿ ಸಭೆಗೆ ಅಧಿಕಾರ ನೀಡಲಾಯಿತು.[೯] ಈ ಬಗೆಯಲ್ಲಿ ಕೇವಲ ನಾಮಕಾವಸ್ಥೆಯಿಂದ ಕೂಡಿದ ಪ್ರತಿನಿಧಿ ಸಭೆಯು ೧೯೨೩ರ ನಂತರದಲ್ಲಿ ಹೊಸ ಬಗೆಯ ಅಧಿಕಾರ ವ್ಯಾಪ್ತಿ ಹಾಗೂ ಸ್ಥಾನಮಾನಗಳ ಜೊತೆಯಲ್ಲಿ ಅನೇಕ ಹಕ್ಕುಗಳು ದೊರೆತು ಪ್ರಜಾಪ್ರಭುತ್ವದ ಮಾದರಿಯ ಪ್ರಾತಿನಿಧಿಕ ಸಂಸ್ಥೆಗಳತ್ತ ಹೆಜ್ಜೆ ಹಾಕಿತು. ಆನಂತರದಲ್ಲಿ ಮಾದಿಗ ಜನಾಂಗಕ್ಕೆ ಸೇರಿದ ಕೊರಟಗೆರೆ ಚಿನ್ನಗರಾಮಯ್ಯನವರು ೧೯೩೦ರಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭಾ ಸದಸ್ಯರಾಗಿ[೧೦] ಆಯ್ಕೆಯಾಗಿರುವುದು ಕಂಡುಬರುತ್ತದೆ. ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದಂತೆ ಹೇಳುವುದಾದರ ೧೯೧೫ರಲ್ಲಿಯೇ ಪ್ರಜಾ ಪ್ರತಿನಿಧಿಯ ಪ್ರಾತಿಧ್ಯ ದೊರಕಿರುವುದು ಕಂಡುಬರುತ್ತದೆ. ಸರಿಸುಮಾರು ೧೯೧೫ರಿಂದಲೇ ಅವರು (ದೊಡ್ಡ ಸಿದ್ದವ್ವಹಳ್ಳಿ ಆಟದ ಪೆನ್ನಯ್ಯ) ಪ್ರತಿನಿಧಿ ಸಭೆಯ ಸದಸ್ಯರಾಗಿ ಸುಮಾರು ಕಾಲು ಶತಮಾನಕ್ಕೂ ದೀರ್ಘಕಾಲ ಈ ಸ್ಥಾನದಲ್ಲಿ ಮುಂದುವರಿದಿದ್ದಾರೆ.[೧೧] ಬಹುಶಃ ಅಲ್ಲಿಂದ ಮಾದಿಗರಿಗೆ ಪ್ರಜಾಪ್ರತಿನಿಧಿಕ ಸಭೆಯಲ್ಲಿ ಪ್ರಾತಿನಿಧ್ಯ ನೀಡುವುದು ಆರಂಭವಾಗಿದೆ ಎನ್ನಬಹುದು.

**ನ್ಯಾಯ ವಿಧಾಯಕ ಸಭೆ**

ಪ್ರಾಂತೀಯ ಮಟ್ಟದ ಎರಡನೆಯ ಪ್ರಾತಿನಿಧಿಕ ಸಂಸ್ಥೆಯೆಂದರೆ ಅದು ನ್ಯಾಯ ನಿಧಾಯಕ ಸಭೆಯಾಗಿದೆ. ಇದು ೧೯೦೭ರಲ್ಲಿ ಸ್ಥಾಪನೆಗೊಂಡಿತು. ಸರ್ಕಾರ ತಾನು ಆಶಿಸಿದ ಶಾಸನ ವಿಧಿಗಳಿಗೆ ಒಪ್ಪಿಗೆ ಪಡೆಯಲು ಈ ಸಭೆಗೆ ತರಲಾಗುತ್ತಿತ್ತು. ಒಪ್ಪಿಗೆ ನೀಡುವಲ್ಲಿ ಈ ಸಭೆಗೆ ಒಂದು ಮಿತಾಧಿಕಾರವಿತ್ತು. ಮಿತಧಿಕಾರವೆನ್ನಲು ಕಾರಣ ಇಷ್ಟೆ. ನ್ಯಾಯ ವಿಧಾಯಕ ಸಭೆಯು ಬಹು ಸಂಖ್ಯಾತರು ಸರ್ಕಾರಿ ಅಧಿಕಾರಿಗಳು ಮತ್ತು ಸರ್ಕಾರದಿಂದ ನೇಮಕ ಗೊಂಡ ಸದಸ್ಯರಿದ್ದು.[೧೨] ಇವರು ಸರ್ಕಾರದ ಅಧೀನ ಅಧಿಕಾರಿಗಳು ಹಾಗೂ ಅದರಿಂದ ನಾಮಕರಣಗೊಂಡ ಸದಸ್ಯರು ಆಗಿರುವುದರಿಂದ ಅವರು ವೈಯಕ್ತಿಕವಾಗಿ ಯಾವುದೇ ತೀರ್ಮಾನಕ್ಕೆ ಬರುವುದೇ ಆಗಲಿ ಅಥವಾ ಒಪ್ಪಿಗೆಗೆ ಕಳುಹಿಸಿದ ಶಾಸನಗಳನ್ನು ಹಿಂದಕ್ಕೆ ಕಳುಹಿಸುವ ಅಥವಾ ತಿರಸ್ಕರಿಸುವ ಧೈರ್ಯ ಮಾಡಲು ಆಗುತ್ತಿರಲಿಲ್ಲ. ಈ ನ್ಯಾಯ ನಿಧಾಯಕ ಸಭೆಯು ೧೯೪೭ರವರೆಗೆ ಕೂಡ ಸಂಪೂರ್ಣ ಸರ್ಕಾರದ ಹತೋಟಿಯಲ್ಲಿ ಇತ್ತು.[೧೩] ಈ ರೀತಿಯ ವ್ಯವಸ್ಥೆಯಲ್ಲಿ ಸದಸ್ಯರ ಸಂಖ್ಯೆಯನ್ನು ೧೯೧೪ರಲ್ಲಿ ೨೧,

೧೯೧೯ರಲ್ಲಿ ೩೦ಕ್ಕೆ ಏರಿಸಲಾಯಿತು. ೧೯೨೩ರಲ್ಲಿ ಈ ಸಂಖ್ಯೆ ೫೦ ಮುಟ್ಟಿತು. ನಂತರ ೧೯೩೯ರಲ್ಲಿ ಸದಸ್ಯರ ಸಂಖ್ಯೆಯನ್ನು ೬೮ಕ್ಕೆ ಹೆಚ್ಚಿಸಲಾಯಿತು.[೧೪] ಹೀಗೆ ನ್ಯಾಯ ವಿಧಾಯಕ ಸಭೆಯು ಬರಬರುತ್ತಾ ತನ್ನ ಸದಸ್ಯರ ಬಲವನ್ನು ಹೆಚ್ಚಿಸಿಕೊಳ್ಳುತ್ತಾ ನಡೆಯಿತು.

ಈ ಮೇಲ್ಕಾಣಿಸಿದ ಮೈಸೂರು ಪ್ರಾಂತ್ಯದ ಎರಡು ಪ್ರಮುಖ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಆರಂಭದಲ್ಲಿ ದಲಿತ ವರ್ಗಕ್ಕೆ ಮಾತ್ರವಲ್ಲದೆ ಆ ಸಭೆಯ ಸದಸ್ಯರಾಗಲು ಇರಬೇಕಾದ ಅರ್ಹತೆಗಳನ್ನು ಹೊಂದದೆ ಇರುವ ಇತರೆ ಯಾವ ವರ್ಗಕ್ಕೂ ಸಹ ಯಾವುದೇ ಪ್ರಾತಿನಿಧ್ಯ ದೊರಕಿಲ್ಲ. ಕೇವಲ ಭೂಕಂದಾಯ, ಮತ್ತು ಇತರ ತೆರಿಗೆ ಕಟ್ಟುವಂತಹ ಭೂಮಾಲೀಕರು, ಬಂಡವಾಳಗಾರರು, ಮತ್ತು ವ್ಯಾಪಾರಿಗಳಿಗೆ ಮಾತ್ರವೇ ಮತ ಚಲಾಯಿಸುವ ಹಾಗೂ ಆಯ್ಕೆಯಾಗುವ ಅವಕಾಶ ಇತ್ತು. ಹೀಗಿರುವಾಗ ಭೂರಹಿತರಾಗಿ ಕೂಲಿ ಮಾಡಿ ಜೀವನ ಮಾಡುವ ಮಾದಿಗರಿಗೆ ಅವಕಾಶ ಸಾಧ್ಯವೆ? ನಂತರದ ದಿನಗಳಲ್ಲಿ ಕೆಲವೊಂದು ವರ್ಗಗಳಿಗೆ ಅವಕಾಶ ಮಾಡಿಕೊಟ್ಟಿರುವುದು ಕಂಡುಬರುತ್ತದೆ. ಹಿಂದುಳಿದ ವರ್ಗಗಳು ಪ್ರತಿನಿಧಿ ಸಭೆಯಲ್ಲಿ ಜಾತಿ ಆಧಾರಿತ ಪ್ರಾತಿನಿಧ್ಯವನ್ನು ನೀಡಿ ತಮ್ಮ ಶಕ್ತಿವರ್ದನೆಗೆ ಅವಕಾಶ ಮಾಡಿಕೊಡಬೇಕೆಂಬ ಬೇಡಿಕೆಯನ್ನು ಮುಂದಿಟ್ಟಿದ್ದವು. ಈ ಬೇಡಿಕೆಯನ್ನು ಈಡೇರಿಸದಿದ್ದರೂ ಕೆಲವು ನಿಗಧಿಪಡಿಸಿದ ಅರ್ಹತೆಗಳನ್ನು ಪೂರೈಸುವ ಜಾತಿ ಸಂಘಟನೆಗಳಿಗೆ ಪ್ರತಿನಿಧಿ ಸಭೆಯಲ್ಲಿ ಪ್ರಾತಿನಿಧ್ಯ ಕೊಟ್ಟು ೨೫ ಸದಸ್ಯ ಸ್ಥಾನಗಳನ್ನು ಈ ಸಂಘಟನೆಗಳಿಗೆ ನೀಡಲಾಯಿತು.[೧೪ಎ] ನಂತರದ ಬೆಳವಣಿಗೆಯಲ್ಲಿ ೧೯೪೧ರ ಸಂವಿಧಾನ ಸುಧಾರಣೆಗಳ ರೀತ್ಯಾ ೪ ನ್ಯಾಯ ವಿಧಾಯಕ ಸಭಾಸ್ಥಾನಗಳನ್ನು ೩೦ ಪ್ರತಿನಿಧಿಸಭೆ ಸ್ಥಾನಗಳನ್ನು ದಲಿತರಿಗೆ ಮೀಸಲಿಸಲಾಯಿತು.[೧೫] ಈ ರೀತಿಯಲ್ಲಿ ದಲಿತರಿಗೆ ಕೆಲವು ಅವಕಾಶಗಳನ್ನು ಕೊಟ್ಟ ಪರಿಣಾಮ ಆ ವರ್ಗದಲ್ಲಿ ಬರುವ ಮಾದಿಗ ಜನಾಂಗದ ಪ್ರತಿನಿಧಿಗಳು ಇರುವುದು ಕಂಡುಬರುತ್ತದೆ. ಮಾದಿಗ ಜನಾಂಗಕ್ಕೆ ಸೇರಿದ ಕೊರಟಗೆರೆ ಚನ್ನಿಗರಾಮಯ್ಯ ಅವರು ೧೯೪೧ರಲ್ಲಿ ನ್ಯಾಯ ವಿಧಾಯಕ ಸಭೆ ಸದಸ್ಯರಾಗಿ ನಾಮಕರಣಗೊಂಡರು[೧೬] ಎಂಬುದು ತಿಳಿದುಬರುವುದು. ಈ ರೀತಿ ಜಾತಿವಾರು ಪ್ರಾತಿನಿಧ್ಯವು ಜಾತಿ ಸಂಘಟನೆಯನ್ನು ಕೈಗೊಳ್ಳಲು ಹೆಚ್ಚಿನ ಪ್ರೇರಣೆ ನೀಡಿತೆನ್ನಬಹುದು.

ಪ್ರತಿನಿಧಿ ಸದಸ್ಯತ್ವದ ನೇಮಕಾತಿಗೆ ಸಂಬಂಧಿಸಿದಂತೆ ಬೆಂಗಳೂರಿನಲ್ಲಿ ಆದಿಕರ್ನಾಟಕ ಸಂಘಟನೆಯೊಂದರ ಪ್ರತಿನಿಧಿಯಾಗಿದ್ದ ಡಿಸೌಜಾ ಎಂಬುವರು ಗಾಂಧೀಜಿ ಕರ್ನಾಟಕಕ್ಕೆ ಬಂದಿದ್ದಾಗ ಅವರೊಂದಿಗೆ ಚರ್ಚೆ ಮಾಡುತ್ತಾ ಹರಿಜನರ ಜನಸಂಖ್ಯೆಗೆ ತಕ್ಕಂತೆ ಮೈಸೂರು ಪ್ರತಿನಿಧಿ ಸಭೆಗಳಲ್ಲಿ ಹರಿಜನರಿಗೆ ಪ್ರಾತಿನಿಧ್ಯ ಸಿಗುವಂತೆ ಮಾಡಿ ಎಂದಾಗ ಗಾಂಧಿಯವರು ಈಗ ಇರುವ ಮಹರಾಜರನ್ನು ಕೆಳಗಿಳಿಸಿ ಒಂದು ವಾರ ಮಾತ್ರ ನನಗೆ ಮಹಾರಾಜನ ಪದವಿ ಕೊಡಿ ಎಂದರಂತೆ ಈ ರೀತಿಯಾಗಿ ಕೆಲವೊಂದು ನ್ಯಾಯಯುತವಾದ ಬೇಡಿಕೆಗಳನ್ನು ಕೆಳಜಾತಿಯವರು ಇಟ್ಟಾಗ ಗಾಂಧಿಯಂಥವರು ಕೂಡ ಅವರ ಆಸೆಗೆ ತಣ್ಣೀರೆರಚುವಂತೆ ಮಾಕನಾಡಿರುವುದ ಕಂಡುಬರುತ್ತದೆ. ಅಲ್ಲದೆ ಜನಸಂಖ್ಯೆಗೆ

ತಕ್ಕಂತೆ ಪ್ರಾತಿನಿಧ್ಯ ದೊರಕದಿರುವುದು ತಿಳಿದುಬರುತ್ತದೆ. ೧೯೪೦ರ ನಂತರವೇ ಕೆಲವು ಅವಕಾಶಗಳು ಮಾದಿಗರಿಗೆ ಸಿಕ್ಕಿವೆ. ಸಿ.ಟಿ.ಹನುಮಂತಯ್ಯ ಎಂಬುವರು ೧೯೪೧ರಲ್ಲಿ ತುಮಕೂರು ತಾಲ್ಲೂಕಿನಿಂದ ಕಾಂಗ್ರೆಸ್ ಪರ ಸ್ಪರ್ಧಿಸಿ ಪ್ರಜಾಪ್ರತಿನಿಧಿ ಸಭೆಗೆ ಆಯ್ಕೆ[೭] ಗೊಂಡರೆ, ಹರಿಜನರು ತಾವಾಗಿಯೇ ಮುಂದೆ ಬಂದು ಬೆಂಗಳೂರಿನಲ್ಲಿ ಮಾಡಿಕೊಂಡ ಸಹಕಾರ ಸಂಘದ ಮೊದಲ ಅಧ್ಯಕ್ಷರನ್ನೂ ಸರ್ಕಾರವು ಪ್ರಜಾಪ್ರತಿನಿಧಿ ಸಭೆಗೂ, ಜಿಲ್ಲಾ ಬೋರ್ಡಿಗೂ ಸದಸ್ಯರಾಗಿ ನಾಮಕರಣ ಮಾಡಿತು.[೮] ಈ ರೀತಿಯಾಗಿ ಸ್ವಾತಂತ್ರ್ಯಪೂರ್ವದ ಪ್ರಾಂತೀಯ ಪ್ರಾತಿನಿಧಿಕ ಸಭೆಗಳಲ್ಲಿ ಮಾದಿಗರಿಗೆ ಅಲ್ಪಪ್ರಮಾಣದಲ್ಲಿ ಪ್ರಾತಿನಿಧ್ಯ ದೊರಕಿದೆ.

**ಮತದಾನದ ಹಕ್ಕು :** ಆರಂಭದಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಪ್ರತಿನಿಧಿಗಳನ್ನು ಆಯ್ಕೆ ಮಾಡುವ ಚುನಾವಣೆಯ ಪ್ರಕ್ರಿಯೆಯಲ್ಲಿ ಕೇವಲ ಭೂಕಂದಾಯ ನೀಡುತ್ತಿದ್ದ ವರ್ಗಕ್ಕೆ ಮಾತ್ರವೇ ಅವಕಾಶ ಮಾಡಿಕೊಟ್ಟಿತು. ಇದರಿಂದಾಗಿ ಜಮೀನ್ದಾರರು, ರೈತರು, ವ್ಯಾಪಾರಿಗಳಿಗೆ ಮಾತ್ರವೆ ಮತದಾನದ ಹಕ್ಕು ದೊರಕಿದೆ. ಅಂದು ಚುನಾಯಿಸುವ ಹಕ್ಕಿನ ಜನ ಸಹ ಒಂದು ಸಂಕುಚಿತ ಸಣ್ಣ ಪ್ರಮಾಣದ್ದಾಗಿತ್ತು. ಪ್ರತಿನಿಧಿಗಳನ್ನು ಒಂದು ಬಗೆಯ ಅನೌಪಚಾರಿಕ ಘೋಷಣೆಯಿಂದ ಆರಿಸಲಾಗುತ್ತಿತ್ತು.[೯] ಹೀಗಾಗಿ ಬಹಸಂಖ್ಯಾತರಾಗಿರುವ ಭೂರಹಿತ ಜನ ಸಮುದಾಯಗಳು ಅಂತಹ ಅವಕಾಶದಿಂದ ವಂಚಿತರಾಗಿದ್ದರು. ದಿವಾನ ಕಾಂತರಾಜರ ಸಂದರ್ಭದಲ್ಲಿ ಕೆಲವೊಂದು ಬಿಗಿ ನಿಯಮಗಳು ಸಡಿಲಗೊಂಡು ಕಡಿಮೆ ಕಂದಾಯ ನಿಡುವಂಥವರಿಗೂ ಮತದಾನ ಮಾಡುವ ಅವಕಾಶ ಮಾಡಲಾಯಿತು. ಈ ೧೯೧೯ರ ಸುಧಾರಣೆಯ ಮುನ್ನ ೧೦೦ರೂ ಹೆಚ್ಚು ಭೂ ಕಂದಾಯ ತೆರುವ ಮತ್ತು ೨೦ ರೂ. ಹೆಚ್ಚು ಪುರಸಭಾ ತೆರಿಗೆ ಸಲ್ಲಿಸುವವರು ಮಾತ್ರ ಚುನಾವಣೆಯಲ್ಲಿ ಪಾಲ್ಗೊಳ್ಳುವ ಅರ್ಹತೆ ಪಡೆದಿದ್ದರು. ನಂತರ ಈ ನಿಯಮವನ್ನೂ ಸಡಿಲಗೊಳಿಸಿ ರೂ.೫೦ ಭೂಕಂದಾಯ ಹಾಗೂ ೧೦ ರೂ ಪುರಸಭಾ ತೆರಿಗೆ ಸಲ್ಲಿಸುವವರೆಲ್ಲರಿಗೂ ಮತದಾನದ ಹಕ್ಕು ಕೊಡಲಾಯಿತು.[೨೦] ಹಾಗೆಯೇ ಮಹಿಳೆಯರಿಗೆ ಮತದಾನದ ಹಕ್ಕು ನೀಡಬೇಕೆಂದು ಪ್ರಯತ್ನಪಟ್ಟರು. ಸಂಪ್ರದಾಯವಾದಿಗಳ ಮತ್ತು ಮಿಗಿಲಾಗಿ ಮಹಾರಾಜರ ವಿರೋಧದಿಂದಾಗಿ ಈ ಕಾರ್ಯವನ್ನು ಮಾಡಲಾಗಲಿಲ್ಲ.[೨೧] ಈ ರೀತಿಯಾಗಿ ಮತದಾನ ಹಕ್ಕಿಗೆ ಸಂಬಂಧಿಸಿದಂತೆ ಅನೇಕ ಬದಲಾವಣೆಗಳಾದವು. ಹೀಗಿದ್ದರೂ ಸಹ ಅಂತಹ ಅರ್ಹತೆಯು ಸಹ ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದಂತಹ ಮಾದಿಗರಿಗೆ ಆಗ ಇರಲಿಲ್ಲ.

೧೯೨೩ರ ಸಂವಿಧಾನ ಸುಧಾರಣೆಗಳನ್ನು ಸರ್ಕಾರ ಘೋಷಿಸಿತು.[೨೨] ಅದರಲ್ಲಿ ಹೆಣ್ಣು ಮಕ್ಕಳಿಗೂ ಮತ ನೀಡುವ ಹಕ್ಕನ್ನು ಕೊಡಲಾಯಿತು (ಪು.೬೯೨ ಗ್ಯಾಸಟಿಯರ್ ಇರಬೇಕು) ನಂತರ ೧೯೪೦ರ ವೇಳೆಗೆ ಮೂರು ಬಾರಿ ಮತದಾರರ ಅರ್ಹತೆಯನ್ನು ಕಡಿಮೆ ಮಾಡಿದರೂ ಒಟ್ಟು ಮತದಾರರ ಸಂಖ್ಯೆ ಕೇವಲ ೩, ೫೭, ೨೨೩ ಅಥವಾ ಜನಸಂಖ್ಯೆ ಶೇ೪.೬ ಭಾಗ ಮಾತ್ರವಾಗಿತ್ತು.[೨೩] ಹೀಗಿರುವಾಗ ಅಂತಹ ಅರ್ಹತೆ, ಭೂರಹಿತ ಮಾದಿಗ ಸಮುದಾಯಕ್ಕೆ ಇರಲಿಲ್ಲವೆನ್ನಬಹುದ. ಅಂತಹ ಅರ್ಹತೆ

ಇರುವ ಜನ ಇದ್ದರೆ ಅದೊಂದು ಅಪರೂಪದ ಘಟನೆಯಾಗಿರುತ್ತದೆ. ಕೆಲವೊಂದು ವಿಶೇಷ ಅವಕಾಶದಿಂದಾಗಿ ಮಾತ್ರವೇ ಪ್ರತಿನಿಧಿ ಸಭೆಯ ಸದಸ್ಯರಾಗಿದ್ದಾರೆ ಮಾದಿಗರು.

## ೬.೨ ಸ್ವಾತಂತ್ರ್ಯ ನಂತರದ ಪ್ರಾತಿನಿಧಿಕ ಸಂಸ್ಥೆಗಳು ಮತ್ತು ಮಾದಿಗರು

ಸುಮಾರು ಎರಡು ನೂರಾ ಐವತ್ತು ವರ್ಷಗಳಿಗೂ ಹೆಚ್ಚು ಕಾಲ ಬ್ರಿಟಿಷರು ಭಾರತವನ್ನು ಆಳ್ವಿಕೆ ಮಾಡಿದ್ದಾರೆ. ಈ ಪರಕೀಯ ಪ್ರಭುತ್ವದ ವಿರುದ್ಧ ನಿರಂತರವಾಗಿ ನಡೆದ ಸ್ವಾತಂತ್ರ್ಯ ಚಳವಳಿಯ ಪರಿಣಾಮ ಭಾರತವು ಆಗಸ್ಟ್ ೧೫, ೧೯೪೭ರಂದು ಸ್ವತಂತ್ರವಾಯಿತು. ಅಲ್ಲಿಂದ ಭಾರತವು ಆಡಳಿತದ ಹೊಣೆಗಾರಿಕೆಗೆ ಸಂಬಂಧಿಸಿದಂತೆ ಮಾತ್ರವಲ್ಲದೇ ಎಲ್ಲಾ ರೀತಿಯಿಂದಲೂ ಹೊಸ ಸವಾಲನ್ನು ಎದುರಿಸಬೇಕಾಯಿತು. ಇಂತಹ ಸವಾಲನ್ನು ಸಮರ್ಥವಾದ ರೀತಿಯಲ್ಲಿ ನಿಭಾಯಿಸಲು ಸಿದ್ಧವಾಯಿತು. ಈ ಹಿಂದೆ ಅಂದರೆ ೧೯ನೇ ಶತಮಾನದ ಕಡೆಯ ಭಾಗದಲ್ಲಿ ಜಾರಿಗೆ ಬಂದ ರಿಪ್ಪನ್ನಿನ ಸುಧಾರಣೆಗಳ ಫಲವಾಗಿ ದೊರೆತ ಸ್ಥಳೀಯ ಸಂಸ್ಥೆಗಳ ಅಧಿಕಾರ, ೧೯೦೯, ೧೯೧೯ ಮತ್ತು ೧೯೩೫ರಲ್ಲಿ ಅನುಕ್ರಮವಾಗಿ ಜಾರಿಗೆ ಬಂದ ಇಂಡಿಯಾ ಸರ್ಕಾರದ ಶಾಸನಗಳಿಂದ ಹೆಚ್ಚು ಹೆಚ್ಚು ಸ್ವಾಯತ್ತತೆಯನ್ನೂ ಭಾರತೀಯರು ಪಡೆದಂತಾಯಿತು.[೨೫] ಈ ಹಿನ್ನೆಲೆಯಲ್ಲಿ ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೊಳಿಸಿದರು. ರಾಜ್ಯ, ಜಿಲ್ಲೆ, ತಾಲ್ಲೂಕು ಹಾಗೂ ಗ್ರಾಮ ಮಟ್ಟದ ರಾಜಕೀಯ ಸಂಸ್ಥೆಗಳನ್ನು ಪರಿಶೀಲಿಸಿ ಅನೇಕ ಬದಲಾವಣೆಗಳೊಂದಿಗೆ ಸಾಮಾಜಿಕ ನ್ಯಾಯವನ್ನು ಒದಗಿಸಿಕೊಡುವುದು ಮಾತ್ರವಲ್ಲದೇ ಯೋಜನೆಗಳನ್ನು ನಿಭಾಯಿಸುವ ಸಾಮರ್ಥ್ಯ ತರುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಬೇಕಾಗಿತ್ತು. ಬ್ರಿಟಿಷ್ ಕಾಲದ ಕರ್ನಾಟಕದ ಅನೇಕ ಪ್ರದೇಶಗಳು ವಿವಿಧ ಪ್ರಾಂತ್ಯಗಳ ಆಡಳಿತಕ್ಕೆ ಒಳಪಟ್ಟಿದ್ದರಿಂದ ರಾಜ್ಯದಲ್ಲಿ ಸ್ವಾತಂತ್ರ್ಯ ನಂತರ "ಹಲವು ವಿಧದ ಪಂಚಾಯತ್ ವ್ಯವಸ್ಥೆಗಳಿದ್ದವು. ಹಳೇ ಮೈಸೂರು ಪ್ರಾಂತ್ಯ, ಮದ್ರಾಸ್ ಪ್ರಾಂತ್ಯ, ಮುಂಬೈ ಪ್ರಾಂತ್ಯ, ಮತ್ತು ಹೈದರಬಾದ್-ಕರ್ನಾಟಕ ಪ್ರಾಂತ್ಯಗಳಲ್ಲಿ ಏಕೀಕರಣಕ್ಕೆ ಮುನ್ನ ಪ್ರತ್ಯೇಕ ಪಂಚಾಯತ್ ವ್ಯವಸ್ಥೆಗಳಿದ್ದವು.[೨೬] ಇದರಿಂದಾಗಿ ವಿವಿಧ ರೀತಿಯ ಕಾಯಿದೆಗಳ ನೆಲೆಯಲ್ಲಿ ಇವು ರಚನೆಗೊಂಡು ಕಾರ್ಯ ನಿರ್ವಹಿಸುತ್ತಿದ್ದರಿಂದ ಸ್ವಾತಂತ್ರ್ಯ ನಂತರದಲ್ಲಿ ಅವೆಲ್ಲವನ್ನೂ ಏಕರೂಪದ ಕಾನೂನು ಚೌಕಟ್ಟಿನಲ್ಲಿ ಬಂಧಿಸಬೇಕಾದ್ದು ಅನಿವಾರ್ಯವಾಗಿತ್ತು. ಅಲ್ಲದೆ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಿರ್ವಹಿಸಲು ಹೆಚ್ಚಿನ ಅಧಿಕಾರ ಮತ್ತು ಹೊಣೆಗಾರಿಕೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳುವಂತಹ ಆಡಳಿತ ವ್ಯವಸ್ಥೆಯನ್ನು ಸ್ಥಳೀಯ ಸಂಸ್ಥೆಗಳಿಗೆ ನೀಡಬೇಕೆನ್ನುವ ದೃಷ್ಟಿಯಿಂದ ಅನೇಕ ಕಾಯಿದೆಗಳನ್ನು ರಚನೆ ಮಾಡಲಾಯಿತು. ಈ ಕಾಯಿದೆಗಳೆಲ್ಲವೂ ಅನೇಕ ತಜ್ಞರು ಕೈಗೊಂಡ ಅಧ್ಯಯನದ ನಂತರದಲ್ಲಿ ಮಾಡಿದ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ ರೂಪಿತಗೊಂಡಿದ್ದವು. ಸ್ವಾತಂತ್ರ್ಯ ಬಂದಂದಿನಿಂದ ಕರ್ನಾಟಕ ಏಕೀಕರಣದವರೆಗೆ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದ ಕಾಯಿದೆಗಳು ಮತ್ತು ಅವು

ಎಷ್ಟರ ಮಟ್ಟಿಗೆ ಪರಿಶಿಷ್ಟ ಜಾತಿಯವರಿಗೆ ಸಾಮಾಜಿಕ ನ್ಯಾಯವನ್ನು ಒದಗಿಸಲಾಗಿದೆ ಎಂಬುದನ್ನು ಇಲ್ಲಿ ಚರ್ಚಿಸಲಾಗುವುದು. ಇದರೊಂದಿಗೆ ಮಾದಿಗರಿಗೆ ಸಿಕ್ಕಿರಬಹುದಾದ ಪ್ರಾತಿನಿಧ್ಯವನ್ನು ತಿಳಿಯಲು ಪ್ರಯತ್ನಿಸಲಾಗಿದೆ.

### ೧೯೫೨ರ ಮೈಸೂರು ಪಂಚಾಯತ್ ಮತ್ತು ಜಿಲ್ಲಾ ಬೋರ್ಡ್‌ಕಾಯಿದೆ

ಸ್ವತಂತ್ರಗೊಂಡ ಕರ್ನಾಟಕವನ್ನು ಮೊದಲು ಮೈಸೂರು ರಾಜ್ಯವೆಂದೇ ಕರೆಯಲಾಗುತ್ತಿತ್ತು. ಈ ಮೈಸೂರು ರಾಜ್ಯ ಸರ್ಕಾರವು ಸ್ಥಳೀಯ ಸಂಸ್ಥೆಗಳಲ್ಲಿ ಏಕರೂಪದ ಆಡಳಿತ ವ್ಯವಸ್ಥೆಯನ್ನು ತಂದು ಪ್ರಜಾಪ್ರಭುತ್ವದ ನೆಲೆಯಲ್ಲಿ ಸ್ಥಳೀಯ ಸಂಸ್ಥೆಗಳನ್ನು ರೂಪಿಸುವ ಸಲುವಾಗಿ ಕೆಲವೊಂದು ಅಧ್ಯಯನ ಸಮಿತಿಗಳನ್ನು ನೇಮಕ ಮಾಡಿದೆ. ಅವುಗಳಲ್ಲಿ ೧೯೪೯ರಲ್ಲಿ ವಿ.ವೆಂಕಟಪ್ಪನವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಅಯ್ಕೆ ಮಾಡಿತು. ಕೆಲವು ಮುಖ್ಯ ಶಿಫಾರಸ್ಸುಗಳೊಂದಿಗೆ ಈ ಸಮಿತಿ ೧೯೫೦ರ ಜೂನ್ ೧೨ರಂದು ತನ್ನ ವರದಿಯನ್ನು ಸಲ್ಲಿಸಿತು. ಈ ವರದಿಯಲ್ಲಿ ಪರಿಶಿಷ್ಟ ಜಾತಿಯವರಿಗೆ ಸ್ಥಳೀಯ ಸಂಸ್ಥೆಯ ಸದಸ್ಯತ್ವಕ್ಕೆ ಸಂಬಂಧಿಸಿದಂತೆ ಈ ರೀತಿ ಹೇಳಿದೆ : ಪರಿಶಿಷ್ಟ ಜಾತಿಗಳಿಗೆ ಪ್ರಾತಿನಿಧ್ಯ ದೊರೆಯದಿದ್ದಾಗ, ಆ ಗುಂಪುಗಳಿಂದ ಸದಸ್ಯರನ್ನು ಸೇರಿಸಿಕೊಳ್ಳಲು ಅಧಿಕಾರ ಇರಬೇಕೆಂದು ಸಮಿತಿ ಸೂಚಿಸಿತು[೨೬] ಇದರಿಂದಾಗಿ ಪರಿಶಿಷ್ಟ ಜಾತಿಯಲ್ಲಿ ಒಂದಾದ ಮಾದಿಗ ಜನಾಂಗವು ಸಹ ಸದಸ್ಯರಾಗಿ ನೇಮಕಗೊಳ್ಳಲು ಅವಕಾಶವಾಯಿತು. ವೆಂಕಟಪ್ಪನವರ ಅಧ್ಯಕ್ಷತೆಯ ಸಮಿತಿ ಅನೇಕ ಸತ್ಯಾಂಶಗಳನ್ನು ಪರಿಶೀಲಿಸಿ ನೀಡಿರುವ ಸಲಹೆಗಳು ಅಥವಾ ಶಿಫಾರಸುಗಳನ್ನು ಆಧರಿಸಿ ಮೈಸೂರು ವಿಲೇಜ್ ಪಂಚಾಯಿತ್ ಮತ್ತು ಡಿಸ್ಟಿಕ್ಟ್ ಬೋರ್ಡ್ ಆಕ್ಟ್ ೧೯೫೨ನ್ನು ರಚಿಸಲಾಯಿತು. ಇದರ ಪ್ರಕಾರ ಮೈಸೂರು ರಾಜ್ಯದಲ್ಲಿ ಸ್ಥಳೀಯ ಆಡಳಿತ ಸಂಸ್ಥೆಗಳು ಏಕಪ್ರಕಾರವಾಗಿ ರೂಪುಗೊಂಡಿರುವುದು ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಮೊದಲು ಎನ್ನಬಹುದಾಗಿದೆ. ಇದು ಎರಡು ಹಂತದ ಆಡಳಿತ ವ್ಯವಸ್ಥೆಯನ್ನು ರೂಪಿಸಿದೆ.

೧೯೫೦ ಜನವರಿ ೨೬ರಂದು ಭಾರತವು ಡಾ.ಬಿ.ಆರ್.ಅಂಬೇಡ್ಕರ ಕರಡು ಸಮಿತಿ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಿದ 'ಭಾರತದ ಸಂವಿಧಾನ'ವನ್ನೂ ಒಪ್ಪಿ ಘೋಷಿಸಿದ ನಂತರ ಈ ಸಂವಿಧಾನವು ಯಾವುದೇ ತಾರತಮ್ಯ ತೋರದೆ ಪ್ರೌಢ ಮತದಾನಕ್ಕೆ ಪ್ರತಿಯೊಬ್ಬರಿಗೂ ಅವಕಾಶ ಮಾಡಿಕೊಟ್ಟಿದ್ದು ರಾಜಕಾರಣದಲ್ಲಿ ಪ್ರತಿಯೊಂದು ವರ್ಗದ ಜನರು ಭಾಗವಹಿಸುವಂತೆ ಮಾಡಿದ್ದು ಮಹತ್ವವಾದ ಘಟನೆಯಾಗಿದೆ.

ಮೊದಲನೆಯ ಹಂತದಲ್ಲಿ ಗ್ರಾಮ ಅಥವಾ ಗ್ರೂಪ್ ಪಂಚಾಯತ್‌ಗೆ ವಯಸ್ಕ ಮತದಾನದ ಮೂಲಕ ಸದಸ್ಯರಾಗಿ ಆಯ್ಕೆಯಾಗಬೇಕು ಮತ್ತು ಅದರ ಸದಸ್ಯರ ಸಂಖ್ಯೆಯನ್ನು ಸಹ ಕನಿಷ್ಠ ೧೦ ರಿಂದ ಗರಿಷ್ಠ ೨೦ ಮಂದಿಗೆ ನಿಗಧಿಗೊಳಿಸಲಾಯಿತು. ಇಂತಹ ಪಂಚಾಯತ್‌ನ ಸದಸ್ಯತ್ವದಲ್ಲಿ

ಪರಿಶಿಷ್ಟ ಜನಾಂಗಕ್ಕೆ ಇಂತಿಷ್ಟು ಸ್ಥಾನಗಳನ್ನು ಮೀಸಲಿಡುವಂತೆ ಇರಬೇಕು[೨೭] ಎಂದು ತಿಳಿಸಿದೆ. ಹಾಗೆಯೇ ಎರಡನೆಯ ಹಂತದ ಆಡಳಿತ ವ್ಯವಸ್ಥೆಯಾದ ಜಿಲ್ಲಾ ಮಟ್ಟದ ಜಿಲ್ಲಾ ಮಂಡಲಿಗಳ ಸದಸ್ಯರ ಆಯ್ಕೆ ಮಾತ್ರ ಪರೋಕ್ಷ ಚುನಾವಣೆಯ ಮೂಲಕ ನಡೆಯಬೇಕಾಗಿತ್ತು. ಇದರ ಸದಸ್ಯರ ಸಂಖ್ಯೆ ಕನಿಷ್ಟ ೨೦, ಗರಿಷ್ಠ ೪೦ ಇರಬೇಕಾಗಿತ್ತು. ಇಲ್ಲಿಯೂ ಸಹ ಪರಿಶಿಷ್ಟ ಜಾತಿಗೆ ಸ್ಥಾನಗಳನ್ನು ಮೀಸಲಿಡುವುದು ಕಂಡು ಬರುತ್ತದೆ. ಆದರೆ ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದಿರುವ ಮಾದಿಗರು ಈ ಅವಕಾಶವನ್ನು ಬಳಸಿಕೊಂಡು ಮುಂದೆ ಬರಲು ಪ್ರಯತ್ನಿಸಿದರೆ ಇದು ಸಾಧ್ಯವೇ? ಎನಿಸುತ್ತಿದೆಯಾದರೂ ಆ ಸಂದರ್ಭದಲ್ಲಿ ಕೆಲವರು ಆಯ್ಕೆ ಅಥವಾ ನೇಮಕವಾಗಿಲ್ಲ ಎಂದು ಹೇಳಲಾಗದು.

ವೆಂಕಟಪ್ಪ ಸಮಿತಿಯ ಆಧಾರದ ಮೇಲೆ ರೂಪಿಸಲಾದ ಕಾಯಿದೆಯನ್ನು ಹೆಚ್ಚು ವರ್ಷಗಳ ಕಾಲ ಮುಂದುವರಿಸಲಿಲ್ಲ. ಈ ಕಾಯಿದೆಯಿಂಧಾದ ಅನುಕೂಲತೆಗಳು ಮತ್ತು ಅನಾನುಕೂಲತೆಗಳ ಕುರಿತು ಅಧ್ಯಯನ ಮಾಡಿ ಇನ್ನೂ ಉತ್ತಮ ರೀತಿಯಲ್ಲಿ ಆಡಳಿತ ನಡೆಸುವಂತಾಗಲೂ ಸ್ಥಳೀಯ ಸಂಸ್ಥೆಗಳನ್ನು ಪುನರ್ ರಚಿಸಲು ಮತ್ತೊಂದು ಸಮಿತಿಯನ್ನು ಸರ್ಕಾರ ಡಿ.ಎಸ್ .ಚಂದ್ರಶೇಖರಯ್ಯನವರ ಅಧ್ಯಕ್ಷತೆಯಲ್ಲಿ ನೇಮಕಮಾಡಿತು. ಅಧ್ಯಯನ ಮಾಡಿದ ನಂತರ ಈ ಸಮಿತಿ ತೀರ್ಮಾನಗಳನ್ನೂ ೧೯೫೪ರಲ್ಲಿ ಸರ್ಕಾರಕ್ಕೆ ಸಲ್ಲಿಸಿತು.[೨೮] ಈ ವರದಿಯು ಮೂರು ಹಂತದ ಆಡಳಿತ ವ್ಯವಸ್ಥೆಯನ್ನು ಜಾರಿಗೆ ತರುವಂತೆ ಸೂಚಿಸಿತು. ಈ ಪ್ರಕಾರ ಹಿಂದಿನ ವ್ಯವಸ್ಥೆಯೊಂದಿಗೆ ಕೆಲವೊಂದು ಬದಲಾವಣೆ ಮಾಡಿ ಗ್ರಾಮ ಮಟ್ಟದಲ್ಲಿ ಗ್ರಾಮಪಂಚಾಯತ್, ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಬೋರ್ಡ್‌ಗಳು ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಬೋರ್ಡ್ ಗಳನ್ನು ರೂಪಿಸಿತು. ತಾಲ್ಲೂಕು ಮಟ್ಟದ ಸದಸ್ಯರ ಆಯ್ಕೆಯು ೨/೩ ಭಾಗ ನೇರವಾಗಿ ೧/೩ ಭಾಗದ ಸದಸ್ಯರನ್ನು ಪರೋಕ್ಷವಾಗಿ ಆಯ್ಕೆ ಮಾಡಬೇಕೆಂದು ಸೂಚಿಸಿದ ಸಲಹೆಯೊಂದಿಗೆ ವಿಶೇಷವಾಗಿ ಹಿಂದುಳಿದ ಗುಂಪುಗಳು ಮತ್ತು ಮಹಿಳೆಯರಿಗೆ ಸೂಕ್ತ ಪ್ರಾತಿನಿಧ್ಯ ನೀಡುವ ಮೂಲಕ ಅವಕಾಶ ಕಲ್ಪಿಸಬೇಕೆಂದು ಸಮಿತಿ[೨೯] ವರದಿಯಲ್ಲಿ ತಿಳಿಸಿತ್ತು. ಆ ಪ್ರಕಾರ ಕೆಲವೊಂದು ಸ್ಥಾನಗಳನ್ನು ಪರಿಶಿಷ್ಟ ಜಾತಿಗಳಿಗೆ ನೀಡಿದ್ದರಿಂದ ಕೆಲವು ಸ್ಥಾನಗಳನ್ನು ವರ್ಗದಲ್ಲಿ ಕಂಡು ಬರುವ ಪ್ರಮುಖ ಜನಾಂಗಗಳಲ್ಲಿ ಒಂದಾದ ಮಾದಿಗ ಜನಾಂಗದವರು ಆಯ್ಕೆಯಾಗಿರುವುದು ಇಲ್ಲ ಎನ್ನಲಾಗದು. ೧೯೫೪-೫೫ರಲ್ಲಿ ಗ್ರಾಮ ಪಂಚಾಯಿತಿಗಳಿಗೆ ಚುನಾವಣೆಗಳು ನಡೆದವು. ೧೯೫೬ರಲ್ಲಿ ೧೨,೫೦೦ ಗ್ರಾಮ ಪಂಚಾಯತ್‌ಗಳು ಮೈಸೂರು ರಾಜ್ಯದಲ್ಲಿದ್ದವು. ಅಂತೆಯೇ ನವ ಮೈಸೂರು ರಾಜ್ಯದ ಕೆಲವೆಡೆ ಪಂಚಾಯತ್‌ಗಳು ಅಸ್ತಿತ್ವದಲ್ಲಿರಲಿಲ್ಲ. ೧೯೫೬-೫೭ರಲ್ಲಿ ಗುಲ್ಬರ್ಗಾ ವಿಭಾಗದ ೩.೨೩೮ ಗ್ರಾಮಗಳ ಪೈಕಿ ೬೦೦ ಗ್ರಾಮಗಳಲ್ಲಿ ಮಾತ್ರ ಇದ್ದವು ಅವು ಪ್ರಾರಂಭಿಕ ಹಂತದಲ್ಲಿದ್ದವು.[೩೦]

೧೯೫೯ರ ಮೈಸೂರು ಗ್ರಾಮ ಪಂಚಾಯತ್ ಮತ್ತು ಜಿಲ್ಲಾ ಬೋರ್ಡ್‌ಗಳ ಕಾಯಿದೆ

೧೯೫೨ ಕಾಯಿದೆ ಪ್ರಕಾರ ಸ್ಥಳೀಯ ಆಡಳಿತ ಸಂಸ್ಥೆಗಳು ಚಂದ್ರಶೇಖರಯ್ಯನವರ ಸಮಿತಿಯು ಮಾಡಿದ ಶಿಫಾರಸ್ಸುಗಳ ಮೇಲೆ ಕೆಲವೊಂದು ಮಾರ್ಪಾಡುಗಳೊಂದಿಗೆ ಮುಂದುವರಿದಿತ್ತು. ೧೯೫೬ರಲ್ಲಿ ರಾಜ್ಯ ಪುನರ್ ವಿಂಗಡಣೆಯಾದಾಗ ರಾಜ್ಯಕ್ಕೆ ಸೇರಿದ ನಾಲ್ಕು ಪ್ರದೇಶಗಳಲ್ಲಿ ಪ್ರತ್ಯೇಕವಾದ ಸ್ಥಳೀಯ ಸರಕಾರ ಕಾಯ್ದೆಗಳು ಅನುಷ್ಠಾನದಲ್ಲಿದ್ದವು. ಅವುಗಳೆಂದರೆ ೧೯೨೩ರ ಬಾಂಬೆ ಜಿಲ್ಲಾ ಸ್ಥಳೀಯ ಬೋರ್ಡುಗಳ ಕಾಯಿದೆ, ಮತ್ತು ೧೯೩೩ರ ಮದ್ರಾಸ್ ಗ್ರಾಮ ಪಂಚಾಯತ್ ಕಾಯ್ದೆ, ೧೯೫೬ರ ಹೈದ್ರಾಬಾದ್ ಜಿಲ್ಲಾ ಬೋರ್ಡ್‌ಗಳ ಕಾಯಿದೆ ಮತ್ತು ೧೯೫೧ರ ಹೈದ್ರಾಬಾದ್ ಗ್ರಾಮ ಪಂಚಾಯತ್‌ಗಳ ಕಾಯ್ದೆ ಮತ್ತು ೧೯೫೬ರ ಕೂರ್ಗ್ ಗ್ರಾಮ ಪಂಚಾಯತ್ ಕಾಯ್ದೆ.[೬೧] ಹೀಗೆ ಅನೇಕ ಕಾಯಿದೆಗಳು ಪ್ರದೇಶವಾರು ವಿವಿಧ ಸಂದರ್ಭದಲ್ಲಿ ರಚನೆಗೊಂಡು ಅಸ್ತಿತ್ವದಲ್ಲಿದ್ದವು. ಇವುಗಳೆಲ್ಲವನ್ನೂ ಒಟ್ಟಾಗಿಸಿ ರಾಜ್ಯಾದ್ಯಂತ ಏಕರೂಪದ ಕಾಯಿದೆಗೆ ಒಳಪಡಿಸುವ ಉದ್ದೇಶವನ್ನು ಸರ್ಕಾರ ಹೊಂದಿತ್ತು. ಆಗ ಕೇಂದ್ರ ಸರ್ಕಾರವು ಸ್ಥಳೀಯ ಪಂಚಾಯಿತ್ ಸಂಸ್ಥೆಗಳ ಅಧ್ಯಯನ ಮಾಡಲು ರಾಷ್ಟ್ರಮಟ್ಟದಲ್ಲಿ ಬಲವಂತರಾಯ್ ಮೆಹತಾ ಸಮಿತಿಯೊಂದನ್ನು ನೇಮಕ ಮಾಡಿತು. ಅದು ಅಧ್ಯಯನ ಕೈಗೊಂಡು ಸ್ಥಳೀಯ ಸಂಸ್ಥೆಗಳ ಆಡಳಿತದ ಕಾರ್ಯವೈಖರಿ ಯೋಜನೆಗಳ ಜಾರಿಯಲ್ಲಿ ಅದರ ಪಾತ್ರ ಮುಂತಾದ ವಿಷಯಗಳನ್ನೊಳಗೊಂಡಂತೆ ಸಮಗ್ರವಾಗಿ ಅಧ್ಯಯನ ಮಾಡಿ ಅನೇಕ ಶಿಫಾರಸ್ಸುಗಳನ್ನು ಮಾಡಿ ತನ್ನ ವರದಿಯನ್ನು ಸಲ್ಲಿಸಿತು. ಈ ವರದಿಯನ್ನು ಅನುಸರಿಸಿದ ಮೈಸೂರು ಸರ್ಕಾರ ಮೈಸೂರು ವಿಲೇಜ್ ಪಂಚಾಯತ್ ಮತ್ತು ಡಿಸ್ಟ್ರಿಕ್ಟ್ ಬೋರ್ಡ್ ಕಾಯಿದೆಯನ್ನು ೧೯೫೯ರಲ್ಲಿ ಜಾರಿಗೊಳಿಸಿತು. ಈ ಹೊಸ ಕಾಯ್ದೆಯ ೧೯೫೯ನೇ ನವಂಬರ್ ೧ ರಂದು ಜಾರಿಗೆ ಬಂದಿತು. ೧೯೬೦ರಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆದು ಪಂಚಾಯತ್ ೧೯೬೦ ಡಿಸಂಬರ್ ೨೧ರಂದು ಭಾರತದ ರಾಷ್ಟ್ರಾಧ್ಯಕ್ಷರಿಂದ ಉದ್ಘಾಟಿಸಲಾಯಿತು.[೬೨]

ಈ ಕಾಯಿದೆ ಪ್ರಕಾರ ಮೂರು ಹಂತದ ಪಂಚಾಯಿತ್ ವ್ಯವಸ್ಥೆ ರೂಪುಗೊಂಡಿತು. ಗ್ರಾಮ ಮಟ್ಟದಲ್ಲಿ ಗ್ರಾಮ ಪಂಚಾಯತ್, ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಳಿ ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಲಹಾ ಸಮಿತಿಗಳು ಅಸ್ತಿತ್ವಕ್ಕೆ ಬಂದವು.

ಮೊದಲನೆಯ ಹಂತದ ಗ್ರಾಮ ಪಂಚಾಯತ್, ಕನಿಷ್ಟ ೧೫೦೦ ರಿಂದ ೧೦,೦೦೦ ಜನಸಂಖ್ಯೆ ಹೊಂದಿರುವ ಪ್ರದೇಶಗಳಲ್ಲಿ ಒಂದು ಗ್ರಾಮ ಪಂಚಾಯತ್ ರಚನೆಯಾಯಿತು. ಇದರ ಸದಸ್ಯತ್ವದ ಸಂಖ್ಯೆ ಕನಿಷ್ಟ ೧೧, ಗರಿಷ್ಟ ೧೫ ಮಂದಿ ಮಾತ್ರವೇ ಇರಬೇಕಾಗಿತ್ತು. ಈ ಸದಸ್ಯರೆಲ್ಲರು ಚುನಾವಣೆಯ ಮೂಲಕ ಆಯ್ಕೆಯಾಗಬೇಕಿತ್ತು. ಇಲ್ಲಿಯೂ ಕೆಲವೊಂದು ಸ್ಥಾನವನ್ನು ಪರಿಶಿಷ್ಟ ಜನಾಂಗದವರಿಗೆ ನೀಡಬೇಕಾಗಿತ್ತು. ಈ ಗ್ರಾಮ ಪಂಚಾಯತ್‌ನ ಅಧ್ಯಕ್ಷ ಮತ್ತು ಉಪಾಧ್ಯಕ್ಷ

ಸ್ಥಾನಗಳನ್ನು ಸದಸ್ಯರಲ್ಲೆ ತೀರ್ಮಾನವಾಗುತ್ತಿತ್ತು. ಇದರಿಂದಾಗಿ ಸ್ಥಾನಗಳಿಗೆ ಆಯಾ ಗ್ರಾಮ ಪಂಚಾಯತ್‌ನ ಅಂಥವ್ಯಾಪ್ತಿಯಲ್ಲಿ ಬರುವ ಗ್ರಾಮದ ಪ್ರಬಲ ಜಾತಿಯ ವ್ಯಕ್ತಿಗಳು ಮಾತ್ರವೇ ಸಾಧ್ಯವಾಗುತ್ತಿತ್ತು ಎನ್ನಬಹುದು. ಈ ರೀತಿಯ ಪರಿಸ್ಥಿತಿ ಇರುವಾಗ ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದಿರುವ ಆಯ್ಕೆಯಾಗಿರುವ ಮಾದಿಗ ಆಯ್ಕೆಯಾದ ಜನಾಂಗದ ಸದಸ್ಯ ಅಂತಹ ಸ್ಥಾನಗಳನ್ನು ಕಲ್ಪಿಸಿಕೊಳ್ಳಲು ಸಹ ಸಾಧ್ಯವಿರಲಿಲ್ಲ ರಾಜ್ಯದಲ್ಲಿ ೧೯೫೫ರಲ್ಲಿ ಗ್ರಾಮಪಂಚಾಯತ್ ಗಳ) ಸಂಖ್ಯೆ ೧೫೦೦೦ಂಕ್ಕೇರಿತು.[೩೩]

ಎರಡನೆಯ ಹಂತದಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಳಿಗಳನ್ನು ಕಾಣಬಹುದಾಗಿದೆ. ಅದರ ಸದಸ್ಯರು ಸಹ ನೇರ ಚುನಾವಣೆಯ ಮೂಲಕ ಆರಿಸಿಬರಬೇಕಿತ್ತು. ಅಲ್ಲಿಯೂ ಕೂಡ ಕೆಲವೊಂದು ಸ್ಥಾನಗಳನ್ನು ಪರಿಶಿಷ್ಟ ಜಾತಿಯವರಿಗೆ ನೀಡಲಾಗಿದ್ದು, ಆ ಸ್ಥಾನಕ್ಕೆ ಮಾದಿಗರು ಸಹ ಸ್ಪರ್ಧಿಸುವವರಲ್ಲಿ ಒಬ್ಬರಾಗಲು ಅವಕಾಶವಾಯಿತು. ಇಲ್ಲಿಯು ಸಹ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳಿಗೆ ಯಾವುದೇ ಮೀಸಲು ನಿಯಮ ಇಲ್ಲದೆ ಇರುವುದರಿಂದ ಆ ಸ್ಥಾನಗಳು ಕೇವಲ ಮೇಲುಜಾತಿಗಳಿಗೆ ಮಾತ್ರವೇ ಸಿಗುತ್ತಿತ್ತು. ತಾಲ್ಲೂಕು ಅಭಿವೃದ್ಧಿ ಮಂಡಳಿಯ ಸದಸ್ಯತ್ವವು ಸ್ಥಳೀಯ ಪ್ರದೇಶಗಳಿಂದ ಆಯ್ಕೆಯಾಗಿರುವ ವಿಧಾನ ಸಭಾ ಹಾಗೂ ವಿಧಾನ ಪರಿಷತ್ ಸದಸ್ಯರಿಗೂ ನೀಡಲಾಗಿತ್ತು. ಹೀಗೆ ರಚನೆಗೊಂಡ ತಾಲ್ಲೂಕು ಅಭಿವೃದ್ಧಿ ಮಂಡಳಿಗಳು ರಾಜ್ಯದಲ್ಲಿ ೧೯೬೦ರಲ್ಲಿ ೧೭೨ ತಾಲ್ಲೂಕು ಅಭಿವೃದ್ಧಿ ಬೋರ್ಡುಗಳಲ್ಲಿ ೮೩ ತಾಲ್ಲೂಕು ಅಭಿವೃದ್ಧಿ ಬೋರ್ಡ್‌ಗಳಲ್ಲಿ ಒಂದೇ ಬ್ಲಾಕು ಇದ್ದರೆ, ೭೯ ತಾಲ್ಲೂಕು ಅಭಿವೃದ್ಧಿ ಬೋರ್ಡ್‌ಗಳಲ್ಲಿ ಮೂರು ಬ್ಲಾಕ್‌ಗಳು ಹಾಗೂ ೨ ತಾಲ್ಲೂಕು ಅಭಿವೃದ್ಧಿ ಬೋರ್ಡ್‌ಗಳಲ್ಲಿ ನಾಲ್ಕು ಬ್ಲಾಕುಗಳಿದ್ದವು. ೧೯೬೮ರ ನಂತರ ಹೆಚ್ಚುವರಿ ಬ್ಲಾಕುಗಳನ್ನು ವಿಸ್ತರಿಸಿ ತಾಲ್ಲೂಕಾಗಿ ಮಾರ್ಪಡಿಸಿದ್ದರಿಂದ ಪ್ರತಿ ತಾಲ್ಲೂಕಿಗೆ ಒಂದು ಬ್ಲಾಕ್ ಇದೆ.[೩೪]

ಮೂರನೆಯ ಹಂತದಲ್ಲಿ ಬರುವುದೇ ಜಿಲ್ಲಾ ಅಭಿವೃದ್ಧಿ ಸಲಹಾ ಸಮಿತಿ; ಈ ಸಮಿತಿಯು ಸದಸ್ಯರು ನೇರವಾಗಿ ಚುನಾಯಿತರಾಗಬೇಕಿರಲಿಲ್ಲ. ಈಗಾಗಲೇ ತಾಲ್ಲೂಕು ಅಭಿವೃದ್ಧಿ ಮಂಡಲಿಯ ಅಧ್ಯಕ್ಷರು ಮತ್ತು ಜಿಲ್ಲಾ ವ್ಯಾಪ್ತಿಯಲ್ಲಿ ವಿವಿಧ ಕ್ಷೇತ್ರಗಳಲ್ಲಿ ಆಯ್ಕೆಯಾಗಿರುವ ವಿಧಾನಸಭೆ, ವಿಧಾನ ಪರಿಷತ್ ಹಾಗೂ ಲೋಕಸಭಾ ಸದಸ್ಯರಿಂದ ಈ ಸಮಿತಿಗೆ ಸದಸ್ಯರು ನೇಮಕಗೊಳ್ಳುತ್ತಿದ್ದರು. ಹೀಗೆ ನೇಮಕಗೊಂಡ ಸಮಿತಿಯೊಂದಿಗೆ ೧೫ಕ್ಕೂ ಹೆಚ್ಚಿಲ್ಲದ ಸರ್ಕಾದಿಂದ ನೇಮಕವಾದ ಅಧಿಕಾರಿಗಳು ಇರುತ್ತಿದ್ದರು. ಜಿಲ್ಲಾಧಿಕಾರಿಗಳು ಅದರ ಪದನಿಮಿತ್ತ ಅಧ್ಯಕ್ಷರು ಆಗಿದ್ದರು. ಈ ಹಂತದ ಆಡಳಿತ ವ್ಯವಸ್ಥೆಯಲ್ಲಿಯೂ ಕೂಡ ೧೯೫೯ರ ಮೈಸೂರು ವಿಲೇಜ್ ಮತ್ತು ಡಿಸ್ಟಿಕ್ಟ್ ಬೋರ್ಡ್ ಆಕ್ಟ್ "ಹರಿಜನರಿಗೆ, ಗಿರಿಜನರಿಗೆ ಮತ್ತು ಮಹಿಳೆಯರಿಗೆ ಕೆಲವು ಸೀಟುಗಳನ್ನು ಕಾದಿರಿಸಲು ಈ ಕಾಯಿದೆ ಅವಕಾಶ ಮಾಡಿಕೊಟ್ಟಿದೆ.[೩೫] ಈ ಹಿನ್ನೆಲೆಯಲ್ಲಿ ಮಾದಿಗರು ಹರಿಜನರಿಗೆ ಮೀಸಲು ಇರುವ

ಸ್ಥಾನಗಳಲ್ಲಿ ಸ್ಪರ್ಧಿಸಲು ಅವಕಾಶ ಪಡೆದುಕೊಂಡಿತ್ತು. ಈ ಅವಕಾಶವನ್ನು ಬಳಸಿಕೊಂಡ ಮಾದಿಗ ಜನಾಂಗದ ಅನೇಕರು ತಾಲ್ಲೂಕು ಅಭಿವೃದ್ಧಿ ಮಂಡಲಿ ಮತ್ತು ಜಿಲ್ಲಾ ಅಭಿವೃದ್ಧಿ ಸಲಹಾ ಸಮಿತಿಗೆ ಆಯ್ಕೆಯಾಗಿರುವ ಉದಾಹರಣೆಗಳು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲೂ ದೊರಕುತ್ತವೆ. ಮಾಹಿತಿ ಲಭ್ಯವಿರುವ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನಲ್ಲಿ ವಿವಿಧ ಕಾಲಘಟ್ಟಗಳಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಲಿ ಸದಸ್ಯರಲ್ಲಿ ಆಯ್ಕೆಯಾದವರೆಂದರೆ ಎಂ.ರಂಗಯ್ಯ, ಆರ್.ಹನುಮಂತಪ್ಪ (ರಂಗನಾಥಪುರ), ಕೆ.ಓಬಳಗಿರಿಯಪ್ಪ (ಗನ್ನಾಯನಹಳ್ಳಿ), ಆರ್.ಕರಿಯಪ್ಪ (ಕಣಜನಹಳ್ಳಿ), ಪಿ.ರಂಗಪ್ಪ (ಮೇಟಿಕುರ್ಕೆ). ಇವರಲ್ಲಿ ಆರ್.ಹನುಮಂತಪ್ಪನವರು ಎರಡು ಅವಧಿಗಳಲ್ಲಿ ಆಯ್ಕೆಯಾಗಿರುವುದು ಕಂಡುಬರುತ್ತದೆ. ೧೯೭೮ರಲ್ಲಿ ಚಿತ್ರದುರ್ಗ ತಾಲ್ಲೂಕು ಬೋರ್ಡ್‌ಗೆ ಫಂಡರಹಳ್ಳಿ ಮೀಸಲು ಕ್ಷೇತ್ರದಿಂದ ಸಿದ್ದಾಪುರದ ಎಂ. ಹನುಮಂತಪ್ಪ ತುರುವನೂರಿನಿಂದ ರಾಮಚಂದ್ರಪ್ಪ ಹಾಗೂ ದೊಡ್ಡ ಸಿದ್ದಿವ್ವನಹಳ್ಳಿಯಿಂದ ಸಿದ್ದಪ್ಪ ಎಂಬುವರು ಚುನಾಯಿತರಾಗಿದ್ದಾರೆ. ಚಳ್ಳಕೆರೆ ತಾಲ್ಲೂಕನಲ್ಲಿ ಟಿ. ಗಿರಿಯಪ್ಪ ಎಂಬುವರು ಆಯ್ಕೆಯಾಗಿದ್ದರು.

ಜಿಲ್ಲಾ ಅಭಿವೃದ್ಧಿ ಮಂಡಲಿಗೆ ಬಂದರೆ ಚಿತ್ರದುರ್ಗ ಜಿಲ್ಲೆಯಲ್ಲಿ ಹಿರಿಯೂರು ತಾಲ್ಲೂಕಿನ ಪಟ್ರೆಹಳ್ಳಿ ಮೀಸಲು ಕ್ಷೇತ್ರದಲ್ಲಿ ಎಸ್ .ಗಂಗಾಧರಪ್ಪನವರು ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಿ ಎರಡು ಬಾರಿ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಗೋಪಾಲಸ್ವಾಮಿ ಮೊದಲಿಯರ್ ಬಳ್ಳಾರಿ ಜಿಲ್ಲಾಧ್ಯಕ್ಷರಾಗಿದ್ದ ಕಾಲದ ಅಂದಿನ ಚುನಾವಣೆಯಲ್ಲಿ ಬಣವಿಕಲ್ಲು ಗ್ರಾಮದ ಹೆಸರಾಂತ ವ್ಯಕ್ತಿ ಬಿ.ಎಂ.ವೀರಭದ್ರಪ್ಪನವರ ಜೊತೆಗೆ ಮರಿಯಪ್ಪನವರ ಮಗ ಓದೋ ರಂಗಪ್ಪ(ಮಾದಿಗರು) ಜಿಲ್ಲಾ ಬೋರ್ಡ್ ಸದಸ್ಯರಾಗಿ ಆರಿಸಿ ಬಂದಿದ್ದಾರೆ.[೬] ಈ ಅಂಶಗಳು ಅಂದು ಮಾದಿಗ ಜನಾಂಗದಿಂದ ಅನೇಕರು ತಾಲ್ಲೂಕು ಮತ್ತು ಜಿಲ್ಲಾ ಅಭಿವೃದ್ಧಿ ಮಂಡಳಿಗಳಿಗೆ ಆಯ್ಕೆಯಾಗಿರುವುದನ್ನು ಖಚಿತಪಡಿಸುತ್ತವೆ.

ಈ ರೀತಿ ಗ್ರಾಮ ಮಟ್ಟದಿಂದ ಹಿಡಿದು ಜಿಲ್ಲಾ ಮಟ್ಟದವರೆಗಿನ ಪಂಚಾಯತ್ ಆಡಳಿತದಲ್ಲಿ ಭಾಗಿಗಳಾಗಲು ಪರಿಶಿಷ್ಟ ಜಾತಿಗೆ ನೀಡಿರುವ ಅವಕಾಶಗಳನ್ನು ಬಳಸಿಕೊಂಡ ಮಾದಿಗರು ರಾಜಕೀಯ ಪ್ರತಿನಿಧಿಗಳಾಗಿ ಆಯ್ಕೆಯಾಗಿರುವುದು ಆ ವರ್ಗದ ಜನರಲ್ಲಿ ರಾಜಕೀಯ ಪ್ರಜ್ಞೆ ಮೂಡಲು ಸಹಕಾರಿಯಾಗಿದೆ.

### ೬.೩ ೧೯೭೩ರ ನಂತರದ ಸ್ಥಳೀಯ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಮಾದಿಗರು

ಮೈಸೂರು ರಾಜ್ಯವು ಭಾಷಾ ನೆಲೆಯಲ್ಲಿ ಏಕೀಕರಣಗೊಂಡು ಕರ್ನಾಟಕ ರಾಜ್ಯ ಎಂದು ನಾಮಕರಣಗೊಂಡಿತು. ಆನಂತರ ಸ್ಥಳೀಯ ಪಂಚಾಯತ್ ಸಂಸ್ಥೆಗಳಿಗೆ ಸಂಬಂಧಿಸಿದಂತೆ ರಾಜ್ಯ

ಸರ್ಕಾರ ಜಾರಿಯಲ್ಲಿ ತಂದ ಪ್ರಮುಖವಾದ ಕಾಯಿದೆ ೧೯೮೩ರ ಕಾಯಿದೆಯಾಗಿದೆ. ಇದು ಕೇಂದ್ರ ಸರ್ಕಾರವು ೧೯೭೭ರಲ್ಲಿ ನೇಮಕ ಮಾಡಿದ ಅಶೋಕ ಮೆಹತ ಸಮಿತಿಯ ವರದಿಯನ್ನು ಅನುಸರಿಸಿ ಸರ್ಕಾರ ೧೯೮೩ರ ಕರ್ನಾಟಕ ಜಿಲ್ಲಾ ಪರಿಷತ್ ತಾಲ್ಲೂಕು ಪಂಚಾಯತ್ ಸಮಿತಿ, ಮಂಡಲ ಪಂಚಾಯತ್‌ಗಳು ಮತ್ತು ನ್ಯಾಯ ಪಂಚಾಯತ್ ಕಾಯ್ದೆಯನ್ನು ರೂಪಿಸಿತು. ಇದಕ್ಕೆ ೧೯೮೫ರಲ್ಲಿ ರಾಷ್ಟ್ರಾಧ್ಯಕ್ಷರ ಅನುಮತಿ ದೊರಕಿತು. ೧೯೮೭ ಜನವರಿಯಲ್ಲಿ ಚುನಾವಣೆಗಳು ನಡೆದು ಈ ಕಾಯ್ದೆ ಜಾರಿಗೆ ಬಂದಿತು.[೩೭] ಇದರ ಪ್ರಕಾರ ಜಿಲ್ಲಾಮಟ್ಟದಲ್ಲಿ ಜಿಲ್ಲಾ ಪರಿಷತ್ ಮತ್ತು ಕೆಳಮಟ್ಟದಲ್ಲಿ ಮಂಡಲ ಪಂಚಾಯತ್ ಎಂಬ ಎರಡು ಹಂತದ ಚುನಾಯಿತ ಸಂಸ್ಥೆಗಳನ್ನೂ ಹೊಂದುವಂತೆ ಮಾಡಿ ಜೊತೆಗೆ ಇವುಗಳ ಕಾಲಾವಧಿಯನ್ನು ೧೯೭೮ರ ತಿದ್ದುಪಡಿಯ ನಂತರ ಪಂಚಾಯತ್ ರಾಜ್ ಸಂಸ್ಥೆಗಳ ಕಾಲಾವಧಿಯನ್ನು ೪ ವರ್ಷದಿಂದ ೫ ವರ್ಷಕ್ಕೆ ವಿಸ್ತರಿಸಲಾಯಿತು.[೩೮]

**ಮಂಡಲ ಪಂಚಾಯತ್ :** ೧೯೮೩ರ ಕಾಯಿದೆಯ ಪ್ರಕಾರ ೮೦೦೦ ದಿಂದ ೧೨೦೦೦ ಜನ ಸಂಖ್ಯೆಯುಳ್ಳ ಗ್ರಾಮಗಳನ್ನೊಳಗೊಂಡಂತೆ ಒಂದು ಮಂಡಲ ಪಂಚಾಯತ್‌ನ್ನು ರೂಪಿಸಲಾಗಿದೆ. ೪೦೦ ಜನರಿಗೆ ಒಬ್ಬ ಸದಸ್ಯನಂತೆ ಜನಸಂಖ್ಯೆಯ ಆಧಾರದ ಮೇಲೆ ಆಯಾ ಮಂಡಲಿ ಪಂಚಾಯತ್ ಸದಸ್ಯರ ಒಟ್ಟು ಸಂಖ್ಯೆ ನಿರ್ಧಾರವಾಗಿರುತ್ತದೆ. ಇದು ಕೆಲವು ಸಮಿತಿಗಳನ್ನು ರಚಿಸಿಕೊಂಡು ಗ್ರಾಮೀಣಾಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸಲು ಕ್ರಮ ಕೈಗೊಳ್ಳಬೇಕಾಗುತ್ತದೆ.

**ತಾಲ್ಲೂಕು ಪಂಚಾಯತ್ ಸಮಿತಿ :** ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಪಂಚಾಯತ್ ಸಮಿತಿಯನ್ನು ಹೊಂದಿದ್ದು ಈ ಸಮಿತಿಯಲ್ಲಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಮಂಡಲ ಪಂಚಾಯತ್‌ಗಳ ಪ್ರಧಾನರು ಸದಸ್ಯರಾಗಿರುತ್ತಾರೆ. ಇವರೊಂದಿಗೆ ತಾಲ್ಲೂಕಿನ ವಿಧಾನಸಭಾ ಸದಸ್ಯರು, ತಾಲ್ಲೂಕಿನಿಂದ ಆಯ್ಕೆಯಾದ ಜಿಲ್ಲಾಪರಿಷತ್ ಸದಸ್ಯ, ತಾಲ್ಲೂಕು ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್‌ನ ಅಧ್ಯಕ್ಷ, ತಾಲ್ಲೂಕು ವ್ಯವಸಾಯೋತ್ಪನ್ನ ಸಹಕಾರಿ ಮಾರುಕಟ್ಟೆ ಸಂಘದ ಅಧ್ಯಕ್ಷರು ಸಹ ಸದಸ್ಯರಾಗಿ ಸಮಿತಿಯಲ್ಲಿ ಇರುತ್ತಾರೆ. ಇವರಲ್ಲದೆ ಸರ್ಕಾರವು ಪರಿಶಿಷ್ಟ ಜಾತಿ ಮತ್ತು ಪಂಗಡದ, ಹಿಂದುಳಿದ ವರ್ಗ ಮತ್ತು ಮಹಿಳೆಯರಲ್ಲಿ ಒಟ್ಟು ೫ ಜನ ಸದಸ್ಯರನ್ನು ನೇಮಕ ಮಾಡಿರುವಂತವರು ಸದಸ್ಯರಾಗುವರು.[೩೯] ಹೀಗೆ ಮೇಲಿನವರನ್ನು ಒಳಗೊಂಡಂತೆ ತಾಲ್ಲೂಕು ಪಂಚಾಯತ್ ಸಮಿತಿ ರೂಪುಗೊಂಡಿರುತ್ತದೆ. ಇದರ ಅಧ್ಯಕ್ಷರಾಗಿ ಆಯಾ ಕ್ಷೇತ್ರದ ಶಾಸಕರಿರುತ್ತಾರೆ. ಒಂದು ವೇಳೆ ಇಬ್ಬರು ಶಾಸಕರನ್ನೊಳಗೊಂಡಿದ್ದರೆ ಹೆಚ್ಚಿನ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯನ್ನು ಹೊಂದಿರುವವರು ಅಧ್ಯಕ್ಷರಾಗುವರು. ಈ ರೀತಿ ರೂಪುಗೊಂಡ ಸಮಿತಿಯು ತಾಲ್ಲೂಕಿನ ವಿವಿಧ ಇಲಾಖೆಗಳ ಕಾರ್ಯಕ್ರಮಗಳನ್ನು ಪರಿಶೀಲಿಸಲು ಹಾಗೂ ಮಾರ್ಗದರ್ಶನ ಮಾಡುವ ಅಧಿಕಾರವನ್ನು ಹೊಂದಿರುತ್ತದೆ.

**ಜಿಲ್ಲಾ ಪರಿಷತ್ :** ಜಿಲ್ಲಾ ಮಟ್ಟದಲ್ಲಿ ಹಿಂದಿನ ಜಿಲ್ಲಾ ಅಭಿವೃದ್ಧಿ ಮಂಡಲಿಗೆ ಬದಲಾಗಿ ಜಿಲ್ಲಾ ಪರಿಷತ್ ಅಸ್ತಿತ್ವಕ್ಕೆ ಬಂದಿದೆ. ಇದರ ಸದಸ್ಯರು ನೇರವಾಗಿ ಚುನಾವಣೆಯ ಮೂಲಕ ಅಯ್ಕೆಯಾಗಿ ಬಂದಿರುತ್ತಾರೆ. ಇದು ೨೮,೦೦೦ ಜನಸಂಖ್ಯೆಗೆ ಒಬ್ಬ ಸದಸ್ಯನಂತೆ ಆಯಾ ಜಿಲ್ಲಾ ವ್ಯಾಪ್ತಿಯಲ್ಲಿ ಬರುವ ಪ್ರದೇಶದ ಜನಸಂಖ್ಯೆಯನ್ನಾದರಿಸಿ ಒಟ್ಟು ಸದಸ್ಯರ ಸಂಖ್ಯೆಯನ್ನು ಹೊಂದಿರುತ್ತದೆ. ಆಯ್ಕೆಗೊಂಡ ಸದಸ್ಯರಲ್ಲದೆ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ವಿಧಾನಸಭಾ ಮತ್ತು ವಿಧಾನ ಪರಿಷತ್ ಸದಸ್ಯರು ಹಾಗೂ ಲೋಕಸಭಾ ಸದಸ್ಯ, ಅಲ್ಲದೆ ಜಿಲ್ಲಾ ಸಹಕಾರಬ್ಯಾಂಕಿನ ಅಧ್ಯಕ್ಷರು ಸಹ ಸದಸ್ಯರಾಗಿರುತ್ತಾರೆ. ಈ ರೀತಿ ಸದಸ್ಯರನ್ನೊಳಗೊಂಡ ಜಿಲ್ಲಾ ಪರಿಷತ್ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಚುನಾಯಿತ ಸದಸ್ಯರಲ್ಲಿ ಯಾರಾದರು ಇಬ್ಬರನ್ನು ಚುನಾವಣೆಯ ಮೂಲಕ ನೇಮಕ ಮಾಡಲಾಗುತ್ತದೆ. ಇಂತಹ ಸಂದರ್ಭದಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ ಪ್ರಬಲರಾಗಿರುವ ಪ್ರಭಾವಿತ ವ್ಯಕ್ತಿಗಳು ಮಾತ್ರವೇ ಆಯ್ಕೆಯಾಗಲು ಹೆಚ್ಚು ಅವಕಾಶವಿದೆ ಎನ್ನಬಹುದು. ಹೀಗಾಗಿ ಎಲ್ಲಾ ರೀತಿಯಿಂದಲೂ ಹಿಂದುಳಿದ ಜನಾಂಗವಾದ ಮಾದಿಗರು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಜಿಲ್ಲಾ ಪರಿಷತ್ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳಿಗೆ ಆಯ್ಕೆಯಾಗಿರುವುದು ಕಂಡುಬಂದಿಲ್ಲ. ಜಿಲ್ಲಾ ಪರಿಷತ್ ಅನೇಕ ಉಪಸಮಿತಿಗಳನ್ನು ನೇಮಕಮಾಡಿಕೊಂಡು ಜಿಲ್ಲೆ ವ್ಯವಹಾರ ಮತ್ತು ಅಭಿವೃದ್ಧಿಗಳ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

ಹೀಗೆ ಆಯಾ ಜಿಲ್ಲೆಯಲ್ಲಿ ಮಂಡಲ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪರಿಷತ್ ಗಳು ಗ್ರಾಮ ಮಟ್ಟದಿಂದ ಜಿಲ್ಲಾ ಮಟ್ಟದವರೆಗಿನ ಆಡಳಿತಕ್ಕೆ ಸಂಬಂಧಿಸಿದಂತೆ ವಿವಿಧ ಇಲಾಖೆಗಳ ಕಾರ್ಯಕ್ರಮವನ್ನು ಗಮನಿಸುವುದರೊಂದಿಗೆ ಸರ್ಕಾರ ಗ್ರಾಮೀಣ ಅಭಿವೃದ್ಧಿಗಾಗಿ ಕೈಗೊಂಡಿರುವ ಯೋಜನೆಗಳನ್ನೂ ಜಾರಿಗೆ ತರುವಲ್ಲಿ ಪ್ರಮುಖ ಪಾತ್ರವಹಿಸಿವೆ. ಇಂತಹ ಅಧಿಕಾರವನ್ನು ಹೊಂದಲು ಅವಕಾಶ ವಂಚಿತರಾದ ವರ್ಗಗಳಿಗೆ ೧೯೮೩ರ ಕಾಯಿದೆ ಅವಕಾಶ ಮಾಡಿಕೊಟ್ಟಿತ್ತು. ಅದರ ಅಧಿನಿಯಮದ ಅನ್ವಯ ೨ ಹಂತದ ಸಂಸ್ಥೆಗಳಲ್ಲಿನ ಸದಸ್ಯರ ಸ್ಥಾನಗಳಲ್ಲಿ ಶೇ ೨೫ರಷ್ಟು ಸ್ಥಾನಗಳು ಮಹಿಳೆಯರಿಗೆ ಮೀಸಲಿರಿಸಿ ಮತ್ತು ಪರಿಶಿಷ್ಟ ಜಾತಿ ಜನಾಂಗಕ್ಕೆ ಶೇ ೧೫ರಷ್ಟು ಸ್ಥಾನಗಳು ಮತ್ತು ಪರಿಶಿಷ್ಟ ವರ್ಗದವರಿಗೆ ಶೇ ೩ರಷ್ಟು ಸ್ಥಾನಗಳನ್ನು ನೀಡುವುದರ ಮೂಲಕ ಸಾಮಾಜಿಕ ನ್ಯಾಯ ಸಿದ್ಧಾಂತವನ್ನು ಪ್ರತಿಪಾದಿಸಲಾಗಿತ್ತು.[೪೦] ಇದರಿಂದಾಗಿ ಪರಿಶಿಷ್ಟ ಜಾತಿಗೆ ನೀಡಿರುವ ಅವಕಾಶದಲ್ಲಿ ಸ್ಪರ್ಧಿಸುವ ಹಕ್ಕನ್ನು ಆ ವರ್ಗದಲ್ಲಿ ಬರುವ ಒಂದು ಪಂಗಡವಾದ ಮಾದಿಗ ಜನಾಂಗವು ಸಹ ಪಡೆದಿತ್ತು.

ತಾಲ್ಲೂಕು ಪಂಚಾಯಿತಿ ಸಮಿತಿಯಲ್ಲಿ ತಾಲ್ಲೂಕು ಪಂಚಾಯಿತಿ ನಿಲುವಳಿ ಮೇರೆಗೆ ಜಿಲ್ಲಾ ಪರಿಷತ್, ಅನುಮೋದಿಸಿದ ಪರಿಶಿಷ್ಟ ಜಾತಿ ಮತ್ತು ವರ್ಗ ಹಿಂದುಳಿದ ವರ್ಗ ಮತ್ತು ಮಹಿಳಾ

ಸದಸ್ಯರು ನಾಮ ನಿರ್ದೇಶಕ ಸದಸ್ಯರಾಗಿರುತ್ತಾರೆ.[೪೧] ಇಂತಹ ಸಂದರ್ಭಗಳಲ್ಲಿ ಚಿತ್ರದುರ್ಗ ಜಿಲ್ಲೆ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಬರುವ ತಾಲ್ಲೂಕು ಪಂಚಾಯತ್ ಸಮಿತಿಯ ನಾಮ ನಿರ್ದೇಶನ ಸಂದರ್ಭದಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಮಾದಿಗ ಜನಾಂಗದ ಕೆಲವರು ನೇಮಕವಾಗಿರುವುದು ಕಡಿಮೆ.

೧೯೮೩ರ ಕಾಯಿದೆ ಮಂಡಲ್ ಮತ್ತು ಜಿಲ್ಲಾ ಪರಿಷತ್‌ಗಳೆರಡರಲ್ಲಿಯೂ ಸಾಮಾಜಿಕ ನ್ಯಾಯ ಸಮಿತಿಯನ್ನು ಹೊಂದಿರಬೇಕೆಂದು ತಿಳಿಸಿದೆ. ಇದು ಪರಿಶಿಷ್ಟ ಜಾತಿ ವರ್ಗದ, ಹಿಂದುಳಿದ ಹಾಗು ಮಹಿಳೆಯರ ಸಾಮಾಜಿಕ ಆರ್ಥಿಕ, ಶೈಕ್ಷಣಿಕ ಅಭಿವೃದ್ಧಿ ಮತ್ತು ನ್ಯಾಯವನ್ನೂ ದೊರಕುವಂತೆ ನೋಡಿಕೊಳ್ಳುವ ಜವಾಬ್ದಾರಿ ಈ ಸಮಿತಿಗೆ ಇರುತ್ತದೆ. ಈ ಸಾಮಾಜಿಕ ನ್ಯಾಯ ಸಮಿತಿಯಲ್ಲಿ ಮಹಿಳೆ ಮತ್ತು ಪರಿಶಿಷ್ಟ ಜಾತಿ ಮತ್ತು ವರ್ಗದ ಸದಸ್ಯರಿರಲೇಬೇಕು.[೪೨] ಎಂಬ ನಿಯಮ ಇರುವುದರಿಂದ ಈ ಸಮಿತಿಗೆ ಪರಿಶಿಷ್ಟ ಜಾತಿಗೆ ಸೇರಿರುವ ಮಾದಿಗ ಜನಾಂಗದ ಕೆಲವರು ನೇಮಕವಾಗಿರುವುದು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಮಂಡಲ್ ಮತ್ತು ಜಿಲ್ಲಾ ಪರಿಷತ್‌ಗಳಿಗೆ ಸಾಮಾಜಿಕ ಸಮಿತಿಗೆ ಹಾಗೂ ಸಮಿತಿಗೆ ಆಯ್ಕೆಯಾಗಿರುವುದು ಕಂಡುಬರುತ್ತದೆ. ಹೀಗೆ ಮೀಸಲು ಸ್ಥಾನಗಳ ಮೂಲಕ ಆಯ್ಕೆ ಮತ್ತು ನೇಮಕವಾಗುವುದರ ಮೂಲಕ ಮಾದಿಗ ಜನಾಂಗದ ರಾಜಕೀಯ ಪ್ರಜ್ಞೆಯನ್ನು ಹೆಚ್ಚಿಸಿಕೊಳ್ಳಲು ಸಾಧ್ಯವಾಗಿದೆ.

ಏಕೀಕರಣ ಚಳವಳಿಯ ನಂತರದಲ್ಲಿ ಜಾರಿಗೆ ಬಂದ ಪಂಚಾಯತ್ ಕಾಯಿದೆಗಳು ಪ್ರಕಾರ ಸ್ಥಾನಗಳ ಮೀಸಲಾತಿ, ಸಾಮಾಜಿಕ ನ್ಯಾಯ ಸಮಿತಿಗೆ ಪ.ಜಾತಿಯ ಸದಸ್ಯರ ನೇಮಕ ಕಡ್ಡಾಯ, ಈ ಅಂಶಗಳು ಪರಿಶಿಷ್ಟ ಜಾತಿಯವರಲ್ಲಿ ಒಬ್ಬರಾದ ಮಾದಿಗ ಜನಾಂಗದ ಅನೇಕರು ಮಂಡಲ್ ಪಂಚಾಯತ್ ಸದಸ್ಯ ಸ್ಥಾನಗಳಿಗೆ ಆಯ್ಕೆಯಾದರು. ಕೆಲವೊಂದು ಭಾಗಗಳಲ್ಲಿ ಮಂಡಲ್ ಉಪಪ್ರಧಾನರಾಗಿರುವುದು ಇದೆ. ಅಲ್ಲದೆ ಆಯ್ಕೆಯಾದ ಮಾದಿಗ ಜನಾಂಗದ ಅನೇಕ ಸದಸ್ಯರು ಸಾಮಾಜಿಕ ನ್ಯಾಯ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರು ಸಹ ಆಗಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ತಾಲ್ಲೂಕು ಪಂಚಾಯಿತಿಗೆ ಸಂಬಂಧಿಸಿದಂತೆ ಮಾದಿಗ ಜನಾಂಗ ೧೯೮೩ರಲ್ಲಿ ಎಸ್.ಗಂಗಾದರಪ್ಪ ಎಂಬುವರು ಜನತಾಪಕ್ಷದಿಂದ ಆದಿವಾಲ ಮೀಸಲು ಕ್ಷೇತ್ರದಲ್ಲಿ ಸ್ಪರ್ಧಿಸಿ ಚುನಾಯಿತರಾಗಿರುವ ಮಾಹಿತಿ ಲಭ್ಯತೆಯ ಕೊರತೆಯಿಂದಾಗಿ ಸಮಗ್ರದಿಂದ ವಿವರಗಳು ಚುನಾಯಿತ ಸದಸ್ಯರಿಗೆ ಸಂಬಂಧಿಸಿದಂತೆ ನೀಡಿರುವುದಿಲ್ಲ.

ಚಿತ್ರದುರ್ಗ ಜಿಲ್ಲೆಯಲ್ಲಿ ಜಿಲ್ಲಾ ಪರಿಷತ್ ಚಳವಳಿಯ ನಂತರ ನಡೆದ ಚುನಾವಣೆಯಲ್ಲಿ ಒಟ್ಟು ೪೫ ಸ್ಥಾನಗಳಲ್ಲಿ ಪ.ಜಾತಿಗೆ ೧೦ ಸ್ಥಾನಗಳು ಮೀಸಲು ಇದ್ದು ಇವುಗಳಲ್ಲಿ ೭ ಸ್ಥಾನಗಳಿಗೆ ಮಾದಿಗ ಜನಾಂಗದ ಸದಸ್ಯರು ಚುನಾಯಿತರಾಗಿರುವುದು ಕಂಡುಬರುತ್ತದೆ. ಜನತಾದಳದಿಂದ ಹೆಚ್. ರಾಮಚಂದ್ರಪ್ಪ(ದೊಡ್ಡ ಸಿದ್ರವ್ವನಳ್ಳಿ ಮೀಸಲು) ಎಸ್.ಗಂಗಾದರಪ್ಪ(ಪಟ್ರೆಹಳ್ಳಿ). ಆರ್.ನಾಗಪ್ಪ,

ತಿಪ್ಪೇರುದ್ರಪ್ಪ(ವನ್ನಿವಾಳ), ಹರಿಹರದ ನಾಗಪ್ಪ, ಮೊಳಕಾಲ್ಮೂರಿನಿಂದ ಗಂಗಣ್ಣ, ಚಳ್ಳಕೆರೆಯಿಂದ ತಿಪ್ಪೇಸ್ವಾಮಿ ಮುಂತಾದವರು ಆಯ್ಕೆಯಾಗಿದ್ದಾರೆ. ಇವರ ಹೆಚ್.ರಾಮಚಂದ್ರಪ್ಪನವರು ೧೯೮೭ರಲ್ಲಿ ಜಿಲ್ಲಾ ಪರಿಷತ್ ಸಾಮಾಜಿಕ ನ್ಯಾಯ ಸಮಿತಿ ಅಧ್ಯಕ್ಷರಾಗಿದ್ದರು.

೧೯೮೩ರ ಕಾಯಿದೆಯು ಪಂಚಾಯತ್ ವ್ಯವಸ್ಥೆಯಲ್ಲಿ ಎಷ್ಟರ ಮಟ್ಟಿಗೆ ತನ್ನ ಪ್ರಭಾವವನ್ನು ಬೀರಿದೆ ಮತ್ತು ಅದರ ಕಾರ್ಯ ವಿಧಾನಗಳು ಹಾಗೂ ಸಾಧನೆಗಳ ಬಗ್ಗೆ ತಿಳಿಯಲು ಕೃಷ್ಣ ಸ್ವಾಮಿಯವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ಸರ್ಕಾರ ನೇಮಕ ಮಾಡಿತು. ಆ ಸಮಿತಿಯು ನೀಡಿರುವ ವರದಿಯಲ್ಲಿ ಮಹಿಳೆಯರು ಮತ್ತು ಪರಿಶಿಷ್ಟ ಜಾತಿ ವರ್ಗದ ಸದಸ್ಯರುಗಳು ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಇನ್ನೂ ನಿಖರವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಬೇಕು ಮತ್ತು ದೃಡ ಪಡಿಸಬೇಕು.[೪೩] ಎಂದು ತಿಳಿಸಿದೆ. ಈ ಹಿನ್ನೆಲೆಯಲ್ಲಿ ಮಹಿಳೆಯರನ್ನೊಳಗೊಂಡಂತೆ ಪರಿಶಿಷ್ಟ ಜಾತಿ ವರ್ಗದ ಆಯ್ಕೆಗೊಂಡ ಸದಸ್ಯರು ಶಿಕ್ಷಣ ಮತ್ತು ಅನುಭವದ ಕೊರತೆಯಿಂದ ಕೂಡಿರುವುದರ ಜೊತೆಗೆ ಗ್ರಾಮ ಸಭೆಗಳಲ್ಲಿ ಅಥವಾ ಮಿಟಿಂಗ್ ಸಭೆಗಳಲ್ಲಿ ಚರ್ಚೆ ನಡೆಯುವಾಗ ಸ್ಥಳೀಯ ಮೇಲು ಜಾತಿಯ ಜನಪ್ರತಿನಿಧಿಗಳೆದುರು ಮಾತನಾಡುವ ಧೈರ್ಯ ತೋರದೆ ಇರುವುದು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಅನೇಕ ಭಾಗಗಳಲ್ಲಿ ಕಂಡುಬರುತ್ತದೆ.

**೧೯೯೩ರ ಕರ್ನಾಟಕ ಪಂಚಾಯತ್ ಕಾಯಿದೆ**

೧೯೮೩ರ ಕಾಯ್ದೆಯು ಸ್ಥಳೀಯ ಪಂಚಾಯತ್ ಸಂಸ್ಥೆಗಳಿಗೆ ಹೆಚ್ಚಿನ ಅಧಿಕಾರ ಹಾಗೂ ಹೊಣೆಗಾರಿಕೆಯನ್ನು ನೀಡಿದೆ. ಕೇಂದ್ರದಿಂದ ತಳಮಟ್ಟದ ಪಂಚಾಯತ್ ಸಂಸ್ಥೆಯವರೆಗೆ ಅಧಿಕಾರ ಹಂಚಿಕೆಯ ವಿಕೇಂದ್ರಿಕರಣ ಪ್ರಕ್ರಿಯೆಯ ಇದೊಂದು ಮೈಲಿಗಲ್ಲು ಎನ್ನಬಹುದು. ಈ ಕಾಯಿದೆಯು ಕೆಳಜಾತಿಗಳು ಸೇರಿದಂತೆ ಹಿಂದುಳಿದ ವರ್ಗ ಹಾಗೂ ಮಹಿಳೆಯರಿಗೆ ಕೆಲವು ಮೀಸಲು ಸ್ಥಾನಗಳನ್ನು ಕಲ್ಪಿಸಿ ಅವಕಾಶ ಮಾಡಿಕೊಟ್ಟಿದೆ. ೧೯೮೩ರ ಅಧಿನಿಯಮವನ್ನು ವ್ಯಾಪಕವಾಗಿ ಬದಲಾಯಿಸಿ ೭೩ನೇ ತಿದ್ದುಪಡಿಗೆ ಅನುಗುಣವಾಗಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩ನ್ನು ಜಾರಿಗೆ ತರಲಾಯಿತು.[೪೪] ಈ ಹೊಸ ಕಾಯಿದೆ ಪ್ರಕಾರ ಪಂಚಾಯತ್ ಸಂಸ್ಥೆಯು ಮೂರು ಹಂತದ ಚುನಾಯಿತ ವ್ಯವಸ್ಥೆಯನ್ನು ಹೊಂದಲಾಯಿತು. ಈ ಕಾಯಿದೆ ಜಾರಿಗೊಂಡು ನಡೆದ ಮೊದಲ ಚುನಾವಣೆಯಲ್ಲಿ ಪಕ್ಷಗಳನ್ನೂ ಆಧರಿಸದೆ ೫೬೪೦ ಗ್ರಾಮ ಪಂಚಾಯತ್‌ಗಳಿಗೆ ೧೯೯೩ರ ಡಿಸಂಬರ್‌ನಲ್ಲಿ ಚುನಾವಣೆಗಳನ್ನು ನಡೆಸಿದರೆ ಪಕ್ಷಗಳ ಆಧಾರದ ಮೇಲೆ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತ್‌ಗಳಿಗೆ ೧೯೯೫ರಲ್ಲಿ ಚುನಾವಣೆಗಳನ್ನು ನಡೆಸಲಾಯಿತು.[೪೫]

**ಗ್ರಾಮ ಪಂಚಾಯತ್ :** ೧೯೯೩ರ ಕಾಯಿದೆ ಪ್ರಕಾರ ಗ್ರಾಮ ಮಟ್ಟದಲ್ಲಿ ಮಂಡಲ್ ಪಂಚಾಯತ್‌ಗೆ ಬದಲಾಗಿ ಗ್ರಾಮ ಪಂಚಾಯತ್ ಸ್ಥಾನ ಪಡೆಯಿತು. ೫೦೦೦ ದಿಂದ ೭೦೦೦ ಜನಸಂಖ್ಯೆಯನ್ನು

ಹೊಂದಿರುವ ಗ್ರಾಮ ಅಥವಾ ಗ್ರಾಮಗಳ ಸಮೂಹವೊಂದಕ್ಕೆ ಒಂದು ಗ್ರಾಮ ಪಂಚಾಯತಿ ಇರುವಂತೆ ಸೂಚಿಸಿತು.

**ತಾಲ್ಲೂಕು ಪಂಚಾಯತ್ :** ಎರಡನೆಯ ಹಂತದಲ್ಲಿ ಬರುವ ತಾಲ್ಲೂಕು ಪಂಚಾಯತ್ ೧೦೦೦ರ ಜನಸಂಖ್ಯೆಗೆ ಒಬ್ಬರು ಸದಸ್ಯರನ್ನು ಚುನಾಯಿಸಬೇಕೆಂದು ತಿಳಿಸಿತು. ಇದರ ವ್ಯಾಪ್ತಿಯಲ್ಲಿ ಬರುವ ಪಟ್ಟಣ ಪಂಚಾಯಿತಿ, ಪುರಸಭೆ ಹಾಗೂ ನಗರ ಸಭೆಗಳ ವ್ಯಾಪ್ತಿಗೆ ಬರುವ ಪ್ರದೇಶಗಳನ್ನೊರತು ಪಡಿಸಿ ಉಳಿದಂತೆ ಪ್ರದೇಶಗಳ ಜನಸಂಖ್ಯೆಯನ್ನು ಆದರಿಸಿ ಒಟ್ಟು ಸದಸ್ಯರ ಸಂಖ್ಯೆ ನಿರ್ಧರಿತವಾಗುತ್ತಿತ್ತು. ಆಯ್ಕೆಗೊಂಡ ಸದಸ್ಯರಲ್ಲದೆ ಸ್ಥಳೀಯ ವಿಧಾನಸಭಾ ಸದಸ್ಯ ಮತ್ತು ಲೋಕಸಭಾ ಸದಸ್ಯರು ಹಾಗೂ ವಿಧಾನ ಪರಿಷತ್ ಮತ್ತು ರಾಜ್ಯ ಸಭಾ ಸದಸ್ಯರು ಸಹ ಈ ತಾಲ್ಲೂಕು ಪಂಚಾಯಿತಿಯ ಸದಸ್ಯತ್ವವನ್ನು ಪಡೆದಿದ್ದರು.

**ಜಿಲ್ಲಾ ಪರಿಷತ್ :** ಮೂರನೆಯ ಹಂತದಲ್ಲಿ ಜಿಲ್ಲಾ ಪರಿಷತ್‌ಗೆ ೪೦,೦೦೦ ಜನಸಂಖ್ಯೆಗೆ ಒಬ್ಬರಂತೆ ಸದಸ್ಯರನ್ನು ಆಯ್ಕೆ ಮಾಡಲಾಗುವುದು. ರಾಜ್ಯದ ಕೆಲವೊಂದು ಭಾಗಗಳಲ್ಲಿ ಅದರ ಸಂಖ್ಯೆ ಕಡಿಮೆಯಾಗಿರುವುದನ್ನು ಕಾಣಬಹುದು. ಜಿಲ್ಲಾ ಪರಿಷತ್ ನಲ್ಲಿ ಆಯ್ಕೆಗೊಂಡ ವಿಧಾನಸಭಾ ಮತ್ತು ಲೋಕಸಭೆ ಸದಸ್ಯರು ಅಲ್ಲದೇ ವಿಧಾನ ಪರಿಷತ್ ಹಾಗೂ ರಾಜ್ಯಸಭಾ ಸದಸ್ಯರನ್ನೊಳಗೊಂಡಂತೆ ಜಿಲ್ಲಾ ಪರಿಷತ್ ಅಸ್ತಿತ್ವಕ್ಕೆ ಬಂದಿತ್ತು.

ಈ ಮೇಲಿನ ಮೂರು ಹಂತದ ಸಂಸ್ಥೆಗಳ ಸದಸ್ಯರು ನೇರವಾಗಿ ಚುನಾವಣೆಯ ಮೂಲಕವೇ ಆರಿಸಿ ಬರಬೇಕೆಂದು ೧೯೯೩ರ ಕಾಯಿದೆ ತಿಳಿಸಿದೆ. ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಆಯಾ ಪಂಚಾಯತ್ ಪ್ರದೇಶದಲ್ಲಿ ಅವರವರ ಜನಸಂಖ್ಯೆಯ ಪ್ರಮಾಣಕ್ಕನುಗುಣವಾಗಿ ಸ್ಥಾನಗಳ ಮೀಸಲಾತಿ.[೪೬] ನೀಡಬೇಕೆಂದು ಕಾಯಿದೆ ತಿಳಿಸಿದ್ದು ಆ ಪ್ರಕಾರ ೩೩.೩% ಸ್ಥಾನಗಳನ್ನು ಇತರೆ ಹಿಂದುಳಿದ ಜಾತಿ-ವರ್ಗಗಳಿಗೂ, ೧೫ ಸ್ಥಾನಗಳನ್ನು ಪರಿಶಿಷ್ಟ ಜಾತಿಯವರಿಗೂ, ೩ ಸ್ಥಾನಗಳನ್ನು ಪರಿಶಿಷ್ಟ ವರ್ಗದವರಿಗೂ ಮೀಸಲಾತಿ ನೀಡಲಾಯಿತು.[೪೭] ಜೊತೆಗೆ ಮಹಿಳೆಯರಿಗೂ ಸಹ ಪ್ರತಿ ವರ್ಗದಲ್ಲಿನ ಸದಸ್ಯರ ಸಂಖ್ಯೆಯಲ್ಲಿನ ಮೂರನೇ ಒಂದು ಭಾಗಕ್ಕಿಂತ ಕಡಿಮೆ ಇಲ್ಲದಷ್ಟು ಸ್ಥಾನಗಳು ಮತ್ತು ಹುದ್ದೆಗಳನ್ನು ಆಯಾ ವರ್ಗದ ಮಹಿಳೆಯರಿಗೆ ಮೀಸಲಿಡುವುದು.[೪೮] ಒಳಗೊಂಡಂತೆ ೩೩.೩ ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಿಡಲಾಯಿತು. ಇದರಿಂದಾಗಿ ಪರಿಶಿಷ್ಟ ಜಾತಿಯ ಸ್ಥಾನಗಳಿಗೆ ಮಾದಿಗ ಜನಾಂಗವು ಸ್ಪರ್ಧಿಸಲು ಅವಕಾಶ ಇರುವುದರಿಂದ ಅನೇಕ ಕಡೆಗಳಲ್ಲಿ ಮಾದಿಗ ಜನಾಂಗದ ಮಹಿಳೆಯರು ಸೇರಿದಂತೆ ಪುರುಷರು ಆಯ್ಕೆಯಾಗಲು ಸಾಧ್ಯವಾಯಿತು.

೧೯೯೩ರ ಕಾಯಿದೆ ಕೈಗೊಂಡ ಮಹತ್ತರವಾದ ಕ್ರಮವೆಂದರೆ ಗ್ರಾಮ ಪಂಚಾಯತ್ ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪರಿಷತ್ ಗಳಲ್ಲಿ ಈ ಎಲ್ಲಾ ಹಂತದಲ್ಲಿನ ಅಧ್ಯಕ್ಷ ಅಥವಾ

ಉಪಾಧ್ಯಕ್ಷರ ಹುದ್ದೆಗಳಿಗೂ ಸಹ ಮೀಸಲಾತಿಯ ಆವರ್ತನ ಪದ್ಧತಿಯಲ್ಲಿ ಅನ್ವಯಿಸಬೇಕೆಂದು[೪೯] ತಿಳಿಸಿರುವುದು. ಪರಿಶಿಷ್ಟ ಜಾತಿ-ವರ್ಗ, ಹಿಂದುಳಿದ ವರ್ಗ ಹಾಗೂ ಮಹಿಳೆಯರು ಸಾಮಾಜಿಕ ಹಿನ್ನೆಲೆಯಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರಂತಹ ಮಹತ್ವದ ಸ್ಥಾನಗಳಿಗೆ ನೇಮಕವಾಗುತ್ತಿರಲಿಲ್ಲ. ಈ ಹಿನ್ನೆಲೆಯಲ್ಲಿ ಆ ಸ್ಥಾನಗಳಿಗೂ ಮೀಸಲಾತಿ ನಿಯಮ ಅನ್ವಯವಾಗುವಂತೆ ಮಾಡಿದುದು ಅಂತಹ ಸ್ಥಾನಗಳು ಕನಸೆಂದು ಭಾವಿಸಿದವರಿಗೆ ಅವಕಾಶ ಸಿಗುವಂತೆ ಮಾಡಿದೆ. ಈ ರೀತಿ ಅಧ್ಯಕ್ಷ ಹಾಗೂ ಉಪಾಧ್ಯಕ್ಷ ಸ್ಥಾನಗಳಿಗೆ ನೀಡಿರುವ ಮೀಸಲಾತಿ ಕರ್ನಾಟಕದ ಮೂಲೆ ಮೂಲೆಗಳಲ್ಲೂ ಮೇಲ್ಜಾತಿ ಜನರಿಂದ ಪ್ರತಿಭಟನೆ ವ್ಯಕ್ತವಾಗಿದೆ.[೫೦]

೧೯೯೩ರ ಪಂಚಾಯತ್ ಕಾಯಿದೆಯ ಕೆಲವೊಂದು ಬದಲಾವಣೆ ಮಾಡಿದ ಆನಂತರ ನಡೆದ ಮೊದಲ ಚುನಾವಣೆಯಲ್ಲಿ ಪರಿಶಿಷ್ಟ ಜಾತಿಯ ಮಾದಿಗ ಜನಾಂಗದ ಅನೇಕರು ಗ್ರಾಮಪಂಚಾಯತ್, ತಾಲ್ಲೂಕ್ ಪಂಚಾಯತ್, ಹಾಗೂ ಜಿಲ್ಲಾಪಂಚಾಯತ್‌ಗಳಿಗೆ ಆಯ್ಕೆಯಾಗಿರು ವುದು ಕಂಡುಬರುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ವಿವಿಧ ತಾಲ್ಲೂಕುಗಳ ವ್ಯಾಪ್ತಿಯಲ್ಲಿ ಬರುವ ಗ್ರಾಮಪಂಚಾಯಿತಿಗಳಿಗೆ ಆಯ್ಕೆಯಾದ ಮಾದಿಗ ಜನಾಂಗದ ಸದಸ್ಯರ ಸಂಖ್ಯೆ ಹೀಗಿದೆ.

| ಕ್ರ.ಸಂ | ತಾಲ್ಲೂಕು | ಪ.ಜಾತಿ | ಮಾದಿಗರು | |
|---|---|---|---|---|
| | | | ಪುರುಷರು | ಸ್ತ್ರೀಯರು |
| ೧. | ಬಳ್ಳಾರಿ | ೧೩೭ | ೫೮ | ೩೮ |
| ೨. | ಸಿರುಗುಪ್ಪ | ೮೭ | ೨೩ | ೨೯ |
| ೩. | ಹೊಸಪೇಟೆ | ೭೨ | ೨೧ | ೧೯ |
| ೪. | ಹ.ಬೊ.ಹಳ್ಳಿ | ೯೨ | ೧೫ | ೧೮ |
| ೫. | ಹಡಗಲಿ | ೮೧ | ೧೭ | ೧೩ |
| ೬. | ಕೂಡ್ಲಿಗಿ | ೯೮ | ೨೯ | ೨೫ |
| ೭. | ಸಂಡೂರು | ೭೪ | ೨೮ | ೨೦ |
| | ಒಟ್ಟು | ೬೪೧ | ೧೯೧ | ೧೬೨ |

ಪರಿಶಿಷ್ಟ ಜಾತಿಗೆ ಮೀಸಲಾಗಿದ್ದ ಒಟ್ಟು ೬೪೧ ಗ್ರಾಮಪಂಚಾಯಿತಿ ಸದಸ್ಯರಲ್ಲಿ ಈ ಜನಾಂಗವು ೩೫೩ ಸದಸ್ಯಕರನ್ನು ಹೊಂದಿದ್ದು, ಅದರಲ್ಲಿ ೧೯೧ ಜನ ಪುರುಷರು ಮತ್ತು ೧೬೨ ಜನ ಮಹಿಳೆಯರು ಆಯ್ಕೆಯಾಗಿರುವುದು ಕಂಡುಬರುತ್ತದೆ. ಹಡಗಲಿ ತಾಲ್ಲೂಕನ್ನು ಹೊರತು ಪಡಿಸಿದರೆ ಉಳಿದೆಲ್ಲಾ ತಾಲ್ಲೂಕು ಗ್ರಾಮ ಪಂಚಾಯಿತಿಗಳ ಚುನಾಯಿತರಾದ ಪರಿಶಿಷ್ಟ ಜಾತಿಯ ಸದಸ್ಯರಲ್ಲಿ ಮಾದಿಗರ ಪ್ರಮಾಣ ಸ್ವಲ್ಪ ಮಟ್ಟಿಗೆ ಹೆಚ್ಚಿದೆ. ಈ ತಾಲ್ಲೂಕಿನಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಲಂಬಾಣಿ ಜನಾಂಗ ಪಡೆದುಕೊಂಡಿದೆ. ಈ ಅಂಕಿ ಅಂಶಗಳು ಪುರುಷರಷ್ಟೆ ಸ್ತ್ರೀಯರು ರಾಜಕೀಯ ಪ್ರಾತಿನಿಧ್ಯ

ಪಡೆದಿರುವುದು ತಿಳಿಯುತ್ತದೆ. ಅಲ್ಲದೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳಿಗೆ ಮೀಸಲು ಸೌಲಭ್ಯ ಕಲ್ಪಿಸಿಕೊಟ್ಟಿದರಿಂದ ಈ ಜನಾಂಗದ ಪುರುಷ ಮತ್ತು ಮಹಿಳೆಯರು ಕೆಲವೊಂದು ಭಾಗಗಳಲ್ಲಿ ಈ ಸ್ಥಾನಗಳನ್ನು ಪಡೆದಿರುವುದು ಕಂಡುಬರುತ್ತದೆಯಾದರೂ ಹೆಚ್ಚಿನ ಪ್ರಮಣದಲ್ಲಿ ಈ ಸ್ಥಾನಗಳನ್ನು ಪಡೆಯಲಾಗಿಲ್ಲ. ಅಂತಹ ಸ್ಥಾನಗಳಿಗೆಲ್ಲ ಹೆಚ್ಚಿನ ಪ್ರಮಾಣದಲ್ಲಿ ಮಾದಿಗೇತರರನ್ನು ಆಯ್ಕೆ ಮಾಡಲಾಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಗ್ರಾಮ ಪಂಚಾಯಿತಿ ಸಂಬಂಧ ಮಾಹಿತಿ ಲಭ್ಯ ಇಲ್ಲದಿರುವ ಪ್ರಯುಕ್ತ ೧೯೯೮ರ ನಂತರ ನಡೆದ ಮೊದಲ ಚುನಾವಣೆಯ ಅಂಶಗಳನ್ನು ನೀಡಲಾಗಿಲ್ಲ.

ತಾಲ್ಲೂಕು ಪಂಚಾಯಿತಿಗೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯಲ್ಲಿ ತಾಲ್ಲೂಕುವಾರು ವಿವಿಧ ಮೀಸಲು ಕ್ಷೇತ್ರಗಳಿಂದ ಆಯ್ಕೆಯಾದ ಸದಸ್ಯರ ಅಂಕಿಸಂಖ್ಯೆ ಈ ರೀತಿ ಇದೆ. ಬಳ್ಳಾರಿ ತಾಲ್ಲೂಕಿನ ಪರಿಶಿಷ್ಟ ಜಾತಿಯ ಒಟ್ಟು ೧೧ ಸದಸ್ಯ ಸ್ಥಾನಗಳಿಗೆ ನಡೆದ ಚುನಾವಣೆಯಲ್ಲಿ ಮಾದಿಗ ಜನಾಂಗದ ಇಬ್ಬರು(೨) ಸದಸ್ಯರು ಮಾತ್ರವೆ ಆಯ್ಕೆಯಾಗಿದ್ದಾರೆ. ಹೆಚ್ಚಿನ ಸ್ಥಾನಗಳನ್ನು ಲಂಬಾಣಿ ಜನಾಂಗ ಪಡೆದುಕೊಂಡಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿಯ ೮ ಜನ ಸದಸ್ಯರಲ್ಲಿ ಬಸರುಕೊಡು ಮತ್ತು ಪುಣಾಗಬಟ್ಟು ಕ್ಷೇತ್ರದಿಂದ ಹೆಚ್ .ಕೆಂಚಪ್ಪ ಮತ್ತು ಜಯಪ್ಪ ಎಂಬುವರು ಆಯ್ಕೆಯಾಗಿದ್ದಾರೆ. ಇಲ್ಲಿಯೂ ಹೆಚ್ಚಿನ ಪ್ರಮಾಣದಲ್ಲಿ ಲಂಬಾಣಿ ಜನಾಂಗವೇ ಪಡೆದುಕೊಂಡಿದೆ. ಕೂಡ್ಲಿಗಿ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿಯ ೩ ಸದಸ್ಯಸ್ಥಾನಗಳಲ್ಲಿ ತುಪ್ಪದಹಳ್ಳಿ ಮತ್ತು ತೂಲಹಳ್ಳಿ ಕ್ಷೇತ್ರದಿಂದ ದೊಡ್ಡರಾಮಪ್ಪ ಮತ್ತು ಸುಶೀಲಮ್ಮ ಸಂಡೂರು ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿಯ ೪ ಸ್ಥಾನಗಳಲ್ಲಿ ಚೊರನೂರು ಮತ್ತು ಕೃಷ್ಣನಗರದಿಂದ ಅಡವಪ್ಪ ಮತ್ತು ಕೆ.ಪದ್ಮ ಆಯ್ಕೆಯಾಗಿರುವುದು ಕಂಡುಬರುತ್ತದೆ. ಸಿರುಗುಪ್ಪ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿಯ ೩ ಸ್ಥಾನಗಳಲ್ಲಿ ಬಾಗೆವಾಡಿ, ಕೆಂಚನಗುಡ್ಡ ಹಾಗೂ ಮಣ್ಣೂರು ಸೂಗೂರು ಕ್ಷೇತ್ರದಿಂದ ಕ್ರಮವಾಗಿ ಹುಲುಗಪ್ಪ, ಲಕ್ಷ್ಮಪ್ಪ ಹಾಗೂ ನಿಂಗಪ್ಪ ಚುನಾಯಿತರಾಗಿದ್ದಾರೆ. ಹೊಸಪೇಟೆ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿಯ ೪ ಸ್ಥಾನಗಳಲ್ಲಿ ನಾಗೇನಹಳ್ಳಿಯಿಂದ ಹೆಚ್.ಮಾರೆಮ್ಮ, ರಾಮಸಾಗರದಿಂದ ಸೋಮಶೇಖರಪ್ಪ ಹಾಗೂ ಚಿಲಕನಹಟ್ಟಿ ಯಿಂದ ಹೆಚ್.ಮಲ್ಲಪ್ಪ ಆಯ್ಕೆಯಾಗಿದ್ದಾರೆ. ಈ ಅಂಶಗಳು ತಾಲ್ಲೂಕು ಪಂಚಾಯಿತಿ ಸದಸ್ಯ ಸ್ಥಾನಗಳಿಗೆ ಮಾದಿಗ ಜನಾಂಗದ ಸದಸ್ಯರು ಆಯ್ಕೆಯನ್ನು ಸ್ಪಷ್ಟಪಡಿಸುತ್ತವೆ. ಕೆಲವೊಂದು ತಾಲ್ಲೂಕುಗಳಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳನ್ನೂ ಮಾದಿಗ ಜನಾಂಗದ ಸದಸ್ಯರು ಪಡೆದುಕೊಂಡಿರುವುದು ಕಂಡುಬರುತ್ತದೆ. ಹೊಸಪೇಟೆ ತಾಲ್ಲೂಕು ಪಂಚಾಯಿತ್ ಅಧ್ಯಕ್ಷರಾಗಿ ಜನತಾದಳದ ಕಮಲಾಪುರದ ಸೋಮಶೇಖರ್ ಅವರು ೨೦ ತಿಂಗಳ ಅವಧಿಯವರೆಗೆ ಇದ್ದರು. ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದ ಮಾಹಿತಿ ಲಭ್ಯವಿಲ್ಲದ ಪ್ರಯುಕ್ತ ಮಾದಿಗ ಜನಾಂಗದ ತಾಲ್ಲೂಕು ಪಂಚಾಯಿತ್ ಪ್ರತಿನಿಧಿಗಳ ಬಗ್ಗೆ ಮಾಹಿತಿ ನೀಡಿಲಾಗಿಲ್ಲ. ಜಿಲ್ಲಾ ಪಂಚಾಯಿತ್‌ಗೆ ಸಂಬಂಧಿಸಿದಂತೆ ನಡೆದ ಚುನಾವಣೆಯಲ್ಲಿ(೧೯೯೫) ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲೂ ಮಾದಿಗ ಜನಾಂಗದ ಕೆಲವರು ಚುನಾಯಿತರಾಗಿರುವುದು ಕಂಡುಬರುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೩೮ ಸ್ಥಾನಗಳಲ್ಲಿ ೮ ಸ್ಥಾನಗಳು ಪರಿಶಿಷ್ಟ ಜಾತಿಗೆ ಮೀಸಲು ಸ್ಥಾನಗಳನ್ನು ಇಡಲಾಗಿದ್ದು ಅವುಗಳಲ್ಲಿ ಮೂರು ಸ್ಥಾನಗಳಲ್ಲಿ ಮಾದಿಗರು ಜನಾಂಗದವರು ಚುನಾಯಿತರಾಗಿದ್ದಾರೆ. ತಾರನಗರ ಕ್ಷೇತ್ರದಿಂದ ಶೇಕಪ್ಪ, ಮರಿಯಮ್ಮನಹಳ್ಳಿ ಕ್ಷೇತ್ರದಿಂದ ಮಂಜುನಾಥ ಹಾಗು ಹಂಪಾಪಟ್ನ ಕ್ಷೇತ್ರದಿಂದ ಹೆಗ್ಗಾಡಿಳ್ ರಾಮಪ್ಪ ಎಂಬುವರು ಚುನಾಯಿತರಾಗಿ ಜಿಲ್ಲಾ ಪಂಚಾಯತ್ ಸದಸ್ಯರಾಗಿದ್ದರು. ಉಳಿದ ೫ ಸ್ಥಾನಗಳನ್ನು ಲಂಬಾಣಿ ೩ ಮತ್ತು ಬೋವಿ ಅಥವಾ ವಡ್ಡರು ೨ ಸ್ಥಾನಗಳನ್ನು ಪಡೆದುಕೊಂಡಿದ್ದ ಸ್ಥಾನಗಳಲ್ಲಿ ಕಂಡುಬರುತ್ತದೆ. ಇದೇ ಚುನಾವಣೆಯಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಪ.ಜಾತಿಯ ಮಾದಿಗ ಜನಾಂಗದ ಮೂವರು ಸದಸ್ಯರು ಚುನಾಯಿತರಾಗಿದ್ದಾರೆ. ಮಾರಿಕಣಿವೆ ಕ್ಷೇತ್ರದಿಂದ ಕೆ.ಎಲ್.ರಾಮಸ್ವಾಮಿ(ಜನತಾದಳ), ಯಶೋದಮ್ಮ(ಜನತಾದಳ), ಎಂ.ವಿ.ಬಸವ ರಾಜು ವಿವಿಧ ಮೀಸಲು ಕ್ಷೇತ್ರದಿಂದ ಆಯ್ಕೆಯಾಗಿರುವುದು ಕಂಡುಬರುತ್ತದೆ. ಉಳಿದ ಮೀಸಲು ಕ್ಷೇತ್ರಗಳಲ್ಲಿ ಲಂಬಾಣಿ ಜನಾಂಗದ ೨ ಬೋವಿ-೧ ಹಾಗೂ ಬೇಡ ಜಂಗಮರ ಹೆಸರಿನ ಜಾತಿ ಪ್ರಮಾಣಪತ್ರ ಜಂಗಮಜಾತಿಗೆ ಸೇರಿದವರೊಬ್ಬರು ತೆಗೆದುಕೊಂಡು ಮೀಸಲು ಕ್ಷೇತ್ರಗಳಿಂದ ಚುನಾಯಿತರಾಗಿದ್ದಾರೆ. (ಈಗ ಅವರು ಪಡೆದಿದ್ದ ಜಾತಿ ಪ್ರಮಾಣ ತಪ್ಪು ಎಂದು ಕೋರ್ಟ್ ತೀರ್ಪು ನೀಡಿದೆ.)

ಈ ಮೇಲಿನ ಅಂಶಗಳು ಗ್ರಾಮಮಟ್ಟದಿಂದ ಜಿಲ್ಲಾ ಮಟ್ಟದವರೆಗಿನ ರಾಜಕೀಯ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಮಾದಿಗ ಜನಾಂಗದ ಅನೇಕರು ಚುನಾಯಿತರಾಗಿರುವುದನ್ನು ಸ್ಪಷ್ಟಪಡಿಸುತ್ತವೆ. ಆದರೆ ಜನಸಂಖ್ಯೆ ದೃಷ್ಟಿಯಿಂದ ನೋಡಿದರೆ ಮಾದಿಗರಿಗೆ ಸಿಕ್ಕಿರುವ ಪ್ರಾತಿನಿಧ್ಯ ಕಡಿಮೆ ಎನ್ನಬಹುದು. ಅಲ್ಲದೇ ಗ್ರಾಮ ಮಟ್ಟದಿಂದ ಜಿಲ್ಲಾ ಮಟ್ಟದವರೆಗೆ ಮೀಸಲಿಟ್ಟ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳಿಗೆ ಆಯ್ಕೆ ಮಾಡುವಾಗ ಹಲವು ಕಡೆ ಅವಕಾಶದಿಂದ ವಂಚಿತರಾಗಿರುವ ಉದಾಹರಣೆಗಳು ಕಂಡುಬರುತ್ತವೆ. ೧೯೯೫ರಲ್ಲಿ ಚಿತ್ರದುರ್ಗ ಜಿಲ್ಲಾ ಪಂಚಾಯಿತ್ ಅಧ್ಯಕ್ಷ ಸ್ಥಾನವು ಪರಿಶಿಷ್ಟ ಜಾತಿಗೆ ಮೀಸಲಾಗಿತ್ತು. ಆ ಸಂದರ್ಭದಲ್ಲಿ ಮಾದಿಗ ಜನಾಂಗಕ್ಕೆ ಸೇರಿದ ಡಿ.ಮಂಜುನಾಥ ಉಸ್ತುವಾರಿ ಸಚಿವರು ಆಗಿದ್ದರು. ಆದರೆ ಆಯ್ಕೆ ಮಾತ್ರ ಮಾದಿಗೇತರ ಸ್ಪರ್ಶ್ಯ ಜಾತಿಯಾದ ಲಂಬಾಣಿ ಜನಾಂಗಕ್ಕೆ ನೀಡಿದ್ದರಿಂದ ಜಿಲ್ಲಾ 'ಮಾದಿಗ ದಿಂಡೋರ' ಜಾತಿ ಸಂಘಟನೆಯು ಸಚಿವರ ಮೇಲೆ ಹಲ್ಲೆ ಮಾಡಲು ಪ್ರಯತ್ನಿಸಿದ್ದೂ ಉಂಟು. ಬಳ್ಳಾರಿ ಜಿಲ್ಲೆಯಲ್ಲಿ ಜಿಲ್ಲಾಪಂಚಾಯತ್ ಅಧ್ಯಕ್ಷ ಸ್ಥಾನಕ್ಕೆ ಪೈಪೋಟಿ ನಡೆದಾಗ ಲಂಬಾಣಿ ಜನಾಂಗದವರನ್ನೇ ಆಯ್ಕ ಮಾಡಿರುವುದು ಇದೆ. ಈ ಬಗೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲಿ ಅಧ್ಯಕ್ಷ ಅಥವಾ ಉಪಾಧ್ಯಕ್ಷ ಸ್ಥಾನಗಳಿಗೆ ಆಯ್ಕೆ ನಡೆಯುವಾಗ ಮೊದಲ ಆದ್ಯತೆ ಅಸ್ಪೃಶ್ಯತೆಗೆ ನೀಡುತ್ತದೆ ಅಸ್ಪೃಶ್ಯರ ಮಧ್ಯೆ ಆಯ್ಕೆ ಪ್ರಶ್ನೆ ಬಂದಾಗ ಮಾದಿಗೇತರ ಜಾತಿಯನ್ನು ಸೂಚಿಸಿರುವಂತೆ ಘಟನೆಗಳು ಕಂಡುಬರುತ್ತವೆ.

**೨೦೦೦ರಲ್ಲಿ ನಡೆದ ಗ್ರಾಮ, ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯತ್‌ಗಳ ಚುನಾವಣೆಗಳಲ್ಲಿ**

೧೯೯೭ರಲ್ಲಿ ಹೊಸ ಜಿಲ್ಲೆಗಳ ರಚನೆಯಿಂದಾಗಿ ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಗೆ ಸೇರಿದ್ದ

ದಾವಣಗೆರೆ, ಹರಿಹರ ಹಾಗೂ ಜಗಳೂರು ತಾಲ್ಲೂಕುಗಳು ಮತ್ತು ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿದ್ದ ಹರಪನಹಳ್ಳಿ ಜಿಲ್ಲಾ ತಾಲ್ಲೂಕು ಹೊಸ ಜಿಲ್ಲೆಗಳಿಗೆ ಸೇರ್ಪಡೆಯಾದ್ದರಿಂದ ಜಿಲ್ಲಾ ಪ್ರಾತಿನಿಧಿಕ ಸ್ಥಾನಗಳು ಕಡಿಮೆಯಾದವು. ಆ ನಂತರದಲ್ಲಿ ನಡೆದ ೨೦೦೦ನೇ ಸಾಲಿನ ಚುನಾವಣೆಯಲ್ಲಿ ಈ ಎರಡು ಜಿಲ್ಲೆಗಳಲ್ಲಿ ಮಾದಿಗ ಜನಾಂಗದ ಅನೇಕರು ಗ್ರಾಮ ಪಂಚಾಯತ್ ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್, ಸದಸ್ಯರಾಗಿ ಚುನಾಯಿತರಾಗಿರುವುದು ಕಂಡುಬರುತ್ತದೆ. ಈ ಸಂಬಂಧ ದೊರೆತ ಅಂಕಿ ಅಂಶಗಳನ್ನು ಇಲ್ಲಿ ವಿವರಿಸಲಾಗಿದೆ.

ಚಿತ್ರದುರ್ಗ ಜಿಲ್ಲೆಯ ಗ್ರಾಮಪಂಚಾಯತ್ ಪರಿಶಿಷ್ಟ ಜಾತಿಗೆ ಮೀಸಲು ಇರುವ ಸ್ಥಾನಗಳಲ್ಲಿ ಹೆಚ್ಚಿನ ಪ್ರಮಾಣ ಮಾದಿಗ ಜನಾಂಗ ಪಡೆದುಕೊಂಡಿದೆ ಎನ್ನಬಹುದು. ಏಕೆಂದರೆ ಈ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯ ಇತರೆ ಜಾತಿಗಳಿಗಿಂತಲೂ ಹೆಚ್ಚಿನ ಜನಸಂಖ್ಯೆ ಹೊಂದಿರುವುದರಿಂದ ಹೆಚ್ಚಿನ ಪ್ರಮಾಣದಲ್ಲಿ ಚುನಾಯಿತರಾಗಳು ಸಾಧ್ಯವಾಗಿದೆ. ಅಧ್ಯಯನಕ್ಕೊಳಪಡಿಸಿದ ೪೨ ಹಳ್ಳಿಗಳಲ್ಲಿ (ಚಿತ್ರುದುರ್ಗ ಮತ್ತು ಬಳ್ಳಾರಿ) ಚಿತ್ರರ್ದುಗ ಜಿಲ್ಲೆಯಲ್ಲಿ ಚಿತ್ರರ್ದುಗ ತಾಲೂಕಿನ ೩ ಗ್ರಾಮಗಳಲ್ಲಿ, ಹಿರಿಯೂರು ತಾಲ್ಲೂಕಿನ ೫ ಗ್ರಾಮಗಳಲ್ಲಿ, ಹೊಸದುರ್ಗ ತಾಲ್ಲೂಕಿನ ೫ ಹಳ್ಳಿಗಳಲ್ಲಿ, ಮೊಳಕಾಲ್ಮೂರು ತಾಲ್ಲೂಕಿನ ೩ ಹಳ್ಳಿಗಳಲ್ಲಿ, ಚಳ್ಳಕೆರೆ ತಾಲ್ಲೂಕಿನ ೬ ಹಳ್ಳಿಗಳಲ್ಲಿಯೂ ಹಾಗೂ ಹೊಳಲ್ಕೆರೆ ತಾಲ್ಲೂಕಿನ ಎರಡುಹಳ್ಳಿಗಳಲ್ಲಿ ಗ್ರಾಮ ಪಂಚಾಯಿತಿ ಸದಸ್ಯರು ಇರುವುದರ ಹಿನ್ನೆಲೆಯಲ್ಲಿ ಈ ಜಿಲ್ಲೆಯಲ್ಲಿ ಮಾದಿಗರೇ ಹೆಚ್ಚಿನ ಪ್ರಮಾಣದಲ್ಲಿ ಪುರುಷ ಮತ್ತು ಸ್ತ್ರೀ(ಪರಿಶಿಷ್ಟ ಜಾತಿಯ ಇತರ ಜಾತಿಗಳಿಗಿಂತ) ಪ್ರಾತಿನಿಧ್ಯ ಪಡೆದಿದ್ದಾರೆ ಎನ್ನಬಹುದು.

ಬಳ್ಳಾರಿ ಜಿಲ್ಲೆಯ ವ್ಯಾಪಿಯಲ್ಲಿ ಬರುವ ವಿವಿಧ ತಾಲ್ಲೂಕುಗಳಲ್ಲಿನ ಗ್ರಾಮ ಪಂಚಾಯಿತಿಗಳಿಗೆ ಮಾದಿಗ ಜನಾಂಗದ ಅನೇಕರು ಆಯ್ಕೆಯಾಗಿರುವುದು ದೊರೆಯುವ ಅಂಕಿ ಅಂಶಗಳು ಸಾಬೀತುಪಡಿಸುತ್ತದೆ.

| ಕ್ರ.ಸಂ | ತಾಲ್ಲೂಕು | ಪ.ಜಾತಿ | ಮಾದಿಗರು | |
|---|---|---|---|---|
| | | | ಪುರುಷರು | ಸ್ತ್ರೀಯರು |
| ೧. | ಬಳ್ಳಾರಿ | ೧೦೮ | ೩೪ | ೩೬ |
| ೨. | ಸಿರುಗುಪ್ಪ | ೬೯ | ೨೦ | ೨೦ |
| ೩. | ಹೊಸಪೇಟೆ | ೮೩ | ೨೦ | ೧೫ |
| ೪. | ಸಂಡೂರು | ೬೫ | ೨೦ | ೧೨ |
| ೫. | ಕೂಡ್ಲಿಗಿ | ೧೦೪ | ೪೦ | ೧೨ |
| ೬. | ಹಡಗಲಿ | ೮೨ | ೧೮ | ೧೨ |
| ೭. | ಹ.ಬೊ.ಹಳ್ಳಿ | ೫೫ | ೧೫ | ೧೦ |
| | ಒಟ್ಟು | ೫೬೬ | ೧೬೭ | ೧೧೭ |

ಬಳ್ಳಾರಿ ಜಿಲ್ಲೆಯಲ್ಲಿ ಪರಿಶಿಷ್ಟಜಾತಿಗೆ ಮೀಸಲಿರಿಸಿದ್ದ ೫೬೬ ಸದಸ್ಯ ಸ್ಥಾನಗಳಲ್ಲಿ ಈ ಜನಾಂಗವು ೨೮೪ ಜನ ಸದಸ್ಯತ್ವವನ್ನು ಪಡೆದಿದ್ದಾರೆ. ಅವರಲ್ಲಿ ೧೬೭ ಪುರುಷರು ಮತ್ತು ೧೧೭ ಮಹಿಳೆಯರು ಇದ್ದಾರೆ. ಹಡಗಲಿಯ ತಾಲ್ಲೂಕಿನ ವ್ಯಾಪ್ತಿಯಲ್ಲಿರುವ ಗ್ರಾಮ ಪಂಚಾಯಿತಿ ಸ್ಥಾನಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಲಂಬಾಣಿ ಜನಾಂಗ ಪಡೆದುಕೊಂಡಿದೆ. ಈ ತಾಲ್ಲೂಕ ಬಿಟ್ಟು ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳನ್ನು ಹೊರತು ಪಡಿಸಿ ಉಳಿದೆಲ್ಲಾ ತಾಲ್ಲೂಕುಗಳ ಗ್ರಾಮ ಪಂಚಾಯಿತಿಗಳಲ್ಲಿ ಪರಿಶಿಷ್ಟ ಜಾತಿಯ ಇತರೆ ಜಾತಿಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಮಾದಿಗರೇ ಪಡೆದುಕೊಂಡಿರುವುದನ್ನು ಮೇಲಿನ ಅಂಕಿ ಅಂಶಗಳು ಸ್ಪಷ್ಟಪಡಿಸುತ್ತವೆ. ಕೆಲವು ಗ್ರಾಮಪಂಚಾಯಿತಿಗಳಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳನ್ನು ಸಹ ಹೊಂದಿದ್ದಾರೆ.

ತಾಲ್ಲೂಕು ಪಂಚಾಯಿತಿಗೆ ಸಂಬಂಧಿಸಿದಂತೆ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ೨೦೦೦ರಲ್ಲಿ ನಡೆದ ಚುನಾವಣೆಯ ಅಂಕಿ ಅಂಶಗಳು ಮಾದಿಗ ಜನಾಂಗದ ಪ್ರಾತಿನಿಧ್ಯವನ್ನು ತಿಳಿಸುತ್ತವೆ. ಚಿತ್ರದುರ್ಗ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿಗೆ ಮೀಸಲಿರಿಸಿದ ಒಟ್ಟು ೬ ಸ್ಥಾನಗಳಲ್ಲಿ (೪ ಪುರುಷ, ೨ ಮಹಿಳೆ) ೫ ಸದಸ್ಯರು ಆಯ್ಕೆಯಾಗಿದ್ದಾರೆ. ಅಲಗವಾಡಿ ಕ್ಷೇತ್ರದಿಂದ ಎಂ.ನಿಂಗಪ್ಪ, ಮಾನಂಗಿಯಿಂದ ಸಾಕಮ್ಮ, ಗುಡ್ಡದ ರಂಗವ್ವನಹಳ್ಳಿಯಿಂದ ಗಿರಿಜಮ್ಮ ಎಸ್, ಮಠದ ಕುರುಬರ ಹಟ್ಟಿಯಿಂದ ಬಿ.ಜಯಪ್ಪ, ಹಾಗೂ ಹುಲ್ಲೂರು ಕ್ಷೇತ್ರದಿಂದ ಪೆನ್ನಪ್ಪ ಎಂ. ಚುನಾಯಿತರಾಗಿದ್ದಾರೆ. ಮೊಳಕಾಲ್ಮೂರು ತಾಲ್ಲೂಕಿನ ೨ ಸ್ಥಾನಗಳಲ್ಲಿ ೨ ಸದಸ್ಯರು ಈ ಜನಾಂಗದವರೆ ಆಯ್ಕೆಯಾಗಿದ್ದಾರೆ ಅವರ ಹೆಸರು ಹೀಗಿದೆ. ದುರುಗಮ್ಮ(ಹಾನಗಲ್ ಕ್ಷೇತ್ರ) ಮತ್ತು ಗಂಗಪ್ಪ(ಜಹಗೀರ್ ಬುಡ್ಡೇನಹಳ್ಳಿ ಕ್ಷೇತ್ರ) ಚಳ್ಳಕೆರೆ ತಾಲ್ಲೂಕಿನ ೬ ಸ್ಥಾನಗಳಲ್ಲಿ ೫ ಸದಸ್ಯರು ಈ ಜನಾಂಗದವರು ಆಯ್ಕೆಯಾಗಿದ್ದಾರೆ ಬಜ್ಜಪ್ಪ(ಚಿತ್ರನಾಯ್ಕನಹಳ್ಳಿ), ತಿಮ್ಮಣ್ಣ(ಪರುಶುರಾಮಪುರ), ಬಸವಲಿಂಗಮ್ಮ(ದೊಡ್ಡೇರಿ), ಡಿ.ಟಿ.ಭೂತಲಿಂಗಪ್ಪ, (ದೇವರಮರಿಗಂಟೆ) ಹಾಗೂ ನಿಜಲಿಂಗಪ್ಪ(ಬೆಳಗೆರೆ) ಚುನಾಯಿತರಾಗಿದ್ದಾರೆ. ಹಿರಿಯೂರಿನ ತಾಲ್ಲೂಕಿನ ೫ ಸ್ಥಾನಗಳಲ್ಲಿ ೩ ಸದಸ್ಯರು ಚುನಾಯಿತರಾಗಿದ್ದಾರೆ. ಹೆಸರು ಹಾಗೂ ಕ್ಷೇತ್ರ ಹೀಗಿವೆ. ಎಂ.ಡಿ.ರವಿ(ಹುಲುಗುಕುಂಟೆ), ಎಂ.ಲತಮ್ಮ(ಹೂವಿನಹೊಳೆ) ಹಾಗೂ ಆರ್. ಹನುಮಂತಯ್ಯ (ರಂಗನಾಥಪುರ), ಹೊಳಲ್ಕೆರೆ ತಾಲ್ಲೂಕಿನ ೪ ಸ್ಥಾನದ ಎಸ್.ತಿಪ್ಪೇಸ್ವಾಮಿ(ತಾಳ್ಯ) ಎಂಬುವರು ಚುನಾಯಿತರಾಗಿದ್ದಾರೆ. ಹೊಸದುರ್ಗ ತಾಲ್ಲೂಕಿನ ೪ ಸ್ಥಾನಗಳಲ್ಲಿ ೨ ಸ್ಥಾನಗಳಲ್ಲಿ ಮಾದಿಗರು ಚುನಾಯಿತರಾಗಿದ್ದಾರೆ. ಈ ರೀತಿ ಚಿತ್ರದುರ್ಗ ಜಿಲ್ಲೆಯಲ್ಲಿ ತಾಲ್ಲೂಕು ಪಂಚಾಯಿತಿಯಲ್ಲಿ ಪರಿಶಿಷ್ಟ ಜಾತಿಗೆ ಮೀಸಲಿಟ್ಟಿರುವ ಸ್ಥಾನಗಳು ಹೆಚ್ಚಿನ ಪ್ರಮಾಣದಲ್ಲಿ ಮಾದಿಗರೆ ಚುನಾಯಿತರಾಗಿದ್ದಾರೆ. ತಾಲ್ಲೂಕು ಪಂಚಾಯಿತಿ ಅಧ್ಯಕ್ಷ ಸ್ಥಾನವನ್ನು ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಗಂಗಣ್ಣ(ಮಾದಿಗರು) ಪಡೆದುಕೊಂಡಿದ್ದರೆ ಚಿತ್ರದುರ್ಗ ತಾಲ್ಲೂಕಿನಲ್ಲಿ ಜಯಣ್ಣ ಎಂ. ಉಪಾಧ್ಯಕ್ಷ ಸ್ಥಾನವನ್ನು ಪಡೆದು ಕೊಂಡಿರುವುದು ಸಹ ಕಂಡುಬರುತ್ತದೆ. ಹಿರಿಯೂರು ತಾಲ್ಲೂಕಿನ ಅಧ್ಯಕ್ಷ ಸ್ಥಾನ ಮಾದಿಗ

ಜನಾಂಗಕ್ಕೆ ದೊರೆಯುವ ಸಾಧ್ಯತೆ ಇದ್ದರೂ ಅದೇ ಜನಾಂಗದ ಸದಸ್ಯರೊಬ್ಬರ ಗೈರು ಹಾಜರಿಯಿಂದ ಅವಕಾಶ ವಂಚಿತರಾದದ್ದು ಉಂಟು.

ಬಳ್ಳಾರಿ ಜಿಲ್ಲೆಯ ತಾಲ್ಲೂಕು ಪಂಚಾಯಿತಿಗಳಲ್ಲಿಯೂ ಮಾದಿಗ ಜನಾಂಗದ ಅನೇಕರು ಚುನಾಯಿತರಾಗಿರುವುದು ಕಂಡುಬರುತ್ತದೆ. ಬಳ್ಳಾರಿ ತಾಲ್ಲೂಕಿನಲ್ಲೂ ಮೀಸಲಿಟ್ಟಿರುವ ೫ ಸ್ಥಾನಗಳಲ್ಲಿ ಎರಡು ಜನ ಸದಸ್ಯರು ಚುನಾಯಿತರಾಗಿದ್ದಾರೆ. ಅವರೆಂದರೆ, ಸಣ್ಣ ಬಸಪ್ಪ(ಎಮ್ಮಿಗನೂರು ಕ್ಷೇತ್ರ) ಮತ್ತು ಎ.ಕೆ.ಭೀಮ(ಮೋಕಾಕ್ಷೇತ್ರ), ಎಲ್ಲಾ ಮಾರೆಣ್ಣ (ಕಾರೇಕಲ್ಲು), ಸಿರುಗುಪ್ಪ ೩ ಸ್ಥಾನಗಳಲ್ಲಿ ೨ ಜನ ಸದಸ್ಯರು ಆಯ್ಕೆಯಾಗಿದ್ದಾರೆ. ಈರಮ್ಮ(ನಾಗಲಾಪುರ) ಮತ್ತು ಮಾರಪ್ಪ(ರಾವಿಹಾಳು), ಸಂಡೂರು ೨ ಸ್ಥಾನಗಳಲ್ಲಿ ಹರಿಜನ ಗಂಗಪ್ಪ(ದೇವಗಿರಿ) ಮತ್ತು ಹೆಚ್.ಮಲ್ಲಿಕಾರ್ಜುನ(ನರಸಿಂಗಪುರ) ಕೂಡ್ಲಿಗಿ ತಾಲ್ಲೂಕಿನಲ್ಲಿ ಎಸ್.ಎ.ಹನುಮಂತಪ್ಪ (ಒಡೇಲಡಕು), ಪಿ.ಹೆಚ್.ಪಂಪಣ್ಣ (ರಾಮದುರ್ಗ) ಹಾಗೂ ಮೀನಾಕ್ಷಮ್ಮ (ಬಣವಿಕಲ್ಲು) ಹಗರಿಬೊಮ್ಮನಹಳ್ಳಿಯಲ್ಲಿ ಹರಿಜನ ಶಾಂತಮ್ಮ (ತಂಬ್ರಹಳ್ಳಿ) ಆಯ್ಕೆಯಾಗಿದ್ದಾರೆ. ಆದರೆ ಹೊಸಪೇಟೆ ಮತ್ತು ಹಡಗಲಿ ತಾಲ್ಲೂಕುಗಳಲ್ಲಿ ಈ ಜನಾಂಗದಿಂದ ಆಯ್ಕೆಯಾಗಿರುವುದು ಕಂಡು ಬರುವುದಿಲ್ಲ.

೨೦೦೦ನೇ ಸಾಲಿನಲ್ಲಿ ನಡೆದ ಜಿಲ್ಲಾ ಪಂಚಾಯತ್ ಚುನಾವಣೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಮಾದಿಗ ಜನಾಂಗದ ಕೆಲವರು ವಿವಿಧ ಪಕ್ಷದಿಂದ ಜಿಲ್ಲಾ ಪಂಚಾಯತ್ ಸದಸ್ಯರಾಗಿ ಚುನಾಯಿತರಾಗಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಒಟ್ಟು ೩೧ ಸದಸ್ಯರನ್ನು ಹೊಂದಿದ್ದು ಅದರಲ್ಲಿ ಪರಿಶಿಷ್ಟ ಜಾತಿಯ ಪುರುಷರಿಗೆ ೫ ಮತ್ತು ಮಹಿಳೆಯರಿಗೆ ೨ ಸ್ಥಾನಗಳನ್ನು ನೀಡಲಾಗಿದೆ. ಇಂಥಹ ಕ್ಷೇತ್ರಗಳಿಂದ ೩ ಜನ ಮಾದಿಗ ಜನಾಂಗದವರು ಆಯ್ಕೆಯಾಗಿದ್ದಾರೆ. ಅವರೆಂದರೆ ಪರುಶುರಾಂಪುರದಿಂದ ಪಿ.ಜಯಪ್ರಕಾಶ್, ಧರ್ಮಪುರ ಕ್ಷೇತ್ರದಿಂದ ಎಂ.ಜಗದೀಶ್ ಹಾಗೂ ಬೋಕಿಕೆರೆಯಿಂದ ರತ್ನಮ್ಮನೀಲಪ್ಪರಾಗಿದ್ದಾರೆ. ಉಳಿದಂತೆ ೩ ಸ್ಥಾನಗಳು ಬೋವಿ ಜನಾಂಗದವರಿಗೆ ಹಾಗೂ ೧ ಲಂಬಾಣಿ ಜನಾಂಗದವರಿಗೆ ದೊರಕಿದೆ. ಇದೇ ರೀತಿ ಬಳ್ಳಾರಿ ಜಿಲ್ಲೆಯಲ್ಲಿಯೂ ಮಾದಿಗ ಜನಾಂಗದ ಕೆಲವರು ಆಯ್ಕೆಯಾಗಿರುವುದು ಕಂಡುಬರುತ್ತದೆ. ಈ ಜಿಲ್ಲೆಯ ಒಟ್ಟು ೩೨ ಸ್ಥಾನಗಳಲ್ಲಿ ೭ ಸ್ಥಾನಗಳು ಪರಿಶಿಷ್ಟ ಜಾತಿಗೆ ಮೀಸಲಿಟ್ಟಿದ್ದು, ಅವುಗಳಲ್ಲಿ ೩ ಸ್ಥಾನ ಮಹಿಳೆಯರಿಗಿದೆ. ಇವುಗಳಲ್ಲಿ ಮಾದಿಗ ಜನಾಂಗದವರು ಹಚ್ಚೊಳ್ಳಿ ಕ್ಷೇತ್ರದಿಂದ ಶ್ರೀಮತಿ ಸುಧಾರಾಣಿ, ದೇವಸಮುದ್ರದಿಂದ ಎ.ಮಾನಯ್ಯ ಹಾಗೂ ಹಂಪಸಾಗರದಿಂದ ಹೆಗ್ನಾಳ್ ಶಾರದಮ್ಮ ಚುನಾಯಿತರಾಗಿದ್ದಾರೆ. ಉಳಿದಂತೆ ೨ ಬೋವಿ ಮತ್ತು ೨ ಲಂಬಾಣಿ ಜನಾಂಗದ ಸದಸ್ಯರು ಚುನಾಯಿತರಾಗಿದ್ದಾರೆ. ಈ ರೀತಿಯಲ್ಲಿ ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್ ಸ್ಥಾನಗಳಿಗೆ ನಡೆದ ಚುನಾವಣೆಯಲ್ಲಿ ಮಾದಿಗ ಜನಾಂಗದ ಅನೇಕರು ಸ್ಪರ್ಧಿಸಿ

ಚುನಾಯಿತರುವುದು ಪೌರಸೇವಾ ಸಂಸ್ಥೆಗಳಲ್ಲಿ ಮಾದಿಗರ ಪ್ರಾತಿನಿಧ್ಯ ಅಧ್ಯಾಯ ಪೂರ್ಣವಾಗಿ ತರುವುದು ಮೇಲಿನ ಅಂಶಗಳಿಂದ ತಿಳಿದುಬರುತ್ತದೆ.

**ಪೌರಸೇವಾ ಸಂಸ್ಥೆಗಳಲ್ಲಿ ಮಾದಿಗರ ಪ್ರಾತಿನಿಧ್ಯ**

ಅಧಿಕಾರ ವಿಕೇಂದ್ರಿಕರಣದಿಂದಾಗಿ ಗ್ರಾಮೀಣ ಪ್ರದೇಶಗಳ ಆಡಳಿತಾಭಿವೃದ್ಧಿಗಳಿಗೆ ಸಂಬಂಧಿಸಿದ ಸರ್ಕಾರದ ಯೋಜನೆಗಳನ್ನು ಕಾರ್ಯಗತಗೊಳಿಸಲು ಗ್ರಾಮಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗು ಜಿಲ್ಲಾ ಪಂಚಾಯತ್‌ಗಳು ಇರುವಂತೆ. ಪಟ್ಟಣ ಪ್ರದೇಶಗಳಲ್ಲಿನ ಜನರಿಗೆ ಕುಡಿಯುವ ನೀರು, ವಸತಿ, ರಸ್ತೆ, ದೀಪ ಮುಂತಾದ ಸೌಲಭ್ಯಗಳನ್ನು ಒದಗಿಸಿಕೊಡುವ ಹೊಣೆಗಾರಿಕೆ ಪೌರಸೇವಾಸಂಸ್ಥೆಗಳದ್ದಾಗಿದೆ. ಅಲ್ಲದೇ ಸರ್ಕಾರ ಯೋಜನೆಗಳನ್ನು(ಪಟ್ಟಣ ಪ್ರದೇಶಗಳಿಗೆ ಸಂಬಂಧಿದಂತೆ) ಜಾರಿಗೆ ತರಲು ಈ ಸಂಸ್ಥೆಗಳಲ್ಲಿ ಚುನಾಯಿತ ಸದಸ್ಯರನ್ನು ಹೊಂದಿರುತ್ತದೆ. ಈ ಸಂಖ್ಯೆಯ ಆ ಪ್ರದೇಶಗಳಲ್ಲಿ ವಾಸಿಸುವ ಜನಸಂಖ್ಯೆಯ ಮೇಲೆ ನಿಂತಿರುತ್ತದೆ. ಹಾಗೆಯೇ ಸ್ಥಾನಗಳ ಹಂಚಿಕೆಯೂ ಕೂಡ. ಪೌರಸೇವಾ ಸಂಸ್ಥೆಯ ಜನ ಸಂಖ್ಯಾಧಾರದ ಮೇಲೆ ಪಟ್ಟಣ ಪಂಚಾಯತ್, ಪುರಸಭೆ, ನಗರಸಭೆ, ನಗರಪಾಲಿಕೆ ಹಾಗೂ ಮಹಾನಗರ ಪಾಲಿಕೆ ಎಂದು ವಿಭಾಗಿಸಲಾಗಿದ್ದು ಇಂತಹ ಸಂಸ್ಥೆಗಳಲ್ಲಿರುವ ಚುನಾಯಿತ ಸದಸ್ಯರಲ್ಲಿ ವಿವಿಧ ಪಕ್ಷ ಮತ್ತು ಪಕ್ಷೇತರಗಳಿಂದ ಆಯ್ಕೆಯಾಗಿರುವ ಮಾದಿಗ ಜನಾಂಗದ ಸದಸ್ಯರನ್ನೂ ಕುರಿತು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಪೌರಸೇವಾ ಸಂಸ್ಥೆಗಳಲ್ಲಿ ಹಿಂದೆ ಯಾವುದೇ ಪಕ್ಷ ಎಂಬುದು ಇರಲಿಲ್ಲವಾದರೂ ಪಕ್ಷದ ಪ್ರಭಾವ ಇಲ್ಲ ಎನ್ನಲಾಗದು. ಆನಂತರದಲ್ಲಿ ಪಕ್ಷದ ಅಧಿಕೃತ ಅಭ್ಯರ್ಥಿಯೆಂದು ಗುರುತಿಸಿಕೊಳ್ಳುವುದು ಆರಂಭಗೊಂಡಿತು. ಸ್ವಾತಂತ್ರ್ಯೋತ್ತರ ಕಾಲಘಟ್ಟಗಳಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲೂ ಮಾದಿಗ ಜನಾಂಗದ ಅನೇಕರು ಪೌರಸೇವಾ ಸಂಸ್ಥೆಗಳ ಸದಸ್ಯರಾಗಿರುವುದು ಕಂಡುಬರುತ್ತದೆ. ಚಿತ್ರದುರ್ಗ ನಗರಸಭೆಯಲ್ಲಿ ೧೯೪೮ರಿಂದಲೂ ಮಾದಿಗ ಜನಾಂಗದ ಪ್ರತಿನಿಧಿಗಳು ಇದ್ದುದನ್ನು ಸದಸ್ಯರ ಸಭೆಯ(ಮೀಟಿಂಗ್) ನಡಾವಳಿ ದಾಖಲೆಯಿಂದ ತಿಳಿದುಬರುತ್ತದೆ. ೧೯೪೮ರಿಂದಲೂ ಪರುಶುರಾಮಪ್ಪ ಎಂಬುವರು ಸದಸ್ಯರಾಗಿದ್ದುದು ಅವರು ಮೂರು ಅವಧಿಗಳಲ್ಲಿ ಚುನಾಯಿತರಾಗಿದ್ದಾರೆ. ೧೯೫೫ರಲ್ಲಿ ಎ.ಕೆ.ಗಿಡಪ್ಪನವರು ಆಯ್ಕೆಯಾಗಿ ಅವರು ಸಹ ಮೂರು ಅವಧಿಗಳವರೆಗೆ ಸದಸ್ಯರಾಗಿ ಆಯ್ಕೆಯಾಗಿದ್ದು, ೧೯೭೨ರಲ್ಲಿ ಪ.ಜಾತಿಗೆ ಮೀಸಲಿದ್ದ ೩ ಸ್ಥಾನಗಳಲ್ಲಿ ಹೆಚ್ .ರುದ್ರಯ್ಯ ಮತ್ತು ಡಿ.ಎಸ್. ಮೈಲಾರಪ್ಪ ಚುನಾಯಿತರಾಗಿದ್ದಾರೆ. ೧೯೯೬ರಲ್ಲಿ ಡಿ.ಎನ್. ಮೈಲಾರಪ್ಪ ಇವರೊಂದಿಗೆ ಡಿ.ದುರುಗೇಶ್ ಮತ್ತು ಪಾರ್ವತಮ್ಮ ಆಯ್ಕೆಯಾಗಿದ್ದಾರೆ. ೨೦೦೦ನೇ ಸಾಲಿನಲ್ಲಿ ಡಿ.ಎನ್. ಮೈಲಾರಪ್ಪ, ಹೆಚ್ .ಆರ್ .ಮಂಜಣ್ಣ ಹಾಗೂ ಕಮಲಮ್ಮ ಚುನಾಯಿತರಾಗಿರುವುದು ಕಂಡುಬರುತ್ತದೆ. ಈ ಅಂಶಗಳು ಚಿತ್ರದುರ್ಗ ನಗರ ಸಭೆಯಲ್ಲಿ ಮಾದಿಗರ ಪ್ರಾತಿನಿಧ್ಯ ಇರುವುದನ್ನು ಖಚಿತಪಡಿಸುತ್ತವೆ. ಮಹಿಳಾ ಸದಸ್ಯರು ೧೯೯೬ರಿಂದ ಆಯ್ಕೆಯಾಗಿರುವುದು ತಿಳಿದುಬರುತ್ತದೆ.

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಪುರಸಭೆಯಲ್ಲಿಯೂ ಮಾದಿಗ ಜನಾಂಗ ಪುರುಷ ಹಾಗೂ ಮಹಿಳೆಯರು ಸದಸ್ಯರಾಗಿ ಚುನಾಯಿತರಾಗಿರುವುದು ಕಂಡುಬರುತ್ತದೆ. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಬಿ.ಮಾರಯ್ಯ ಎ.ಹನುಮಂತಪ್ಪ, ಕೆ.ಮರುಮೂತಿ ಮುಂತಾದವರು ಸದಸ್ಯರಾಗಿದ್ದರು. ೧೯೯೦ ರಿಂದ ೧೯೯೫ರ ಅವಧಿಯಲ್ಲಿ ಪರಿಶಿಷ್ಟ ಜಾತಿಗೆ ಮೀಸಲಿದ್ದ ೨ ಸ್ಥಾನಗಳಲ್ಲಿ ಮಾದಿಗ ಜನಾಂಗದ ಶಿವರುದ್ರಪ್ಪ ಮತ್ತು ಮಾರಣ್ಣ ಎಂಬುವರು ಆಯ್ಕೆಯಾಗಿದ್ದಾರೆ. ೧೯೯೬-೨೦೦೦ ಅವಧಿಗೆ ಪರಿಶಿಷ್ಟ ಜಾತಿಯ ೩ ಸ್ಥಾನಗಳಲ್ಲಿ ಎ.ಶಿವಮೂರ್ತಿ, ಎ.ಎಸ್. ತಿಪ್ಪೇಸ್ವಾಮಿ ಹಾಗೂ ನಿಂಗಮ್ಮ ಎಂಬುವರು ಚುನಾಯಿತರಾಗಿದ್ದರು. ಈ ಅವಧಿಯಲ್ಲೇ ಪರಿಶಿಷ್ಟ ಜಾತಿಯ ಮಹಿಳೆಗೆ ಅಧ್ಯಕ್ಷ ಸ್ಥಾನ ಮೀಸಲೀರಿಸಿದ್ದರಿಂದ ಮೊದಲಬಾರಿ ಮಾದಿಗ ಜನಾಂಗದ ಮಹಿಳೆ ನಿಂಗಮ್ಮ ಆ ಸ್ಥಾನವನ್ನು ಇಲ್ಲಿ ಪಡೆದು ಕೊಂಡಿದ್ದರು. ಈ ಹಿಂದೆ ಎಲ್.ಹನುಮಂತಪ್ಪ (೧೯೫೭-೫೮) ಕೆ. ಗುರುಮೂರ್ತಿ (೧೯೮೫) ಸಹ ಅಧ್ಯಕ್ಷರಾಗಿದ್ದಾರೆ. ೨೦೦೦-೦೧ನೇ ಸಾಲಿನಲ್ಲಿ ನಡೆದ ಚುನಾವಣೆಯಲ್ಲಿ ಮಾದಿಗ ಜನಾಂಗದಿಂದ ಜಿ.ಮಾರಣ್ಣ ಮತ್ತು ಎ.ಎಸ್.ತಿಪ್ಪೇಸ್ವಾಮಿ ಆಯ್ಕೆಯಾಗಿದ್ದಾರೆ.

ಹಿರಿಯೂರು ತಾಲ್ಲೂಕಿನಲ್ಲಿ ಪುರಸಭೆಯಲ್ಲಿ ಮಾದಿಗ ಜನಾಂಗದಿಂದ ಆಯ್ಕೆಯಾದ ಸದಸ್ಯರಲ್ಲಿ ಮೊದಲಿಗರೆಂದರೆ ಕೆ.ಕೆಂಚಪ್ಪ ಎಂಬುವರು. ೧೯೯೫ರಲ್ಲಿ ನಡೆದ ಚುನಾವಣೆಯಲ್ಲಿ ಚುನಾಯಿತರಾಗಿದ್ದ ಮಾದಿಗ ಜನಾಂಗದ ವಾಸುದೇವ ಅವರು ಆ ಅವಧಿಯಲ್ಲಿ ಪುರಸಭೆ ಅಧ್ಯಕ್ಷರು ಸಹ ಆಯ್ಕೆಯಾಗಿದ್ದರು.

ಮೊಳಕಾಲ್ಮೂರು ಪಟ್ಟಣ ಪಂಚಾಯತ್‌ನಲ್ಲಿ ಪರಿಶಿಷ್ಟ ಜಾತಿಯ ೨ ಸ್ಥಾನಗಳಲ್ಲಿ ೧೯೯೫ರ ಮತ್ತು ೨೦೦೦ರ ಅವಧಿಗೆ ಮಾದಿಗ ಜನಾಂಗದ ಹೊನ್ನೂರಮ್ಮ ಮತ್ತು ಬಿ.ಹೆಚ್.ಸುರೇಶ್ ಕ್ರಮವಾಗಿ ಚುನಾಯಿತರಾಗಿದ್ದಾರೆ. ಈ ಅಂಶಗಳು ಚಿತ್ರದುರ್ಗ ಜಿಲ್ಲೆಯ ಕೆಲವು ಪಟ್ಟಣ-ನಗರ ಸಭೆಗಳು ಇರುವ ಕಡೆ ಮಾದಿಗ ಜನಾಂಗದ ಸದಸ್ಯರಿರುವುದನ್ನು ಖಚಿತಪಡಿಸುತ್ತವೆ.

ಬಳ್ಳಾರಿ ಜಿಲ್ಲೆಯಲ್ಲಿ ೧೯೯೬ರಲ್ಲಿ ಹೊಸಪೇಟೆ ನಗರಸಭೆಯ ಸದಸ್ಯರ ಚುನಾವಣೆಯಲ್ಲಿ ಪರಿಶಿಷ್ಟ ಜಾತಿಗೆ ಮೀಸಲಿದ್ದ ೭ ಸ್ಥಾನಗಳಲ್ಲಿ ೫ ಸ್ಥಾನಗಳು ಮಾದಿಗ ಜನಾಂಗದವರು ಪಡೆದುಕೊಂಡಿರುವುದು ಕಂಡುಬರುತ್ತದೆ. ಅವರೆಂದರೆ ರುದ್ರಮ್ಮ, ವೈ.ಗೋವಿಂದರಾಜು, ಹೆಚ್. ಅಂಜಿನಮ್ಮ, ಆರ್.ಸುಬ್ರಮಣಿ, ತಾರೀಹಳ್ಳಿ ಹುಲುಗಪ್ಪ ಆಗಿದ್ದಾರೆ. ೨೦೦೦-೦೧ನೇ ಸಾಲಿನಲ್ಲಿ ೪ ಜನರು ಈ ಜನಾಂಗದಿಂದ ಆಯ್ಕೆಯಾಗಿದ್ದಾರೆ. ಅವರೆಂದರೆ ವೈ.ಗೋವಿಂದರಾಜು, ಹೆಚ್. ಅಂಜಿನಮ್ಮ, ಆರ್ .ಸುಬ್ರಮಣ್ಯ, ಎಂ.ಶಾರದಮ್ಮ ಇವರಲ್ಲದೆ ಸಾಮಾನ್ಯ ಕ್ಷೇತ್ರದಿಂದ ರುದ್ರಮ್ಮ ಎಂಬುವರು ಸಹ ಚುನಾಯಿತರಾಗಿದ್ದಾರೆ. ಬಳ್ಳಾರಿ ನಗರ ಸಭೆಯ ೨ ಸ್ಥಾನಗಳನ್ನು ಈ ಜನಾಂಗ ಪಡೆದುಕೊಂಡಿದೆ. ಹಾಗೆಯೇ ಹೊಸಪೇಟೆ ತಾಲ್ಲೂಕಿನ ವ್ಯಾಪ್ತಿಯಲ್ಲಿ ಇರುವ ಕಮಲಾಪುರ ಪಟ್ಟಣ

ಪಂಚಯಿತಿಯಲ್ಲಿ (೧೯೫೫ರಲ್ಲಿ ಈ ಜನಾಂಗದ ಪಕೀರಪ್ಪ ಎಂಬುವರು ಅಧ್ಯಕ್ಷರಾಗಿದ್ದರು.) ೨೦೦೦ನೇ ಸಾಲಿನಲ್ಲಿ ೧ ಸ್ಥಾನದಲ್ಲಿ ಆಯ್ಕೆಯಾಗಿರುವುದು ಕಂಡುಬರುತ್ತದೆ.

ಈ ರೀತಿಯಲ್ಲಿ ಪೌರಸೇವಾ ಸಂಸ್ಥೆಗಳಲ್ಲಿ ಮಾದಿಗ ಜನಾಂಗದವರು ಸದಸ್ಯರಾಗಿ ಚುನಾಯಿತರಾಗಿರುವುದು ಎರಡು ಜಿಲ್ಲೆಗಳಲ್ಲಿ ಕಂಡುಬರುತ್ತದೆ. ಇಲ್ಲಿ ಪೌರಸಂಸ್ಥೆಯಿಂದ ದೊರಕಿದ ಮಾಹಿತಿಯನ್ನು ಆಧರಿಸಿ ಈ ಅಂಶಗಳನ್ನು ತಿಳಿಸಲಾಗಿದ್ದು ಕೆಲವು ಪೌರಸೇವ ಸಂಸ್ಥೆಯ ಮಾಹಿತಿ ಲಭ್ಯ ಇಲ್ಲದ್ದರಿಂದ ಉಳಿದ ಪೌರಸೇವಾ ಸಂಸ್ಥೆಯಲ್ಲಿ ಮಾದಿಗರ ಪ್ರಾತಿನಿಧ್ಯದ ಬಗ್ಗೆ ವಿಶ್ಲೇಷಣೆ ಸಾಧ್ಯವಾಗಿಲ್ಲ.

### ೬.೪ ಶಾಸನ ಸಭೆ ಮತ್ತು ವಿವಿಧ ಬೋರ್ಡ್ ಮಾದಿಗರ ಪ್ರಾತಿನಿಧ್ಯ

ರಾಜ್ಯಮಟ್ಟದಲ್ಲಿ ಪ್ರಮುಖವಾದ ರಾಜಕೀಯ ಸಂಸ್ಥೆಗಳೆಂದರೆ ವಿಧಾನಸಭೆ ಮತ್ತು ವಿಧಾನ ಪರಿಷತ್ ಆಗಿವೆ. ಮೈಸೂರು ಪ್ರಾಂತದಲ್ಲಿ ಹಿಂದಿದ್ದ ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯ ವಿಧಾಯಕ ಸಭೆಗಳ ರೂಪಾಂತರವಾಗಿ ಇವು ಕಂಡುಬರುತ್ತವೆಯಾದರೂ ಹಿಂದೆ ಈ ಸಭೆಗಳಿಗೆ ಪ್ರತಿನಿಧಿಗಳನ್ನು ಆಯ್ಕೆಮಾಡಲು ಮತ ಚಲಾಯಿಸುವ ಹಕ್ಕು ಕೇವಲ ಸೀಮಿತ ವ್ಯಕ್ತಿಗಳಿಗೆ ಮಾತ್ರವೇ ದೊರಕಿತ್ತು. ಆದರೆ ಸ್ವಾತಂತ್ರ್ಯ ಭಾರತದಲ್ಲಿ ೧೯೫೦ ಜನವರಿ ೨೬ ರಂದು ಅಂಗೀಕರಿಸಿದ ಹೊಸ ಸಂವಿಧಾನವು 'ಪ್ರೌಢವಯಸ್ಕ ಮತದಾನ' ಪದ್ಧತಿಯನ್ನು ಜಾರಿಗೆ ತಂದಿತು. ಇದರಿಂದಾಗಿ ಯಾವುದೇ ತಾರತಮ್ಯವಿಲ್ಲದೆ ಪುರುಷ ಸ್ತ್ರೀಯರಾದಿಯಾಗಿ ವಯಸ್ಸಿಗೆ ಬಂದಂಥವರು ಮತ ಚಲಾಯಿಸುವ ಮೂಲಕ ವಿಧಾನಸಭೆಗೆ ಪ್ರತಿನಿಧಿಗಳನ್ನೂ ಆರಿಸಿ ಕಳುಹಿಸಲು ಅವಕಾಶವಾಯಿತು. ಈ ಬಗೆಯ ರಾಜಕೀಯ ಹಕ್ಕು ಜನರಿಗೆ ಸಂವಿಧಾನ ಒದಗಿಸಿಕೊಡುವುದರ ಮೂಲಕ ರಾಜ್ಯ ಮತ್ತು ರಾಷ್ಟ್ರ ರಾಜಕಾರಣದಲ್ಲಿ ಜನತೆ ಪಾಲ್ಗೊಳುವಂತೆ ಮಾಡಿತು. ಕೆಲವೊಂದು ಮೀಸಲಾತಿ ಸೌಲಭ್ಯವನ್ನು ನೀಡಿದ್ದರಿಂದ ಶೋಷಿತ ಜಾತಿಗಳಿಗೆ ಪ್ರಾಮುಖ್ಯತೆ ದೊರೆಯುವಂತಾಯಿತು. ಇದು ಆ ಜಾತಿಗಳಲ್ಲಿ ಜನಪ್ರತಿನಿಧಿಗಳಾಗುವಂತೆ ಮಾಡಿತು. ಈ ಹಿನ್ನೆಲೆಯಲ್ಲಿ ರಾಜ್ಯ ಮಟ್ಟದ ಸಭೆಗಳಾದ ವಿಧಾನಸಭೆ, ವಿಧಾನ ಪರಿಷತ್‌ಗಳಲ್ಲಿ ಮಾದಿಗ ಜನಾಂಗದ ಪ್ರಾತಿನಿಧ್ಯ ಎಷ್ಟರ ಮಟ್ಟಿಗೆ ದೊರಕಿದೆ ಎಂಬುದನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

#### ವಿಧಾನ ಸಭೆ

ಸ್ವಾತಂತ್ರ್ಯೋತ್ತರ ಕರ್ನಾಟಕ ರಾಜ್ಯದಲ್ಲಿ ವಿಧಾನಸಭೆಯ ಮೊದಲ ಚುನಾವಣೆ ನಡೆದದ್ದು ೧೯೫೧-೫೨ರಲ್ಲಿ. ಈ ಚುನಾವಣೆಯಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ೨ ಸ್ಥಾನಗಳು ಪರಿಶಿಷ್ಟ ಜಾತಿಗೆ ನೀಡಲಾಗಿತ್ತು. ಈ ಎರಡು ಸ್ಥಾನಗಳಲ್ಲಿ ಮಾದಿಗ ಜನಾಂಗದವರು ಚುನಾಯಿತರಾಗಿರುವುದು ಕಂಡುಬರುತ್ತದೆ. ಹೊಳಲ್ಕೆರೆ ಕ್ಷೇತ್ರದಿಂದ ಜಿ.ದುಗ್ಗಪ್ಪ ಮತ್ತು ಹಿರಿಯೂರು ಕ್ಷೇತ್ರದಿಂದ

ಟಿ.ಹನುಮಯ್ಯನವರು ಕಾಂಗ್ರೆಸ್ ಪಕ್ಷದಿಂದ ಚುನಾಯಿತರಾಗಿದ್ದಾರೆ. ಅವರಿಬ್ಬರು ಈ ಜಿಲ್ಲೆಯಿಂದ ರಾಜ್ಯ ರಾಜಕಾರಣಕ್ಕೆ ಆಯ್ಕೆಯಾದ ಮೊದಲಿಗರು. ೧೯೫೭ರಲ್ಲಿ ನಡೆದ ಚುನಾವಣೆಯಲ್ಲಿ ಮೀಸಲು ಕ್ಷೇತ್ರಗಳು ಬದಲಾವಣೆಯಾಗಿದೆ. ಆ ನಂತರದಲ್ಲಿ ೧೯೬೭ರಲ್ಲಿ ಹಿರಿಯೂರು ಮತ್ತು ಭರಮಸಾಗರ ಪರಿಶಿಷ್ಟ ಜಾತಿಗೆ ಮೀಸಲಿಡಲಾಗಿದ್ದು ಇಂದು ಅವುಗಳೇ ಮುಂದುವರಿದಿವೆ. ೧೯೮೩ರಲ್ಲಿ ನಡೆದ ಏಳನೆಯ ವಿಧಾನ ಸಭೆ ಚುನಾವಣೆಯಲ್ಲಿ ಹಿರಿಯೂರು ಮೀಸಲು ಕ್ಷೇತ್ರದಿಂದ ಸ್ಪರ್ಧಿಸಿದ್ದ ಮಾದಿಗ ಜನಾಂಗದ ಅಡ್ವೋಕೆಟ್ ತಿಪ್ಪಣ್ಣನವರು ಗೆಲ್ಲದಿದ್ದರೂ ಅತ್ಯಧಿಕ ಮತಗಳನ್ನು ಗಳಿಸಿದ್ದರು. ಅದೇ ಅವಧಿಯಲ್ಲಿ ಭರಮಸಾಗರದಿಂದ ಟಿ.ಚೌಡಪ್ಪನವರು ಕಾಂಗ್ರೆಸ್ ಪಕ್ಷದಿಂದ ಚುನಾಯಿತರಾಗಿದ್ದಾರೆ. ೧೯೮೫ರ ಚುನಾವಣೆಯಲ್ಲಿ ಹಿರಿಯೂರು ಕ್ಷೇತ್ರದಿಂದ ಕಾಂಗ್ರೆಸ್ ಪಕ್ಷದಿಂದ ಕೆ.ರಾಮಯ್ಯ ಆಯ್ಕೆಯಾದರೆ ಭರಮಸಾಗರ ಕ್ಷೇತ್ರದಿಂದ ಜನತಾಪಕ್ಷದಿಂದ ಡಾ.ಬಿ.ಎಂ. ತಿಪ್ಪೇಸ್ವಾಮಿಯವರು ಚುನಾಯಿತರಾದರು. ಈ ಹಿಂದೆ ಇವರು ಮೊಳಕಾಲ್ಮೂರು ಸಾಮಾನ್ಯ ಕ್ಷೇತ್ರದಲ್ಲಿ ಜನತಾ ಪಕ್ಷದಿಂದ ಸ್ಪರ್ಧಿಸಿ ಸೋತಿದ್ದರು. ೧೯೯೦ರಲ್ಲಿ ಚುನಾವಣೆಯಲ್ಲಿ ಹಿರಿಯೂರು ಕ್ಷೇತ್ರದಲ್ಲಿ ಮಾದಿಗ ಜನಾಂಗದ ಇಬ್ಬರು ಅಭ್ಯರ್ಥಿಗಳು ಚುನಾವಣೆ ಕಣದಲ್ಲಿದ್ದರು. ತಿಪ್ಪಣ್ಣನವರು ಜನತಾಪಕ್ಷದಿಂದ ಮತ್ತು ಬಸಪ್ಪ ಎಂಬುವರು ಪಕ್ಷೇತರರಾಗಿದ್ದರು. ಆದರೆ ಯಾರು ಈ ಜನಾಂಗದಿಂದ ಆಯ್ಕೆ ಆಗಲಿಲ್ಲ. ಅದೇ ರೀತಿಯಲ್ಲಿ ಭರಮಸಾಗರದಲ್ಲಿ ಕಾಂಗ್ರೆಸ್ ಪಕ್ಷದಿಂದ ಹೆಚ್.ಅಂಜನೇಯ ಮತ್ತು ಭಾರತೀಯ ರಿಪಬ್ಲಿಕನ್ ಪಾರ್ಟಿಯಿಂದ ಎಂ.ಜಯಣ್ಣ ಸ್ಪರ್ಧಿಸಿದ್ದರು. ಇವರಲ್ಲಿಯೂ ಯಾರೊಬ್ಬರು ಗೆಲ್ಲಲಾಗಲಿಲ್ಲ.

ಈ ಹಿಂದೆ ಒಂದು ಬಾರಿ ಆಯ್ಕೆಯಾಗಿದ್ದ ಡಿ.ಮಂಜುನಾಥ್ ಅವರು ೧೯೯೪ರ ಚುನಾವಣೆಯಲ್ಲಿ ಹಿರಿಯೂರು ಕ್ಷೇತ್ರದಿಂದ ಜನತಾದಳ ಪಕ್ಷದಿಂದ ಸ್ಪರ್ಧಿಸಿ ಗೆಲುವು ಸಾಧಿಸಿದ್ದಾರೆ. ಭರಮಸಾಗರದಲ್ಲಿ ಮತ್ತೊಮ್ಮೆ ಸ್ಪರ್ಧಿಸಿದ್ದ ಹೆಚ್.ಅಂಜನೇಯ ಮತ್ತು ಬಿ.ಎಸ್.ಪಿ ಯಿಂದ ಎಂ.ಜಯಣ್ಣ ಮತ್ತೊಂದು ಬಾರಿ ಸೋತಿರುವುದು ಕಂಡುಬರುತ್ತದೆ. ೧೯೯೮ರಲ್ಲಿ ನಡೆದ ಹನ್ನೊಂದನೆಯ ವಿಧಾನಸಭೆ ಚುನಾವಣೆಯಲ್ಲಿ ಜನತಾದಳ(ಸಂ)ದಿಂದ ಹಿರಿಯೂರು ಕ್ಷೇತ್ರದಲ್ಲಿ ಸ್ಪರ್ಧಿಸಿದ್ದ ಡಿ.ಮಂಜುನಾಥ ಸೋತರು ಸಹ ಅತ್ಯಧಿಕ ಮತಗಳನ್ನು ಗಳಿಸಿಕೊಂಡಿದ್ದರು. ಇದೇ ರೀತಿ ಭರಮಸಾಗರದಲ್ಲಿ ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಿದ್ದ ಎಚ್ .ಆಂಜನೇಯ ಮೂರನೆ ಬಾರಿಗೆ ಸೋಲು ಅನುಭವಿಸಿದ್ದಾರೆ. ಇದೇ ಚುನಾವಣೆಯಲ್ಲಿ ಸಾಮಾನ್ಯ ಕ್ಷೇತ್ರವಾಗಿದ್ದ ಮೊಳಕಾಲ್ಮೂರಿನಲ್ಲಿ ಬಿ.ಎಸ್.ಪಿಯಿಂದ ಎಂ.ಜಯಣ್ಣ ಸ್ಪರ್ಧಿಸಿ ಸೋತಿದ್ದಾರೆ.

ಈ ಮೇಲಿನ ಅಂಶಗಳು ಮಾದಿಗ ಜನಾಂಗದ ಅನೇಕರು ವಿವಿಧ ಪಕ್ಷಗಳಿಂದ ವಿಧಾನಸಭೆಗಳಿಗೆ ಆಯ್ಕೆಯಾಗಲು ಬಯಸಿ ಸ್ಪರ್ಧಿಸಿರುವುದನ್ನು ತಿಳಿಸುತ್ತವೆ. ಮೊದಮೊದಲು ಎರಡು ಸ್ಥಾನಗಳಲ್ಲಿ ಮಾದಿಗ ಜನಾಂಗದ ಅಭ್ಯಾರ್ಥಿಗಳೇ ಗೆಲುವು ಪಡೆಯುತ್ತಿದ್ದರೆ ಬರುಬರುತ್ತಾ ಒಂದಕ್ಕೆ ನಿಂತಿದೆ.

೧೯೯೦ ಮತ್ತು ೧೯೯೮ರ ಅವಧಿಯ ಚುನಾವಣೆಯಲ್ಲಿ ಒಂದು ಸ್ಥಾನವನ್ನೂ ಉಳಿಸಿಕೊಂಡಿಲ್ಲದೆ ಇರುವುದು ಕಂಡುಬರುತ್ತದೆ. ಹಿರಿಯೂರು ಮತ್ತು ಭರಮಸಾಗರದ ಎರಡು ಕ್ಷೇತ್ರಗಳಲ್ಲಿ ಮಾದಿಗ ಜನಾಂಗ ಅತ್ಯಧಿಕ ಮತದಾರರನ್ನು ಹೊಂದಿದ್ದರೂ ಹಿರಿಯೂರಲ್ಲಿ ಒಕ್ಕಲಿಗರು, ಗೊಲ್ಲರು, ಮುಸ್ಲಿಂರ ಓಟುಗಳು ನಿರ್ಣಾಯಕವಾಗಿದ್ದರೆ ಭರಮಸಾಗರದಲ್ಲಿ ಲಿಂಗಾಯಿತರ ಮತಗಳು ನಿರ್ಣಾಯಕವಾಗಿದ್ದವು. ಚುನಾವಣೆಗಳಲ್ಲಿ ಮಾದಿಗ ಜನಾಂಗದ ಅಭ್ಯಾರ್ಥಿಗಳು ಏಕಕಾಲದಲ್ಲಿ ಒಂದೇ ಕ್ಷೇತ್ರದಲ್ಲಿ ಸ್ಪರ್ಧಿಸಿರುವುದರಿಂದ ಈ ಅಂಶವು ಕೂಡ ಮಾದಿಗ ಜನಾಂಗದ ಅಭ್ಯರ್ಥಿಗಳ ಸೋಲಿಗೆ ಕಾರಣವಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಮೀಸಲು ಕ್ಷೇತ್ರಗಳು ಈಗ ಇಲ್ಲದಿರುವುದರಿಂದ ವಿಶ್ಲೇಷಣೆ ಇಲ್ಲ.

### ವಿಧಾನ ಪರಿಷತ್

ವಿಧಾನ ಪರಿಷತ್‌ಗೂ ಮಾದಿಗ ಜನಾಂಗದ ಕೆಲವರು ನೇಮಕವಾಗಿರುವುದು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕಂಡುಬರುತ್ತದೆ. ಮೊದಲನೆಯ ವಿಧಾನಸಭಾ ಚುನಾವಣೆಯ ನಂತರದಲ್ಲಿ ಕೆಲವೊಂದು ಸ್ಥಾನಿಕ ಪ್ರಾತಿನಿಧ್ಯಗಳನ್ನು ನೀಡುವ ಸಲುವಾಗಿ ಕೆಲವರನ್ನು ಆಯ್ಕೆ ಮಾಡಿದಾಗ ಮಾದಿಗ ಜನಾಂಗಕ್ಕೆ ಸೇರಿದ ಕೆ.ರಂಗಪ್ಪ ಎಂಬುವರು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಪ್ರತಿನಿಧಿಯಾಗಿ ಆಯ್ಕೆಯಾಗಿದ್ದರು.[೫೧] ಆನಂತರದಲ್ಲಿ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನ ಬುಸೇನಹಳ್ಳಿಯ ರಂಗಪ್ಪ ಎಂಬುವರು ಆಯ್ಕೆಯಾಗಿರುವುದು ತಿಳಿದುಬರುತ್ತದೆ. ಅವರ ನಂತರದಲ್ಲಿ ಡಿ.ಮಂಜುನಾಥ್ ಅವರು ಆಯ್ಕೆಯಾಗಿದ್ದು ವಿಧಾನ ಪರಿಷತ್ ಸಭಾಧ್ಯಕ್ಷರಾಗಿಯೂ ಆಯ್ಕೆಯಾಗಿದ್ದಾರೆ. ಇವರನ್ನು ಹೊರತು ಪಡಿಸಿದರೆ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಿಂದ ಯಾರು ಸಹ ವಿಧಾನ ಪರಿಷತ್ ಸದಸ್ಯ ಸ್ಥಾನಕ್ಕೆ ನಾಮಕರಣಗೊಂಡಿಲ್ಲ. ಇತರೆ ಭಾಗಗಳಿಂದ ಮಾದಿಗ ಜನಾಂಗದ ಆಲ್ಕೊಡ ಹನುಮಂತಪ್ಪ, ಕೆ.ಬಿ.ಶಾಣಪ್ಪ, ರಮೇಶ್ ಅಲ್ಲದೇ ಇತ್ತೀಚೆಗೆ ಎಲ್. ಹನುಮಂತಯ್ಯ ವಿಧಾನ ಪರಿಷತ್‌ಗೆ ಆಯ್ಕೆಯಾಗಿರುವುದು ಕಂಡುಬರುತ್ತದೆ.

ಉಳಿದಂತೆ ಯಾವುದೇ ನಿಗಮ ಮಂಗಳಿಗೆ ಚಿತ್ರದುರ್ಗ ಜಿಲ್ಲೆಯ ಮಾದಿಗ ಜನಾಂಗದ ಯಾರೊಬ್ಬರು ಆಯ್ಕೆಯಾಗಿಲ್ಲ. ಆದರೆ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿದ್ದ ಹರಪನಹಳ್ಳಿ ಕ್ಷೇತ್ರದಿಂದ ಆಯ್ಕೆಯಾಗಿದ್ದ ಡಿ.ನಾರಾಯಣದಾಸ್ ಮಾತ್ರ 'ಲಿಡ್ಕರ್ ' ಅಧ್ಯಕ್ಷರಾಗಿದ್ದರು.

## ೬.೫ ವಿವಿಧ ರಾಜಕೀಯ ಪಕ್ಷಗಳು ಮತ್ತು ಮಾದಿಗರು

ಪ್ರಜಾಪ್ರಭುತ್ವವನ್ನು ಹೊಂದಿರುವ ಭಾರತದಲ್ಲಿ ಪ್ರತಿಯೊಬ್ಬ ಪ್ರಜೆಯು ರಾಜ್ಯ ಮತ್ತು ರಾಷ್ಟ್ರ ರಾಜಕಾರಣದಲ್ಲಿ ಪಾಲ್ಗೊಳ್ಳಲು ಅವಕಾಶವಿದೆ. 'ವಯಸ್ಕ ಮತದಾನ'ದ ಹಕ್ಕು ಸಂವಿಧಾನದಲ್ಲಿ ಅಳವಡಿಸಲಾಗಿದ್ದು, ಯಾವುದೇ ತಾರತಮ್ಯಕ್ಕೆ ಅವಕಾಶ ಮಾಡಿಕೊಡದೆ ಶ್ರೀಮಂತನಿರಲಿ ಅಥವಾ

ಬಡವನಿರಲಿ ಪ್ರತಿಯೊಬ್ಬರಿಗೂ ಸಮಾನವಾದ 'ಏಕಮತ' ಚಲಾಯಿಸಲು ಅವಕಾಶ ನೀಡಲಾಗಿದೆ. ಈ ಮೂಲಕ ಪ್ರತಿಯೊಬ್ಬ ವಯಸ್ಕನು 'ಮತ' ಚಲಾಯಿಸುವುದರ ಮೂಲಕ ಸಮರ್ಥವಾದ ಜನಪ್ರತಿನಿಧಿಗಳನ್ನು ಆಯ್ಕೆಮಾಡುವ ಅವಕಾಶವನ್ನು ನೀಡಲಾಗಿದೆ. ಯಾವುದೇ ಪಕ್ಷದ ಬೆಳವಣಿಗೆಯ ಹಿಂದ ಮತದಾರರ ಪಾತ್ರ ಅತಿ ಮುಖ್ಯವಾದುದು. ಪಕ್ಷ ಮತ್ತು ಜಾತಿ ಭಾರತೀಯ ರಾಜಕಾರಣದಲ್ಲಿ ಪ್ರಭಾವ ಬೀರುವ ಅಂಶಗಳಾಗಿವೆ. ಈ ಎರಡು ಅಂಶಗಳು ಮೀಸಲು ಕ್ಷೇತ್ರಗಳಲ್ಲಿ ಹೆಚ್ಚಿನ ಪ್ರಭಾವ ಬೀರಿವೆ. ಸ್ಪರ್ದಿಸಿದ ವ್ಯಕ್ತಿಯ ಜಾತಿ ಮತ್ತು ಪಕ್ಷಗಳು ಆತನ ಗೆಲುವಿಗೆ ಪ್ರಮುಖ ಕಾರಣಗಳಾಗಿರುತ್ತವೆ. ಚಿತ್ರದುರ್ಗ ಜಿಲ್ಲೆಯ ಮೀಸಲು ಕ್ಷೇತ್ರಗಳಲ್ಲಿ ಈ ಅಂಶವನ್ನು ಕಾಣಬಹುದಾಗಿದೆ. ಆದರೆ ಸಾಮಾನ್ಯ ಕ್ಷೇತ್ರದಿಂದ ಜಾತಿಗಿಂತ ಪ್ರಮುಖ ಪಾತ್ರ ವಹಿಸಿದೆಯಾದರೂ ಕೆಲವೊಂದು ಕ್ಷೇತ್ರದಲ್ಲಿ ಜಾತಿಯೂ ಪ್ರಮುಖ ಪಾತ್ರ ವಹಿಸಿದೆ. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್, ಜನತಾದಳ ಬಹುಜನ ಸಮಾಜ ಪಾರ್ಟಿ, (ಬಿಎಸ್‌ಪಿ) ಮುಂತಾದ ಪಕ್ಷಗಳ ಬೆಳವಣಿಗೆಯಲ್ಲಿ ಮಾದಿಗ ಜನಾಂಗದ ಪಾತ್ರವೇನು ಎಂಬುದನ್ನು ತಿಳಿಯಲು ಪ್ರಯತ್ನಿಸಲಾಗಿದೆ.

**ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಮತ್ತು ಮಾದಿಗರು**

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಇಡೀ ಭಾರತದಲ್ಲಿಯೇ ಹೆಚ್ಚು ಖ್ಯಾತಿ ಗಳಿಸಿರುವ ಒಂದು ರಾಷ್ಟ್ರೀಯ ಪಕ್ಷವಾಗಿದೆ. ಈ ಹಿಂದೆ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಹೋರಾಟ ಮಾಡಲು ಹುಟ್ಟಿಕೊಂಡ ಈ ರಾಜಕೀಯ ಸಂಸ್ಥೆಯು ಸ್ವಾತಂತ್ರ್ಯಾ ನಂತರ ಭಾರತದ ಆಡಳಿತವನ್ನು ನೋಡಿಕೊಳ್ಳುವ ಹೊಣೆಗಾರಿಕೆ ಹೊತ್ತಿತ್ತು. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಪರಿಶಿಷ್ಟ ಜಾತಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿರುವ ಮಾದಿಗ ಜನಾಂಗ ಕಾಂಗ್ರೆಸ್ ಪಕ್ಷಕ್ಕೆ ನೀಡಿರುವ ಬೆಂಬಲ ಅದರ ಬೆಳವಣಿಗೆಗೆ ಸಹಕಾರಿಯಾಗಿದೆ. ಈ ಎರಡು ಜಿಲ್ಲೆಗಳಲ್ಲಿ ಈ ಜನಾಂಗವು ಹೆಚ್ಚಿನ ಪ್ರಮಾಣದಲ್ಲಿ ಈ ಪಕ್ಷವನ್ನು ಮೊದಲಿನಿಂದಲೂ ಬೆಂಬಲಿಸುತ್ತಲೆ ಬಂದಿದ್ದಾರೆ. ಇಂದಿಗೂ ಕೆಲವೊಂದು ಪ್ರದೇಶಗಳನ್ನು ಹೊರತುಪಡಿಸಿದರೆ ಉಳಿದೆಲ್ಲಾ ಪ್ರದೇಶಗಳಲ್ಲಿ ಅವರ ನಿಷ್ಠೆ ಮುಂದುವರಿದಿದೆ. ಈ ರೀತಿಯ ಬೆಂಬಲಕ್ಕೆ ಅನೇಕ ಕಾರಣಗಳು ಉಂಟು. ಪರಕೀಯರ ಹಿಡಿತದಿಂದ ಭಾರತವನ್ನು ವಿಮೋಚನೆಗೊಳಿಸುವ ಉದ್ದೇಶ ಹೊಂದಿರುವುದು ಒಂದು ಅಂಶವಾದರೆ ಮತ್ತೊಂದು ಸ್ವಾತಂತ್ರ್ಯ ಚಳವಳಿಯ ಕಾಲದಲ್ಲಿ ಗಾಂಧೀಜಿ ಮತ್ತು ಕಾಂಗ್ರೆಸ್ ಕೈಗೊಂಡ ರಚನಾತ್ಮಕ ಕಾರ್ಯಗಳು ಇವರನ್ನೂ ಕಾಂಗ್ರೆಸ್ ಪಕ್ಷಕ್ಕೆ ಸಂಪೂರ್ಣವಾಗಿ ಬೆಂಬಲಿಸುವಂತೆ ಪ್ರಭಾವ ಬೀರಿದೆ. ಸ್ವಾತಂತ್ರ್ಯಾ ನಂತರದಲ್ಲಿ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಮಾದಿಗ ಜನಾಂಗವು ಸಂಪೂರ್ಣವಾಗಿ ಬೆಂಬಲಿಸಿತು. ಆ ನಂತರದಲ್ಲಿ ರಾಜ್ಯ ಮತ್ತು ಕೇಂದ್ರ ಸರ್ಕಾರ ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದ ಶೋಷಿತ ಜಾತಿಗಳ ಸ್ಥಿತಿ-ಗತಿಗಳನ್ನು ಸುಧಾರಿಸಲು ಕೆಲವು ಕಾರ್ಯಗಳನ್ನು ಕೈಗೊಂಡು ಕಾರ್ಯರೂಪಕ್ಕೆ ತಂದಿದ್ದು ಅವರಲ್ಲಿ ಇನ್ನಷ್ಟು ಅಭಿಮಾನ ಕಾಂಗ್ರೆಸ್ ಮೇಲೆ ಮೂಡಲು

ಕಾರಣವಾಗಿದೆ. ಈ ಅಂಶಗಳು ಮಾದಿಗ ಜನಾಂಗವು ಕಾಂಗ್ರೆಸ್ ಪಕ್ಷವನ್ನು ಇಂದಿಗೂ ಬೆಂಬಲಿಸಿಕೊಂಡು ಬರಲು ಪ್ರೇರಣೆ ನೀಡಿದೆ. ಆದರೆ ೭೦ರ ದಶಕದ ಕೊನೆಯಲ್ಲಿ ಕೆಲವೊಂದು ಭಾಗಗಳಲ್ಲಿ ಕಾಂಗ್ರೆಸ್ ನಿಷ್ಠೆಯನ್ನು ಕೊನೆಗಾಣಿಸಿ ಬೇರೆ ಪಕ್ಷಕ್ಕೆ ಬೆಂಬಲಿಸುವ ಮತ್ತು ಬೆಳಸುವ ದಿಕ್ಕಿನಲ್ಲಿ ಆಲೋಚನೆ ಮಾಡಿ ಕಾರ್ಯೋನ್ಮುಖವಾಗಿರುವುದು ಕಂಡುಬರುತ್ತದೆ.

ಕಾಂಗ್ರೆಸ್ ಪಕ್ಷದ ಮೂಲಕ ರಾಜಕಾರಣ ಮಾಡಲು ಆರಂಭಿಸಿದ ಮಾದಿಗ ಜನಾಂಗದ ಅನೇಕರು ಇಂದು ರಾಜ್ಯ ಮಟ್ಟದಲ್ಲಿ ಕಾಂಗ್ರೆಸ್ ಮತ್ತು ಇತರೆ ರಾಜಕೀಯ ಪಕ್ಷಗಳಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಈ ಪಕ್ಷದ ಮಾಲಕ ರಾಜಕೀಯ ಪ್ರವೇಶ ಮಾಡಿದವರೆಂದರೆ ಟಿ.ಹನುಮಯ್ಯ, ದುಗ್ಗಪ್ಪ, ಡಿ.ಮಂಜುನಾಥ್, ಚೌಡಪ್ಪ, ಬಿ.ಎಂ.ತಿಪ್ಪೇಸ್ವಾಮಿ, ಕೆ.ರಾಮಯ್ಯ, ಹೆಚ್.ಆಂಜನೇಯ ಮುಂತಾದವರು. ಇಂದು ಕಾಂಗ್ರೆಸ್ ಪಕ್ಷದಲ್ಲಿರುವ ಮಾದಿಗ ಜನಾಂಗದ ಎಚ್. ಆಂಜನೇಯ ಇಂದು ರಾಜ್ಯ ಪ್ರಧಾನ ಕಾರ್ಯದರ್ಶಿಯಾಗಿದ್ದಾರೆ. ಹಿಂದೆ ರಾಜ್ಯದ ಯುವ ಕಾಂಗ್ರೆಸ್ ಅಧ್ಯಕ್ಷರಾಗಿದ್ದರು.

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಜನಸಂಖ್ಯೆಯನ್ನು ಹೊಂದಿರುವ ಮಾದಿಗ ಜನಾಂಗದವರಿಗೆ ಕಾಂಗ್ರೆಸ್ ಪಕ್ಷವು ಕೆಲವೊಂದು ಅವಕಾಶಗಳನ್ನು ನೀಡುವುದು ಅದಕ್ಕೆ ಅನಿವಾರ್ಯವು ಆಗಿತ್ತು. ಚಿತ್ರದುರ್ಗ ಜಿಲ್ಲೆಯಲ್ಲಿ ವಿಧಾನಸಭೆಯ ಎರಡು ಮೀಸಲು ಸ್ಥಾನಗಳು ಇದ್ದು ಈ ಎರಡು ಸ್ಥಾನಗಳಲ್ಲಿ ಮಾದಿಗ ಜನಾಂಗದವರಿಗೆ ಸ್ಪರ್ಧಿಸಲು ಟಿಕೆಟ್ ನೀಡಿತು. ಇದರಿಂದಾಗಿ ಮೊದಲ ವಿಧಾನ ಸಭಾ ಚುನಾವಣೆಯಲ್ಲಿ ಮಾದಿಗ ಜನಾಂಗದ ಟಿ.ಹನುಮಯ್ಯ ಮತ್ತು ದುಗ್ಗಪ್ಪನವರು ಗೆಲ್ಲುವಂತಾಯಿತು. ಎರಡು ಸ್ಥಾನಗಳಿಗೂ ಮಾದಿಗ ಜನಾಂಗದವರಿಗೆ ಟಿಕೆಟ್ ನೀಡುತ್ತಿದ್ದ ಕಾಂಗ್ರೆಸ್ ಬರುಬರುತ್ತಾ ಒಂದು ಸ್ಥಾನವನ್ನು ಮಾತ್ರವೇ ಮಾದಿಗರಿಗೆ ನೀಡುತ್ತಾ ಹೋಯಿತು. ಮಾದಿಗರು ಸುಮಾರು ೭೦ರ ದಶಕದವರೆಗೂ ಈ ಎರಡು ಕ್ಷೇತ್ರದಲ್ಲಿ ಮಾತ್ರವಲ್ಲದೆ ಉಳಿದ ಭಾಗಗಳಲ್ಲಿಯೂ ಕಾಂಗ್ರೆಸ್‌ಗೆ ಬೆಂಬಲ ನೀಡುತ್ತಾ ಬಂದಿದ್ದಾರೆ. ಆನಂತರ ಮಾದಿಗರ ರಾಜಕೀಯ ಆಲೋಚನೆ ಬದಲಾಗತೊಡಗಿತು. ಈ ಹಿಂದೆ ಪಕ್ಷ ಮತ್ತು ಜಾತಿ ಒಟ್ಟೊಟ್ಟಿಗೆ ಮಾದಿಗ ಜನಾಂಗದ ಮತದಾರರ ಮೇಲೆ ಪರಿಣಾಮ ಬೀರುತ್ತಿದ್ದರಿಂದ ಕಾಂಗ್ರೆಸ್ ನಿಂದ ಸ್ಪರ್ಧಿಸಿದ ವ್ಯಕ್ತಿ ಗೆಲುವು ಸಾಧಿಸಲು ಸಹಕಾರಿಯಾಗುತ್ತಿತ್ತು. ಆನಂತರದಲ್ಲಿ ರಾಷ್ಟ್ರ ರಾಜಕಾರಣದಲ್ಲಾದ ಬದಲಾವಣೆಗಳು ಪಕ್ಷವನ್ನ ಮಾದಿಗರು ಬೆಂಬಲಿಸಲು, ಪ್ರೇರಣೆ ನೀಡಿದೆ. ಆ ಸಂದರ್ಭದಲ್ಲಿಹುಟ್ಟಿಕೊಂಡಿದ್ದು ಜನತಾಪಕ್ಷ ಬಾಬು ಜಗಜೀವನರಾಂರನ್ನು ಬೆಂಬಲಿಸುವ ಹಿನ್ನೆಲೆಯಲ್ಲಿ ಮಾದಿಗ ಜನಾಂಗದ ಅನೇಕ ಮುಖಂಡರು ಪಕ್ಷದ ಪ್ರಚಾರದಲ್ಲಿ ತೊಡಗಿಕೊಂಡರು. ಇದರಿಂದಾಗಿ ಈ ಕ್ಷೇತ್ರದ ಮಾದಿಗ ಜನಾಂಗವು ಜಾತಿಯ ಹಿನ್ನೆಲೆಯಲ್ಲಿ ಬಾಬುಜನಜೀವನ ಬೆಂಬಲಿಸಲು ಜನಾತ ಪಕ್ಷದೆಡೆ ವಾಲತೊಡಗಿದರು. ಅಲ್ಲಿಂದ ಮಾದಿಗ ಜನಾಂಗವು ಜಾತಿಯ ಹಿನ್ನೆಲೆಯಲ್ಲಿ ಮತ

ಚಲಾಯಿಸುವುದರ ಬಗ್ಗೆ ಅಸಕ್ತಿ ಹೊಂದಿದ್ದರು. ಆದರೂ ಅಧ್ಯಯನಕ್ಕೊಳಪಡಿಸಿದ್ದ ಒಟ್ಟು ೫೦ ಹಳ್ಳಿಗಳಲ್ಲಿ ಇಂದಿಗೂ ಕಾಂಗ್ರೆಸ್‌ಗೆ ಮೊದಲ ಆದ್ಯತೆ ನೀಡಿರುವುದು ಕಂಡುಬರುತ್ತದೆ.

ಇಂದು ಈ ಪಕ್ಷದಲ್ಲಿ ಮಾದಿಗ ಜನಾಂಗದ ಕೆಲವರು ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ಪರಾಧಿಕಾರಿಗಳಾಗಿ ಎಸ್‌ಸಿ-ಎಸ್‌ಟಿ ಘಟಕಕ್ಕೆ ನೇಮಕವಾಗಿರುವುದು ಕಂಡುಬರುತ್ತದೆ. ಅಲ್ಲದೆ ಈ ಪಕ್ಷದಿಂದ ತಾಲ್ಲೂಕು ಪಂಚಾಯ್ತಿಗೆ ಜಿಲ್ಲಾ ಪಂಚಾಯಿತಿಗೆ ಆಯ್ಕೆಯಾದ ಸದಸ್ಯರನ್ನು ಸಹ ಕಾಣಬಹುದಾಗಿದೆ. ಚಿತ್ರದುರ್ಗ ತಾಲ್ಲೂಕು ಪಂಚಾಯ್ತಿಗೆ ೧೯೮೭ರಲ್ಲಿ ಮಾದಿಗ ಜನಾಂಗದಿಂದ ೫ಜನ ಆಯ್ಕೆಯಾಗಿದ್ದಾರೆ. ಮೊಳಕಾಲ್ಮೂರಲ್ಲಿ ಒಬ್ಬರು ಆಯ್ಕೆಯಾಗಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಕಾಂಗ್ರೆಸ್ ಪಕ್ಷದಿಂದ ಮಾನಯ್ಯ ಆಯ್ಕೆಯಾಗಿದ್ದಾರೆ. ಈ ಕೆಲವೊಂದು ಉದಾಹರಣೆ ಮಾತ್ರವಲ್ಲದೆ ಪೌರಸೇವಾ ಸಂಸ್ಥೆಗಳಲ್ಲಿ ಮಾದಿಗ ಜನಾಂಗದ ಕೆಲವು ಮುಖಂಡರು ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಿ ಚುನಾಯಿತರಾಗಿರುವುದು ಕಂಡುಬರುತ್ತದೆ. (ಚಿತ್ರದುರ್ಗ ಜಿಲ್ಲೆ ನಗರಸಭೆಯಲ್ಲಿ ಡಿ.ಎಸ್.ಮೈಲಾರಪ್ಪ ಬಳ್ಳಾರಿ ಜಿಲ್ಲೆಯ ಹೊಸಪೇಟೆ ನಗರ ಸಭೆಯಲ್ಲಿ ಹುಲುಗಪ್ಪ)

**ಜನತಾದಳ ಮತ್ತು ಮಾದಿಗರು**

ಜನತಾದಳವು ಒಂದು ಪ್ರಾದೇಶಿಕ ಪಕ್ಷವಾಗಿದ್ದು ಕಾಂಗ್ರೆಸ್ ನಂತರದಲ್ಲಿ ಮಾದಿಗರ ೨ನೇ ಆಯ್ಕೆ ಜನತಾದಳವಾಗಿದೆ. ಒಂದು ಕಾಲಕ್ಕೆ ಇದು ಜನತಾ ಪಕ್ಷವಾಗಿದ್ದು ನಂತರದಲ್ಲಿ ಜನತಾದಳವಾಗಿ ರಚನೆಗೊಂಡು ಇಂದು ಜನತಾದಳ(ಎಸ್) ಮತ್ತು ಜನತಾದಳ(ಯು) ಎಂದು ಇಬ್ಭಾಗವಾಗಿದೆ. ಜನತಾಪಕ್ಷದ ಕಾಲದಿಂದಲೂ ಇಂದಿನ ಎರಡು ಬಣದವರೆಗೆ ಹೆಚ್ಚಿನ ಪ್ರಮಾಣದಲ್ಲಿ ಈ ಪಕ್ಷಕ್ಕೆ ಮಾದಿಗರು ಬೆಂಬಲಿಸುತ್ತಾ ಬಂದಿರುವುದು ಕಂಡುಬರುತ್ತದೆ. ೭೦ರ ದಶಕದಲ್ಲಿ ರಾಷ್ಟ್ರ ರಾಜಕಾರಣದಲ್ಲಾದ ಬದಲಾವಣೆಯು ಮಾದಿಗ ಜನಾಂಗದ ಮೇಲೆ ಪ್ರಭಾವ ಬೀರಿರುವುದನ್ನು ನೋಡಬಹುದು. ಬಾಬು ಜಗಜೀವನರಾಂರನ್ನು ಬೆಂಬಲಿಸುವ ದೃಷ್ಟಿಯಿಂದ ಹೊಸದಾಗಿ ಹುಟ್ಟಿಕೊಂಡ ಜನತಾಪಕ್ಷಕ್ಕೆ ಬೆಂಬಲ ನೀಡಲು ನಿರ್ಧರಿಸಿದ ಮಾದಿಗ ಜನಾಂಗದ ಮುಖಂಡರು ಮಾದಿಗರನ್ನು ಆ ಪಕ್ಷಕ್ಕೆ ಬೆಂಬಲಿಸಲು ಪ್ರಚಾರದಲ್ಲಿ ತೊಡಗಿದರು. ಈ ರೀತಿಯ ಪ್ರಚಾರ ಕಾರ್ಯದಲ್ಲಿ ತೊಡಗಿಕೊಂಡಿದ್ದ ಹಿರಿಯೂರು ತಾಲ್ಲೂಕಿನ ಕೆಲವರೆಂದರೆ ಎಸ್.ಗಂಗಾದರಪ್ಪ, ಕೆ.ಎಲ್.ರಾಮಸ್ವಾಮಿ, ಧನಂಜಯಮೂರ್ತಿ ಮುಂತಾದವರು. (ಮಾಜಿ ಜಿಲ್ಲಾ ಪಂಚಾಯಿತಿ ಸದಸ್ಯರು) ಜಗಜೀವನರಾಂ ನಮ್ಮವರು(ಮಾದಿಗರು) ಅವರನ್ನು ಬೆಂಬಲಿಸುವುದು ನಮ್ಮ ಕರ್ತವ್ಯ ಎಂದು ಪ್ರಚಾರ ಮಾಡಿದ ಪರಿಣಾಮ ಮುಂದೆ ಹಿರಿಯೂರು ಮೀಸಲು ಕ್ಷೇತ್ರದಲ್ಲಿ ಜನತಾ ಪಕ್ಷದಿಂದ ಎರಡು ಬಾರಿ ಸ್ಪರ್ಧಿಸಿದ(೧೯೮೩-೧೯೯೦) ಅಡ್ವೋಕೇಟ್ ತಿಪ್ಪಣ್ಣನವರು ಪಡೆದ ಮತಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಜನಾಂಗದವರಾಗಿದ್ದವು. ೧೯೮೩ರಲ್ಲಿ ಮೊಳಕಾಲ್ಮೂರು ಸಾಮಾನ್ಯ ಕ್ಷೇತ್ರದಲ್ಲಿ ಇದೆ ಪಕ್ಷದಿಂದ ಡಾ.ಬಿ.ಎಂ.ತಿಪ್ಪೇಸ್ವಾಮಿ ಸ್ಪರ್ಧಿಸಿ ಸೋತರು ಸಹ ಅಲ್ಲಿಯೂ ಮಾದಿಗ ಜನಾಂಗದ ಓಟುಗಳನ್ನು

ಹೆಚ್ಚಿನ ಪ್ರಮಾಣದಲ್ಲಿ ಪಡೆದಿದ್ದರು. ೧೯೮೫ರಲ್ಲಿ ಭರಮಸಾಗರ ಮೀಸಲು ಕ್ಷೇತ್ರದಿಂದ ಇವರು ಜನತಾಪಕ್ಷದಿಂದ ಸ್ಪರ್ಧಿಸಿ ಚುನಾಯಿತರಾದರು. ಇವರ ಗೆಲುವಿಗೆ ಆ ಭಾಗದ ಮಾದಿಗರು ಹೆಚ್ಚಿನ ಪ್ರಮಾಣದಲ್ಲಿ ಇವರನ್ನು ಬೆಂಬಲಿಸಿದ್ದುದು ಕಾರಣವಾಗಿದೆ.

೧೯೯೪ರ ಹೊತ್ತಿಗೆ ಜನತಾ ಪಕ್ಷವು ಜನತಾದಳವಾಗಿದ್ದು ಆ ವರ್ಷದಲ್ಲಿ ನಡೆದ ವಿಧಾನಸಭಾ ಚುನಾವಣೆಗೆ ಹಿರಿಯೂರು ಕ್ಷೇತ್ರದಲ್ಲಿ ಡಿ.ಮಂಜುನಾಥ ಸ್ಪರ್ಧಿಸಿ ಚುನಾಯಿತರಾಗಲು ಮುಖ್ಯ ಕಾರಣವೆಂದರೆ ಜಾತಿಯ ಹಿನ್ನೆಲೆ. ಮಾದಿಗರು ಹೆಚ್ಚಿನ ಪ್ರಮಾಣದಲ್ಲಿ ಮತಗಳನ್ನು ಈ ಪಕ್ಷಕ್ಕೆ ನೀಡಿದ್ದರಿಂದ ಗೆಲುವು ಸಾಧಿಸಲು ಕಾರಣವಾಯಿತು. ಏಕೆಂದರೆ ರಾಜಕಾರಣದಲ್ಲಿ ಜಾತಿಯು ಮುಖ್ಯವಾಗಿ ಪ್ರಭಾವ ಬೀರಿರುವುದರಿಂದ ಈ ಮಾತನ್ನು ಅಲ್ಲಗಳೆಯಲಾಗದು. ಈ ಬಗೆಯಲ್ಲಿ ಜನತಾಪಕ್ಷದಿಂದ ಜನತಾದಳ ಎರಡು ಬಣದವರೆಗೆ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲಿ ಮಾದಿಗ ಜನಾಂಗವು ಈ ಪಕ್ಷಗಳಿಗೂ ಭೆಂಬಲಿಸುತ್ತಾ ಬಂದಿದ್ದಾರೆ. ಇಂದು ಜನತಾದಳದ ಎರಡು ಬಣಗಳಲ್ಲಿ ಮಾದಿಗ ಜನಾಂಗದ ಅನೇಕರಿಗೆ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿಗೆ ಸ್ಪರ್ಧಿಸಲು ಟಿಕೇಟ್ ನೀಡಲಾಗಿದ್ದು ಕೆಲವು ಪ್ರದೇಶದಲ್ಲಿ ಈ ಪಕ್ಷದ ಸದಸ್ಯರು ಆಯ್ಕೆಯಾಗಿರುವುದು ಕಂಡುಬರುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ೧೯೯೫ರಲ್ಲಿ ಜನತದಳದಿಂದ ಕೆ.ಎಲ್.ರಾಮಸ್ವಾಮಿ ಮತ್ತು ಯಶೋದಮ್ಮ ಸ್ಪರ್ಧಿಸಿ ಜಿಲ್ಲಾ ಪಂಚಾಯ್ತಿ ಸದಸ್ಯರಾಗಿ ಆಯ್ಕೆಯಾಗಿದ್ದರು. ೨೦೦೧-೦೧ನೇ ಸಾಲಿಗೆ ಹಿರಿಯೂರು ತಾಲ್ಲೂಕು ಪಂಚಾಯಿತಿಗೆ ನಡೆದ ಚುನಾವಣೆಯಲ್ಲಿ ಜನತಾದಳ(ಸಂಯುಕ್ತ)ದಿಂದ ಎಂ.ಡಿ.ರವಿ ಮತ್ತು ಜನತಾದಳ(ಎಸ್)ನಿಂದ ಎಂ.ಲತಮ್ಮ ಎಂಬುವರು ಸದಸ್ಯರಾಗಿ ಚುನಾಯಿತರಾಗಿದ್ದಾರೆ. ಇವು ಕೆಲವೊಂದು ಉದಾಹರಣೆಗಳಷ್ಟೆ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಲ್ಲಿ ಎರಡು ಬಣಗಳನ್ನು ಬೆಂಬಲಿಸುವ ಮಾದಿಗರು ಇನ್ನೂ ಇದ್ದಾರೆ. ಹಿರಿಯೂರು ಮೀಸಲು ಕ್ಷೇತ್ರವನ್ನು ಹೊರತುಪಡಿಸಿದರೆ ಉಳಿದ ಭಾಗಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಮಾದಿಗರು ಬೆಂಬಲಿಸುತ್ತಿದ್ದಾರೆ ಎನ್ನಬಹುದು.

**ಬಹುಜನ ಸಮಾಜ ಪಕ್ಷ ಮತ್ತು ಮಾದಿಗರು**

ಅಂಬೇಡ್ಕರ್, ಪೆರಿಯಾರ್, ನಾರಾಯಣಗುರು ಮುಂತಾದವರ ವಿಚಾರಗಳ ನೆಲೆಯಲ್ಲಿ ರೂಪು ಗೊಂಡಿರುವ ಪಕ್ಷದ ಬೇರುಗಳು ಉತ್ತರ ಪ್ರದೇಶದಲ್ಲಿ ಅಡಗಿವೆ. ಮೊದಲು ಇದೊಂದು ಪ್ರಾದೇಶಿಕ ಪಕ್ಷವಾಗಿದ್ದು ನಂತರದಲ್ಲಿ ಒಂದು ರಾಷ್ಟ್ರೀಯ ಪಕ್ಷವಾಗಿ ಮಾನ್ಯತೆಯನ್ನು ಪಡೆದಿದೆ. ಇಂತಹ ಪಕ್ಷವನ್ನು ಕರ್ನಾಟಕದಲ್ಲಿ ಬೆಳೆಸುವ ಹೊಣೆ ಹೊತ್ತವರು ದಲಿತ ಸಂಘರ್ಷ ಸಮಿತಿಯವರು. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ದಸಂಸವು ಈ ನಿಟ್ಟಿನಲ್ಲಿ ಕ್ರಮ ಕೈಗೊಂಡಿರುವುದು ಕಂಡುಬರುತ್ತದೆ. ಈ ಎರಡು ಜಿಲ್ಲೆಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಾದಿಗರು ಈ ಸಂಘಟನೆಯಲ್ಲಿ

ತೊಡಗಿಕೊಂಡಿದ್ದು ಈ ಪಕ್ಷವನ್ನು ಕಟ್ಟುವ ದಿಕ್ಕಿನ ಕಡೆ ಹೆಜ್ಜೆ ಹಾಕುವುದರಲ್ಲಿ ಮುಂಚೂಣಿಯಲ್ಲಿದ್ದಾರೆ. ವಿಧಾನಸಭೆ, ಲೋಕಸಭೆ ಹಾಗೂ ಸ್ಥಳೀಯ ಸಂಸ್ಥೆಗಳಲ್ಲಿ ಮಾದಿಗ ಜನಾಂಗದ ಕೆಲವರು ಈ ಪಕ್ಷದಿಂದ ಸ್ಪರ್ಧಿಸಿ ಗೆಲುವು ಮತ್ತು ಸೋಲುಗಳೆರಡನ್ನು ಅನುಭವಿಸಿರುವುದು ಕಂಡುಬರುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ರಾಜ್ಯ ಸಂಚಾಲಕರಾಗಿದ್ದ ಎಂ.ಜಯಣ್ಣ, ಭರಮಸಾಗರ ಮೀಸಲು ಕ್ಷೇತ್ರದಿಂದ ಮತ್ತು ಹೊಳಲ್ಕೆರೆ ಸಾಮಾನ್ಯ ಕ್ಷೇತ್ರದಿಂದ ಕೃಪಾಕರ ಹಾಗೂ ಹೊಸದುರ್ಗದ ಸಾಮಾನ್ಯಕ್ಷೇತ್ರದಿಂದ ಗರಗಬಸಪ್ಪ ಅವರು ೧೯೯೪ರ ಚುನಾವಣೆಯಲ್ಲಿ ಬಿಎಸ್‌ಪಿ ಯಿಂದ ಸ್ಪರ್ಧಿಸಿ ಕಡಿಮೆ ಮತಗಳನ್ನು ಪಡೆದು ಸೋತರೂ ಅವರು ಪಡೆದ ಮತಗಳಲ್ಲಿ ಹೆಚ್ಚಿನ ಪ್ರಮಾಣದ ಮಾದಿಗರ ಮತಗಳೆ ಆಗಿವೆ. ಇತ್ತೀಚೆಗೆ ನಡೆದ ಚುನಾವಣೆಯಲ್ಲಿ(೧೯೯೮) ಮೊಳಕಾಲ್ಮೂರು ಸಾಮಾನ್ಯ ಕ್ಷೇತ್ರದಿಂದ ಎಂ.ಜಯಣ್ಣನವರು ಬಿಎಸ್‌ಪಿಯಿಂದ ಸ್ಪರ್ಧಿಸಿ ಹನ್ನೊಂದು ಸಾವಿರ(೧೧,೦೦೦) ಮತಗಳಿಗೂ ಹೆಚ್ಚು ಪಡೆದು ಸೋತರು. ಹಾಗಿದ್ದೂ ಅವರು ಪಡೆದ ಆ ಮತಗಳಲ್ಲಿ ಶೇ ೬೦ರಷ್ಟು ಮಾದಿಗರ ಮತಗಳೆ ಆಗಿವೆ. ಏಕೆಂದರೆ ಆ ಪಕ್ಷದ ಆಚಾರ ಮತ್ತು ಬೆಂಬಲಿಸುವಲ್ಲಿ ಹೆಚ್ಚು ಮಾದಿಗ ಜನಾಂಗದವರೆ ಆಗಿದ್ದಾರೆ. ಅಧ್ಯಯನಕ್ಕೊಳಪಡಿಸಿದ ಮೊಳಕಾಲ್ಮೂರು ತಾಲ್ಲೂಕಿನ ಬಿ.ಜಿ.ಕೆರೆ, ರಾಮಪುರ, ಸುಲೇನಹಳ್ಳಿ ಮುಂತಾದ ಗ್ರಾಮಗಳಲ್ಲಿ ಬಿಎಸ್‌ಪಿಗೆ ಮತ ಚಲಾಯಿಸಿರುವುದು. ಇದಲ್ಲದೆ ೧೯೯೮ರ ಪೌರಸೇವಾ ಸಂಸ್ಥೆಯ ಚುನಾವಣೆಯಲ್ಲಿ ಚಿತ್ರದುರ್ಗ ನಗರ ಸಭೆಯ ಸದಸ್ಯರಾಗಿ ಡಿ.ದುರುಗೇಶ್ ಆಯ್ಕೆಯಾಗಿದ್ದಾರೆ. ಚಳ್ಳಕೆರೆಯಲ್ಲಿ ಈ ಪಕ್ಷದ ಬೆಂಬಲಿತ ಅಭ್ಯರ್ಥಿ ನಿಂಗಮ್ಮ ಆಯ್ಕೆಯಾಗಿದ್ದಾರೆ. ಹಾಗೆಯೇ ಹೊಳಲ್ಕೆರೆಯ ಪುರಸಭೆಯಲ್ಲಿ ೪ ಬಿಎಸ್‌ಪಿ ಅಭ್ಯರ್ಥಿಗಳ ಗೆಲುವಿಗೆ ಈ ಪಕ್ಷ ಮತ್ತು ದಸಂಸದಲ್ಲಿ ತೊಡಗಿಸಿಕೊಂಡಿದ್ದ ಮಾದಿಗ ಜನಾಂಗದ ಮುಖಂಡರು ಮತ್ತು ಕಾರ್ಯಕರ್ತರು ಶ್ರಮಿಸಿರುವುದು ಮುಖ್ಯವಾಗಿ ಕಂಡುಬರುತ್ತದೆ.

ಇದೇ ರೀತಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಕಂಪ್ಲಿ ಪುರಸಭೆ ಹಾಗು ಬಳ್ಳಾರಿ ನಗರಸಭೆಗೆ ಇತ್ತೀಚೆಗೆ ನಡೆದ ಚುನಾವಣೆಯಲ್ಲಿ ಮಾದಿಗ ಜನಾಂಗದ ಕೆಲವರು ಬಿಎಸ್‌ಪಿಯಿಂದ ಸ್ಪರ್ಧಿಸಿದ್ದರೂ ಗೆಲ್ಲಲಾಗಲಿಲ್ಲ. ಲೋಕಸಭೆಗೆ ನಡೆದ ಚುನಾವಣೆಯಲ್ಲಿ(೧೯೯೪) ಬಿಎಸ್‌ಪಿಯಿಂದ ಮಾದಿಗ ಜನಾಂಗದ ಮುಖಂಡರ ನಾಗರಾಜ್ ಬಿಎಸ್‌ಪಿಯಿಂದ ಸ್ಪರ್ಧಿಸಿದ್ದು ಇವರು ದಸಂಸ ಜಿಲ್ಲಾ ಸಂಚಾಲಕರು ಹಾಗೂ ಬಿಎಸ್‌ಪಿ ಜಿಲ್ಲಾ ಪ್ರಧಾನಕಾರ್ಯದರ್ಶಿಗಳು ಹೌದು. ಇವರು ೫೦,೦೦೦ಕ್ಕೂ ಹೆಚ್ಚು ಮತಗಳನ್ನು ಪಡೆಯುವಲ್ಲಿ ಸಮರ್ಥರಾದರೂ ಗೆಲ್ಲಲಾಗಲಿಲ್ಲ. ಆದರೆ ಅವರು ಪಡೆದ ಆ ಮತಗಳು ಹೆಚ್ಚಿನ ಪ್ರಮಾಣದಲ್ಲಿ ಮಾದಿಗರವೇ ಎಂದರೆ ತಪ್ಪಾಗಲಾರದು. ಏಕೆಂದರೆ ಈ ಜಿಲ್ಲೆಯಲ್ಲೂ ದಸಂಸ ಮತ್ತು ಬಿಎಸ್‌ಪಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಾದಿಗ ಜನಾಂಗ ತೊಡಗಿಕೊಂಡಿರುವ ಹಿನ್ನೆಲೆಯಲ್ಲಿ ಊಹಿಸಬಹುದಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಅಧ್ಯಯನಕ್ಕೊಳಪಡಿಸಿದ ಅನೇಕ ಹಳ್ಳಿಗಳಲ್ಲಿ ಬಿಎಸ್‌ಪಿಗೆ ಮತ ಚಲಾಯಿಸಿರುವುದನ್ನೂ ಮಾದಿಗ ಜನಾಂಗದ ಮತದಾರರು

ಖಚಿತಪಡಿಸಿದರು. ಈ ಪಕ್ಷದಲ್ಲಿ ಮಾದಿಗ ಜನಾಂಗದ ಅನೇಕರು ವಿವಿಧ ತಾಲ್ಲೂಕುಗಳಲ್ಲಿ ಪದಾಧಿಕಾರಿಗಳು ಆಗಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಮಾದಿಗ ಜನಾಂಗದ ಎಂ.ಜಯಣ್ಣನವರು ರಾಜ್ಯ ಪ್ರಧಾನ ಕಾರ್ಯದರ್ಶಿ ಮತ್ತು ಸಿ.ಕೆ.ಮಹೇಶ್ ಕಾರ್ಯಕಾರಿ ಸಮಿತಿಯ ಸದಸ್ಯರು ಹಾಗೂ ಸಿ.ಎ.ಚಿಕ್ಕಣ್ಣ ಜಿಲ್ಲಾ ಪ್ರಧಾನ ಕಾರ್ಯದರ್ಶಿಗಳಾಗಿದ್ದಾರೆ. ಜಿಲ್ಲೆ ಮತ್ತು ಬೇರೆ ಬೇರೆ ತಾಲ್ಲೂಕುಗಳಲ್ಲಿ ಇತರೆ ಸ್ಥಾನಗಳಲ್ಲಿ ಮಾದಿಗಜನಾಂಗದ ಅನೇಕರು ಇರುವುದು ಕಂಡುಬರುತ್ತದೆ.

### ೬.೬ ಮಾದಿಗರ ಪ್ರತ್ಯೇಕ ಮೀಸಲಾತಿ ಹೋರಾಟ ಮತ್ತು ವರ್ಗೀಕರಣ ಮೀಸಲಾತಿ ಹೋರಾಟ

ಕರ್ನಾಟಕ ರಾಜ್ಯದಲ್ಲಿ ದಲಿತರಿಗೆ ಸಂಬಂಧಿಸಿದಂತೆ ಹೆಚ್ಚು ಪ್ರಚಲಿತವಿರುವ ಹೋರಾಟವೆಂದರೆ ಅದು ಪ್ರತ್ಯೇಕ ಮೀಸಲಾತಿ ಹೋರಾಟ ಎನ್ನಬಹುದು. ಪರಿಶಿಷ್ಟ ಜಾತಿಯಲ್ಲಿ ಕಂಡುಬರುವ ಪ್ರಮುಖ ಜಾತಿಗಳಲ್ಲಿ ಒಂದಾದ ಮಾದಿಗ ಜನಾಂಗವು ಈ ಬೇಡಿಕೆಯನ್ನು ಸರ್ಕಾರದ ಮುಂದಿಟ್ಟಿದೆ. ಇದನ್ನು ಬೆಂಬಲಿಸಿಯೇ ದಲಿತರ ಐಕ್ಯತಾ ವೇದಿಕೆಯಾಗಿರುವ ರಾಜ್ಯ ದಲಿತ ಸಂಘರ್ಷ ಸಮಿತಿ (ಪ್ರೊ.ಬಿ.ಕೆ.ಬಣ)ಯು ಕೂಡ ವರ್ಗೀಕರಣ ಮೀಸಲಾತಿ ಪರಿಶಿಷ್ಟ ಜಾತಿಯ ಒಳಗಡೆ ನಡೆಯಬೇಕೆಂದು ಪ್ರತ್ಯೇಕ ಹೋರಾಟದ ಮೂಲಕ ಕ್ರಮಕೈಗೊಳ್ಳಬೇಕೆಂದು ಸರ್ಕಾರವನ್ನು ಕ್ರಮಕೈಗೊಳ್ಳಬೇಕೆಂದು ಒತ್ತಾಯಿಸುತ್ತಿದೆ. ಈ ಬೇಡಿಕೆಯ ಹಿಂದೆ ಪರಿಶಿಷ್ಟ ಜಾತಿಗೆ ನೀಡುತ್ತಿರುವ ಮೀಸಲಾತಿ ಸೌಲಭ್ಯವನ್ನು ಜನಸಂಖ್ಯಾ ಪ್ರಮಾಣದಲ್ಲಿ ಹಂಚಲಾಗಿಲ್ಲವೆಂಬ ಅಂಶವನ್ನು ಮುಖ್ಯವಾಗಿ ಪರಿಗಣಿಸಲಾಗಿದೆ. ಈ ನಿಟ್ಟಿನಲ್ಲಿ ಮಾದಿಗ ಜನಾಂಗದ ವಿವಿಧ ಸಂಘ-ಸಂಸ್ಥೆಗಳು ರಾಜ್ಯಾದಾದ್ಯಂತ ಅನೇಕ ಭಾಗಗಳಲ್ಲಿ ಸಂಘಟನೆ ಕೈಗೊಂಡು ಸಭೆ, ಸಮಾರಂಭ, ವಿಚಾರ ಸಂಕಿರಣ, ಧರಣಿ, ರ್‍ಯಾಲಿ ಹಾಗೂ ಸಮಾವೇಶ ಮುಂತಾದ ಕಾರ್ಯಕ್ರಮಗಳು ಮಾಡುತ್ತಾ ನಡೆದಿವೆ. ಅವುಗಳೆಲ್ಲವು ಮೀಸಲಾತಿಯ ಸೌಲಭ್ಯವನ್ನು ಹೊಲೆಯರೆ ಹೆಚ್ಚು ಪಡೆದಿದ್ದಾರೆಂದು ನೇರವಾಗಿಯೇ ಆರೋಪಿಸುತ್ತವೆ. ಅದಕ್ಕೆ ಪ್ರತಿಯಾಗಿ ಚಲವಾದಿ ಜನಾಂಗವು ಕೂಡ ಪ್ರತಿ ಆರೋಪವನ್ನು ಮಾಡುತ್ತಾ ಹೊರಟಿದೆ. ಈ ರೀತಿಯಾಗಿ ಎಲ್ಲಾ ಜಾತಿಗಳು ಕೂಡ ಪ್ರತಿ ಆರೋಪವನ್ನು ಮಾಡುತ್ತಾ ಹೊರಟಿವೆ. ಯಾವ ಜಾತಿಗಳು ಒಟ್ಟಾಗಿ ತಮ್ಮ ವಿಮೋಚನೆಯ ದಾರಿಯನ್ನು ಕಂಡುಕೊಳ್ಳಬೇಕಿತ್ತೊ ಆ ವರ್ಗ ಇಂದು ಮುಖಾಮುಖಿಯಾಗಿ ನಿಂತು ಕತ್ತಿ ಮಸೆಯುತ್ತಿರುವುದು ದುರಂತವೇ ಸರಿ. ಸಾವಿರಾರು ವರುಷಗಳಿಂದಲೂ ವಿವಿಧ ಬಗೆಯ ಶೋಷಣೆಗೆ ಒಳಗಾದ ಸಮುದಾಯಕ್ಕೆ ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡುವ ಮಾರ್ಗದಲ್ಲಿ ಈ ಬಗೆಯ ಅಸಮಾನ ಹಂಚಿಕೆಯು ಅವರ ನಡುವೆ ದ್ವೇಷ-ಅಸೂಯೆ ಮೂಡಿಸಿದೆ. ಮೊದಲು ರಾಜಕೀಯ ಅಧಿಕಾರ ಹಂಚಿಕೆಯಿಂದ ವಂಚಿತರಾದ ಮಾದಿಗರ ಮುಖಂಡರು ಪ್ರತ್ಯೇಕತೆಯ ಬೀಜ ಹಾಕಿದರು. ರಾಜಕೀಯ ಸಮಸ್ಯೆಯಾಗಿ ಹುಟ್ಟಿಕೊಂಡ ಈ ಬೇಡಿಕೆ ಒಂದು ಸಾಮಾಜಿಕ ಸಮಸ್ಯೆಯಾಗಿ ಇಂದು ರೂಪುಗೊಂಡಿದೆ. ಈ ಬೇಡಿಕೆಯ ಹಿಂದೆ ಅಡಗಿರಬಹುದಾದ ಮೂಲ ಕಾರಣಗಳನ್ನು

ತಿಳಿಯದ ಹೊರತು ಈ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಿಲ್ಲ. ಈ ಸಂಬಂಧ ಪ್ರತ್ಯೇಕ ಮೀಸಲಾತಿಯ ಕುರಿತು ಚರ್ಚಿಸಲು ಯತ್ನಿಸಿದ್ದು ಮೊದಲು ಮೀಸಲಾತಿಯ ಹಿನ್ನೆಲೆಯನ್ನು ತಿಳಿಯಲಾಗುವುದು.

### ಮೀಸಲಾತಿಯ ಹಿನ್ನೆಲೆ

ಪ್ರತ್ಯೇಕ ಮೀಸಲಾತಿ ಹೋರಾಟವು ಮೂಲತಃ ರಾಜಕೀಯ ನೆಲೆಯಲ್ಲಿ ಹುಟ್ಟಿಕೊಂಡದ್ದು. ಈ ಹಿನ್ನೆಲೆಯಲ್ಲಿ ಭಾರತದಲ್ಲಿ ವಾಸಿಸುತ್ತಿರುವ ಜನವರ್ಗಗಳು ತಮ್ಮ ರಾಜಕೀಯ ಹಕ್ಕುಗಳಿಗಾಗಿ ನಡೆಸಿದ ಹೋರಾಟದ ಪರಿಣಾಮವೇ ಈ ಮೀಸಲಾತಿ. ಮುಸ್ಲಿಂ ದಲಿತ ಹಾಗೂ ಹಿಂದುಳಿದ ಜನ ಸಮುದಾಯಗಳು ವಿವಿಧ ಕಾಲಘಟ್ಟಗಳಲ್ಲಿ ಎಚ್ಚೆತ್ತುಗೊಂಡು ತಮ್ಮ ಜನಸಂಖ್ಯಾ ಪ್ರಮಾಣದಲ್ಲಿ ರಾಜಕೀಯ ಹಕ್ಕುಗಳನ್ನು (ಪ್ರಾತಿನಿಧ್ಯ) ಪಡೆಯಲು ನಡೆಸಿದ ಹೋರಾಟದ ಕೂಸು ಇದಾಗಿದೆ. ಈ ಕಾರಣದಿಂದಾಗಿ ಇದೊಂದು ಚಾರಿತ್ರಿಕ ಮಹತ್ವವನ್ನು ಪಡೆದುಕೊಂಡಿದೆ. ಇಂತಹ ಹೋರಾಟ ಭಾರತದಲ್ಲಿ ಬ್ರಿಟಿಷರ ಆಳ್ವಿಕೆಯ ಸಂದರ್ಭದಲ್ಲಿ ಆರಂಭಗೊಂಡಿತು. ಮೊದಲು ಈ ಹೋರಾಟವನ್ನು ಕೈಗೊಂಡ ಸಮುದಾಯ ಮುಸ್ಲಿಂ ಸಮಾಜವಾಗಿದೆ. ೨೦ನೇ ಶತಮಾನದ ಮೊದಲ ದಶಕದಲ್ಲಿ ಭಾರತದ ಮಹಮದೀಯರು ಶಾಸನ ಸಭೆಗಳಲ್ಲಿ ತಮಗೆ ಸೂಕ್ತವಾದ ಪ್ರಾತಿನಿಧ್ಯವನ್ನು ಪ್ರತ್ಯೇಕ ಚುನಾವಣೆಗಳ ಮಾಲಕ ದೊರಕಿಸಿಕೊಡಬೇಕೆಂದು ಒತ್ತಾಯಿಸಲು ಆರಂಭಿಸಿದರು.[೫೨] ಆ ಮೂಲಕ ಮುಸ್ಲಿಂ ಸಮುದಾಯದ ಪ್ರತಿನಿಧಿಗಳನ್ನು ತಾವೇ ಆರಿಸಿಕೊಳ್ಳಲು ಅವಕಾಶ ಮಾಡಿಕೊಡಬೇಕೆಂಬ ಬೇಡಿಕೆಯನ್ನು ಮುಂದಿಟ್ಟರು. ಭಾರತದಲ್ಲಿ ವಾಸಿಸುವ ಜನಸಂಖ್ಯೆಯನ್ನು ತಿಳಿಯಲು ಬ್ರಿಟಿಷರು ೧೮೭೨ರಲ್ಲಿ ಜನಗಣತಿ ಮಾಡಲು ಆರಂಭಿಸಿದರು. ಮೊದಲ ವರ್ಷದ ಜನಗಣತಿ ಆರಂಭವಾಯಿತಾದರೂ ವಿವಿಧ ಜಾತಿವಾರು ಜನಗಣತಿ ನಡೆಯಲಿಲ್ಲ. ಒಟ್ಟಾರೆ ಜನಸಂಖ್ಯೆಯನ್ನು ತಿಳಿಯುವಲ್ಲಿ ಮಾತ್ರವೇ ಸೀಮಿತವಾಗಿತ್ತು. ಆದರೆ ನಂತರದಲ್ಲಿ ನಡೆದ ಜನಗಣತಿಯಲ್ಲಿ ಮೊಟ್ಟಮೊದಲ ಬಾರಿಗೆ ವಿವಿಧ ಜಾತಿಯ ಜನಸಂಖ್ಯೆಯನ್ನು ತಿಳಿಯಲು ಸಾಧ್ಯವಾಗಿದೆ. ಅಸ್ಪಶ್ಯರ ಸಂಖ್ಯೆ ಹೆಚ್ಚಿರುವುದನ್ನು ಗಮನಿಸಿದ ಮಾರ್ಲೈಮಿಂಟೋ ಸಮಿತಿಯು ತನ್ನ ವರದಿಯಲ್ಲಿ ಅಸ್ಪೃಶ್ಯರಿಗೆ ಚುನಾವಣೆಯಲ್ಲಿ ಸೂಕ್ತ ಪ್ರಾತಿನಿದ್ಯ ದೊರೆಯದಿದ್ದರೆ ನಾಮಕರಣದಿಂದಲಾದರೂ ದೊರಕಿಸಿಕೊಡಬೇಕು[೫೩]ಎಂದು ತಿಳಿಸಿದೆ. ಜೊತೆಗೆ "ಮಾಂಟೆಗೋ ಚೆಲ್ಮ್ಸ್‌ಫರ್ಡ್ ವರದಿಯ ಕತೃಗಳು ಅಸ್ಪೃಶ್ಯರ ಸಮಸ್ಯೆಯನ್ನು ಸ್ಪಷ್ಟವಾಗಿ ಗುರುತಿಸಿದ್ದು ಶಾಸನ ಸಭೆಗಳಲ್ಲಿ ಅವರ ಪ್ರಾತಿನಿಧ್ಯಕ್ಕೆ ಸೂಕ್ತ ವ್ಯವಸ್ಥೆ ಮಾಡುತ್ತೇವೆಂದು ಪಣತೊಟ್ಟರು.[೫೪] ಹೀಗೆ ೧೯೧೧ರ ನಂತರದಲ್ಲಿ ಅಸ್ಪೃಶ್ಯರ ಸಂಖ್ಯೆ ತಿಳಿಯಲು ಹಾಗೂ ಅವರಿಗೆ ಪ್ರಾತಿನಿಧ್ಯ ಇರಬೇಕೆನ್ನುವುದರ ಬಗ್ಗೆ ಸರ್ಕಾರದಿಂದ ನೇಮಕಗೊಂಡ ಅನೇಕ ಸಮಿತಿಗಳು ಈ ವಿಚಾರ ಪ್ರಸ್ತಾಪ ಮಾಡಿವೆ. ಆದರೂ ಅವರಿಗೆ ಸೂಕ್ತ ಪ್ರಾತಿನಿಧ್ಯ ದೊರೆಯಲು ಸಾಧ್ಯವಾಗಲಿಲ್ಲ. ಜೊತೆಗೆ ಅಸ್ಪೃಶ್ಯರ ರಾಜಕೀಯ ಪ್ರಾತಿನಿಧ್ಯವನ್ನು ಇತರೆ ವರ್ಗದ ಜನರು ಸಹ ಬೆಂಬಲಿಸಲಿಲ್ಲ.

ಅಸ್ಪೃಶ್ಯರ ರಾಜಕೀಯ ಹಕ್ಕುಗಳ ಕುರಿತು ಚರ್ಚೆಗೆ ಮಹತ್ವ ದೊರಕಿದ್ದುದು ದುಂಡು ಮೇಜಿನ ಸಭೆಯಲ್ಲಿ. ಈಗಾಗಲೇ ನಡೆಸಿರುವ ಜನಗಣತಿಯ ಹಿನ್ನೆಲೆಯಲ್ಲಿ ಅಸ್ಪೃಶ್ಯರ ಸಂಖ್ಯೆ ಸುಮಾರು ಐವತ್ತು ದಶಲಕ್ಷವೆಂದು ಅಂದಾಜು ಮಾಡಿರುವುದು ಸ್ಪಷ್ಟವಾಗುತ್ತದೆ. ಇದು ಅಸ್ಪೃಶ್ಯರ ಜನಸಂಖ್ಯೆ ಎಂಬುದನ್ನು ೧೯೧೧ರ ಜನಗಣತಿಯ ನಿರ್ದೇಶಕರು ಕಂಡು ಹಿಡಿದು ೧೯೨೧ರ ಜನಗಣತಿ ನಿರ್ದೇಶಕರು ಮತ್ತು ೧೯೩೧ರ ಸೈಮನ್ ಕಮಿಷನಿಂದ ದೃಢಪಡಿಸಲಾಗಿದೆ.[೫೫] ಆದರೆ ಇದೇ ಸಂಖ್ಯೆಯನ್ನು ಈ ಮೊದಲು ಒಪ್ಪಿಕೊಂಡಿದ್ದ ಹಿಂದೂಗಳು ದುಂಡು ಮೇಜಿನ ಸಭೆಯು ನಡೆಯುವ ಸಂದರ್ಭದಲ್ಲಿ ನಿರಾಕರಿಸಿದರು. ಇವರ ಸಂಖ್ಯೆಯನ್ನು ತಿಳಿಯಲು ಬ್ರಿಟಿಷರು ವಿವಿಧ ಪ್ರಾಂತೀಯ ಸರ್ಕಾರದಿಂದ ಹಾಗು ಭಾರತೀಯ ನಾಗರಿಕ ಸಮಿತಿಯ ಸದಸ್ಯರಿಂದ ಮಾಹಿತಿ ಸಂಗ್ರಹಿಸತೊಡಗಿದರು. ಇಂತಹ ಸಮಿತಿಯಲ್ಲಿ ಅಂಬೇಡ್ಕರೂ ಒಬ್ಬ ಸದಸ್ಯರಾಗಿದ್ದರು. ಆ ವೇಳೆಯಲ್ಲಿಯೇ ವಿವಿಧ ಭಾಗದ ನಾಗರಿಕ ಸಮಿತಿಯ ಸದಸ್ಯರು ಕೆಲವೊಂದು ಭಾಗಗಳಲ್ಲಿ ಅಸ್ಪೃಶ್ಯರೆ ಇಲ್ಲವೆಂದು. ಈಗಾಗಲೇ ಅಸ್ಪೃಶ್ಯರ ಸಂಖ್ಯೆ ಎಂದು ಪರಿಗಣಿಸಿರುವವರಲ್ಲಿ ಅಸ್ಪೃಶ್ಯೇತರರು ಇದ್ದರೆಂದು ತಿಳಿಸಿದರು. ಈ ಅಭಿಪ್ರಾಯದ ಬಗ್ಗೆ ಅಂಬೇಡ್ಕರರು ಕಟುವಾಗಿ ಉತ್ತರಿಸುತ್ತಾರೆ. ಅಲ್ಲದೆ ಅಸ್ಪೃಶ್ಯರಿಗೆ ಪ್ರತ್ಯೇಕವಾಗಿ ಪ್ರಾತಿನಿಧ್ಯ ನೀಡುವುದು ಬಹಳ ಮುಖ್ಯ ಎಂದು ಮನವರಿಕೆ ಮಾಡಿ ಸಮರ್ಥನೆ ಮಾಡಿಕೊಂಡ ಹಿನ್ನೆಲೆಯಲ್ಲಿ ಪ್ರತ್ಯೇಕತೆಯ ಇವರ ಒತ್ತಾಯವನ್ನು ಮನ್ನಿಸಿ ದುಂಡು ಮೇಜಿನ ಸಭೆಯಲ್ಲಿ ಅಸ್ಪೃಶ್ಯರಿಗೆ ಪ್ರತ್ಯೇಕವಾದ ಪ್ರಾತಿನಿಧ್ಯ ಕೊಡಲಾಯಿತು. ಅಸ್ಪೃಶ್ಯರ ಪ್ರತ್ಯೇಕ ಅಸ್ತಿತ್ವವನ್ನು ಮಾನ್ಯ ಮಾಡಿದುದು ಮಾತ್ರವಲ್ಲದೆ ಹೊಸ ಸಂವಿಧಾನದ ಪ್ರಕಾರ ಎಲ್ಲ ಶಾಸನಸಭೆಗಳಲ್ಲಿ ಅಸ್ಪೃಶ್ಯರ ಜನಸಂಖ್ಯೆಗೆ ಅನುಗುಣವಾಗಿ ಅವರ ಪ್ರಾತಿನಿಧ್ಯವಿರಬೇಕೆಂದು ದುಂಡು ಮೇಜು ಸಭೆಯ ಅಲ್ಪಸಂಖ್ಯಾತರ ಉಪಸಮಿತಿಯು ಒಪ್ಪಿಗೆ ಕೊಟ್ಟಿತು.[೫೬]

ಬ್ರಿಟಿಷ್ ಸರ್ಕಾರದಿಂದ ನೇಮಕವಾದ ಸಮಿತಿಗೆ ಲಾರ್ಡ್ ಲೂಥಿಯಾನ ಅಧ್ಯಕ್ಷರಾಗಿದ್ದರು. ಈ ಸಮಿತಿಯು ಭಾರತದಾದ್ಯಂತ ಪ್ರವಾಸ ಕೈಗೊಂಡು ಎಲ್ಲ ವರ್ಗದವರನ್ನು ಭೇಟಿ ಮಾಡಿ ಮಾಹಿತಿ ಸಂಗ್ರಹಿಸತೊಡಗಿತು. ಆಗ ಭಾರತೀಯ ನಾಗರಿಕ ಸಮಿತಿಯ ಸದಸ್ಯರಾಗಿದ್ದ ಅಂಬೇಡ್ಕರರು ಅಸ್ಪೃಶ್ಯರಿಗೆ ಪ್ರತ್ಯೇಕ ಚುನುವಾಣಾ ಕ್ಷೇತ್ರದ ಬೇಡಿಕೆಯನ್ನು ಬ್ರಿಟಿಷ್ ಸರ್ಕಾರದ ಮುಂದಿಟ್ಟರು. "ಅಸ್ಪೃಶ್ಯರು ತಮ್ಮ ಪ್ರತಿನಿಧಿಗಳನ್ನು ಪ್ರತ್ಯೇಕ ಚುನಾಯಿತ ಸಮುದಾಯದ ಮೂಲಕ ಆರಿಸಲು ಒತ್ತಾಯಿಸುತ್ತಿದ್ದಾರೆ. ಚುನಾಯಿತ ಸಮುದಾಯವೆಂದರೆ ಶಾಸನ ಸಭೆಗೆ ಅಸ್ಪೃಶ್ಯನೊಬ್ಬನನ್ನು ಆರಿಸಲು ಕೇವಲ ಅಸ್ಪೃಶ್ಯ ಮತದಾರರನ್ನು ಹೊಂದಿರುವ ಚುನಾಯಿತ ಸಮುದಾಯ ಎಂದರ್ಥ"[೫೭] ಇದರರ್ಥ ಸಾಮಾನ್ಯ ಕ್ಷೇತ್ರದಿಂದ ಆರಿಸಿಬರುವಂತಹ ಅಸ್ಪೃಶ್ಯರ ಪ್ರತಿನಿಧಿ ಎನಿಸಿಕೊಂಡವನು. ಅಲ್ಲಿ ಮೇಲ್ಜಾತಿಯ ಜನರ ಮತಗಳನ್ನು ಪಡೆಯುವ ಕಾರಣದಿಂದಾಗಿ ಕೇವಲ ಅಸ್ಪೃಶ್ಯರ ಹಿತಾಸಕ್ತಿಗಳಿಗೆ ಸ್ಪಂದಿಸಲು ಸಾಧ್ಯವಾಗಲಾರದು. ಆದರೆ ಪ್ರತ್ಯೇಕ ಚುನಾಯಿತ ವ್ಯವಸ್ಥೆಯಲ್ಲಿ ಅಸ್ಪೃಶ್ಯರನ್ನು

ಆಯ್ಕೆಮಾಡುವ ಅವಕಾಶ ಇರುವುದರಿಂದ ಚುನಾಯಿತ ವ್ಯಕ್ತಿ ಅಸ್ಪೃಶ್ಯರ ಹಿತಸಕ್ತಿಯನ್ನು ಕಾಪಾಡುತ್ತಾನೆಂಬ ಕಾರಣದಿಂದ ಬೇಡಿಕೆಯನ್ನು ಪ್ರಬಲವಾಗಿ ಸಮರ್ಥಿಸಿದರು. ಆದರೆ ಈ ಬೇಡಿಕೆಯನ್ನು ವಿರೋಧಿಸಿದ ಗಾಂಧಿಯವರು ೧೯೩೨ ಮಾರ್ಚ್ ೧೧ರಂದು ಸರ್ ಸಾಮ್ಯುಲ್ ಹೊರೆರರಿಗೆ ಬರೆದ ಪತ್ರದಲ್ಲಿ ದಲಿತ ವರ್ಗಗಳಿಗೆ ಪ್ರತ್ಯೇಕ ಮತದಾನವನ್ನೇನಾದರೂ ಕಲ್ಪಿಸಿದಲ್ಲಿ ನಾನು ಅಮರಣಾಂತ ಉಪವಾಸ ಮಾಡಬೇಕಾಗುತ್ತದೆ'' ಎಂದು ಎಚ್ಚರಿಕೆ ಕೊಟ್ಟರು.[೫೮] ಆದರೂ ಬ್ರಿಟಿಷ್ ಸರ್ಕಾರ ಅಸ್ಪೃಶ್ಯರ ನ್ಯಾಯಯುತವಾದ ಬೇಡಿಕೆಯನ್ನು ಪರಿಶೀಲಿಸಿ ತನ್ನ ಕೋಮು ತೀರ್ಪಿನಲ್ಲಿ ''ಪ್ರಾದೇಶಿಕ ವಿಧಾನ ಸಭೆಗಳಲ್ಲಿ ದಲಿತರಿಗೆ ಪ್ರತ್ಯೇಕ ಮತದಾನ ಮಾತ್ರವಲ್ಲದೆ ದಲಿತರ ಪ್ರತಿನಿಧಿ ಹಾಗೂ ಸಾಮಾನ್ಯ ಪ್ರತಿನಿಧಿ ಹೀಗೆ ಎರಡು ಓಟುಗಳ ಹಕ್ಕನ್ನು ದಲಿತರಿಗೆ ನೀಡಲಾಗಿತ್ತು. ಅಂದರೆ ಈ ಪ್ರತ್ಯೇಕ ಮತದಾನದ ಹಕ್ಕನ್ನು ಕೇವಲ ದಲಿತರಿಗೆ ಮಾತ್ರ ನೀಡಲಾಗಿರಲಿಲ್ಲ. ಬದಲಾಗಿ ಮುಸ್ಲಿಂ, ಸಿಖ್, ಯೂರೋಪಿಯನ್ ಮತ್ತು ಕ್ರಿಶ್ಚಿಯನ್‌ರಿಗೂ ಈ ಅವಕಾಶವನ್ನು ನೀಡಲಾಗಿತ್ತು''[೫೯] ಆದರೆ ಗಾಂಧಿಯವರು ದಲಿತರಿಗೆ ನೀಡಿದ ಪ್ರತ್ಯೇಕ ಮತದಾನದ ಹಕ್ಕುಗಳ ವಿರುದ್ಧ ಮಾತ್ರವೇ ಅಮರಣಾಂತ ಉಪವಾಸವನ್ನೂ ಕೈಗೊಂಡರು. ಅದರ ಪರಿಣಾಮವಾಗಿ ಅಂಬೇಡ್ಕರರು ಅನೇಕ ಕಡೆಗಳಲ್ಲಿ ಮೇಲ್ಜಾತಿಯ ಮುಖಂಡರಿಂದ ಅನೇಕ ಆರೋಪಗಳಿಗೆ ಗುರಿಯಾಗಬೇಕಾಯಿತು. ಹಾಗಿದ್ದೂ ಅವರು ಆರೋಪ ಮತ್ತು ಬೆದರಿಕೆಗಳಿಂದ ವಿಚಲಿತರಾಗಲಿಲ್ಲ.

ಕೊನೆಗೆ ಅನೇಕ ರಾಷ್ಟ್ರೀಯ ಮುಖಂಡರುಗಳ ಒತ್ತಾಯದಿಂದ ಅಂಬೇಡ್ಕರರು ಗಾಂಧೀಯವರ ಪ್ರಾಣದ ಮೇಲಿನ ಮಾನವೀಯತೆಯ ಕರುಣೆಯಿಂದ ಮಣಿದ ಅವರು ಗಾಂಧಿಯವರೊಂದಿಗೆ ಪೂನಾದಲ್ಲಿ ಒಪ್ಪಂದ ಮಾಡಿಕೊಂಡರು. ಅದು 'ಪೂನ ಒಪ್ಪಂದ'ವೆಂದು ಪ್ರಸಿದ್ಧಿ ಪಡೆಯಿತು. ಈ ಈ ಒಪ್ಪಂದದ ಪ್ರಕಾರ ದಲಿತರಿಗೆ ಒಟ್ಟು ಚುನಾಯಿತ ಪ್ರತಿನಿಧಿಯ ಸ್ಥಾನಗಳಲ್ಲಿ ಇಂತಿಷ್ಟು ಸ್ಥಾನಗಳನ್ನು ಮೀಸಲು ಇಡಬೇಕೆಂದು ನಿರ್ಧರಿಸಲಾಯಿತು. ಈ ರೀತಿಯಾಗಿ ಮೀಸಲಾತಿ ವ್ಯವಸ್ಥೆ ಜಾರಿಗೆ ಬಂದಿತು. ಅಲ್ಲಿಂದ ಆರಂಭಗೊಂಡ ಮೀಸಲಾತಿ ಇಂದಿಗೂ ಮುಂದುವರಿದಿರುವುದು ಕಂಡುಬರುತ್ತದೆ. ಅಸ್ಪೃಶ್ಯರ ರಾಜಕೀಯ ಹಕ್ಕುಗಳಿಗೆ ಸಂಬಂಧಿಸಿದಂತೆ 'ಪೂನಾ ಒಪ್ಪಂದ' ಚಾರಿತ್ರಿಕ ಮಹತ್ವ ಪಡೆದುಕೊಂಡಿದೆ.

**ಪ್ರತ್ಯೇಕ ಮೀಸಲಾತಿ ಹೋರಾಟದ ನೆಲೆ-ಹಿನ್ನೆಲೆ**

ಕರ್ನಾಟಕದಲ್ಲಿಮೀಸಲಾತಿ ವರ್ಗೀಕರಣ ಮಾಡಲು ನಡೆಸಿರುವ ಹೋರಾಟಕ್ಕೆ ಮೊದಲಿಲ್ಲ. ಪರಿಶಿಷ್ಟ ಜಾತಿಯ ಮೀಸಲಾತಿಯಲ್ಲಿ ಜನಸಂಖ್ಯಾವಾರು ವರ್ಗೀಕರಣ ಮೂಡಿರುವುದು ಬೇರೆ ರಾಜ್ಯಗಳಲ್ಲಿ ಕಂಡುಬರುತ್ತದೆ. ಆದರೆ ಈ ವರ್ಗೀಕರಣಕ್ಕೆ ಸಂಬಂಧಿಸಿದಂತೆ ಅಲ್ಲಿ ನಡೆದ ಹೋರಾಟ ಇಷ್ಟೊಂದು ಚರ್ಚೆಗೆ ಅವಕಾಶ ಮಾಡಿಕೊಟ್ಟಿರುವುದಿಲ್ಲ. 'ಪಂಜಾಬ್, ಹರಿಯಾಣ ರಾಜ್ಯಗಳ

ಮೀಸಲಾತಿ ವರ್ಗೀಕರಣಕ್ಕೆ ಯಾವ ಸಪ್ಪಳವಾಗಲಿಲ್ಲ. ನಿಶ್ಯಬ್ಧವಾಗಿ ಅನುಷ್ಠಾನವಾಗಿದೆ.[೬೦] ಪ್ರತ್ಯೇಕ ಮೀಸಲಾತಿ ಹೋರಾಟ ಸಾಮಾಜಿಕ ನ್ಯಾಯದ ಹೆಸರಲ್ಲಿ ನೀಡುತ್ತಿರುವ ಮೀಸಲಾತಿಯು ಜನಸಂಖ್ಯಾ ಪ್ರಮಾಣದಲ್ಲಿ ಹಂಚಿಕೆಯಾಗಬೇಕೆಂಬ ಬೇಡಿಕೆಯು ಸಂವಿಧಾನ ಬದ್ಧವಾದದ್ದಾಗಿದೆ. ಈ ಬೇಡಿಕೆಯನ್ನು ಈಡೇರಿಸುವಂತೆ ಸರ್ಕಾರಕ್ಕೆ ಒತ್ತಡ ತರುವ ನಿಟ್ಟಿನಲ್ಲಿ ಪ್ರತ್ಯೇಕ ಮೀಸಲಾತಿ ಹೋರಾಟ ಮೊದಲು ಆಂಧ್ರಪ್ರದೇಶದಲ್ಲಿ ಪ್ರಾರಂಭವಾಯಿತು. ಈ ಹೋರಾಟ ಕರ್ನಾಟಕದಲ್ಲಿ ಪ್ರವೇಶ ಮಾಡುವ ಮೊದಲು ಪಕ್ಕದ ರಾಜ್ಯವಾದ ಆಂಧ್ರದಲ್ಲಿ ಮಾದಿಗರು ಈ ಬೇಡಿಕೆ ಮುಂದಿಟ್ಟುಕೊಂಡು ಹೋರಾಡಿ ಯಶಸ್ಸು ಗಳಿಸಿದ್ದಾರೆ. ಪರಿಶಿಷ್ಟ ಜಾತಿಯ ಜನಸಂಖ್ಯೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಾದಿಗರು ಇರುವುದು ಅನೇಕ ದಾಖಲೆಗಳಿಂದ ತಿಳಿಯಬಹುದಾಗಿದೆ. ಇಲ್ಲಿ ಮಾದಿಗರು ಮಾತ್ರವಲ್ಲದೆ ಹೊಲೆಯ ಮುಂತಾದ ಸಂಬಂಧಿತ ಜಾತಿಗಳು ಅತ್ಯಂತ ಬಡತನದಲ್ಲಿ ಬದುಕುತ್ತಿದ್ದು, ಅಲ್ಲಿಯ ಭೂಮಾಲಿಕ ವರ್ಗವನ್ನು ಆಶ್ರಯಿಸಿ ಜೀವನ ಮಾಡುತ್ತಿದ್ದರು. ಇವರು ದಿನನಿತ್ಯವೂ ಮೇಲು ಜಾತಿಗಳ, ಭೂಮಾಲಿಕರ ಹಾಗೂ ಬಂಡವಾಳಶಾಹಿಗಳ ಜನರಿಂದ ವಿವಿಧ ಬಗೆಯಲ್ಲಿ ಶೋಷಣೆಗೆ ಒಳಗಾಗಿ, ಅವರು ದೈಹಿಕ ಹಾಗೂ ಮಾನಸಿಕವಾಗಿ ನರಳುತ್ತಿದ್ದರೂ ಇಂತಹ ಶೋಷಣೆಗಳಿಂದ ಬಿಡುಗಡೆಯನ್ನು ಬಯಸಿದ್ದರು. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಸಂವಿಧಾನವು ಮೀಸಲಾತಿಯ ಸೌಲಭ್ಯವನ್ನು ದೊರಕಿಸಿಕೊಟ್ಟ ಪರಿಣಾಮ ಇವರು ಶೈಕ್ಷಣಿಕ, ಆರ್ಥಿಕ ಹಾಗೂ ರಾಜಕೀಯವಾಗಿ ಮುಂದುವರಿಯಲು ಸಹಕಾರಿಯಾಯಿತು. ಇವುಗಳ ಪರಿಣಾಮವಾಗಿ ಅವರಲ್ಲಿ ತಮ್ಮ ಹಕ್ಕುಗಳನ್ನು ಪಡೆಯಲು ಹಾಗೂ ತಮ್ಮ ಮೇಲೆ ನಡೆಯುತ್ತಿದ್ದ ಶೋಷಣೆಯ ವಿರುದ್ಧ ಹೋರಾಡಿ ಸಂಘಟಿತರಾಗಲು ಸಾಧ್ಯವಾಯಿತು.

ದಕ್ಷಿಣ ಭಾರತದ ವಿವಿಧ ರಾಜ್ಯಗಳಲ್ಲಿ ೭೦-೮೦ರ ದಶಕಗಳಲ್ಲಿ ಮಾದಿಗ-ಹೊಲೆಯರನ್ನೊಳಗೊಂಡಂತೆ ಅನೇಕ ನಿರ್ಲಕ್ಷಿತ ಜಾತಿಗಳು ಸೇರಿಕೊಂಡು ಸಂಘಟನೆಯನ್ನು ಕಟ್ಟತೊಡಗಿದವು. ಸುಮಾರು ಇದೇ ವೇಳೆಯಲ್ಲಿಯೇ ಆಂಧ್ರ ಪ್ರದೇಶದಲ್ಲಿ ಭೂಮಾಲಿಕ ಜಾತಿಗಳ ಶೋಷಣೆ ವಿರುದ್ಧ ಪ್ರತಿಭಟಿಸಲು ಮಾದಿಗ-ಮಾಲಗಳು 'ದಲಿತ ಮಹಾಸಭಾ' ರಚಿಸಿದರು. ಕಾರಂಚೇಡು ಕಗ್ಗೊಲೆಯನ್ನು ತೀವ್ರವಾಗಿ ವಿರೋಧಿಸಿದರು. ಮಾದಿಗರ ಈ ಕಗ್ಗೊಲೆಗೆ ಮಾಲಗಳು ಸ್ಪಂದಿಸಿ, ಮಾದಿಗರ ನೋವನ್ನು ತಮ್ಮದಾಗಿಸಿಕೊಂಡರು ಹಾಗೆಯೇ ಮಾಲಗಳ ನೋವು. ಅವಮಾನಕ್ಕೆ ಮಾದಿಗರು ಮಿಡಿದರು[೬೧] ಈ ರೀತಿಯಾಗಿ ಮಾದಿಗ-ಹೊಲೆಯರು ಜೊತೆಯಾಗಿ 'ದಲಿತ ಮಹಾಸಭಾ' ಮಾತ್ರವಲ್ಲದೆ 'ನಕ್ಸಲ್ ಬಾರಿ' ಚಳವಳಿಯಲ್ಲಿಯೂ ಅನೇಕರು ಭಾಗವಹಿಸಿದ್ದಾರೆ. ಮಾದಿಗ-ಹೊಲೆಯರಾದಿಯಾಗಿ ಭೂರಹಿತ ಜನವರ್ಗ ಇತರೆ ಹೋರಾಟ ಕೈಗೊಂಡು ವಿವಿಧ ಬಗೆಯ ಶೋಷಣೆಗಳಿಂದ ವಿಮೋಚನೆ ಹೊಂದಲು ಒಟ್ಟಾಗಿ ನಡೆದರು. ಹೀಗಿರುವಾಗ ಅಂಬೇಡ್ಕರ ಮುಂತಾದ ಚಿಂತಕರ ಸಿದ್ಧಾಂತಗಳ ತಳಹದಿಯ

ಮೇಲೆ ರೂಪುಗೊಂಡಿದ್ದ ಬಹುಜನ ಸಮಾಜ ಪಕ್ಷ ಮಾದಿಗ ಜನಾಂಗಕ್ಕೆ ಸೇರಿದ ಕಾನ್ಸಿರಾಂ ನೇತೃತ್ವದಲ್ಲಿ ರಾಷ್ಟ್ರೀಯ ಪಕ್ಷವಾಗಿ ಹೊರಹೊಮ್ಮಿದಾಗ ಅದನ್ನು ಗಮನಿಸಿದರು. ಕೇವಲ ಉತ್ತರ ಭಾರತಕ್ಕಷ್ಟೆ ಸೀಮಿತಗೊಂಡಿದ್ದ ಈ ಪಕ್ಷವನ್ನು ದಕ್ಷಿಣ ಭಾರತದ ರಾಜ್ಯಗಳಿಗೂ ವಿಸ್ತರಿಸಲು ಮುಂದಾದಾಗ ಆಂಧ್ರ-ಕರ್ನಾಟಕ ಮುಂತಾದ ರಾಜ್ಯಗಳ ಮಾದಿಗ-ಹೊಲೆಯ ಸಂಬಂಧಿತ ಜಾತಿಗಳು ಸ್ಪಂದಿಸಿದವು. ಈ ನಿಟ್ಟಿನಲ್ಲಿ ಆಂಧ್ರ ಪ್ರದೇಶದಲ್ಲಿ ಈಗಾಗಲೇ ಸಂಘಟಿತರಾಗಿದ್ದ ಇವರು ಈ ರಾಜಕೀಯ ಪಕ್ಷವನ್ನು ಕಟ್ಟುವ ಹೊಣೆಗಾರಿಕೆ ಹೊತ್ತುಕೊಳ್ಳಲು ಸಜ್ಜಾದರು. ಆಗ ದಕ್ಷಿಣ ಭಾರತದಲ್ಲಿ ಆಂಧ್ರ ಪ್ರದೇಶ ಬಿ.ಎಸ್.ಪಿಯ ಕೇಂದ್ರವಾಯಿತು. ಬಹುಜನ ರಾಜಕೀಯ ಸಮಾವೇಶಗಳಿಗೆ ೫ ಲಕ್ಷಕ್ಕೂ ಅಧಿಕ ಜನರು ಇರುತ್ತಿದ್ದರು.[೬೨] ಹೀಗೆ ಮಾದಿಗ-ಹೊಲೆಯ ಸಂಬಂಧಿತ ಜಾತಿಗಳು ಸಂಘಟಿತರಾಗಿ ರಾಜಕೀಯ ಪಕ್ಷವನ್ನು ಬೆಳೆಸಲು ಮುಂದಾದದ್ದು ಆಡಳಿತ ಪಕ್ಷ ಹಾಗೂ ಇತರೆ ಪಕ್ಷಗಳಲ್ಲಿ ನಡುಕವನ್ನುಂಟು ಮಾಡಿತು. ಮಾದಿಗ-ಹೊಲೆಯರ ನಡುವಿನ ಐಕ್ಯತೆ ಒಡೆಯುವ ತಂತ್ರಗಳನ್ನು ಪ್ರಯೋಗಿಸಲು ಪ್ರಾರಂಭಿಸಿದರು. ಆಗ ವಿವಿಧ ಪಕ್ಷಗಳಲ್ಲಿರುವ ಈ ಎರಡು ಜನಾಂಗದ ನಾಯಕರನ್ನು ಬಳಸಿಕೊಂಡು ಐಕ್ಯತೆ ಒಡೆಯಲು ಕಾರ್ಯಕ್ರಮಗಳನ್ನು ರೂಪಿಸಿದರು. ಅಂತಹ ಪ್ರಯೋಗಗಳ ತಂತ್ರದ ಫಲವಾಗಿ ಅವರ ನಡುವೆ ಬಿರುಕು ಉಂಟಾಯಿತು.

ಆಳುವಂತಹ ಸರ್ಕಾರ ತನ್ನ ಆಡಳಿತದ ಸಂದರ್ಭದಲ್ಲಿ ಆದೂ ಜಾತಿಯ ಜನಸಂಖ್ಯಾ ಪ್ರಮಾಣವನ್ನು ಗಮನಿಸಿ ಅಧಿಕಾರ ಹಂಚಿಕೆ ಮಾಡದೆ ಕೇವಲ ಅದರಲ್ಲಿಯೇ ಒಂದೆ ಜಾತಿಗೆ ಹೆಚ್ಚು ಅವಕಾಶಗಳನ್ನು ಕೊಡುವುದರ ಮೂಲಕ ಹೆಚ್ಚಿನ ಜನಸಂಖ್ಯೆ ಹೊಂದಿರುವ ಜಾತಿಯನ್ನು ತಿರಸ್ಕರಿಸಿತು. ಇದರಿಂದ ಅತೃಪ್ತಗೊಂಡ ರಾಜಕಾರಿಣಿಗಳು ಈ ಕ್ರಮವನ್ನು ವಿರೋಧಿಸತೊಡಗಿದರು. ಸಾಮಾಜಿಕ ನ್ಯಾಯದ ಮಾದಿಗರಿಗೆ ಹೆಸರಲ್ಲಿ ನೀಡುತ್ತಿರುವ ಮೀಸಲಾತಿ ಜನಸಂಖ್ಯಾ ಪ್ರಮಾಣದಲ್ಲಿ ಸಿಗದೆ ಹೋದರೆ ಶೈಕ್ಷಣಿಕ, ಆರ್ಥಿಕ ಹಾಗೂ ರಾಜಕೀಯ ಪ್ರಗತಿ ಸಾಧಿಸಲಾಗುವುದಿಲ್ಲವೆಂದು ತಿಳಿದು ಮಾದಿಗರು ಪ್ರತ್ಯೇಕ ಮೀಸಲಾತಿ ಬೇಡಿಕೆಯನ್ನು ಮುಂದಿಡಲು ಅವಕಾಶಮಾಡಿತು. ಈ ಬೇಡಿಕೆಗೆ ರಾಜ್ಯದಾದ್ಯಂತ ಉತ್ತಮ ಪ್ರತಿಕ್ರಿಯೆ ದೊರೆತು ಮಾದಿಗರು 'ಮಾದಿಗ ದಿಂಡೋರ' ಹೆಸರಿನಲ್ಲಿ ಸಂಘಟನೆಯನ್ನು ಕ್ರಿಯಾಶೀಲಗೊಳಿಸಿದರು. ಮೀಸಲಾತಿಯಲ್ಲಿ ಆಗಿರುವ ಅನ್ಯಾಯವನ್ನು ಎತ್ತಿ ಒಡಿಯುಲು ಅನೇಕ ಅಂಶಗಳನ್ನು ಮಾದಿಗರು ಮುಂದಿಡುತ್ತಲೆ ಸಂಘಟನೆಯನ್ನು ಶಕ್ತಿಯುತವಾಗಿ ಕಟ್ಟಲು ತೊಡಗಿದರು. ರಾಜ್ಯದ ಎಲ್ಲ ಜಿಲ್ಲಾ ಕೇಂದ್ರಗಳಲ್ಲೂ ಸಂಘಟನೆ ಚುರುಕುಗೊಂಡು ಪರಿಶಿಷ್ಟ ಜಾತಿಗೆ ನೀಡುತ್ತಿರುವ ಮೀಸಲಾತಿಯಲ್ಲಿ ಮಾದಿಗರ ಜನಸಂಖ್ಯೆಗೆ ಅನುಗುಣವಾಗಿ ಪ್ರತ್ಯೇಕ ಮೀಸಲಾತಿ ನೀಡುವಂತೆ ಸರ್ಕಾರ ಒತ್ತಾಯಿಸುವ ಹೋರಾಟವನ್ನು ತೀವ್ರಗೊಳಿಸಿದರು. ಇಂತಹ ಸಂಘಟನೆಯ ನೇತೃತ್ವವನ್ನು ಡೈನಾಮಿಕ್ ಗುಣ ಹೊಂದಿರುವ ಮಂದಕೃಷ್ಣ ಮಾದಿಗರು

ವಹಿಸಿಕೊಂಡಿದ್ದರು. ಮಂದಕೃಷ್ಣ ಮಾದಿಗರ ಪ್ರಥಮ ಜಾಥವು ಚಂದ್ರಬಾಬು ನಾಯ್ಡುರ ಹಳ್ಳಿಯಿಂದ ಆರಂಭವಾಯಿತು.[೬೩] ಅಲ್ಲಿಂದ ಆರಂಭಗೊಂಡ ಹೋರಾಟ ವಿವಿಧ ಕ್ರಮಗಳನ್ನು ಅನುಸರಿಸಿ ರಾಜ್ಯದಾದ್ಯಂತ ಎಲ್ಲ ಪ್ರದೇಶಗಳಿಂದಲೂ ಸರ್ಕಾರದ ಮೇಲೆ ಒತ್ತಡ ಹೇರಲು ಧರಣಿ, ಉಪವಾಸ ಸತ್ಯಾಗ್ರಹ, ವಿಚಾರಸಂಕಿರಣ, ಸಮಾವೇಶ, ಮುಂತಾದವುಗಳಲ್ಲಿ ಸಂಘಟನೆ ಕೈಗೊಂಡಿತು. ಈ ರೀತಿ ಮಾದಿಗರನ್ನು ಸಂಘಟಿಸಿ ಹೋರಾಟ ಮಾಡುತ್ತಾ ಈಗಿರುವ ಮೀಸಲಾತಿ ವ್ಯವಸ್ಥೆಯಲ್ಲಿ ಜನಸಂಖ್ಯಾ ಪ್ರಮಾಣದಲ್ಲಿ ಸರ್ಕಾರದ ಸೌಲಭ್ಯಗಳನ್ನು ಪಡೆದು ಶೈಕ್ಷಣಿಕ, ಆರ್ಥಿಕ ಹಾಗೂ ರಾಜಕೀಯವಾಗಿ ಮುಂದೆ ಬರಲು ಸಾಧ್ಯವಾಗುತ್ತಿಲ್ಲ ಇದರಿಂದಾಗಿ ಪರಿಶಿಷ್ಟ ಜಾತಿಯಲ್ಲಿಯೇ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿರುವ ಮಾದಿಗರಿಗೆ ಅನ್ಯಾಯವಾಗುತ್ತಿದೆ. ಅದರ ಹೆಚ್ಚು ಪ್ರತಿಫಲ ಕಡಿಮೆ ಸಂಖ್ಯೆಯಲ್ಲಿರುವ ಮಾಲಗಳಿಗೆ ಹೋಗುತ್ತಿದೆ ಎಂದು ಆರೋಪಿಸ ತೊಡಗಿದರು. ಇಂತಹ ಅಸಮತೋಲನ ಹಂಚಿಕೆ ತಡೆಗಟ್ಟಿ ಜನಸಂಖ್ಯಾವಾರು ಮೀಸಲಾತಿಯನ್ನು ಹಂಚಬೇಕೆಂದು ಸರ್ಕಾರದ ಮೇಲೆ ಒತ್ತಡ ಹೇರತೊಡಗಿದರು. ಅದರ ಪರಿಣಾಮವಾಗಿ ಸಂಘಟನೆಯ ಒತ್ತಡಕ್ಕೆ ಮಣಿದ ಸರ್ಕಾರ ನಿವೃತ್ತ ನ್ಯಾಯಾಧೀಶರಾದ ಪಿ.ರಾಮಚಂದ್ರರಾಜು ಅಧ್ಯಕ್ಷತೆಯಲ್ಲಿ ಒಂದು ಆಯೋಗ ರಚನೆಯಾಯಿತು. ದಿ:೧೦-೯-೯೬ರಂದು ರಚನೆ ಆದ ಆಯೋಗವು ಸತತ ೮ ತಿಂಗಳು ಅವಿಶ್ರಾಂತವಾಗಿ ಮಾಹಿತಿ ಕಲೆಹಾಕಿತು ನಂತರ ಅದು ದಿ:೨೮.೫.೧೯೯೭ರಂದು ಆಯೋಗದ ವರದಿಯನ್ನು ಸರ್ಕಾರಕ್ಕೆ[೬೪] ನೀಡಿತು.

ಆ ವರದಿಯ ಮೀಸಲಾತಿಯ ಹಂಚಿಕೆಯ ಸಂದರ್ಭದಲ್ಲಿ ಮಾದಿಗರಿಗೆ ಅನ್ಯಾಯವಾಗಿರುವುದನ್ನು ಅನೇಕ ಅಂಕಿಅಂಶಗಳನ್ನು ನೀಡುವುದರ ಮೂಲಕ ಸ್ಪಷ್ಟಪಡಿಸಿತು. ಈ ಅಸಮಾನ ಹಂಚಿಕೆ ಸರಿಪಡಿಸಲು ಜನಸಂಖ್ಯೆವಾರು ಮೀಸಲಾತಿಯನ್ನು ವರ್ಗೀಕರಿಸಲು ಶಿಫಾರಸ್ಸು ಮಾಡಿತು. ಮಾಲರಿಗೆ ಹೊಲಿಸಿದರೆ ಮಾದಿಗರು ಎಲ್ಲ ಕ್ಷೇತ್ರಗಳಲ್ಲಿಯೂ ಹಿಂದೆ ಬಿದ್ದಿದ್ದಾರೆಂಬುದನ್ನು ರಾಮಚಂದ್ರ ಆಯೋಗ ದೃಢಪಡಿಸುತ್ತದೆ. ೧೯೯೧ರ ಜನಗಣತಿ ವರದಿ ಪ್ರಕಾರ ಆಂಧ್ರದಲ್ಲಿರುವ ಪರಿಶಿಷ್ಟ ಜಾತಿಗಳ ಒಟ್ಟು ಸಂಖ್ಯೆ ೫೯. ಇವರಲ್ಲಿ ಮಾದಿಗರಲ್ಲಿ ೧೮ ಉಪಜಾತಿಗಳಿವೆ. ಇವರ ಒಟ್ಟು ಸಂಖ್ಯೆ ೩೭ ಲಕ್ಷ. ಸಾಕ್ಷರತೆ ಪ್ರಮಾಣ ಶೇ ೧೧.೮೧ ಮಾಲರು ೨೮ ಉಪಜಾತಿಗಳಲ್ಲಿ ಹಂಚಿಹೋಗಿದ್ದು ಇವರ ಸಂಖ್ಯೆ ೩೨ಲಕ್ಷ. ಸಾಕ್ಷರತೆ ಪ್ರಮಾಣ ಶೇ ೨೧. ಸಮಾಜ ಕಲ್ಯಾಣ ಇಲಾಖೆ ನಡೆಸುವ ವಿದ್ಯಾರ್ಥಿನಿಲಯಗಳಲ್ಲಿ ೬೦ ಸಾವಿರ ಮಂದಿ ಮಾದಿಗರಿದ್ದಾರೆ. ಮಾಲರ ಸಂಖ್ಯೆ ೫೮ ಸಾವಿರ, ರೆಲ್ಲ ಗಳು ೬೭೫, ಆದಿ ಆಂಧ್ರರು ೧೫೦೦. ಉಳಿದ ೫೫ ಪರಿಶಿಷ್ಟ ಜಾತಿಗಳ ವಿದ್ಯಾರ್ಥಿಗಳ ಸಂಖ್ಯೆ ೨೬೦೦. ರಾಮಚಂದ್ರ ವರದಿ ತೋರಿಸಿಕೊಟ್ಟಂತೆ ಸರ್ಕಾರಿ ಉದ್ಯೋಗ ಮತ್ತು ಶಾಲಾ ಕಾಲೇಜುಗಳಿಗೆ ಸಂಬಂಧಿಸಿದ ಅವಕಾಶಗಳಲ್ಲಿ ಶೇಕಡ ೬೪ ಮಾಲರಿಗೆ ದಕ್ಕಿದ್ದರೆ, ೩೬ ಮಾತ್ರ ಮಾದಿಗರು[೬೫] ಪಡೆದಿರುವರು. ಈ ಆಯೋಗ ಕೆಲವೊಂದು ಶಿಪಾರಸ್ಸುಗಳನ್ನು ಮಾಡಿತು. ಮೇಲಿನ ಅಂಕಿ ಅಂಶಗಳ

ಹಿನ್ನೆಲೆಯಲ್ಲಿ ಮಾದಿಗರಿಗೆ ಅನ್ಯಾಯವಾಗಿರುವುದು ಸತ್ಯವಾಗಿದ್ದು ಪರಿಶಿಷ್ಟ ಜಾತಿಗಳನ್ನು ಎ.ಬಿ.ಸಿ ಮತ್ತು ಡಿ ಗುಂಪುಗಳಾಗಿ ವೈಚಾರಿಕ ನೆಲೆಯಲ್ಲಿ ವಿಂಗಡಿಸಲು ಸಂವಿಧಾನದಲ್ಲಿ ಯಾವ ಅಡಚಣೆಯಿಲ್ಲ. ಈ ವರ್ಗೀಕರಣ ಸಂವಿಧಾನ ಬದ್ಧ[೬೬] ಎಂದು ತಿಳಿಸಿತು. ಜೊತೆಗೆ ಮಾದಿಗರ ಪ್ರತ್ಯೇಕ ಮೀಸಲಾತಿ ಹೋರಾಟದ ರೂವಾರಿಯಾದ ಮಂದಾ ಕೃಷ್ಣಮಾದಿಗ ಅವರು ಪರಿಶಿಷ್ಟರಲ್ಲೆ ಬಹುಸಂಖ್ಯಾತರಾಗಿರುವ ಮಾದಿಗ ಜನಾಂಗಕ್ಕೆ ಪ್ರತ್ಯೇಕ ಮೀಸಲಾತಿ ನೀಡದಿದ್ದರೆ. ಭಾರತದ ೧೫ ಕೋಟಿ ಜನ ಪ್ರತ್ಯೇಕ ರಾಜಕೀಯ ಪಕ್ಷವನ್ನೇ ಕಟ್ಟಿಕೊಂಡು ಹೋರಾಟ ನಡೆಸಬೇಕಾಗುತ್ತದೆಯೆಂದು ಘೋಷಿಸಿದರು[೬೭] ಇದು ಸಹಜವಾಗಿಯೇ ಆಳುವ ಸರ್ಕಾರಗಳನ್ನೂ ಬೆಚ್ಚಿ ಬೀಳಿಸಿ ಇದರಿಂದ ಅವರ ಈ ಬೇಡಿಕೆಯನ್ನು ಈಡೇರಿಸಲು ಕ್ರಮ ಕೈಗೊಳ್ಳುವ ಕಡೆ ಆರೋಪಿಸಿದರು. ೧೯೯೭ ಮೇ ತಿಂಗಳಲ್ಲಿ ನೀಡಿದ ವರದಿಗೆ ಶಾಸನ ಸಭೆಯಲ್ಲಿ ಸರ್ವಪಕ್ಷಗಳು ಒಮ್ಮತದಿಂದ ಅನುಮೋದನೆ ನೀಡಿದವು.[೬೮] ಯಾವ ಪಕ್ಷ ಸಹ ಅವರ ಬೇಡಿಕೆಯನ್ನು ತಿರಸ್ಕರಿಸುವ ಮೂರ್ಖತನಕ್ಕೆ ಕೈ ಹಾಕಲಿಲ್ಲ. ಪ್ರತಿಯೊಂದು ಪಕ್ಷವು ಅವರ ಈ ಬೇಡಿಕೆಯನ್ನು ಬೆಂಬಲಿಸಿ ಅವರ ಬೆಂಬಲ ಪಡೆದುಕೊಳ್ಳಲು ಬಯಸಿದರು. ಈ ರೀತಿಯಾಗಿ ಮಾದಿಗರು ಪ್ರಬಲ ಸಂಘಟನಾ ಶಕ್ತಿಯ ಹೋರಾಟದಿಂದಾಗಿ ಯಶಸ್ಸು ಗಳಿಸಿಕೊಳ್ಳಲು ಸಾಧ್ಯವಾಯಿತು. ಪರಿಣಾಮವಾಗಿ ಆಂಧ್ರ ಪ್ರದೇಶದಲ್ಲಿ ಪ್ರತ್ಯೇಕ ಮೀಸಲಾತಿ ವ್ಯವಸ್ಥೆ ಜಾರಿಯಲ್ಲಿ ಬಂದಿತು.

ಪಿ.ರಾಮಚಂದ್ರ ರಾಜು ಆಯೋಗದ ಶಿಫಾರಸ್ಸಿನಂತೆ ಪ.ಜಾತಿಯ ಮೀಸಲಾತಿಯನ್ನು ABCD ಪ್ರಕಾರವಾಗಿ(ಜನಸಂಖ್ಯಾ ಪ್ರಮಾಣದಲ್ಲಿ) ವರ್ಗೀಕರಣ ಮಾಡಿ ಕೆಳಗಿನಂತೆ ಈ ವಿಂಗಡಿಸಲಾಗಿದೆ: ೧.ಬೆವೂರಿ ೨.ಕಬಾಟಿ ೩.ಚಂಡಾಲ ೪.ಡಾಂಡಸಿ ೫.ಡೋಮ, ಡೊಂಬರ, ಪೈದಿ, ಪನೊ ೬. ಗಸಿ, ಹದ್ದಿರೆಲ್ಲಿ, ಚಾಚಂಡಿ ೭.ಗೋಡಗರಿ ೮.ಮೆಹತರ್ ೯.ಪತಿ, ಮೋಟಿ, ತೋಟಿ ೧೦.ಪಮಿಡಿ ೧೧.ರೆಲ್ಲಿ ೧೨.ಸಪ್ರು ಜನಾಂಗಗಳನ್ನು 'ಎ' ವರ್ಗದಲ್ಲಿ ಸೇರಿಸಿ ಶೇ ೧ರಷ್ಟು ಮೀಸಲಾತಿಯನ್ನು ೧.ಅರುಂಧತಿಯಾ ೨.ಬೇಡಜಂಗಮ, ಬುಡ್ಗಜಂಗಮ ೩.ಬಿಂದಿಯಾ ೪.ಚಮ್ಮಾರ ಡೋಬಿ, ಮಲಾಚಿ ೫.ಚಂಬಾರ್ ೬.ಡಕ್ಕಲ್, ದಕ್ಕಲ್‌ವಾರ್ ೭.ಡೋರ್ ೮.ಗೋದರಿ ೯.ಜಗ್ಗಲಿ ೧೦.ಜಾಂಬವುಲು ೧೧.ಕೋಲುಪುಲ ವಂಡ್ಲು ೧೨. ಮಾದಿಗ ೧೩.ಮಾದಿಗದಾಸು ಮಸ್ತೀನ್ ೧೪. ಮಾಂಗ್ ೧೫. ಮಾಂಗ್ ಕೋಡಿ ೧೬.ಮಾತಂಗಿ ೧೭. ಸಮಗಾರ ೧೮ ಸಿಂಧೂಟು ಚಿಂದೂಲು ಎನ್ನುವ ಮಾದಿಗ ಸಂಬಂಧಿ ಜಾತಿಗಳನ್ನು 'ಬಿ' ವರ್ಗಕ್ಕೆ ಸೇರಿಸಿ ಶೇ ೭ರಷ್ಟು ಮೀಸಲಾತಿಯನ್ನು ೧.ಆದಿದ್ರಾವಿಡ ೨.ಅನಿಮುಕ್ ೩.ಆರ್ಯಮಾಲ ೪. ಆರ್ವಮಾಲ ೫. ಬರಿಕೆ ೬.ಬ್ಯಾಗಾರ ೭.ಛಲವಾದಿ ೮.ಇಲ್ಲಮಲಸಾರ್ ೯.ಗೋಸಂಗಿ ೧೦.ಹೊಲೆಯ ೧೧.ಹೊಲೆಯದಾಸರಿ ೧೨.ಮದಾಸಿಕುರುವ, ಮದಾರಿ ಕುರುವ ೧೯.ಮಾಲ ಮಸ್ತಿ ೨೦.ಮಾಲಸಾಲೆ, ನೆಟ್ ಕವಿ ೨೧.ಮಾಲಸನ್ಯಾಸಿ ೨೨.ಮನ್ನೆ ೨೩.ಮುಂಡಾಳ ೨೪.ಪಂಬಡ ಪಂಬಂಡ ೨೫. ಸಂಬನ್ ಎಂಬ ಹೊಲೆಯ ಸಂಬಂಧಿತ ಜಾತಿಗಳನ್ನು 'ಸಿ' ವರ್ಗಕ್ಕೆ ಸೇರಿಸಿ ಶೇ ೬ರಷ್ಟು ಮೀಸಲಾತಿ ನೀಡಲಾಗಿದೆ. ಕೊನೆಯಲ್ಲಿ ಕಡಿಮೆ ಸಂಖ್ಯೆಯುಳ್ಳ ಜಾತಿಗಳನ್ನು

ಒಟ್ಟಾಗಿಸಿ ಅವುಗಳನ್ನು 'ಡಿ' ವರ್ಗದಲ್ಲಿ ಸೇರಿಸಿ ಶೇ ೧ರಷ್ಟು ಮೀಸಲಾತಿಯನ್ನು ನೀಡಲಾಗಿದೆ. ಈ ರೀತಿ ಪ.ಜಾತಿಯಲ್ಲಿ ಕಂಡುಬರುವ ವಿವಿಧ ಜಾತಿಗಳನ್ನು ABCD ಎಂದು ವರ್ಗೀಕರಿಸಿ ಆಯಾ ವರ್ಗದ ಜನಸಂಖ್ಯಾ ಪ್ರಮಾಣದಲ್ಲಿ ಸಂವಿಧಾನಬದ್ಧವಾಗಿ ನೀಡುತ್ತಿರುವ ಶೇ ೧೫ ರ ಮೀಸಲಾತಿಯನ್ನು ವರ್ಗೀಕರಿಸಲಾಗಿದೆ.

ರಾಮಚಂದ್ರ ಆಯೋಗ ನೀಡಿದ ವರದಿಯನ್ನು ಸರ್ಕಾರ ಒಪ್ಪಿಕೊಂಡು ಅದರಂತೆ ಮೀಸಲಾತಿ ವರ್ಗೀಕರಿಸಲು ಸರ್ಕಾರ ಮುಂದಾದ ಕ್ರಮವನ್ನು ಅಲ್ಲಿಯ ಮಾಲಗಳು ವಿರೋಧಿಸತೊಡಗಿದರು. ಈ ಮೊದಲೆ 'ಮಾದಿಗ ದಿಂಡೋರ'ರ ಸಂಘಟನೆಯು ಆರಂಭಗೊಂಡ ನಂತರದ ಪ್ರತ್ಯೇಕ ಮೀಸಲಾತಿಗೆ ಒತ್ತಾಯಿಸುವ ಸಂದರ್ಭದಲ್ಲಿ ಮಾಲರೆ ಹೆಚ್ಚು ಅವಕಾಶಗಳನ್ನು ವಿರೋಧಿಸತೊಡಗಿದ್ದರು. ಆಯೋಗವು ಸತ್ಯಾಂಶಗಳನ್ನು ಎತ್ತಿ ಹಿಡಿದುದು ಅವರಿಗೆ ತಡೆಯಲಾಗಲಿಲ್ಲ. ಸತ್ಯಾಂಶಗಳ ಹಿನ್ನೆಲೆಯಲ್ಲಿ ಅನ್ಯಾಯವಾಗಿರುವುದನ್ನು ಒಪ್ಪಿಕೊಳ್ಳದೆ ಜನಸಂಖ್ಯಾ ಪ್ರಮಾಣದಲ್ಲಿ ಮೀಸಲಾತಿ ಹಂಚಿಕೆಯ ಕ್ರಮವನ್ನು ಔದಾರ್ಯದಿಂದ ಸ್ವಾಗತಿಸಲಿಲ್ಲ. ಇದು ಅವರಲ್ಲಿ 'ಮಾಲ ಮಹನಾಡು' ಸಂಘಟನೆಯನ್ನು ಸ್ಥಾಪಿಸಿಕೊಂಡು ಸರ್ಕಾರ ಮೀಸಲಾತಿಯ ವರ್ಗೀಕರಿಸಿದ ಕ್ರಮವನ್ನು ವಿರೋಧಿಸತೊಡಗಿದರು. ಸಾಮಾಜಿಕ ನ್ಯಾಯ ಕೇವಲ ತಮ್ಮ ಅಭಿವೃದ್ಧಿ ಮಾತ್ರ ಎಂಬಂತೆ ಆಲೋಚನೆ ಮಾಡಿದ ಇವರು ಉಳಿದ ಜಾತಿಗಳಿಗೂ ಅದು ದಕ್ಕುವಂತಾಗಬೇಕೆಂಬುದನ್ನು ಅರಿತು ಬೆಂಬಲಿಸದೆ ಈ ಬೇಡಿಕೆ ದಲಿತರ ನಡುವೆ ಬಿರುಕುಂಟು ಮಾಡುತ್ತದೆ ಎಂಬ ನಾಟಕೀಯತೆಯನ್ನು ಪ್ರದರ್ಶಿಸಿದರು. ರಾಜಕೀಯ ಲಾಭಕ್ಕಾಗಿ ತೆಲುಗು ದೇಶಂ ಪಕ್ಷ ಇಂಥ ಒಡೆದು ಆಳುವ ನೀತಿ ಅನುಸರಿಸಿದೆಯೆಂದು ದೂರಿದರು.[೧೯] ಹೀಗೆ ಒಂದು ಕಡೆ ಮಾದಿಗರು ಮೀಸಲಾತಿ ವರ್ಗೀಕರಿಸುದುದನ್ನು ಸ್ವಾಗತಿಸಿದರೆ ಮತ್ತೊಂದು ಕಡೆ ಮಾಲಗಳು ವಿರೋಧಿಸ ತೊಡಗಿದ್ದರು. ಇವೆರಡು ಜಾತಿಗಳಲ್ಲಿ ಪರಸ್ಪರ ಅಸೂಯೆ, ದ್ವೇಷವನ್ನುಂಟು ಮಾಡಿ ಮುಖಾಮುಖಿಯಾಗಿ ನಿಂತು ಸಂಘರ್ಷದ ಹಾದಿಯನ್ನು ತುಳಿಯುವಂತೆ ಮಾಡಿತು.

ಆಂಧ್ರ ಸರ್ಕಾರವು ಪ್ರತ್ಯೇಕ ಮೀಸಲಾತಿ ಬೇಡಿಕೆಯ ಬಗೆಗೆ ತಳೆದಿರುವ ನೀತಿಯನ್ನು ಖಂಡಿಸಿ ಅದರ ತೀರ್ಮಾನ ವಿರೋಧಿಸಿ ಅದರ ವಿರುದ್ಧ ಮಾಲರು ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಿದರು. ರಿಟ್ ಪುರಸ್ಕರಿಸಿದ ಹೈಕೋರ್ಟ್ ಮೀಸಲಾತಿ ವರ್ಗೀಕರಣ ಮಾಡುವ ಹಕ್ಕು ರಾಜ್ಯ ಸರ್ಕಾರಕ್ಕೆ ಇಲ್ಲವೆಂದು ತೀರ್ಪು ನೀಡಿತು[೨೦] ಅದೇ ರೀತಿಯಾಗಿ ಆಂಧ್ರ ಸರ್ಕಾರ ತನ್ನ ವಿಶೇಷ ಮೀಸಲಾತಿ ಆಜ್ಞೆಯ ಒಪ್ಪಿಗೆಗಾಗಿ ಕೇಂದ್ರ ಸರ್ಕಾರದ ಪರಿಶಿಷ್ಟ ಜಾತಿ ಆಯೋಗಕ್ಕೆ ಕಳುಹಿಸಿಕೊಟ್ಟಿತು. ಆಯೋಗವು ಈ ಆಜ್ಞೆಯನ್ನು ತಿರಸ್ಕರಿಸಿತು.[೨೧] ಹೀಗೆ ಮಾಲಗಳ ವಿರೋಧದಿಂದ ಹೈಕೋರ್ಟ್ ಮತ್ತು ಕೇಂದ್ರ ಸರ್ಕಾರದ ಪರಿಶಿಷ್ಟ ಜಾತಿ-ವರ್ಗದ ಆಯೋಗಗಳು ಮಾದಿಗರ ಪ್ರತ್ಯೇಕ ಮೀಸಲಾತಿ

ಬೇಡಿಕೆಯನ್ನು ತಿರಸ್ಕರಿಸಿದವು. ಆದರೂ ಚಂದ್ರಬಾಬು ನಾಯ್ಡು ನೇತೃತ್ವದ ಸರ್ಕಾರ ವಿಶೇಷ ಕಾಳಜಿ ವಹಿಸಿಕೊಂಡು ಮೀಸಲಾತಿಯನ್ನು ವರ್ಗೀಕರಿಸಲು ನಿರ್ಧರಿಸಿ ೧೯೯೯ರ ಅಕ್ಟೋಬರ್‌ನಲ್ಲಿ ಆಂಧ್ರಪ್ರದೇಶ ಸರ್ಕಾರದ ರಾಜ್ಯ ಸಚಿವ ಸಂಪುಟವು ಆಂಧ್ರಪ್ರದೇಶ ಪರಿಶಿಷ್ಟ ಜಾತಿಗಳ (ಮೀಸಲಾತಿ ಸುಧಾರಣೆ) ಸುಗ್ರಿವಾಜ್ಞೆ ೧೯೯೯ ಎಂಬ ಹೆಸರಿನ ಕಂಡು ಪ್ರತಿ ಒಪ್ಪಿಗೆಗಾಗಿ ರಾಜ್ಯಪಾಲರಿಗೆ ಕಳುಹಿಸಿತು. ರಾಜ್ಯಪಾಲರು ಸಂವಿಧಾನದ ೨೧೩ನೇ ವಿಧಿಯ ಒಂದನೆ ಪರಿಚ್ಛೇಧದ ಅನ್ವಯ ರಾಷ್ಟ್ರಪತಿಗಳ ಸಲಹೆ ಕೇಳಿದರು. ರಾಷ್ಟ್ರಪತಿಗಳು ಈಚೆಗೆ ತಮ್ಮ ಒಪ್ಪಿಗೆಯನ್ನು ಸೂಚಿಸಿದ್ದಾರೆ.[೨೨] ಲೆಟರ್ ನಂ.೮೬೩೮-ಎಸ್ ಡಬ್ಲ್ಯು-ಸಿವಿ-೧೯೯೮ ಆರ್ಡರ್ ನಂ.೧೪-೧೭-೯೮, ಜ್ಯೂಡಿ, ದಿನಾಂಕ: ೨೫-೧೧-೧೯೯೯ ಜಾರಿಗೆ ಬರುವಂತೆ ಮಾಡಿದೆ. ಈ ರೀತಿ ಪರಿಶಿಷ್ಟ ಜಾತಿಯ ಮೀಸಲಾತಿಯ ಹಂಚಿಕೆಯಲ್ಲಿ ಆಗುತ್ತಿದ್ದ ಅನ್ಯಾಯವನ್ನು ತಡೆಗಟ್ಟಿ ಆ ವರ್ಗದಲ್ಲಿ ಬರುವ ಜಾತಿಗಳಿಗೆ ಆಯಾ ಸಂಬಂಧಿತ ಜಾತಿಗಳ ಜನಸಂಖ್ಯಾ ಪ್ರಮಾಣದಲ್ಲಿ ಮೀಸಲಾತಿಯನ್ನು ವರ್ಗೀಕರಣಗೊಳಿಸುವಲ್ಲಿ ಸರ್ಕಾರ ಯಶಸ್ವಿಯಾಯಿತು. ಈ ಕ್ರಮದಿಂದ ಸಾಮಾಜಿಕ ನ್ಯಾಯದ ಹೆಸರಲ್ಲಿ ನೀಡುತ್ತಿದ್ದ ಸೌಲಭ್ಯಗಳನ್ನು ಜನಸಂಖ್ಯಾವಾರು ಪಡೆಯಲು ಸಹಕಾರಿಯಾಯಿತು. ಈ ರೀತಿ ಆಂಧ್ರ ಪ್ರದೇಶದ ಮಾದಿಗರು ಪ್ರತ್ಯೇಕ ಮೀಸಲಾತಿಗಾಗಿ ನಡೆಸಿದ ಹೋರಾಟ ಯಶಸ್ವಿಯಲ್ಲಿ ಮುಕ್ತಾಯವಾಯಿತು.

### ಪ್ರತ್ಯೇಕ ಮೀಸಲಾತಿ ಹೋರಾಟ ಮತ್ತು ಮಾದಿಗರ ಜಾತಿಸಂಘಟನೆಗಳು

ಆಂಧ್ರ ಮಾದರಿಯಲ್ಲಿ ಕರ್ನಾಟಕದ ಮಾದಿಗರು ಪ್ರತ್ಯೇಕ ಮೀಸಲಾತಿ ಹೋರಾಟವನ್ನು ಆರಂಭಿಸಿದ್ದು ೨೦ನೇ ಶತಮಾನದ ಕೊನೆಯ ದಶಕದಲ್ಲಿ ಎನ್ನಬಹುದು. ಆಂಧ್ರದಲ್ಲಿ ಮಾದಿಗರು 'ಪ್ರತ್ಯೇಕ ಮೀಸಲಾತಿ'ಗಾಗಿ ನಡೆಸುತ್ತಿರುವ ಹೋರಾಟವನ್ನು ಕಂಡಂಥ ಇಲ್ಲಿಯ ಮಾದಿಗರು ಅದರಿಂದ ಪ್ರೇರಣೆ ಹೊಂದಿ ಇಲ್ಲಿಯೂ ಅಂತಹ ಹೋರಾಟ ನಡೆಸಲು ಮುಂದಾಗಿ ಮಾದಿಗರನ್ನು ಸಂಘಟಿಸ ತೊಡಗಿದರು. ಆದರೆ ಮಾದಿಗರ ಸಂಘಟನೆ ಇದೇ ಮೊದಲಾಗಿರಲಿಲ್ಲ, ಈ ಹಿಂದೆ ಎಂ.ಪಿ.ಗುಂಡಪ್ಪ ಕೋರವರ ನೇತೃತ್ವದ ಕರ್ನಾಟಕ ಪ್ರದೇಶ ಮಾದಿಗರ ಸಂಘ, ಡಿ.ಮಂಜುನಾಥರ ನೇತೃತ್ವದ ಅಖಿಲ ಕರ್ನಾಟಕ ಆದಿಜಾಂಬವ ಸಂಘ, ಡಿ.ಜೋಗಣ್ಣನವರ ನೇತೃತ್ವದ ಜಾಂಬವ ಸಂಘಗಳಿದ್ದವು.[೨೩] ಇವುಗಳಲ್ಲದೆ ಪ್ರದೇಶವಾರು ವಿವಿಧ ಹೆಸರಲ್ಲಿ ಮಾದಿಗರು ಸಂಘಟಿತರಾಗಿದ್ದರು. ಇಂತಹ ಜಾತಿ ಸಂಘಟನೆಗಳಲ್ಲಿ ಮಾತ್ರವೇ ತೊಡಗಿಸಿಕೊಳ್ಳದೆ ಜಾತ್ಯಾತೀತ ಸಂಘಟನೆಯಲ್ಲಿಯೂ ಹೆಚ್ಚು ಪ್ರಮಾಣದಲ್ಲಿ ಮಾದಿಗರು ತೊಡಗಿಕೊಂಡಿರುವುದು ಕಂಡುಬರುತ್ತದೆ. ಅಂತಹ ಸಂಘಟನೆ ಎಂದರೆ ಅದು 'ದಲಿತ ಸಂಘರ್ಷ ಸಮಿತಿ' ಯಾಗಿದೆ. ಮಾದಿಗ ಜನಾಂಗದ ಪ್ರೊ.ಬಿ.ಕೃಷ್ಣಪ್ಪ ಅದರ ಸಂಸ್ಥಾಪಕರಾಗಿ ಸುಮಾರು ೧೦ ವರ್ಷಗಳ ಕಾಲ ನಾಯಕತ್ವವನ್ನು ಹೊಂದಿದ್ದರು. ಇವರು ಕೇವಲ ಮಾದಿಗರನ್ನು ಮಾತ್ರವೇ ಸಂಘಟಿಸದೆ, ಹೊಲೆಯ ಹಾಗೂ ಇತರೆ ಶೋಷಿತ ಜಾತಿಗಳನ್ನು ಒಂದೆಡೆ ಸೇರಿಸಿ ಅವರ ನಡುವೆ ಏಕತೆಯನ್ನು ಮೂಡಿಸಿದ ಕೀರ್ತಿ ಅವರಿಗೆ ಸಲ್ಲಬೇಕು.

ಹೀಗೆ ಜಾತಿ ಮತ್ತು ಜಾತ್ಯಾತೀತ ಸಂಘಟನೆಗಳೆರಡರಲ್ಲೂ ಮಾದಿಗರು ಸಕ್ರಿಯವಾಗಿ ತೊಡಗಿಸಿಕೊಂಡಿದ್ದರೂ 'ಪ್ರತೇಕ ಮೀಸಲಾತಿ ಬೇಡಿಕೆ'ಯನ್ನು ಮುಂದಿಟ್ಟಿರಲಿಲ್ಲ. ಸಾಮಾಜಿಕ ನ್ಯಾಯದ ಹೆಸರಲ್ಲಿ ನೀಡುತ್ತಿರುವ ಮೀಸಲಾತಿ ಸೌಲಭ್ಯದ ಅವಕಾಶಗಳು ಜನಸಂಖ್ಯಾ ಪ್ರಮಾಣದಲ್ಲಿ ಮಾದಿಗರಿಗೆ ದೊರತಿಲ್ಲವೆಂಬ ಕಾರಣದಿಂದ ಪ್ರತ್ಯೇಕ ಮೀಸಲಾತಿಗೆ ಮಾದಿಗರು ಹೋರಾಟ ಕೈಗೊಂಡಿರುವುದು ತಿಳಿದುಬರುತ್ತದೆ. ಕರ್ನಾಟಕದಲ್ಲಿ ಮಾದಿಗರು ಕೈಗೊಂಡ ಈ ಹೋರಾಟದ ಪರಿಣಾಮ ಇಲ್ಲಿಯ ಮಾದಿಗ-ಹೊಲೆಯರ ನಡುವೆ ದ್ವೇಷ-ಅಸೂಯೆಯ ಬೀಜ ಬಿತ್ತಿತು. ಒಬ್ಬರಿಗೊಬ್ಬರು ಪರಸ್ಪರ ದೋಷಾರೋಪಣೆ ಮಾಡುತ್ತಾ ತಮ್ಮ ತಮ್ಮಲ್ಲೆ ಹೆಚ್ಚು ಮತ್ಸರ ಬೆಳೆಸಿಕೊಳ್ಳುತ್ತ ನಡೆದರು. ಒಂದು ಕಡೆ ನಮಗೆ ಅನ್ಯಾಯವಾಗಿದೆಯೆಂದು ಮಾದಿಗರು ಹೋರಾಟದಲ್ಲಿ ತೊಡಗಿದರೆ ಮತ್ತೊಂದು ಕಡೆ ಹೊಲೆಯರು ಅದನ್ನು ವಿರೋಧಿಸತೊಡಗಿದರು. ಇದರ ಪರಿಣಾಮವಾಗಿ, ಮಾದಿಗ-ಹೊಲೆಯರ ಏಕತೆಯ ಗೂಡಾಗಿದ್ದ ದಲಿತ ಸಂಘರ್ಷ ಸಮಿತಿಯಲ್ಲೂ ಅನುಮಾನದ ಅಲೆಗಳು ಏಳತೊಡಗಿದವು. ತಾಯಿ ಸ್ಥಾನದಲ್ಲಿರುವ ದ.ಸಂ.ಸ ಮಾದಿಗ ಹೊಲೆಯರ ನಡುವಿನ ಬಿಕ್ಕಟ್ಟನ್ನು ಸರಿಪಡಿಸಿ ಮಾದಿಗರಿಗೆ ಅನ್ಯಾಯ ದೊರಕಿಸಿ ಕೊಡಬೇಕೆಂಬ ದೃಷ್ಟಿಯಿಂದ ಪರಿಶಿಷ್ಟ ಜಾತಿಯ ಮೀಸಲಾತಿಯನ್ನು ಆಯಾ ಜಾತಿಯ ಜನಸಂಖ್ಯಾ ಪ್ರಮಾಣದಲ್ಲಿ ವರ್ಗೀಕರಿಸಿ ಎಂದು ತಾನು ಸಹ ಪ್ರತ್ಯೇಕವಾದ ಹೋರಾಟದಲ್ಲಿ ತೊಡಗಿಕೊಂಡಿತು. ಹೀಗೆ ಕರ್ನಾಟಕದಲ್ಲಿ ಪ್ರತ್ಯೇಕ ಮೀಸಲಾತಿ ಮತ್ತು ವರ್ಗೀಕರಣ ಮೀಸಲಾತಿ ಬೇಡಿಕೆಯನ್ನು ಮುಂದಿಟ್ಟುಕೊಂಡು ಜಾತಿಯ ಮತ್ತು ಜಾತ್ಯಾತೀತ ಸಂಘಟನೆಗಳು. ಈ ರೀತಿ ಹೋರಾಟ ಕೈಗೊಂಡ ಸಂಘಟನೆಗಳು ಕೈಗೊಂಡ ಹೋರಾಟವನ್ನು ಪ್ರತ್ಯೇಕವಾಗಿ ಇಲ್ಲಿ ವಿಶ್ಲೇಷಿಸಲಾಗಿದೆ.

**'ಮಾದಿಗ ದಂಡೋರ' ಸಂಘಟನೆಯ ಉಗಮ**

'ಮಾದಿಗ ದಂಡೋರ' ಸಂಘಟನೆಯ ಉಗಮ ಒಂದು ಹೊಸ ಅಧ್ಯಾಯವನ್ನು ಸೃಷ್ಟಿಸಿದೆ. ಯಾವ ಜನಾಂಗ ಕೀಳರಿಮೆಯಿಂದ ತನ್ನ ಜಾತಿಯ ಹೆಸರನ್ನು ಹೇಳಲು ಹಿಂಜರಿಯುತ್ತಿತ್ತು. ಅಂತಹ ಜನಾಂಗ ಸ್ವಾಭಿಮಾನದಿಂದ, ಹೆಮ್ಮೆಯಿಂದ ತನ್ನ ಜಾತಿಯ ಹೆಸರನ್ನು ಹೇಳುವಂತಹ ವಾತವರಣ ನಿರ್ಮಾಣವಾಯಿತು. ಮೊದಲು ಧೈರ್ಯವಾಗಿ ಮೂಲ ಪುರುಷನಾದ ಆದಿಜಾಂಬವ ಹೆಸರಿನಿಂದ, ಹರಿಜನ ಪದ ಹಾಗೂ ಮೈಸೂರು ಅರಸರ ಆಳ್ವಿಕೆಯ ಸಂದರ್ಭ ಬಳಸಲು ಆರಂಭಿಸಿದ ಆದಿಕರ್ನಾಟಕ, ಆದಿದ್ರಾವಿಡ, ಆದಿ ಆಂಧ್ರ, ಹೀಗೆ ಇನ್ನು ಅನೇಕ ಹೆಸರುಗಳಲ್ಲಿ ಗುರುತಿಸಿಕೊಳ್ಳುತ್ತಿದ್ದರು. ಆದರೆ ಇಂದು ನೇರವಾಗಿ 'ಮಾದಿಗ' ಎನ್ನುವ ಪದದಿಂದಲೇ ಗುರುತಿಸಿಕೊಳ್ಳಲು ಹೊರಟಿರುವುದು ಗಮನಾರ್ಹ. ಆ ಹೆಸರಿನಿಂದ ಸಂಘಟನೆ ಮಾಡಿರುವುದಲ್ಲದೆ ತಮ್ಮ ಹೆಸರಿನೊಂದಿಗೆ ಸೇರಿಸಿಕೊಳ್ಳುವುದನ್ನು ಆರಂಭಿಸಿದರು. ಇಲ್ಲಿಯ ಮಾದಿಗರ ಸಂಘಟನೆಯ ಸ್ಥಾಪನೆಗೆ ಪ್ರಮುಖ ಪ್ರೇರಣೆಯೆಂದರೆ ಮುಂದಾಕೃಷ್ಣ ಮಾದಿಗರು. ಆಂಧ್ರದಲ್ಲಿ ಆರಂಭಿಸಿದ 'ಮಾದಿಗ ದಂಡೋರ' ಸಂಘಟನೆಯ ಹೋರಾಟ

'ಪ್ರತ್ಯೇಕ ಮೀಸಲಾತಿ' ಬೇಡಿಕೆಯು ನ್ಯಾಯೋಚಿತವಾಗಿದೆಂದು ಕಂಡುಬಂದಿತು. ಆಗ ಇಲ್ಲಿಯ ಮಾದಿಗರು ಸಹ ಕೆಲವೊಂದು ಕ್ಷೇತ್ರಗಳಲ್ಲಿ ಮೀಸಲಾತಿಯು ಅಸಮಾನತೆಯಲ್ಲಿ ಹಂಚಿಕೆಯಾಗಿರುವುದನ್ನು ಕಂಡುಕೊಂಡಿತು. ಅಲ್ಲದೇ ಹಾವನೂರು ವರದಿ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಒಟ್ಟು ಪರಿಶಿಷ್ಟ ಜಾತಿಯಲ್ಲಿ ಮಾದಿಗರ ಜನಸಂಖ್ಯೆ ಶೇ.೫೩.೭ರಷ್ಟು ಇದ್ದು ಆ ಪ್ರಮಾಣದಲ್ಲಿ ಮೀಸಲಾತಿ ಸೌಲಭ್ಯ ದೊರಕದೆ ಹೋಗಿರುವುದನ್ನು ಕಂಡುಕೊಂಡು ಇಲ್ಲಿಯು ಆಂಧ್ರಪ್ರದೇಶದ ಮಾದರಿಯಲ್ಲಿ ಪ್ರತ್ಯೇಕ ಮೀಸಲಾತಿ ಬೇಡಿಕೆ ಹೋರಾಟ ಮಾಡಲು ಕೆಲವು ಮಾದಿಗರು ಆಲೋಚಿಸಿ ಆ ನಿಟ್ಟಿನಲ್ಲ ಕಾರ್ಯೋನ್ಮುಖರಾದರು. ದಿ:೧೩-೧೦-೧೯೯೭ರಂದು ಬೆಂಗಳೂರಿನ ಶಿವಾಜಿನಗರದ ಆಟದ ಮೈದಾನದಲ್ಲಿ ನಡೆದ ಮಾದಿಗರ ಸಮಾವೇಶದಲ್ಲಿ ಭಾಗವಹಿಸಿದ್ದ ಮಂದಾಕೃಷ್ಣ ಮಾದಿಗ 'ಮಾದಿಗ ದಂಡೋರ' ಸಂಘಟನೆಯನ್ನು ಉದ್ಘಾಟಿಸಿದರು. ಅಲ್ಲಿಂದ ಅಧಿಕೃತವಾಗಿ ಆರಂಭಗೊಂಡ ಸಂಘಟನ ಇಲ್ಲಿಯ ಮಾದಿಗರ ಸಂಘಟಿಸಿ ಹೊಸ ಹುರುಪಿನಿಂದ ಪ್ರತ್ಯೇಕ ಮೀಸಲಾತಿ ಹೋರಾಟದಲ್ಲಿ ತೊಡಗುವಂತೆ ಮಾಡಿತು.

'ಮಾದಿಗ ದಂಡೋರ' ಸಂಘಟನೆಯ ಸ್ಥಾಪನೆಯೊಂದಿಗೆ ಮಾದಿಗರು 'ಪ್ರತ್ಯೇಕ ಮೀಸಲಾತಿ' ಹೋರಾಟ ಆರಂಭಿಸಿದರು. ಅದರ ಮೊದಲ ರಾಜ್ಯಾಧ್ಯಕ್ಷರಾಗಿ ಮಾಪಣ್ಣ ಹದನೂರು, ರಾಜ್ಯ ಉಪಧ್ಯಾಕ್ಷರಾಗಿ ಸಿ.ಕೆ.ಜಯರಾಮ್ ಹಾಗೂ ಎಂ. ಶಂಕರಪ್ಪ ರಾಜ್ಯ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಎಂ. ಶಂಕರಪ್ಪ ಇವರನ್ನೊಳಗೊಂಡ ರಾಜ್ಯ ಸಮಿತಿಯೊಂದು ಅಸ್ತಿತ್ವಕ್ಕೆ ಬಂದಿತು. ಈ ಸಮಿತಿ ತನ್ನ ಹೋರಾಟವನ್ನು ಆರಂಭಿಸಿದಾಗ ಮೊದಲು ಇದಕ್ಕೆ ಸಹಕಾರ ನೀಡಿದವರು ಕೆಲವು ಸರ್ಕಾರಿ ನೌಕರರು ಮಾತ್ರ. ಅವರ ಬೆಂಬಲ ಪಡೆದು ಅನೇಕ ಜಿಲ್ಲೆಗಳಲ್ಲಿ ಸಂಚಾರ ಮಾಡಿ ಈ ಸಂಘಟನೆಯ ಹುಟ್ಟಿಹಾಕಿತು. 'ಡಂಗೂರ ಸಾರುತ್ತಿದ್ದೇವೆ ಜಾತಿಯತೆ ತುಂಬಿರುವ ಈ ದೇಶದಲ್ಲಿ ಮಾದಿಗರಿಗೆ ಅನ್ಯಾಯವಾಗಿದೆ ಎಂದು, ಡಂಗುರ ಸಾರುತ್ತಿದ್ದೇವೆ ನಮಗೆ ಪ್ರತ್ಯೇಕ ಮೀಸಲಾತಿ ಕೊಡಿ' ಎಂಬ ಘೋಷಣೆಯೊಂದಿಗೆ ಹೊರಟ ಈ ಸಂಘಟನೆಯ ಹೋರಾಟ ಮಾದಿಗರಲ್ಲಿ ಹೊಸ ಉತ್ಸಾಹ ಮೂಡಿಸಿತು. ಈ ಹಿನ್ನೆಲೆಯಲ್ಲಿ ಕೇವಲ ಮಾದಿಗ ದಂಡೋರ ಮಾತ್ರವಲ್ಲದೆ ಈ ಮೊದಲು ಸ್ಥಾಪನೆಗೊಂಡ ಮಾದಿಗರ ಜಾತಿ ಸಂಘಟನೆಗಳು ಇಂತಹ ಬೇಡಿಕೆಯನ್ನು ಮುಂದಿಟ್ಟು ಹೋರಾಟ ಮಾಡಲು ಪ್ರೇರಣೆಯಾಯಿತು. ಅದರ ಪರಿಣಾಮವಾಗಿ ರಾಜ್ಯದ ವಿವಿಧ ಭಾಗಗಳಲ್ಲಿ ಈ ಬೇಡಿಕೆಯ ಪರ ಹೋರಾಟ ಕೈಗೊಂಡ ಮಾದಿಗರ ಸಂಘಟನೆಗಳು ಈ ರೀತಿ ಇವೆ. ''ಮಾದಿಗ ದಂಡೋರ ಮೀಸಲಾತಿ ಹೋರಾಟ ಸಮಿತಿ(ಬೆಂಗಳೂರು), ಅಖಿಲ ಕರ್ನಾಟಕ ಆದಿಜಾಂಬವ ಸಂಘ(ಬೆಂಗಳೂರು), ಮಾದಿಗ ಮೀಸಲಾತಿ ಹೋರಾಟ ಸಮಿತಿ(ಬಳ್ಳಾರಿ), ಅಖಿಲ ಕರ್ನಾಟಕ ಆದಿಜಾಂಬವ ಸಂಘ(ಬಳ್ಳಾರಿ) ಕರ್ನಾಟಕ ಮಾದಿಗ ರಿಜರ್ವೇಶನ್ ಹೋರಾಟ ಸಮಿತಿ(ರಾಯಚೂರು), ಅಖಿಲ ಕರ್ನಾಟಕ ಆದಿಜಾಂಬವ (ಮಾದಿಗರ) ಸಂಘ(ಕುಷ್ಟಗಿ), ಕರ್ನಾಟಕ ರಾಜ್ಯ ಹರಿಜನ ಹೋರಾಟ ಸಮಿತಿ(ಹಿರಿಯೂರು), ಜಿಲ್ಲಾ

ಆದಿಕರ್ನಾಟಕರ ಸಂಘ(ತುಮಕೂರು). ಹಾಗೆಯೇ ಈ ಸಂಘಟನೆಗಳು ಕರ್ನಾಟಕಾದ್ಯಂತ ಶಾಖೋಪ ಶಾಖೆಗಳಲ್ಲಿ ನೆಲೆಗೊಳ್ಳುತ್ತಿರುವುದನ್ನು ನೋಡಬಹುದಾಗಿದೆ. ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳ ಮಾದಿಗರ ಪ್ರತ್ಯೇಕ ಮೀಸಲಾತಿ ಹೋರಾಟ ಸಮಿತಿಯೂ ಅಸ್ತಿತ್ವಕ್ಕೆ ಬಂದಿದೆ."[೭೪] ಹೀಗೆ ಇನ್ನು ಅನೇಕ ಮಾದಿಗ ಜನಾಂಗಕ್ಕೆ ಸಂಬಂಧಿಸಿದ ಸಂಘಟನೆಗಳು ಈ ಹೋರಾಟದಲ್ಲಿ ತೊಡಗಿಕೊಂಡವು.

'ಮಾದಿಗ ದಂಡೋರ' ಸಂಘಟನೆಯು ಆಂಧ್ರದಲ್ಲಿ 'ಪ್ರತ್ಯೇಕ ಮೀಸಲಾತಿ' ಹೋರಾಟದಲ್ಲಿ ತೊಡಗಿಕೊಂಡಿದ್ದ ಮಾದಿಗ ಮುಖಂಡರನ್ನು ಕರೆಸಿ ಸಭೆಯೊಂದನ್ನು ನಡೆಸಿದರು. ೧೯೯೭ ನವಂಬರ್ ೨ರಂದು ಧಾರವಾಡದಲ್ಲಿ ಎಸ್.ಕೆ.ಹೆಡ್ ಅವರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ಮಾದಿಗರ ಹೋರಾಟ ಸಮಿತಿಯ ಸಭೆ ಕರ್ನಾಟಕದಲ್ಲಿ ಆಂಧ್ರ ಮಾದರಿಯ ಹೋರಾಟದ ಹೊಳಹುಗಳನ್ನು ತೋರಿತು. ಆಂಧ್ರದಿಂದ ಬಂದ ಡಾ.ಮುತ್ತಯ್ಯ ಮಾದಿಗ, ಕೃಪೀಕರ ಮಾದಿಗ ಅವರು ಅಂಕಿ ಸಂಖ್ಯೆ ಹಾಗೂ ತಾವು ನಡೆಸಿದ ಹೋರಾಟವನ್ನು[೭೫] ವಿವರಿಸಿದರು. ಆನಂತರದಲ್ಲಿ ಈ ಸಂಘಟನೆಯ ರಾಜ್ಯ ಸಮಿತಿಯು ಬೆಂಗಳೂರಿನ ಮಾಗಡಿ ರಸ್ತೆಯ ಪಕ್ಕದಲ್ಲಿರುವ ಬಾಪೂಜಿ ವಿದ್ಯಾರ್ಥಿ ನಿಲಯದ ಆವರಣದಲ್ಲಿ ಪರಿಶಿಷ್ಟ ಜಾತಿ ಮೀಸಲಾತಿಯಲ್ಲಿ ಮಾದಿಗರಿಗೆ ಪ್ರತ್ಯೇಕ ಮೀಸಲಾತಿ ಅನಿವಾರ್ಯವೇ? ಎಂಬ ವಿಷಯದ ಮೇಲೆ ವಿಚಾರ ಸಂಕಿರಣವೊಂದನ್ನು ದಿ:೨೩-೮-೯೮ರಂದು ವ್ಯವಸ್ಥೆ ಮಾಡಿದರು. ಈ ಸಭೆಯಲ್ಲಿ ರಾಜ್ಯದ ವಿವಿಧ ಜಿಲ್ಲೆಗಳಿಂದ ಸಂಘಟನೆಯ ಮುಖಂಡರೊಂದಿಗೆ ರಾಜ್ಯ ಸಮಿತಿಯ ಪದಾಧಿಕಾರಿಗಳು ಹಾಜರಿದ್ದರು. ಆ ಸಭೆಗೆ ಇತರೆ ಜಾತಿಗಳ ಮುಖಂಡರನ್ನು ಅಹ್ವಾನಿಸಲಾಗಿತ್ತು. ಗಂಗಾಮತಸ್ಥ, ರೆಡ್ಡಿ, ಕುರುಬ, ಯಾದವ, ವೀರಶೈವ, ಬ್ರಾಹ್ಮಣ, ಒಕ್ಕಲಿಗ ಮುಂತಾದ ಜಾತಿಗಳ ಕೆಲವೊಂದು ಮುಖಂಡರು ಭಾಗವಹಿಸಿ ಪ್ರತ್ಯೇಕ ಮೀಸಲಾತಿಯ ಕುರಿತು ಚರ್ಚೆ ನಡೆಸಿರುವುದು ಕಂಡುಬರುತ್ತದೆ. ಈ ಸಭೆಗೆ ಸಂಬಂಧಿಸಿದ ಪ್ರಕಟಣೆಯೊಂದರಲ್ಲಿ ರಾಜಕೀಯ ಕ್ಷೇತ್ರದಲ್ಲಿ ಮಾದಿಗರಿಗೆ ಆಗಿರುವ ಅನ್ಯಾಯವನ್ನು ಎತ್ತಿ ಹಿಡಿಯಲಾಗಿದೆ. ೧೯೭೭ರ ಹಾವನೂರು ವರದಿ ಪ್ರಕಾರ "ರಾಜ್ಯದ ಒಟ್ಟು ಪರಿಶಿಷ್ಟ ಜನಾಂಗದಲ್ಲಿ ಮಾದಿಗರ ಜನಸಂಖ್ಯೆ ಶೇಕಡ ೫೭.೩ರಷ್ಟಿದೆ. ಪರಿಶಿಷ್ಟ ಜನಾಂಗದ ಅರ್ಧಕ್ಕಿಂತಲೂ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ ಮಾದಿಗ ಜನಾಂಗಕ್ಕೆ ರಾಜಕೀಯವಾಗಿ ೩೩ ಮೀಸಲು ಕ್ಷೇತ್ರಗಳಲ್ಲಿ ಕನಿಷ್ಟ ೧೭ ಸ್ಥಾನಗಳಾದರೂ ದೊರೆಯಬೇಕಾಗಿತ್ತು. ಆದರೆ ಈಗ ಕೇವಲ ೬ ಜನಮಾತ್ರ ಮಾದಿಗ ಜನಾಂಗದ ಶಾಸಕರಿದ್ದಾರೆ. ಎಲ್ಲಾ ರಾಜಕೀಯ ಪಕ್ಷಗಳು ಮಾದಿಗರಿಗೆ ಸೂಕ್ತ ಪ್ರಾತಿನಿಧ್ಯ ನೀಡದೆ ವಂಚಿಸಿದ್ದು, ಕರ್ನಾಟಕದ ಮಂತ್ರಿ ಮಂಡಲದಲ್ಲಿ ಪರಿಶಿಷ್ಟ ಜಾತಿಯ ೭ ಜನ ಮಂತ್ರಿಗಳಿದ್ದು, ಇವರಲ್ಲಿ ೪ ಜನ ಮಂತ್ರಿಗಳು ಮಾದಿಗ ಜನಾಂಗದವರು ಇರಬೇಕಿತ್ತು. ಅದರ ಬದಲು ಕೇವಲ ಒಬ್ಬರಿಗೆ ಮಾತ್ರವೇ ಮಂತ್ರಿ ಸ್ಥಾನವನ್ನು ನೀಡಿ ಮೋಸ ಮಾಡಲಾಗಿದೆ ಎಂದು ಆರೋಪಿಸಿದ್ದಾರೆ. ಈ ಅನ್ಯಾಯವನ್ನು ಎಂಬುದನ್ನು ಖಂಡಿಸಿ ನ್ಯಾಯ ಒದಗಿಸಿಕೊಡಬೇಕೆನ್ನುವ ಸಿಟ್ಟಿನಲ್ಲಿ ಸರ್ಕಾರದ ಗಮನ ಸೆಳೆಯಲು ಮಾದಿಗರ ಹೋರಾಟ

ತೀವ್ರಗೊಳ್ಳಬೇಕೆಂಬ ಆಶಯವನ್ನು ವ್ಯಕ್ತಪಡಿಸಿದೆ. ಈ ಅಂಶವನ್ನು ಗಮನಿಸಿದಾಗ ಇದು ರಾಜಕೀಯ ನೆಲೆಯಿಂದ ಆರಂಭಗೊಂಡ ಹೋರಾಟವಾಗಿದ್ದು ನಂತರದಲ್ಲಿ ಇತರ ಕ್ಷೇತ್ರಗಳಿಗೆ ವಿಸ್ತರಿಸಿಕೊಂಡಿದೆ ಎನ್ನಬಹುದು.

ಗುಲ್ಬರ್ಗಾದಲ್ಲಿ ವಿಭಾಗ ಮಟ್ಟದ ಸಮಾವೇಶ (ಗುಲಬರ್ಗಾ, ಬೀದರ್, ಕೊಪ್ಪಳ, ರಾಯಚೂರು) ವೊಂದನ್ನು 'ಮಾದಿಗ ದಂಡೋರ' ಕೈಗೊಂಡಿರುವುದು ಕಂಡುಬರುತ್ತದೆ. ಈ ಸಮಾವೇಶವು ಮಂದಕೃಷ್ಣಮಾದಿಗರ ಅಧ್ಯಕ್ಷತೆಯಲ್ಲಿ ಜರುಗಿದೆ. ಅಂದು ಬೀದರ್, ಕೊಪ್ಪಳ, ರಾಯಚೂರು, ಗುಲಬರ್ಗಾದಿಂದ ಹೆಚ್ಚಿನ ಪ್ರಮಾಣದಲ್ಲಿ ಮಾದಿಗರು ಈ ಸಮಾವೇಶದಲ್ಲಿ ಭಾಗವಹಿಸಿದ್ದರು. ಇವರಲ್ಲದೆ ರಾಜ್ಯದ ಇತರೆ ಭಾಗಗಳಿಂದಲೂ ಕೆಲವು ಮಾದಿಗ ಮುಖಂಡರು ಭಾಗವಹಿಸಿರುವುದು ತಿಳಿದುಬರುತ್ತದೆ. ಅಂದು ನಡೆದ ಸಮಾವೇಶದಲ್ಲಿ ರಾಜಕೀಯ ಕ್ಷೇತ್ರದಲ್ಲಿ ಮಾದಿಗರಿಗೆ ಆಗಿರುವ ಅನ್ಯಾಯವನ್ನು ಎತ್ತಿ ಹಿಡಿಯಲಾಗಿದೆ. ಕರ್ನಾಟಕದಲ್ಲಿ ೮೫,೦೦೦೦ ಲಕ್ಷ ಜನ ಮಾದಿಗರು ಇರುತ್ತಾರೆ. ಆದರೆ ೬ ಜನ ಮಾತ್ರ ವಿಧಾನಸಭಾ ಸದಸ್ಯರು ೨ ಜನ ಲೋಕಸಭಾ ಸದಸ್ಯರು, ಒಬ್ಬರೆ ಒಬ್ಬರು ಸಚಿವರು ಇದ್ದಾರೆ. ಜನಸಂಖ್ಯಾ ಪ್ರಮಾಣದ ದೃಷ್ಟಿಯಿಂದ ಮಾದಿಗರಿಗೆ ಅನ್ಯಾಯವಾಗಿರುವುದು ರಾಜಕೀಯ ಕ್ಷೇತ್ರದಲ್ಲಿ ಎದ್ದು ಕಾಣುತ್ತದೆ. ಈ ಹಿನ್ನೆಲೆಯಲ್ಲಿ ಮಾದಿಗರ ಪ್ರತ್ಯೇಕ ಮೀಸಲಾತಿಗಾಗಿ ಹೋರಾಡುತ್ತಿರುವ ಮಾದಿಗ ದಂಡೋರ ಮೀಸಲಾತಿ ಹೋರಾಟ ಸಮಿತಿಗೆ ಮಾದಿಗ ಜನಾಂಗದ ಚಿಂತಕರು ಮತ್ತು ವಿವಿಧ ಪಕ್ಷಗಳ ಮುಖಂಡರು ಸಹಕರಿಸಬೇಕೆಂದು ಅವರಲ್ಲಿ ಮನವಿಮಾಡಿಕೊಂಡರು

ಬಳ್ಳಾರಿಯಲ್ಲಿ ಜಿಲ್ಲಾ ಮಟ್ಟದ ಸಮಾವೇಶವೊಂದನ್ನು ದಿ: ೨೩-೧೨-೧೯೯೮ರಂದು ಮಾದಿಗ ದಂಡೋರ(ಮಾದಿಗ ಮೀಸಲಾತಿ ಹೋರಾಟ ಸಮಿತಿ) ನಡೆಸಿರುವುದು ಕಂಡುಬರುತ್ತದೆ. ಅಂದು ಬಳ್ಳಾರಿ ಜಿಲ್ಲೆ ಮತ್ತು ಇತರೆ ಭಾಗಗಳಿಂದ ಮಾದಿಗ ಜನಾಂಗದ ಸಹಾಸ್ರಾರು ಜನರು ಈ ಸಮಾವೇಶದಲ್ಲಿ ಭಾಗವಹಿಸಿದ್ದರು. ಈ ಸಮಾವೇಶಕ್ಕೆ ನೆರದಿದ್ದ ಜನಸಮೂಹ ಪ್ರಮುಖ ಬೀದಿಗಳಲ್ಲಿ ಮೆರವಣಿಗೆಯ ಮಾಡಿ ಬಹಿರಂಗ ಸಭೆ ಏರ್ಪಡಿಸಿದ್ದರು. ಮಂದಕೃಷ್ಣ ಮಾದಿಗರು ಅಂದಿನ ಬಹಿರಂಗ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಆ ಸಭೆಯಲ್ಲಿ ರಾಜ್ಯ ಅಧ್ಯಕ್ಷರಾದ ಮಾಪ್ಪಣ್ಣ ಹದನೂರು, ಜಿಲ್ಲಾಧ್ಯಕ್ಷ ಜಗನ್ನಾಥ ಮುಂತಾದವರು ಉಪಸ್ಥಿತರಿದ್ದರು. ಆ ಸಭೆಯಲ್ಲಿ ಬೇರೆಲ್ಲಾ ಜಾತಿ-ಜನಾಂಗದವರು ತಮ್ಮ ಹೆಸರಿನ ಮುಂದೆ ಜಾತಿ ಹೆಸರು ಇಟ್ಟುಕೊಳ್ಳುವಂತೆ ಹಾಗೆ ಕರೆದುಕೊಳ್ಳಲು ಹಿಂಜರಿಯದೆ ಆತ್ಮಾಭಿಮಾನ ರೂಪಿಸಿಕೊಂಡು ತಮಗೆ ಸಿಗಬೇಕಾದ ನ್ಯಾಯಯುತ ಸರಿಯಾದ ಪ್ರಾತಿನಿಧ್ಯ ನೀಡುವಂತೆ ಒತ್ತಾಯಿಸಲು ರ್‍ಯಾಲಿ ಏರ್ಪಡಿಸಿ ಸರ್ಕಾರವನ್ನು ಎಚ್ಚರಿಸಿ ಮನವಿ ಪತ್ರ ನೀಡಲಾಗಿದೆ.

'ಮಾದಿಗ ದಂಡೋರ' ಸಂಘಟನೆಯು ರಾಜ್ಯ ಸಮಿತಿಯನ್ನು ಪುನರಚಿಸಲು ಬೆಂಗಳೂರಿನ ಮಾಗಡಿ ರಸ್ತೆಯ ಪಕ್ಕದಲ್ಲಿರುವ ಬಾಪೂಜಿ ವಿದ್ಯಾರ್ಥಿ ನಿಲಯದ ಆವರಣದಲ್ಲಿ ಸಭೆಯನ್ನು ಕರೆಯಲಾಯಿತು. ಅಂದು ಚಿಕ್ಕದಾಗಿ ಹುಟ್ಟಿ ಮೊಳಕೆ ಇಂದು ತಡವಾಗಿಯಾದರೂ ನಿಮ್ಮೆಲ್ಲರ ಜಾತಿ ಅಭಿಮಾನ, ಜಾತಿ ಕಟ್ಟುವ ಛಲದ ಫಲದಿಂದಾಗಿ ಒಂದೂವರೆ ವರ್ಷದ ಮಗುವಾಗಿ ಬೆಳೆದಿದೆ. ಈ ರೀತಿ ಬೆಳೆಯುತ್ತಿರುವ ಮಾದಿಗರ ಮೀಸಲಾತಿ ಹೋರಾಟ ಸಮಿತಿ ಕೇವಲ ಮೂರು ಜನರ ಕೈಯಲ್ಲಿ ದೃಢವಾಗಿ ಬೆಳೆಯಲು ಸಾಧ್ಯವಿಲ್ಲದ ಕಾರಣ ರಾಜ್ಯದ ಅನೇಕ ಜಿಲ್ಲೆಗಳಲ್ಲಿ ಸಂಘಟನೆಯಲ್ಲಿ ಬೆಳೆಸುತ್ತಿರುವ ನಿಮ್ಮಗಳ ಸಹಕಾರ, ಶ್ರಮ, ವ್ಯರ್ಥವಾಗಬಾರದೆಂಬ ಕಾರಣದಿಂದ ನಿಮ್ಮೆಲ್ಲರನ್ನು ಒಳಗೊಂಡಂತೆ ಭದ್ರವಾದ ರಾಜ್ಯ ಸಮಿತಿ ಹಾಗೂ ಉಪಸಮಿತಿಯನ್ನು ರಚಿಸಬೇಕೆಂಬ ಎಂಬ ಹಿನ್ನೆಲೆಯಲ್ಲಿ ದಿ:೩೧-೧೨-೯೮ರಂದು ನಡೆಸಲಾಗಿದೆ. ಆ ಸಭೆಯಲ್ಲಿ ಮತ್ತೊಮ್ಮೆ ರಾಜ್ಯ ಸಮಿತಿಯಲ್ಲಿರುವ ರಾಜಾ ಅಧ್ಯಕ್ಷ ಮಾಪಣ್ಣ ಹದನೂರು, ರಾಜ್ಯ ಉಪಾಧ್ಯಕ್ಷ ಪಿ.ಕೆ.ಜಯರಾಮ್ ಬೇಡಿಕೆಗಳಿಗಾಗಿ ಹೊರಡಬೇಕು ಎಂದು ಅಖಿಲಭಾರತ ಮಾದಿಗ ಮೀಸಲಾತಿ ಹೋರಾಟ ಸಮಿತಿ ಅಧ್ಯಕ್ಷ ಮಂದಕೃಷ್ಣಮಾದಿಗ ಅವರು ಮಾದಿಗ ಜನಾಂಗಕ್ಕೆ ಕರೆ ನೀಡಿದರು ಮತ್ತು ಆಂಧ್ರದಲ್ಲಿ ನಡೆಯುತ್ತಿರುವ ಹೋರಾಟಕ್ಕೆ ಸಂಬಂಧಿಸಿದಂತೆ ಅಲ್ಲಿಯ ಸರ್ಕಾರ ಕಳುಹಿಸಿರುವ ಮೀಸಲಾತಿ ವರ್ಗೀಕರಣ ಪ್ರಸ್ತಾವನೆಗೆ ರಾಷ್ಟ್ರಪತಿಯವರು ಕೂಡಲೆ ಒಪ್ಪಿಗೆ ಕೊಡಬೇಕೆಂದು ಹೋರಾಟ ಸಮಿತಿ ಒತ್ತಾಯಿಸಿರುವುದನ್ನು ತಿಳಿಸಿದರು. ಮರುದಿನ ಪತ್ರಿಕಾ ಘೋಷ್ಠಿ ನಡೆಸಿದಾಗ ಅವರೊಂದಿಗೆ ಉಪಸ್ಥಿತರಿದ್ದ ಮಾದಿಗ ದಂಡೋರ ರಾಜ್ಯಾಧ್ಯಕ್ಷ ಮಾಪಣ್ಣ ಹದನೂರು ಮತ್ತು ಕಾರ್ಯದರ್ಶಿ ಶಂಕರಪ್ಪ ಅವರು ಆಂಧ್ರ ಮಾದರಿಯಲ್ಲೆ ಇಲ್ಲಿಯೂ ಹೋರಾಟವನ್ನು ರೂಪಿಸಲಾಗುವುದು. ಈ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲು ಈಗಾಗಲೇ ಹನ್ನೊಂದು ಜಿಲ್ಲೆಗಳಲ್ಲಿ ಮಾದಿಗ ದಂಡೋರ ಶಾಖೆಗಳನ್ನು ಸಮಿತಿಗಳನ್ನು ರಚಿಸಿರುವುದನ್ನು ತಿಳಿಸಿದರು.

ಈ ಮಧ್ಯೆ ಅಸ್ತಿತ್ವಕ್ಕೆ ಬಂದ ಅಖಿಲ ಕರ್ನಾಟಕ ಮಾದಿಗ ಜನಾಂಗದ ಒಕ್ಕೂಟ''ದ ಆಶ್ರಯದಲ್ಲಿ ಮಾದಿಗ ಜನಾಂಗದ ಪ್ರತಿಭಟನಾ ರ್‍ಯಾಲಿ(ನವೆಂಬರ್ ೧೯೯೯) ಹಲವಾರು ಅಂಶಗಳತ್ತ ಗಮನವನ್ನು ಸೆಳೆದಿದೆ. ಈ ಪ್ರತಿಭಟನೆಯನ್ನು 'ಶೋಷಿತ ಅಸ್ಪೃಶ್ಯ ಮಾದಿಗ'ರೆಲ್ಲರ ಸ್ವಾಭಿಮಾನದ ಸಂಕೇತವಾಗಿ, ಅಧಿಕಾರದಲ್ಲಿ ಪಾಲು ಪಡೆಯುವ ಹೋರಾಟವಾಗಿ ವಿವರಿಸಲು ಪ್ರಯತ್ನಿಸಲಾಗಿದೆ. ಪ್ರಜಾಪ್ರಭುತ್ವದಲ್ಲಿ ಜನಸಂಖ್ಯೆಗನುಗುಣವಾಗಿ ಅಧಿಕಾರದಲ್ಲಿ ಪಾಲು ಪಡೆಯುವುದು ಎಲ್ಲಾ ಶೋಷಿತ ಜಾತಿಗಳ ಹಕ್ಕು. ಇದು ಬಲಾಢ್ಯ ಜಾತಿಗಳ ಮರ್ಜಿಯೂ ಅಲ್ಲ, ಉಪಕಾರವು ಅಲ್ಲವೆಂಬುದನ್ನು ಈ ಸಂಘಟನೆ ಒತ್ತಿ ಹೇಳಿದೆ. ಇದು ವ್ಯಕ್ತಪಡಿಸಿರುವ ಅಸಮಧಾನದ ಅಂಶಗಳೆಂದರೆ ಕರ್ನಾಟಕದಲ್ಲಿ ಅಧಿಕಾರದ ಗದ್ದುಗೆ ಹಿಡಿದು ಕಾಂಗ್ರೆಸ್ ಸರ್ಕಾರ ರಚಿಸಿದ ಸಂಪುಟದಲ್ಲಿ ಅಸ್ಪೃಶ್ಯರಲ್ಲಿ ಬಹು ಸಂಖ್ಯಾತರಾಗಿರುವ ಮಾದಿಗ ಜನಾಂಗದವರಿಗೆ ಜನಸಂಖ್ಯಾ ಪ್ರಮಾಣದಲ್ಲಿ ಪ್ರಾತಿನಿಧ್ಯ ನೀಡದಿರುವುದು; ಕಳೆದ ೫೩

ವರ್ಷಗಳ ರಾಜಕಾರಣದಲ್ಲಿ ಸಮರ್ಥ ನಾಯಕತ್ವವಿಲ್ಲದೆ ನಿರಂತರವಾಗಿ ಈ ಜನಾಂಗದ ಜನಸಂಖ್ಯೆ ಆಧಾರವಾಗಿ ಶಾಸನಸಭೆ, ಪಾರ್ಲಿಮೆಂಟುಗಳಲ್ಲಿ ಪ್ರಾತಿನಿಧ್ಯ ಸಿಕ್ಕಿಲ್ಲದಿರುವುದು; ರಾಜ್ಯದ ಮಾದಿಗ ಜನಾಂಗ ಬೇರೆ ಜಾತಿಯ ರಾಜಕಾರಣಿಗಳನ್ನು ಅವಲಂಬಿಸುವಂತಾಗಿರುವುದು.[೨೧] ಅಲ್ಲದೆ ೧೯೫೨ರಿಂದ ಈವರೆಗಿನ ಎಲ್ಲ ಮುಖ್ಯಮಂತ್ರಿಗಳು ಸಂಪುಟ ದರ್ಜೆ ಸ್ಥಾನ ನೀಡುವಾಗ ಸಾಮಾಜಿಕ ನ್ಯಾಯದ ಆಧಾರದ ಮೇಲೆ ಮಾದಿಗ ಜನಾಂಗದವರನ್ನು ಸಂಪುಟ ದರ್ಜೆ ಸಚಿವರನ್ನಾಗಿ ಮಾಡಿದ್ದರು. ಆದರೆ ಇಂದಿನ ಕಾಂಗ್ರೆಸ್ ಸರ್ಕಾರದ ಮುಖ್ಯಮಂತ್ರಿಗಳು ಮಾದಿಗರಿಗೆ ಅವರ ಸಂಖ್ಯಾ ಪ್ರಮಾಣದಲ್ಲಿ ಪ್ರಾತಿನಿಧ್ಯ ನೀಡದೆ ನಿರ್ಲಕ್ಷಿಸಿರುವುದನ್ನು ಪ್ರತಿಭಟಿಸಿ ಹಾಗೂ ಪ್ರಧಾನ ಕಾರ್ಯದರ್ಶಿಯಾಗಿ ಎಂ.ಶಂಕರಪ್ಪ ಮರು ಆಯ್ಕೆಯಾಗಿ, ವಿವಿಧ ಜಿಲ್ಲೆಯ ಮುಖಂಡರನ್ನೊಳಗೊಂಡಂತೆ ರಾಜ್ಯ ಸಮಿತಿಯೊಂದು ರಚಿತವಾಯಿತು.

ಶಿವಮೊಗ್ಗದಲ್ಲಿ ನಡೆದ ಪತ್ರಿಕಾ ಘೋಷ್ಠಿಯಲ್ಲಿ ರಾಜ್ಯಾಧ್ಯಕ್ಷ ಮಾಪಣ್ಣ ಹದನೂರು "ಪರಿಶಿಷ್ಟ ಜಾತಿಯ ಮೀಸಲಾತಿಯನ್ನು ವರ್ಗೀಕರಿಸುವಂತೆ ರಾಜ್ಯದ ಮಾದಿಗರಿಗೆ ನ್ಯಾಯ ಒದಗಿಸುವುದಾಗಿ ಜೆ.ಎಸ್ .ಪಟೇಲರು ಮುಖ್ಯಮಂತ್ರಿಗಳಾಗಿದ್ದಾಗ ಭರವಸೆ ನೀಡಿದ್ದರು. ಈಗಿನ ಮುಖ್ಯಮಂತ್ರಿ, ಎಸ್ .ಎಂ.ಕೃಷ್ಣ ಅವರು ಕೂಡ ಅದೇ ಮಾತನ್ನು ಹೇಳುತ್ತಿದ್ದಾರೆ. ಆದರೆ ಮಾದಿಗರಿಗೆ ನ್ಯಾಯ ಒದಗಿಸುವ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗಿಲ್ಲ[೨೨] ಎಂದು ಆರೋಪಿಸಿದರು.

ಈ ರೀತಿ ಮಾದಿಗ ದಂಡೋರ ಮತ್ತು ಮಾದಿಗರ ಜಾತಿ ಸಂಘಟನೆಗಳು ಪ್ರತ್ಯೇಕವಾಗಿ ಸರ್ಕಾರಿ ನೌಕರರ, ಯುವಕರ ಕೆಲವೊಂದು ರಾಜಕಾರಣಿಗಳ ಬೆಂಬಲದೊಂದಿಗೆ ಅಲ್ಲಲ್ಲಿ ತೊಡಗಿಕೊಂಡಿರುವ ಮಾದಿಗರನ್ನು ಒಂದೇ ವೇದಿಕೆಯ ಮೇಲೆ ಹೋರಾಟ ಮಾಡಬೇಕೆಂದು ಕೆಲವರು ತಮ್ಮ ಆಕಾಂಕ್ಷೆಯನ್ನು ವ್ಯಕ್ತಪಡಿಸುತ್ತಿದ್ದರು. ಅಂತಹ ಪ್ರಯತ್ನ ಹಾಕಿದವರು ಡಾ.ಎಲ್.ಹನುಮಂತಯ್ಯನವರು. ಅವರು ಬೆಂಗಳೂರಿನ ಮೋತಿ ಮಹಲ್ ಲಾಡ್ಜ್ ಒಂದರಲ್ಲಿ ಮಾದಿಗ ಜನಾಂಗದ ಅನೇಕ ಚಿಂತಕರು, ರಾಜಕಾರಣಿಗಳು, ಮುಖಂಡರನ್ನು ಈ ಕುರಿತು ಚಿಂತಿಸಲು ಚರ್ಚೆಗೆ ಅಹ್ವಾನಿಸಿದರು. ಈ ಸಭೆಯ ಮುಖ್ಯ ಉದ್ದೇಶವೇ ಸಮಸ್ತ ಮಾದಿಗರನ್ನು ಮತ್ತು ಮಾದಿಗರ ಹೆಸರಲ್ಲಿರುವ ಸಂಘಟನೆಗಳನ್ನು ಒಟ್ಟುಗೂಡಿಸಿ ಅವರಲ್ಲಿ ಜಾಗೃತಿಯನ್ನುಂಟು ಮಾಡಲು ಮತ್ತು ಅದಕ್ಕಾಗಿ ತಾತ್ಕಾಲಿಕ ರಾಜ್ಯ ಸಮಿತಿಯೊಂದನ್ನು ರಚಿಸಲು ಎಲ್ಲಾ ಜಿಲ್ಲಾ ಪ್ರತಿನಿಧಿಗಳ ಸಭೆಯನ್ನು ರಚಿಸುವುದಾಗಿತ್ತು. ಈ ಹಿನ್ನೆಲೆಯಲ್ಲಿ ದಿ:೫-೩-೨೦೦೦ದಂದು ನಡೆದು ಆ ಸಭೆಯು ಮಾದಿಗ ಸಂಬಂಧಿತ ಜನಾಂಗಕ್ಕೆ ಸೇರಿದ ಪ್ರೊ.ಲಕ್ಷ್ಮಣ್ ತೆಲಗಾವಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಭೆಯಲ್ಲಿ ವಿವಿಧ ಹೆಸರಿನಲ್ಲಿ ಸಂಘಟನೆಯನ್ನೂ ಕೈಗೊಳ್ಳುವಂತೆ ಅಭಿಪ್ರಾಯ ಬಂದವು. ಅಧ್ಯಕ್ಷತೆ ವಹಿಸಿದ್ದ ಲಕ್ಷ್ಮಣ್ ತೆಲಗಾವಿಯವರು 'ಎಡಗೈ ಸಂಬಂಧಿತ ಜಾತಿಗಳ ಹೆಸರಲ್ಲಿ ಸಂಘಟಿಸುವಂತೆ ತಮ್ಮ ಅಭಿಪ್ರಾಯವನ್ನು

ವ್ಯಕ್ತಪಡಿಸಿದರು. ಆದರೆ ದೀರ್ಘ ಚರ್ಚೆಯ ನಂತರ ಆದಿಜಾಂಬವ, ಹರಿಜನ, ಎಡಗೈ ಮುಂತಾದ ಪದಗಳು ಮತ್ತೊಮ್ಮೆ ತಮ್ಮ ಜಾತಿಯನ್ನು ಮರೆಮಾಚುವಂಥ ಪದಗಳಾಗಿರುವುದರಿಂದ ಅಂತಹ ಪದಗಳಿಗೆ ಬದಲಾಗಿ ನೇರವಾಗಿ ಅರ್ಥವಾಗುವ 'ಮಾದಿಗ' ಹೆಸರಿನಲ್ಲಿಯೇ ಸಂಘಟನೆಯನ್ನು ಬೆಳಸಲು ತೀರ್ಮಾನಿಸಲಾಯಿತು. ಅಂದು ನಡೆದ ಸಭೆಯಲ್ಲಿ ತಾತ್ಕಾಲಿಕ ರಾಜ್ಯಸಮಿತಿಯನ್ನು ರಚಿಸಲಾಯಿತು.

ಆನಂತರದಲ್ಲಿ 'ಕರ್ನಾಟಕ ಮಾದಿಗರ ಮೀಸಲಾತಿ ಹೋರಾಟ ಸಮಿತಿ' ಹೆಸರಲ್ಲಿ ಸಂಘಟನೆಯು ಅಸ್ತಿತ್ವಕ್ಕೆ ಬಂದಿತು. ಇದು ಪ್ರಮುಖವಾಗಿ ರಾಜಕಾರಣಿಗಳ ನಾಯಕತ್ವ ಹಾಗೂ ಬೆಂಬಲದೊಂದಿಗೆ ಮಾದಿಗರಿಗೆ ಜನಸಂಖ್ಯೆ ಪ್ರಮಾಣದಲ್ಲಿ ಮೀಸಲಾತಿಯನ್ನು ನೀಡಬೇಕೆಂದು ಹೋರಾಟ ಆರಂಭಿಸಿತು. ದಿ:೧೭-೭-೨೦೦೦ದಂದು ಬೆಂಗಳೂರಿನ ಪುಟ್ಟಣ್ಣ ಚೆಟ್ಟಿ(ಟೌನ್ ಹಾಲ್)ನಲ್ಲಿ ರಾಜ್ಯ ಆದಿಜಾಂಬವ ಮುಖಂಡರ ಸಮಾವೇಶವನ್ನು ನಡೆಸಲು ಉದ್ದೇಶಿಸಿ ಕರ್ನಾಟಕ ಮಾದಿಗರ ಮೀಸಲಾತಿ ಹೋರಾಟ ಸಮಿತಿ ಹೆಸರಲ್ಲಿ ಆದಿಜಾಂಬವರೆಲ್ಲ ಒಗ್ಗಟ್ಟಿನಿಂದ ಹೋರಾಟ ಮಾಡಲು ಜನಾಂಗದ ಹಿರಿಯ ಮುಖಂಡರು ಸೇರಿ ಮಾಜಿ ಸಚಿವ, ಜಿ.ರಾಮಕೃಷ್ಣರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದ್ದಾರೆ. ಉಳಿದ ರಾಜ್ಯ, ಜಿಲ್ಲಾ, ತಾಲ್ಲೂಕು ಸಮಿತಿಗಳಿಗೆ ಪದಧಿಕಾರಿಗಳನ್ನು ನೇಮಿಸಬೇಕಾಗಿದೆ ಮತ್ತು ಆದಿಜಾಂಬವರಿಗೆ ಪ್ರತ್ಯೇಕ ಮೀಸಲಾತಿ ಪಡೆಯಲು ಹೋರಾಟದ ರೂಪುರೇಷೆಗಳನ್ನು ರೂಪಿಸಲು ನಿಮ್ಮ ಸಹಕಾರ ಅಗತ್ಯವಾಗಿರುವುದರಿಂದ ರಾಜ್ಯದ ಪ್ರತಿ ಜಿಲ್ಲೆಗಳಿಂದ ಮುಖಂಡರನ್ನು ಅಹ್ವಾನಿಸುತ್ತಿದ್ದೇವೆ" ಎಂದು ಆ ಸಂಘಟನೆಯ ಪ್ರದಾನ ಕಾರ್ಯದರ್ಶಿ ಹೆಚ್.ಆಂಜನೇಯ ಅವರು ಪ್ರಕಟಣೆಯೊಂದರಲ್ಲಿದ್ದರೂ ತಿಳಿಸಿರುವುದು ಅಂದು ನಡೆದ ರಾಜ್ಯ ಆದಿಜಾಂಬವ ಮುಖಂಡರ ಈ ಸಮಾವೇಶದ ಸಭೆಯ ಅಧ್ಯಕ್ಷತೆಯನ್ನು ಮಾಜಿ ಸಚಿವರಾದ ಡಿ.ಮಂಜುನಾಥ ವಹಿಸಿದ್ದರು. ಚಿಕ್ಕೊಡಿ ಕ್ಷೇತ್ರದ ಲೋಕಸಭಾ ಸದಸ್ಯರಾದ ರಮೇಶ್ ಜಿಗಜಿಣಗಿ, ಕೋಲಾರ ಕ್ಷೇತ್ರದ ಲೋಕಸಭಾ ಸದಸ್ಯರಾದ ಕೆ.ಹೆಚ್ . ಮುನಿಯಪ್ಪ, ರಾಜ್ಯ ಸಭಾ ಸದಸ್ಯರಾದ ಕೆ.ಬಿ.ಕೃಷ್ಣಮೂರ್ತಿ, ವಿಧಾನ ಪರಿಷತ್ ಸದಸ್ಯರಾದ ಕೆ.ಬಿ.ಶಾಣಪ್ಪ, ಸಿ.ರಮೇಶ್, ಹನುಮಂತಪ್ಪ ಅಲ್ಕೋಡ ಹೊಳೆಹೊನ್ನೂರು ಕ್ಷೇತ್ರದ ಶಾಸಕರಾದ ಕರಿಯಣ್ಣ ಮುಂತಾದವರೊಂದಿಗೆ ಸ್ಥಳೀಯ ಸಂಸ್ಥೆಗಳಿಗೆ ಆಯ್ಕೆಯಾದ ಚುನಾಯಿತ ಪ್ರತಿನಿಧಿಗಳು ಸಹ ಭಾಗವಹಿಸಿದ್ದರು. ಬಂಡಾಯ ಸಾಹಿತಿ, ಕವಿ ಆಗಿರುವ ಡಾ.ಎಲ್.ಹನುಮಂತಯ್ಯ, ಯಲ್ಲಪ್ಪ ಭೂತಯ್ಯ ಮುಂತಾದ ಚಿಂತಕರು ಸಹ ಭಾಗವಹಿಸಿ ಸಂಘಟನೆ ಮತ್ತು ಅದರ ಹೋರಾಟ ಕುರಿತು ತಮ್ಮ ಅಭಿಪ್ರಾಯಗಳನ್ನು ಮಂಡಿಸಿ ಚರ್ಚಿಸಲಾಯಿತು. ಈ ರೀತಿಯಾಗಿ ವಿವಿಧ ರಾಜಕೀಯ ಪಕ್ಷಗಳಲ್ಲಿರುವ ಮಾದಿಗ ಜನಾಂಗದ ರಾಜಕಾರಣಿಗಳು ಐಕ್ಯತೆಯನ್ನು ಪ್ರದರ್ಶಿಸಿ ಆ ಮೂಲಕ ಮಾದಿಗರಿಗೆ ಜನಸಂಖ್ಯಾ ಪ್ರಮಾಣದಲ್ಲಿ ಮೀಸಲಾತಿಯನ್ನೂ ವರ್ಗೀಕರಿಸುವಂತೆ 'ಕರ್ನಾಟಕ ಮಾದಿಗರ ಮೀಸಲಾತಿ ಹೋರಾಟ' ಸಮಿತಿಯ ಆಶ್ರಯದಲ್ಲಿ ಹೋರಾಟ ಆರಂಭಿಸಿದರು.

ರಾಜಕಾರಣಿಗಳು ಆದರೆ ಮುಖಂಡತ್ವವಹಿಸುರುವ 'ಕರ್ನಾಟಕ ಮಾದಿಗರ ಮೀಸಲಾತಿ ಹೋರಾಟ ಸಮಿತಿ' ಮತ್ತು 'ಮಾದಿಗ ದಂಡೋರ' ಮೀಸಲಾತಿ ಹೋರಾಟ ಸಮಿತಿಯ ನಡುವೆ ಸಂಯೋಜನೆಯ ಹೋರಾಟ ಕೈಗೊಳ್ಳಲಾಗಿಲ್ಲ ಹೋಗಿರುವುದು ಕಂಡುಬರುತ್ತದೆ. ಅವು ಪ್ರತ್ಯೇಕವಾಗಿಯೇ ಹೋರಾಟ ಮುಂದುವರಿಸಿದ್ದವು.

'ಮಾದಿಗ ದಂಡೋರ' ಸಂಘಟನೆಯು ಡಂಗೂರ ಸಾರುತ್ತಿದ್ದೇವೆ ಜಾತಿಯತೆ ತುಂಬಿರುವ ಈ ದೇಶದಲ್ಲಿ ಮಾದಿಗರಿಗೆ ಅನ್ಯಾಯವಾಗಿದೆ ಎಂದು, ಮಾದಿಗ ಬಂಧುಗಳೇ ಮೀಸಲಾತಿ ಹೋರಾಟಕ್ಕೆ ಮನೆಗೊಬ್ಬ ಮಗನನ್ನು ಕೊಡುಗೆ ನೀಡಿ'' ಎಂಬ ಘೋಷಣೆಯೊಂದಿಗೆ ಒಂದು ದಿನದ ಸಾಂಕೇತಿಕ ಧರಣಿಯನ್ನು ಗುಲಬರ್ಗಾದಲ್ಲಿ ದಿ:೧೦-೪-೨೦೦೦ದಂದು ನಡೆಸಿತು. ಅಂದು ಮೀಸಲಾತಿ ವರ್ಗೀಕರಣ ಬೇಡಿಕೆಯೊಂದಿಗೆ ರಾಜ್ಯದ ಬೇರೆ ಬೇರೆ ಜಿಲ್ಲೆಗಳಲ್ಲಿ ಆದಿಕರ್ನಾಟಕ, ಆದಿದ್ರಾವಿಡ ಎಂಬ ಹೆಸರಿನಿಂದ ಗುರುತಿಸುತ್ತಿರುವ ಮಾದಿಗರನ್ನು ಇನ್ನು ಮುಂದೆ 'ಮಾದಿಗ' ಪದದಿಂದಲೇ ಗುರುತಿಸಬೇಕೆಂದು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿತು.

ರಾಯಚೂರು ಜಿಲ್ಲಾ ಮಾದಿಗ ರಿಜರ್ವೇಶನ್ ಹೋರಾಟ ಸಮಿತಿ ರಾಯಚೂರಿನಲ್ಲಿ 'ಕರ್ನಾಟಕ ಮಾದಿಗರ ರಾಜ್ಯಮಟ್ಟದ ಅಧ್ಯಯನ ಶಿಬಿರ'ವೊಂದನ್ನು ಎರಡು ದಿನಗಳ ಕಾಲ ವ್ಯವಸ್ಥೆ ಮಾಡಿತು. ದಿ:೩೦-೫-೨೦೦೦ ಮತ್ತು ದಿ: ೩೧-೫-೨೦೦೦ರಂದು ನಡೆದ ಶಿಬಿರಕ್ಕೆ ರಾಜ್ಯದ ವಿವಿಧ ಭಾಗಗಳಿಂದ ವಿವಿಧ ವಿದ್ವಾಂಸರನ್ನು ಕರೆಸಿ ಶಿಬಿರಾರ್ಥಿಗಳಿಗೆ ವಿಚಾರ ಕೊಡಿಸಲಾಯಿತು. ಮೊದಲ ದಿನ ಮಾದಿಗ ಜನಾಂಗಕ್ಕೆ ಸೇರಿದ ದಲಿತ ಸಂಘರ್ಷ ಸಮಿತಿ ಸಂಸ್ಥಾಪಕರಾದ ಪ್ರೊ.ಬಿ.ಕೃಷ್ಣಪ್ಪನವರ ಭಾವಚಿತ್ರಕ್ಕೆ ಹೂಮಾಲೆ ಹಾಕಿ ಉದ್ಘಾಟನೆ ಮಾಡಿ ಸಭೆ ಆರಂಭಗೊಂಡ ಮೀಸಲಾತಿ ವರ್ಗೀಕರಣ ಕುರಿತಂತೆ ಅತ್ಯಂತ ಗಂಭೀರವಾದ ಚರ್ಚೆ ಮಾಡಲಾಯಿತು.

ದಿ:೯-೭-೨೦೦೦ದಂದು ಸಭೆ ಸೇರಿದ ಕರ್ನಾಟಕ ಮಾದಿಗ ಮೀಸಲಾತಿ ಹೋರಾಟ ಸಮಿತಿಯ ಮುಖಂಡರು ಹಾಗೂ ಚಿಂತಕರು ಸಭೆ ಸೇರಿ ಮಾದಿಗರ ಮೀಸಲಾತಿ ಹೋರಾಟವನ್ನು ಬಲಿಷ್ಠವಾಗಿ ರೂಪಿಸಲು ಸಂಘಟನೆಗೊಂದು ಪ್ರಣಾಳಿಕೆಯ ಅವಶ್ಯಕತೆ ಇದೆ ಎಂದು ಭಾವಿಸಿತು. ಅದರಂತೆ ಪ್ರಣಾಳಿಕೆ ರೂಪಿಸಲು ಚಿತ್ರದುರ್ಗ ಜಿಲ್ಲಾ ಹಿರಿಯೂರು ತಾಲ್ಲೂಕಿನ ಮಾರಿಕಣಿವೆ ಗ್ರಾಮದಲ್ಲಿ ಆ ಸಭೆ ನಡೆಸಲು ತೀರ್ಮಾನಿಸಿದರು. ಅದರೆ ಆ ಸಭೆ ನಡೆಯಲಿಲ್ಲ.

ಈ ಮಧ್ಯೆ ಅಸ್ತಿತ್ವಕ್ಕೆ ಬಂದಿದ್ದ 'ಬೆಂಗಳೂರಿನ ಕರ್ನಾಟಕ ರಾಜ್ಯ ಮಾದಿಗ ವಿದ್ಯಾರ್ಥಿ ಒಕ್ಕೂಟ ಧಾರವಾಡದಲ್ಲಿ ದಿ:೧-೧೦-೨೦೦೦ದಂದು ವಿದ್ಯಾರ್ಥಿ ಒಕ್ಕೂಟದ ಉದ್ಘಾಟನೆ, ಸನ್ಮಾನ ಹಾಗೂ ವಿಚಾರ ಸಂಕಿರಣವನ್ನು ಏರ್ಪಡಿಸಿತು. ಆ ಸಭೆಯು ವಿದ್ಯಾರ್ಥಿ ಒಕ್ಕೂಟದ ರಾಜ್ಯಾಧ್ಯಕ್ಷರಾದ ಜಿ.ಹೆಚ್.ಮಹದೇವಪ್ಪ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಅಂದು ಮಾದಿಗರ ಮೀಸಲಾತಿ

ಹೋರಾಟದ ಸಾಧಕ-ಬಾದಕಗಳ ವಿಷಯ ಮಂಡನೆ ಚರ್ಚೆ ನಡೆಯಿತು. ಇಂತಹ ಹೋರಾಟದಲ್ಲಿ ಮಾದಿಗ ಜನಾಂಗದ ಯುವಕರು, ವಿದ್ಯಾರ್ಥಿಗಳ ಹಾಗೂ ನೌಕರರ ಪಾತ್ರ ಮಹತ್ವ ಇದೆಯೆಂದು ಈ ಕಾರಣದಿಂದ ಅವರೆಲ್ಲರು ಈ ಹೋರಾಟದಲ್ಲಿ ತೊಡಗಿಕೊಳ್ಳುವಂತೆ ಕರೆ ನೀಡಲಾಯಿತು.

ಕರ್ನಾಟಕ ಮಾದಿಗ ರಿಜರ್ವೇಷನ್ ಹೋರಾಟ ಸಮಿತಿ, ಸಿಂಧನೂರು ಘಟಕವು ದಿ:೪-೧೧-೨೦೦೦ ಮತ್ತು ದಿ:೫-೧೧-೨೦೦೦ದಂದು ಎರಡು ದಿನಗಳ "ಜಿಲ್ಲಾ ಮಟ್ಟದ ಕಾರ್ಯಕರ್ತರ ಅಧ್ಯಯನ ಶಿಬಿರ"ವನ್ನು ಏರ್ಪಡಿಸಿತ್ತು. ಆ ಎರಡು ದಿನದ ಶಿಬಿರಗಳಲ್ಲಿ ಮಾದಿಗ ಜನಾಂಗಕ್ಕೆ ಸಂಬಂಧಿಸಿದ ಇತಿಹಾಸ, ಕಲೆ, ಸಾಹಿತ್ಯ, ಸಂಸ್ಕೃತಿ ಮುಂತಾದ ಅಂಶಗಳನ್ನು ಕಾರ್ಯಕರ್ತರಿಗೆ ತಿಳಿಸಿಕೊಡುವ ದೃಷ್ಟಿಯಿಂದ ವಿಚಾರವಂತರನ್ನು ಆ ಶಿಬಿರಗಳಿಗೆ ಕರೆದು ವಿಷಯ ಮಂಡಿಸುವ ಅವಕಾಶ ಮಾಡಿಕೊಟ್ಟು. ಆ ಮೂಲಕ ಕಾರ್ಯಕರ್ತರನ್ನು ಮಾನಸಿಕವಾಗಿ, ಬೌದ್ಧಿಕವಾಗಿ ಗಟ್ಟಿಗೊಳಿಸಿ ಮಾದಿಗರಿಗೆ ಆಗಿರುವ ಅನ್ಯಾಯವನ್ನು ಸರಿಪಡಿಸುವ ನಿಟ್ಟಿನಲ್ಲಿ ನಮ್ಮ ಹೋರಾಟ ಹೇಗಿರಬೇಕೆಂಬುದನ್ನು ತಿಳಿಸಿಕೊಡಲಾಯಿತು. ಎರಡನೆಯ ದಿನದಂದು ರಾತ್ರಿ ಡಿಸಂಬರ್ ೬ ರಲ್ಲಿಯ ರಾಯಚೂರಿನಲ್ಲಿ ನಡೆಸಲಿರುವ ರಾಜ್ಯ ಮಟ್ಟದ ಮಾದಿಗರ ಬೃಹತ್ ಪ್ರತಿಭಟನೆಯ ರ‍್ಯಾಲಿಯನ್ನು ಕುರಿತು ಚರ್ಚೆ ನಡೆಸಿತು. ಈ ಸಭೆಯಲ್ಲಿ ಎಲ್ಲಾ ಜಿಲ್ಲಾ ಸಮಿತಿಗಳ ಪದಾಧಿಕಾರಿಗಳು ಭಾಗವಹಿಸಿದ್ದರು.

ರಾಯಚೂರಿನಲ್ಲಿ ರಾಜ್ಯಮಟ್ಟದ ಪ್ರತಿಭಟನಾ ರ‍್ಯಾಲಿಯನ್ನು ಹಮ್ಮಿಕೊಂಡರುವ ದಿ:೬-೧೨-೨೦೦೦ ದಂದು ಮಾಡಲಾಯಿತು. ಅಂದು ರಾಜ್ಯದ ವಿವಿಧ ಭಾಗಗಳಿಂದ ಬಂದಿದ್ದ ಮಾದಿಗ ಜನಾಂಗದ ಸಹಸ್ರಾರು ಜನರು "ರಕ್ತವನ್ನು ಚೆಲ್ಲುತ್ತೇವೆ ABCD ಸಾಧಿಸುತ್ತೇವೆ" ಎಂಬ ಘೋಷಣೆ ಕೂಗುತ್ತಾ ಪ್ರತಿಭಟನ ಮೆರವಣಿಗೆಯಲ್ಲಿ ಪಾಲ್ಗೊಂಡರು. "ಮಾದಿಗರು ಕ್ಯಾಬಿನೆಟ್ ದರ್ಜೆ ಸಚಿವರಾಗಲು ಅಸಮರ್ಥರು" ಎಂದು ಬಹಿರಂಗವಾಗಿ ಹೇಳಿಕೆ ನೀಡಿದ ಮುಖ್ಯಮಂತ್ರಿ ಎಸ್.ಎಂ.ಕೃಷ್ಣರ ವಿರುದ್ಧ ಘೋಷಣೆ ಕೂಗಿ ಪ್ರತಿಭಟಿಸಿದರು. ರ‍್ಯಾಲಿಯ ನಂತರ ಕೈಗೊಂಡ ಬಹಿರಂಗ ಸಭೆಯನ್ನು ಉದ್ದೇಶಿಸಿ ರಾಜ್ಯ ಹಾಗೂ ಜಿಲ್ಲಾ ಮುಖಂಡರು ಮಾತನಾಡಿದರು. ಅದರಲ್ಲಿ ಮೀಸಲಾತಿ ವರ್ಗೀಕರಣಕ್ಕೆ ಮೊದಲು ಒಂದು ಆಯೋಗ ರಚಿಸಿ ಪ.ಜಾತಿ-ವರ್ಗದ ಸ್ಥಿತಿಗತಿಯನ್ನು ತಿಳಿಯಬೇಕು, ಮಾದಿಗರ ಅಭಿವೃದ್ಧಿಗೆ ಪ್ರತ್ಯೇಕ ನಿಗಮವನ್ನು ಎಲ್ಲಾ ಬೋರ್ಡ್ ಮತ್ತು ನಿಗಮಗಳ ಆಯ್ಕೆಯಲ್ಲಿ ಮಾದಿಗರಿಗೆ ಸೂಕ್ತ ಪ್ರಾತಿನಿಧ್ಯ ನೀಡಬೇಕು ಹಾಗೂ ಪ್ರಮುಖ ಬೇಡಿಕೆಯಾದ ಮೀಸಲಾತಿ ವರ್ಗೀಕರಣ ABCD ಪ್ರಕಾರ ಜಾರಿಯಲ್ಲಿ ತರುವಂತೆ ಕ್ರಮ ಕೈಗೊಳ್ಳಬೇಕೆಂದು ಸರ್ಕಾರಕ್ಕೆ ಮನವಿ ಮಾಡಿಕೊಂಡಿದ್ದಾರೆ.

ಮಾದಿಗ ದಂಡೋರ ಸಮಿತಿಯಿಂದ ದಿ:೨-೧-೨೦೦೧ರಂದು ಮಹಾತ್ಮಗಾಂಧಿ ಪ್ರತಿಮೆ ಬಳಿ ಒಂದು ದಿನದ ಸತ್ಯಾಗ್ರಹವನ್ನು ನಡೆಸಲಾಯಿತು. ಅಂದು ರಾಜ್ಯದ ಎಲ್ಲಾ ಜಿಲ್ಲಾ ತಾಲ್ಲೂಕು ಕಛೇರಿಗಳ ಮುಂದೆ ಸತ್ಯಾಗ್ರಹ ನಡೆಸಲಾಗಿದೆ.

ದಿ: ೨೮.೦೧.೨೦೦೧ರಂದು ಮಾದಿಗ ಮೀಸಲಾತಿ ಹೋರಾಟ ಸಮಿತಿಯು ಬೆಂಗಳೂರಿನಲ್ಲಿ ೨೦೦೧ರ ಫೆಬ್ರವರಿಯಲ್ಲಿ ನಡೆಯುವ ಜನಗಣತಿ ಸಂದರ್ಭದಲ್ಲಿ ಸಂಘಟನೆಯ ಮುಖಂಡರು ಮತ್ತು ಕಾರ್ಯಕರ್ತರು ತಾವು ವಹಿಸಬೇಕಾದ ಮಹತ್ವದ ಜವಬ್ದಾರಿಯನ್ನು ತಿಳಿಸಿಕೊಡಲು ಸಭೆ ನಡೆಸಿ ಬಾಪೂಜಿ ವಿದ್ಯಾರ್ಥಿ ನಿಲಯದ ಆವರಣದಲ್ಲಿ ನಡೆದ ಆ ಸಭೆಯಲ್ಲಿ ಪ್ರತಿ ಜಿಲ್ಲೆ ಮತ್ತು ತಾಲ್ಲೂಕುಗಳಲ್ಲಿ ಪ್ರಕಟಣೆ ಹೊರಡಿಸಿ ಜಾತಿ ಕಲಂನಲ್ಲಿ ಪರಿಶಿಷ್ಟ ಜಾತಿ ಎಂದು ಉಪಜಾತಿ ಕಾಲಂನಲ್ಲಿ ಮಾದಿಗ ಅಥವಾ ಮಾದಾರ ಎಂದು ಬರೆಸಲು ಸೂಚಿಸಿತು. ಜನಗಣತಿ ಸಂದರ್ಭದಲ್ಲಿ ಈ ರೀತಿ ಬರೆಸಲು ಕರಪತ್ರವನ್ನು ಅನೇಕ ಕಡೆ ಹಂಚಲಾಯಿತು. ವಿವಿಧ ಭಾಗಗಳಲ್ಲಿ ಮುಖಂಡರು ಮತ್ತು ಕಾರ್ಯಕರ್ತರು ಮಾದಿಗ ಜನಾಂಗಕ್ಕೆ ತಮ್ಮ ಜಾತಿಯ ಹೆಸರನ್ನು ಬರೆಸುವುದರಿಂದಾಗುವ ಅನುಕೂಲತೆಗಳನ್ನು ತಿಳಿಸಿಕೊಡಲು ಪ್ರಯತ್ನಿಸಿದರು. ಅದರಂತೆ ರಾಜ್ಯ ಸಮಿತಿ ಪ್ರಕಟಿಸಿದ ಕರಪತ್ರವೊಂದರಲ್ಲಿ ಮೈಸೂರು ಕರ್ನಾಟಕದಲ್ಲಿ ಮಾದಿಗರನ್ನು ಆದಿಕರ್ನಾಟಕ, ಆದಿದ್ರಾವಿಡ, ಹರಿಜನ ಎಂದು ಕರೆಯುತ್ತಿದ್ದು. ಇದೇ ಹೆಸರುಗಳಿಂದ ಬಲಗೈ ಗುಂಪಿನ ಛಲವಾದಿಗಳನ್ನು ಕರೆಯುತ್ತಿರುವುದರಿಂದ ಮಾದಿಗ ಜನಾಂಗದ ಸರಿಯಾದ ಸಂಖ್ಯೆ ತಿಳಿಯುತ್ತಿಲ್ಲ. ಹಿಂದಿನ ಎಲ್ಲಾ ಜನಗಣತಿ ಪ್ರಕಾರ ಪರಿಶಿಷ್ಟರಲ್ಲಿ ಮಾದಿಗರೆ ಬಹುಸಂಖ್ಯಾತರೆಂದು ದಾಖಲಾಗಿದ್ದರೂ, ಆದಿಕರ್ನಾಟಕ, ಆದಿದ್ರಾವಿಡ ಹರಿಜನ ಹೆಸರುಗಳನ್ನು ಎರಡು ಗುಂಪಿನವರು(ಎಡಗೈ-ಬಲಗೈ) ಸೇರಿಸಿಕೊಳ್ಳುತ್ತಿರುವುದರಿಂದ ಗೊಂದಲ ಉಂಟಾಗಿದೆ. ಈ ಗೊಂದಲ ನಿವಾರಣೆ ಮಾಡಿ ಖಚಿತವಾದ ಮಾದಿಗರ ಜನಸಂಖ್ಯೆ ತಿಳಿದರೆ ಆ ಮೂಲಕ ಆಂಧ್ರ ಮಾದರಿಯ ಜನಸಂಖ್ಯೆ ಆಧಾರಿತ ಮೀಸಲಾತಿ ಪಡೆಯಲು ಅನುಕೂಲವಾಗುತ್ತದೆ. ಆದ್ದರಿಂದ ಎಡಗೈ ಗುಂಪಿಗೆ ಸೇರಿದ ನಮ್ಮ ಜಾತಿಯ ಮಾಲ ಹೆಸರುಗಳಾದ ಮಾದಿಗ, ಮಾದಾರ, ಮಾತಂಗ, ಚಮ್ಮಾರ, ಸಮಗಾರ, ಡೋಹರ, ಮಚ್ಚಿಗಾರ, ಮೋಚಿ, ಮಾಂಗ್, ಚಕ್ಕಲಿಯನ್, ದಕ್ಕಲಿಗ ಮುಂತಾದ ರೂಢಿಯಲ್ಲಿರುವ ಹೆಸರುಗಳನ್ನು ಬರೆಸುವುದೆಂದು ಸೂಚಿಸಲಾಗಿದೆ. ಮಾದಿಗ ದಂಡೋರ ಸಂಘಟನೆಯು ಬೆಂಗಳೂರಿನಲ್ಲಿ ಪ್ರತ್ಯೇಕ ಮೀಸಲಾತಿಗೆ ಒತ್ತಾಯಿಸಿ ದಿನಾಂಕ:೨೬-೨-೨೦೦೧ ರಂದು ರಾಜ್ಯಪಾಲರಿಗೆ ಮನವಿ ಪತ್ರ ಸಲ್ಲಿಸಲಾಗಿದೆ.

ಮಾದಿಗ ದಂಡೋರ ಮೀಸಲಾತಿ ಹೋರಾಟ ಸಮಿತಿಯು ಕೊಪ್ಪಳ ಜಿಲ್ಲಾ ಮಾದಿಗರ ಬೃಹತ್ ಸಮಾವೇಶವನ್ನು ದಿ: ೨೫-೬-೨೦೦೧ರಂದು ಕೊಪ್ಪಳದ ಜಿಲ್ಲಾ ಕ್ರಿಡಾಂಗಣದಲ್ಲಿ ಏರ್ಪಡಿಸಿತು. ಜನಾಂಗವಾರು ಮೀಸಲಾತಿಯನ್ನು ಒತ್ತಾಯಿಸಿ ಪ್ರತಿಜಿಲ್ಲಾ ಕೇಂದ್ರಗಳಲ್ಲಿ ಹಮ್ಮಿಕೊಂಡು ಬರುತ್ತಿರುವ ಸಮಾವೇಶದಂತೆ ಈ ಜಿಲ್ಲೆಯಲ್ಲಿ ಸಮಾವೇಶ ನಡೆಸಿತು ಈ ಸಮಾವೇಶದಲ್ಲಿ ರಾಷ್ಟ್ರಧ್ಯಕ್ಷ ಮಂದಕೃಷ್ಣ ಮಾದಿಗ, ರಾಜ್ಯಾಧ್ಯಕ್ಷ ಮಾಪಣ್ಣ ಹದನೂರು ಹಾಗೂ ರಾಜ್ಯ ಪ್ರಧಾನ ಕಾರ್ಯದರ್ಶಿ ಎಂ.ಶಂಕರಪ್ಪ ಭಾಗವಹಿಸಿದ್ದರು. ಆ ಒಂದು ಸಮಾವೇಶದಲ್ಲಿ ಕೊಪ್ಪಳ ಜಿಲ್ಲೆಯ ಮಾದಿಗರಲ್ಲದೇ ಇತರೆ ಭಾಗಗಳಿಂದಲೂ ಮಾದಿಗರು ಸಹಸ್ರ ಸಂಖ್ಯೆಯಲ್ಲಿ ಆಗಮಿಸಿದ್ದರು. ಸಮಾವೇಶದಲ್ಲಿ

ಜಿಲ್ಲಾಧ್ಯಕ್ಷ ಬಿ.ಹುಸೇನಪ್ಪಸ್ವಾಮಿಮಾದಿಗ, ಜಿಲ್ಲಾ ಪ್ರಧಾನ ಕಾರ್ಯದರ್ಶಿ ಜ್ಞಾನ ಗುಂಡರಮಾದಿಗ, ಜಿಲ್ಲಾ ಉಪಾಧ್ಯಕ್ಷ ರಗಡಪ್ಪಮಾಸ್ಟರ್‌ಮಾದಿಗ, ಮುಂತಾದ ಮುಖಂಡರು ಉಪಸ್ಥಿತರಿದ್ದರು. ಅಂದಿನ ಕಾರ್ಯಕ್ರಮದ ಪ್ರಕಟಣೆಯಲ್ಲಿ "ನಮ್ಮ ಹೋರಾಟ ಯಾವ ಜಾತಿಯ ಜನಾಂಗದ ವಿರುದ್ಧವೂ ಅಲ್ಲ" ಎಂಬ ಘೋಷಣೆ ಹೊರಡಿಸಿರುವುದು ಯಾರ ವಿರುದ್ಧದ ಸಂಘಟನೆ ನಮ್ಮದಲ್ಲ ಎಂಬುದನ್ನು ಪ್ರತಿಬಿಂಬಿಸುತ್ತದೆ.

ಹೀಗೆ ಸಂಘಟನೆಯು ವಿವಿಧ ರೀತಿಯಲ್ಲಿ ಮಾದಿಗರನ್ನು ಎಚ್ಚರಿಸಿ ಹೋರಾಟಕ್ಕೆ ಅಣಿ ಮಾಡುತ್ತಾ ಹೋಯಿತು. ಸರ್ಕಾರ ಪರಿಶಿಷ್ಟ ಜಾತಿ-ವರ್ಗಗಳಿಗೆ ಮೀಸಲಾಗಿರುವ ಹುದ್ದೆಗಳನ್ನು ಅಭ್ಯರ್ಥಿಗಳಿಲ್ಲವೆಂಬ ಕಾರಣಕ್ಕೆ ಭರ್ತಿಮಾಡದೆ ಉಳಿಸಿಕೊಂಡು ಬಂದ ಹುದ್ದೆಗಳನ್ನು ಬ್ಯಾಕ್‌ಲಾಗ್ ಎಂದು ಪರಿಗಣಿಸಿತ್ತು. ಅಂತಹ ಹುದ್ದೆಗಳನ್ನು ಸರ್ಕಾರ ತುಂಬಲು ಕೈಗೊಂಡ ಕ್ರಮದಿಂದ ಮತ್ತೊಮ್ಮೆ ಅವಕಾಶಗಳು ನಮ್ಮ ಜನಸಂಖ್ಯಾ ಪ್ರಮಾಣದಲ್ಲಿ ದೊರಕಲಾರವೆಂಬ ಆತಂಕದ ಹಿನ್ನೆಲೆಯಲ್ಲಿ ಗುಲಬರ್ಗಾ, ರಾಯಚೂರು, ಬೀದರ್, ಕೊಪ್ಪಳ ಜಿಲ್ಲೆಗಳಲ್ಲಿ ಆಯಾ ಜಿಲ್ಲಾ ಮತ್ತು ತಾಲ್ಲೂಕು ಕಛೇರಿಯ ಎದುರು ದಿ:೧೫-೮-೨೦೦೧ರಂದು ಒಂದು ದಿನದ ಧರಣಿಯನ್ನು ನಡೆಸಲಾಯಿತು. ಮೀಸಲಾತಿ ವರ್ಗೀಕರಣವಾಗದೆ ಬ್ಯಾಕಲಾಗ್ ತುಂಬಬಾರದೆಂದು ಸರ್ಕಾರದ ಮೇಲೆ ಒತ್ತಡವನ್ನು ಏರಲು ಧರಣಿ ಕೈಗೊಳ್ಳಲಾಗಿತ್ತು.

ಮಾದಿಗ ದಂಡೋರ ಸಂಘಟನೆಯು ದಿ:೨೬-೧೧-೨೦೦೧ ರಂದು ಪರಿಶಿಷ್ಟ ಜಾತಿ ಮೀಸಲಾತಿಯಲ್ಲಿ ಎ.ಬಿ.ಸಿ.ಡಿ ವರ್ಗೀಕರಣಕ್ಕೆ ಒತ್ತಾಯಿಸಿ ರಾಜ್ಯದಾದ್ಯಂತ ಎಲ್ಲಾ ತಾಲ್ಲೂಕು ಕಛೇರಿಗಳ ಮುಂದೆ ಏಕ ಕಾಲದಲ್ಲಿ ಒಂದು ದಿನದ ಸಾಂಕೇತಿಕ ಧರಣಿ ಕಾರ್ಯಕ್ರಮವನ್ನು ಹಮ್ಮಿಕೊಂಡಿತು. ೧೯೭೬ ಎಲ್.ಜಿ.ಹಾವನೂರ್ ವರದಿಯನ್ನು ಅನುಷ್ಠಾನಕ್ಕೆ ಒತ್ತಾಯಿಸುತ್ತಾ ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆಯಲ್ಲಿ ಮಾದಿಗ ಮತ್ತು ಇತರೆ ಉಪಜಾತಿಗಳು ಶೇ ೫೭.೩, ಹೊಲೆಯ ಮತ್ತು ಇತರೆ ಉಪಜಾತಿಗಳು ಶೇ.೨೬.೩, ಇತರೆ ಪರಿಶಿಷ್ಟ ಜಾತಿ ಶೇ.೧೬.೪(ಬೋವಿ, ಕೊಂಚ, ಲಂಬಾಣಿ, ಇತ್ಯಾದಿ) ಎ.ಬಿ.ಸಿ.ವರ್ಗೀಕರಿಸಿ ಎಲ್.ಜಿ.ಹಾವನೂರ್ ಪ್ರಕಾರ ಎಸ್.ಸಿ.ಮೀಸಲಾತಿಯನ್ನು ವರ್ಗೀಕರಸಿದ್ದರೆ ಶೇ.೧೫ರಲ್ಲಿ ಮಾದಿಗ ಮತ್ತು ಇದರ ಉಪಜಾತಿಗಳಿಗೆ ಶೇ ೮.೫ ಸಿಗುತ್ತಿತ್ತು. ಆದರೆ ಈ ಜಾತಿಯವರಿಗೆ ಇಲ್ಲಿಯವರೆಗೂ ಸಿಕ್ಕಿರೋದು ಶೇ.೧.೫ ಮಾತ್ರ. ಸುಮಾರು ಶೇ.೭ರಷ್ಟು ಅನ್ಯಾಯವಾಗಿದೆ. ಈ ಮೇಲ್ಕಂಡ ಅಂಶಗಳನ್ನು ಜಾರಿಗೆ ತರಬೇಕೆಂದು ದಿ:೨೪-೯-೧೯೯೧ರಲ್ಲಿ ಆಗಿನ ಮುಖ್ಯ ಮಂತ್ರಿಗಳಾದ ಶ್ರೀ.ಬಂಗಾರಪ್ಪನವರಿಗೆ, ದಿ:೧೩-೧೦-೧೯೯೭ರಲ್ಲಿ ಮುಖ್ಯಮಂತ್ರಿಗಳಾಗಿದ್ದ ಮಾನ್ಯ ಜೆ.ಹೆಚ್.ಪಟೇಲರಿಗೆ ದಿ:೧-೧೨-೧೯೯೯ ಮತ್ತು ದಿ:೦೬-೦೧-೨೦೦೧ ರಂದು ಇಂದಿನ ಮುಖ್ಯಮಂತ್ರಿಗಳಾದ ಎಸ್.ಎಂ.ಕೃಷ್ಣ ಅವರಿಗೆ ಮನವಿ ಪತ್ರಗಳನ್ನು ನೀಡಿರುವುದು ಕಂಡುಬರುತ್ತದೆ." ಇವುಗಳೇ ಅಲ್ಲದೆ ಇನ್ನೂ ಅನೇಕ ಕಾರ್ಯಕ್ರಮಗಳ ಮೂಲಕ ಸರ್ಕಾರವನ್ನು ಎಚ್ಚರಿಸಿ ಮೀಸಲಾತಿ ವರ್ಗೀಕರಿಸುವಂತೆ ಸರ್ಕಾರವನ್ನು ಒತ್ತಾಯಿಸಿದ್ದರು. ಇದುವರೆಗೂ ಯಾವುದೇ ಕ್ರಮ ಕೈಗೊಂಡಿಲ್ಲದಿರು

ವುದನ್ನು ಕಂಡು ಈ ವಿಷಯ ವಿಕೋಪಕ್ಕೆ ಹೋಗುವ ಮುನ್ನ ಇತರೆ ರಾಜ್ಯಗಳಾದ ಹರಿಯಾಣ, ಪಂಜಾಬ್, ಆಂಧ್ರಪ್ರದೇಶದಂತೆ ನಮ್ಮ ರಾಜ್ಯದಲ್ಲೂ ಜಾತಿಯ ಜನಸಂಖ್ಯೆ ಅನುಗುಣ ವಾಗಿ ಪರಿಶಿಷ್ಟ ಜಾತಿ ಮೀಸಲಾತಿ ಪ್ರಮಾಣ ಹಂಚಿಕೆ ಮಾಡದಿದ್ದ ಪಕ್ಷದಲ್ಲಿ ಮುಂಬರುವ ಜನವರಿ ತಿಂಗಳಲ್ಲಿ ಮಾದಿಗ ದಂಡೋರ ಮಹಾ ದಂಡಯಾತ್ರೆಯನ್ನು ಕೈಗೊಂಡು ಸುಮಾರು ೨೦ ಲಕ್ಷ ಜನರು ಅದರಲ್ಲಿ ಭಾಗವಹಿಸಿ ಮೀಸಲಾತಿ ವರ್ಗೀಕರಣ ಹಂಚಿಕೆ ವಿಷಯದಲ್ಲಿ ಮಂದಗತಿ ತಾಳಿರುವ ಸರ್ಕಾರದ ವಿರುದ್ಧ ಅಂದು ಕಠಿಣ ನಿರ್ಧಾರ ಕೈಗೊಳ್ಳಲಾಗುತ್ತದೆ ಎಂದು ರಾಜ್ಯಧ್ಯಕ್ಷ ಮಾಪಣ್ಣ ಹದನೂರು ಮತ್ತು ರಾಜ್ಯ ಪ್ರಧಾನ ಕಾರ್ಯದರ್ಶಿ ಎಂ.ಶಂಕರಪ್ಪ ಪ್ರಕಟಣೆಯೊಂದರಲ್ಲಿ ಸರ್ಕಾರಕ್ಕೆ ಎಚ್ಚರಿಕೆ ನೀಡಿರುವುದು ಕಂಡುಬರುತ್ತದೆ.

ದಿ:೧೦-೧-೨೦೦೨ ರಂದು ಬೆಂಗಳೂರಿನಲ್ಲಿ ಕರ್ನಾಟಕ ರಾಜ್ಯ ಮಾದಿಗ ವಿದ್ಯಾರ್ಥಿ ಒಕ್ಕೂಟ ಬೆಂಗಳೂರು ಇವರಿಂದ ಬ್ಯಾಕಲಾಗ್ ಹುದ್ದೆಗಳನ್ನು ಜನಸಂಖ್ಯೆಗೆ ಅನುಗುಣವಾಗಿ ಭರ್ತಿ ಮಾಡಲು ಒತ್ತಾಯಿಸಿ ಮುಖ್ಯಮಂತ್ರಿಯವರ ನಿವಾಸದ ಮುಂದೆ ಧರಣಿ ಮಾಡಲಾಯಿತು. ಇದೆ ರೀತಿಯಲ್ಲಿ ಮಾದಿಗ ಮೀಸಲಾತಿ ಹೋರಾಟ ಸಮಿತಿ ಬೆಂಗಳೂರು ನಗರ ಘಟಕವು ಸಹ ದಿ:೨೧-೧-೨೦೦೨ ಕ್ರಮವನ್ನು ಮುಖ್ಯಮಂತ್ರಿಯವರ ನಿವಾಸದೆದುರು ಧರಣಿ ಕೈಗೊಂಡು ಬ್ಯಾಕಲಾಗ್ ಹುದ್ದೆಗಳನ್ನು ಭರ್ತಿ ಮಾಡುವಾಗ ಪರಿಶಿಷ್ಟ ಜಾತಿಗಳ ಜನಸಂಖ್ಯಾವಾರು ಎಲ್ಲಾ ಜಾತಿಗಳಿಗೆ ಸಮಾನ ಅವಕಾಶ ನೀಡಬೇಕೆಂಬ ಬೇಡಿಕೆಯೊಂದಿಗೆ ಇತರೆ ಬೇಡಿಕೆಗಳನ್ನು ಮುಖ್ಯಮಂತ್ರಿಗಳಿಗೆ ಮನವಿಯ ಮೂಲಕ ಜಾರಿಯಲ್ಲಿ ತರಲು ಒತ್ತಾಯಿಸಿರುವುದು ಕಂಡುಬರುತ್ತದೆ.

**ಮೀಸಲಾತಿ ವರ್ಗೀಕರಣ ಹೋರಾಟ ಮತ್ತು ದಲಿತ ಸಂಘರ್ಷ ಸಮಿತಿ**

ಪರಿಶಿಷ್ಟ ಜಾತಿಯ ಒಳಪಂಗಡಗಳು ಜನಸಂಖ್ಯಾ ಪ್ರಮಾಣದಲ್ಲಿ ಮೀಸಲಾತಿ ವರ್ಗೀಕರಣ ಮಾಡುವಂತೆ ಇಂದು ಆ ವರ್ಗದ ಮಾತೃಸ್ಥಾನದಲ್ಲಿರುವ ಕರ್ನಾಟಕ ದಲಿತ ಸಂಘರ್ಷ ಸಮಿತಿ (ಪ್ರೊ.ಬಿ.ಕೃಷ್ಣಪ್ಪ) ಹೋರಾಟ ಕೈಗೊಂಡಿದೆ. ಈ ಮೊದಲು ಆಂಧ್ರದಲ್ಲಿ ಮಾದಿಗರು ಪ್ರತ್ಯೇಕ ಮೀಸಲಾತಿ ಬೇಡಿಕೆಯ ಹೋರಾಟವನ್ನು ಮಾಡುತ್ತಿದ್ದರೆ ಅದನ್ನು ರುಮಾಲರ(ಹೊಲೆಯರು) ಅವರ ನಡುವಿನ ಜಗಳವನ್ನು ಗಮನಿಸುತ್ತಿದ್ದರೂ ಅಂತಹ ಸಮಸ್ಯೆ ಇಲ್ಲಿ ಹುಟ್ಟಿಕೊಳ್ಳಲಾರದೆಂದು ಭಾವಿಸಿದ್ದರು. ಆ ರೀತಿ ಭಾವಿಸಲು ಪ್ರಮುಖ ಕಾರಣವು ಉಂಟು ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಅಂಬೇಡ್ಕರರ ವಿಚಾರಧಾರೆಗಳ ಅಡಿಯಲ್ಲಿ 'ದಲಿತ ಸಂಘರ್ಷ ಸಮಿತಿ'ಯ ಹೆಸರಲ್ಲಿ ಮಾದಿಗರು ಮತ್ತು ಹೊಲೆಯರನ್ನೊಳಗೊಂಡಂತೆ ಇತರೆ ಶೋಷಿತ ಜನಾಂಗಗಳು ಒಗ್ಗೂಡಿ ದಲಿತ ಶಕ್ತಿಯೊಂದು ಹೊರಹೊಮ್ಮಿತ್ತು. ಅಂತಹ ಸಂಘಟನೆಯೊಂದನ್ನು ಸ್ಥಾಪಿಸಿದ ಕೀರ್ತಿ ಮಾದಿಗ ಜನಾಂಗಕ್ಕೆ ಸೇರಿದ ಪ್ರೊ.ಬಿ.ಕೃಷ್ಣಪ್ಪನವರಿಗೆ ಸಲ್ಲುತ್ತದೆ. ಸುಮಾರು ೧೦ ವರ್ಷಗಳ ಕಾಲ ಅವರ ನೇತೃತ್ವದಲ್ಲಿ ದಲಿತ

ಹಿಂದುಳಿದ ಹಾಗೂ ಅಲ್ಪಸಂಖ್ಯಾತರ ಪರವಾದ ಹೋರಾಟಗಳನ್ನು ಮಾಡಲಾಯಿತು. ಇದು ಶೋಷಿತ ಜಾತಿಗಳ ಏಕತೆಯನ್ನು ಉಂಟುಮಾಡಿತ್ತು. ಹೀಗಾಗಿ ಆಂಧ್ರದಲ್ಲಿ ನಡೆಯುತ್ತಿದ್ದ ಮಾದಿಗ-ಹೊಲೆಯರ ನಡುವಿನ ಕಿತ್ತಾಟ ಇಲ್ಲಿ ಉದ್ಭವಿಸಲಾರದು ಎಂದು ಭಾವಿಸಿದ್ದರು. ಆದರೆ ಇಲ್ಲಿಯ ಮಾದಿಗರು ಆರಂಭಿಸಿದ ಪ್ರತ್ಯೇಕ ಮೀಸಲಾತಿ ಹೋರಾಟವು ಈ ಸಂಘಟನೆಯ ಮೇಲೆ ಪರಿಣಾಮ ಬೀರಲಾರಂಭಿಸಿತು. ಅಲ್ಲದೆ ಸೈದ್ಧಾಂತಿಕ ಭಿನ್ನಾಭಿಪ್ರಾಯದ ಮೇಲೆ ಈಗಾಗಲೇ ಎರಡು ಭಾಗವಾಗಿ ಒಡೆದು ಹೋಗಿದ್ದ ದಲಿತ ಸಂಘರ್ಷ ಸಮಿತಿಯ ಬಿ.ಕೆ.ಬಣದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಾದಿಗರು ಕಡಿಮೆ ಪ್ರಮಾಣದಲ್ಲಿ ಹೊಲೆಯ ಹಾಗೂ ಇತರೆಯವರು ಇದ್ದರು. ಈ ಹಿಂದೆ ಇದೆ ಸಂಘಟನೆಯಲ್ಲಿ ತೊಡಗಿಕೊಂಡಿದ್ದ ಮಾದಗರನೇಕರು ಮಾದಿಗ ಮೀಸಲಾತಿ ಹೋರಾಟ ಸಮಿತಿಯಲ್ಲಿ ತೊಡಗಿಕೊಂಡು ಹೋರಾಟ ಮಾಡುತ್ತಿದ್ದರು. ಇದರಿಂದಾಗಿ ಮಾದಿಗ ಜನಾಂಗದವರು ದಲಿತ ಸಂಘಟನೆಗಿಂತಲೂ ಮಾದಿಗರಿಗೆ ಮೀಸಲಾತಿಯಲ್ಲಿ ಅನ್ಯಾಯವಾಗಿರುವುದನ್ನು ಪ್ರತಿಭಟಿಸಿ ಪ್ರತ್ಯೇಕ ಮೀಸಲಾತಿಗಾಗಿ ಹೋರಾಟ ಮಾಡುವ ಮಾದಿಗ ಸಂಘಟನೆಗೆ ಹೆಚ್ಚು ಒಲವು ತೋರಿಸತೊಡಗಿದರು. ಇದು ಕೆಲವು ಜಿಲ್ಲೆಗಳಲ್ಲಿ ದಲಿತ ಸಂಘರ್ಷ ಸಮಿತಿಯ ಅಸ್ತಿತ್ವವನ್ನೆ ಅಲುಗಾಡಿಸುವಂತೆ ಭಾಸವಾಗುತ್ತಿತ್ತು. ಅಲ್ಲದೇ ಜನಸಂಖ್ಯಾ ಪ್ರಮಾಣದಲ್ಲಿ ಮೀಸಲಾತಿ ಹಂಚಿಕೆಯ ಪ್ರತಿಯೊಂದು ಜನಾಂಗಗಳಿಗೆ ಅಭಿವೃದ್ಧಿ ಹೊಂದಲು ಅವಕಾಶ ಮಾಡಿಕೊಡುತ್ತದೆಯೆಂಬ ಸತ್ಯವನ್ನು ದ.ಸಂ.ಸ ಅರಿಯಿತು. ಅಲ್ಲದೆ ತನ್ನದೇ ಆದಂತಹ ರಾಜಕೀಯ ಆಶೋತ್ತರವೂ ಇತ್ತು. ಈ ಕಾರಣಗಳಿಂದಾಗಿ ಈ ಸಮಸ್ಯೆಯನ್ನು ಬಗೆ ಹರಿಸಲು ತಾಯಿ ಸ್ಥಾನದಲ್ಲಿರುವ ದಸಂಸ ಆಲೋಚಿಸುವಂತೆ ಮಾಡಿತು. ಈ ಹಿನ್ನೆಲೆಯಲ್ಲಿ ದ.ಸಂ.ಸ ತನ್ನ ಅಸ್ತಿತ್ವ, ನ್ಯಾಯಯುತವಾದ ಬೇಡಿಕೆ ಹಾಗೂ ತನ್ನ ರಾಜಕೀಯ ಕಾರಣಗಳಿಗೆ ಮೀಸಲಾತಿಯನ್ನು ವರ್ಗೀಕರಣ ಹೋರಾಟ ಕೈಗೊಳ್ಳಲು ತೀರ್ಮಾನಿಸಲು ಬಯಸಿತು.

ಈ ಹೋರಾಟಕ್ಕೆ ಸಂಬಂಧಿಸಿದಂತೆ ಚಿತ್ರದುರ್ಗದ ಎಂ.ಜಯಣ್ಣನವರ ನೇತೃತ್ವದಲ್ಲಿದ್ದ ಬಿ.ಕೆ.ಯವರ ದ.ಸಂ.ಸ ರಾಜ್ಯದ ಅನೇಕ ಕಡೆಗಳಲ್ಲಿ ಚರ್ಚೆ ನಡೆಸಿ ದೇಶದ ಸಕಲ ಸಂಪತ್ತು ಆದಾಯ, ಅಧಿಕಾರ ಮತ್ತು ಸವಲತ್ತುಗಳು ಜಾತಿಗಳ ಜನಸಂಖ್ಯೆಗೆ ಅನುಗುಣವಾಗಿ ವಿತರಿಸಲ್ಪಡಬೇಕೆಂಬುದು ಅಂಬೇಡ್ಕರವರ ವಿಚಾರಧಾರೆ ಎಂಬುದನ್ನು ಮನಗಂಡು ಪರಿಶಿಷ್ಟ ಜಾತಿಯ ಒಳಪಂಗಡಗಳಿಗೆ ಆಯಾ ಜನಾಂಗದ ಜನಸಂಖ್ಯಾ ಪ್ರಮಾಣದಲ್ಲಿ ಮೀಸಲಾತಿ ವರ್ಗೀಕರಿಸುವುದರಿಂದ ಅದು ಅಂಬೇಡ್ಕರ ವಿಚಾರಗಳಿಗೆ ವಿರೋಧ ಇಲ್ಲ ಎಂದು ಮೀಸಲಾತಿ ವರ್ಗೀಕರಣ ಹೋರಾಟವನ್ನು ಕೈಗೆತ್ತಿಕೊಂಡಿತು. ಈ ಸಂಬಂಧ ಮೂರು ಹಂತದ ಕಾರ್ಯಕ್ರಮಗಳನ್ನು ನಡೆಸಲು ತೀರ್ಮಾನಿಸಿತು. ಮೊದಲನೆಯದಾಗಿ ರಾಜ್ಯ ಮಟ್ಟದ ವಿಚಾರಸಂಕಿರಣ ಏರ್ಪಾಟು ಮಾಡಿತು. ಅದರಂತೆ ದಿ:೨೩-೧-೨೦೦೦ದಂದು ಬೆಂಗಳೂರಿನ ಕಾವೇರಿಭವನದ ಸಭಾಂಗಣದಲ್ಲಿ ಸಭೆ ನಡೆಸಿ ಆ ಸಭೆಗೆ ಮಾದಿಗಮತ್ತುಹೊಲೆಯರನ್ನೊಳಗೊಂಡ ಇತರೆ ಜನಾಂಗದ ಮುಖಂಡರು, ಚಿಂತಕರು, ಹೋರಾಟಗಾರರನ್ನು ಆಹ್ವಾನಿಸಿತ್ತು. ಆ ಸಭೆಯಲ್ಲಿ

ಪರಿಶಿಷ್ಟ ಜಾತಿ-ಪರಿಶಿಷ್ಟ ಪಂಗಡ ಮೀಸಲಾತಿಯಲ್ಲಿ ಉಪಜಾತಿಗಳಿಗೆ ಒಳ ಮೀಸಲಾತಿ ವರ್ಗೀಕರಣ ಕುರಿತು ವಿದ್ವಾಂಸರು, ಹೋರಾಟಗಾರರು ವಿಷಯವನ್ನು ಮಂಡಿಸಿ ಚರ್ಚಿಸಿದರು. ಇಂತಹ ಹೋರಾಟ ಉದಯಿಸಲು ಕಾರಣವಾಗಿರುವ ಅಂಶಗಳಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕ್ರಮವಾಗಿ ೧೦ ಲಕ್ಷ ಮತ್ತು ೨೫೦೦೦ ಬ್ಯಾಕಲಾಗ್ ಹುದ್ದೆಗಳನ್ನು ಪರಿಶಿಷ್ಟ ಜಾತಿ-ವರ್ಗಗಳಿಗೆ ತುಂಬದಿರುವುದು ಎನ್ನಬಹುದು. ಅಲ್ಲದೆ ಶೇ ೧೮ರಷ್ಟು ಮೀಸಲಾತಿಯನ್ನು ಪೂರ್ಣವಾಗಿ ತುಂಬದೆ ಹೋಗಿರುವುದು. ಈ ವರ್ಗದಲ್ಲಿ ನಿರುದ್ಯೋಗ, ಬಡತನ ಹೆಚ್ಚಾಗುವಂತೆ ಮಾಡಿದೆ. ಸಿಗುವಂತ ಕಡಿಮೆ ಅವಕಾಶಗಳನ್ನು ಸಹ ಯಾವುದೋ ಪ್ರಬಲ ಜಾತಿಗಳು ಪಡೆದುಕೊಳ್ಳುತ್ತವೆ. ಇದರಿಂದ ಪರಿಶಿಷ್ಟ ಜಾತಿಯ ಒಳಪಂಗಡಗಳ ನಡುವೆ ದ್ವೇಷ-ಅಸೂಯೆ, ಅನುಮಾನ ಉಂಟಾಗಿದೆ. ಪರಿಶಿಷ್ಟ ಜಾತಿಯಲ್ಲಿ ಇರುವ ಜನಾಂಗಗಳ ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿಯನ್ನು ವರ್ಗೀಕರಿಸುವುದು ನ್ಯಾಯಯೋಚಿತವು ಆಗಿದೆ. ಇದು ಪರಿಶಿಷ್ಟ ಜಾತಿಯ ಉಪಪಂಗಡಗಳ ನಡುವೆ ದ್ವೇಷ-ಅಸೂಯೆ ಕಡಿಮೆ ಮಾಡಿ ಏಕತೆಯನ್ನು ತರಲು ಸಾಧ್ಯವಾಗಬಹುದೆನ್ನುವ ಹೊಳಹನ್ನು ಆ ಸಭೆ ತೋರಿತು. ಈ ಹಿನ್ನೆಲೆಯಲ್ಲಿ ದಸಂಸವು ಅಂದು ಕೈಗೊಂಡ ನಿರ್ಣಯಗಳಲ್ಲಿ ಪ್ರಮುಖವಾಗಿ ವರ್ಗೀಕರಣ ಮೀಸಲಾತಿಯನ್ನು ಜಾರಿಗೆ ತರಲು ಸೂಕ್ತ ವಿಚಾರಣಾ ಆಯೋಗವನ್ನು ರಾಜ್ಯ ಸರ್ಕಾರವು ರಚಿಸಬೇಕೆಂಬ ಅಂಶವು ಇತ್ತು. ಹೀಗೆ ಮೊದಲ ಹಂತದ ಕಾರ್ಯಕ್ರಮವನ್ನು ಯಶಸ್ವಿಯಾಗಿ ಮಾಡಿತು. ಅಂದು ಸಭೆಯಲ್ಲಿದ್ದ ರಾಜ್ಯದ ಎಲ್ಲಾ ಜಿಲ್ಲೆಗಳಿಂದ ದಸಂಸ ಮುಖಂಡರು ಹಾಗೂ ಇತರೆಯವರು ಒಕ್ಕೂರಲಿನಿಂದ ನಿರ್ಣಯಗಳನ್ನು ಸ್ವಾಗತಿಸಿದರು.

ಎರಡನೆಯ ಹಂತದ ಧರಣಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲು ತೀರ್ಮಾನಿಸಿ, ಅದರಂತೆ ದಿ:೧೦-೩-೨೦೦೦ದಂದು ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಮನೆ ಮುಂದೆ ಧರಣಿ ನಡೆಸಿದರು. ಅಂದು ಅವರೊಂದಿಗೆ ಚರ್ಚಿಸಿ ವರ್ಗೀಕರಣ ಮೀಸಲಾತಿಗೆ ಸಂಬಂಧಿಸಿದ ಒಂದು ಆಯೋಗ ರಚಿಸಲು ಒತ್ತಾಯಿಸಿ ಮನವಿ ಪತ್ರವನ್ನೂ ನೀಡಿದರು ಮತ್ತು ದಿನದಂದು ಅದೇ ಸಮಾಜ ಕಲ್ಯಾಣ ಸಚಿವರಿಗೂ ಮನವಿಯ ಪ್ರತಿಯನ್ನು ನೀಡಲಾಯಿತು.

ಮೂರನೆಯ ಹಂತದಲ್ಲಿ ದಸಂಸವು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಜಿಲ್ಲಾ ಮಟ್ಟದ ವಿಚಾರ ಸಂಕಿರಣವನ್ನು ಏರ್ಪಡಿಸಿತು. ಕೆಲವೊಂದು ಜಿಲ್ಲೆಗಳನ್ನು ಹೊರತು ಪಡಿಸಿದರೆ ಉಳಿದಂತೆ ಎಲ್ಲಾ ಜಿಲ್ಲೆಗಳಲ್ಲಿ ವಿಚಾರ ಸಂಕಿರಣ ನಡೆದು ವರ್ಗೀಕರಣ ಮೀಸಲಾತಿಯ ಅಗತ್ಯತೆಯನ್ನು ಅರಿಯಲು ಅವಕಾಶವಾಯಿತು. ಹೀಗೆ ಮೂರು ಹಂತದ ಕಾರ್ಯಕ್ರಮಗಳನ್ನು ಘೋಷಿಸಿದ್ದ ದಸಂಸವು ಯಶಸ್ವಿಯಾಗಿ ನಡೆಸಿತು. ಆದರೆ ಸರ್ಕಾರದಿಂದ ಯಾವುದೇ ಫಲ ಸಿಗದೆ ಹೋಯಿತು. ಆದರೆ ಈ ಎಲ್ಲಾ ಕಾರ್ಯಕ್ರಮಗಳ ಸಂದರ್ಭದಲ್ಲಿ ಭಾಗವಹಿಸಿದ ಮಾದಿಗ, ಹೊಲೆಯ, ಬೋವಿ, ಲಂಬಾಣಿ

ಇತ್ಯಾದಿ ಜನಾಂಗಗಳಿಗೆ ವರ್ಗೀಕರಣ ಮೀಸಲಾತಿಯ ಅಗತ್ಯ ಏನಿದೆ ಎನ್ನುವುದನ್ನು ಮನವರಿಕೆ ಮಾಡುವಲ್ಲಿ ಯಶಸ್ವಿಯಾಯಿತು.

ದಸಂಸವು ರಾಜ್ಯ ಸಮಿತಿಯ ನಿಯೋಗವೊಂದನ್ನು ರಚಿಸಿಕೊಂಡು ಈ ಸಂಬಂಧ ಚರ್ಚಿಸಿ ಅದು ಜಾರಿಯಲ್ಲಿ ಬರುವಂತೆ ಸರ್ಕಾರಕ್ಕೆ ಒತ್ತಡ ತರಲು ಬಯಸಿತು. ಈ ನಿಯೋಗದಲ್ಲಿ ಎಂ.ಜಯಣ್ಣ, ಶ್ರೀಧರ ಕಲವೀರ, ಮಾವಳ್ಳಿಶಂಕರ್ ಮುಂತಾದವರು ಇದ್ದರು. ಇವರೆಲ್ಲರು ಕೂಡ ಪರಿಶಿಷ್ಟ ಜಾತಿಯ ಮಂತ್ರಿಗಳನ್ನೊಳಗೊಂಡಂತೆ ಅನೇಕ ಮಂತ್ರಿಗಳ ಜೊತೆ ಮಾತುಕತೆ ನಡೆಸಿದರು. ಇಂತಹ ಸಂದರ್ಭಗಳಲ್ಲೆಲ್ಲ ಶ್ರೀಧರ ಕಲವೀರ ಅವರು ಮೀಸಲಾತಿಯ ಅಗತ್ಯತೆಯನ್ನು ಮನಮುಟ್ಟುವಂತೆ ವರ್ಗೀಕರಣ ಸಮರ್ಥನಿಯವಾಗಿ ವಿಶ್ಲೇಷಿದ್ದರು. ಆನಂತರದಲ್ಲಿ ದಿ: ೬-೩-೨೦೦೦ದಂದು ಬೆಂಗಳೂರಿನ ರಾಜಭವನದಲ್ಲಿ ರಾಜ್ಯಪಾಲರನ್ನು ಭೇಟಿ ಮಾಡಿ ಅವರೊಂದಿಗೆ ಮಾತುಕತೆ ಮಾಡಿ ಮನವಿಯನ್ನು ಅರ್ಪಿಸಲಾಗಿದೆ. ದಿ:೧-೪-೨೦೦೦ದಂದು ಮುಖ್ಯಮಂತ್ರಿಯೊಂದಿಗೆ ಚರ್ಚೆ ಮಾಡಿ ಮೀಸಲಾತಿ ವರ್ಗೀಕರಿಸುವಂತೆ ಒತ್ತಾಯಿಸಿ ಮನವಿ ಸಲ್ಲಿಸಿದ್ದಾರೆ. ಹೀಗೆ ಅನೇಕ ಮಂತ್ರಿಗಳ ಜೊತೆ ಮಾತುಕತೆ ಮಾಡಿದಾಗ್ಯೂ ಯಾವುದೇ ಪ್ರತಿಫಲ ದೊರೆಯಲಿಲ್ಲ. ಪ್ರತಿಯೊಬ್ಬ ಮಂತ್ರಿಗಳು ಸಹ ಈ ವಿಷಯವನ್ನು ಗಂಭೀರವಾಗಿ ತೆಗೆದುಕೊಳ್ಳದೆ ಪರಿಶಿಷ್ಟ ಜಾತಿಗಳ ಉಪಪಂಗಡಗಳಿಗೆ ಜನಸಂಖ್ಯಾ ಪ್ರಮಾಣದಲ್ಲಿ ಸಂವಿಧಾನಬದ್ಧವಾಗಿ ನೀಡುವಂತೆ ಶೇ.೧೫ರಷ್ಟನ್ನು ಹಂಚಿಕೆ ಮಾಡಲು ಮುಂದಾಗದೆ ಹೋದದ್ದು ದುರಂತವೆಂದು ದಸಂಸ ನಾಯಕರು ಆರೋಪಿಸುತ್ತಾರೆ.

ಜಾತಿ ಸಂಘಟನೆಗಳು ಒಂದನ್ನೊಂದು ಆರೋಪಿಸಲು ತೊಡಗಿದಾಗ ದಸಂಸ ಮುಂದಾಗಿ ಅವುಗಳ ನಡುವೆ ಸಾಮರಸ್ಯ ಕಾಪಾಡಲು ಪ್ರಯತ್ನಿಸಿದೆ. ಪರಿಶಿಷ್ಟ ಜಾತಿಯ ಸಂಘಟನೆಗಳನ್ನು ಆಹ್ವಾನಿಸಿ ದಿ:೨೪-೧೨-೨೦೦೦ದಂದು ಬೆಂಗಳೂರಿನ ಮಿಥಿಕ್ ಸೊಸೈಟಿಯ ಸಭಾಂಗಣದಲ್ಲಿ ಸಾಮರಸ್ಯ ಸಭೆಯನ್ನು ನಡೆಸಿತು. ವರ್ಗೀಕರಣ ಮೀಸಲಾತಿ ಕುರಿತ ಆಯೋಗ ರಚನೆಯಾಗಿ ವೈಜ್ಞಾನಿಕ ಸಮೀಕ್ಷೆಯಾದಾಗ ಮಾತ್ರ ವಾಸ್ತವಾಂಶಗಳು ಬೆಳಕಿಗೆ ಬರುತ್ತವೆ. ಅಲ್ಲಿಯವರೆಗೆ ಯಾವುದೇ ಜಾತಿ ಸಂಘಟನೆಗಳು ತಮ್ಮ ಅಂದಾಜಿಗೆ ತಕ್ಕಂತೆ ಮಾತನಾಡಿ ಗೊಂದಲವುಂಟು ಮಾಡಿದಂತೆ ಕಿವಿಮಾತು ಹೇಳಿದರು. ಹೀಗೆ ದಸಂಸ ಒಂದು ಕಡೆ ಅವುಗಳ ನಡುವೆ ಏಕತೆಯನ್ನು ಮೂಡಿಸಲು ಪ್ರಯತ್ನಿಸಿರುವುದರ ಜೊತೆಯಲ್ಲಿ ವರ್ಗೀಕರಣ ಮೀಸಲಾತಿ ಹೋರಾಟವನ್ನು ಮುಂದುವರಿಸಿತು.

ರಾಜ್ಯದಲ್ಲಿ ಈ ಬಗೆಯಲ್ಲಿ ಪರಿಶಿಷ್ಟ ಜಾತಿಗಳ ನಡುವೆ ಕಿತ್ತಾಟ ಹಾಗೂ ಹೋರಾಟ ನಡೆಯುತ್ತಲೇ ಇದ್ದರೂ ಯಾವುದೇ ಕ್ರಮ ಕೈಗೊಳ್ಳದೆ ಮೌನವಾಗಿರುವುದನ್ನು ಸರ್ಕಾರ ಎಚ್ಚರಿಸಲು ಬೆಂಗಳೂರಿನಲ್ಲಿ ಪರಿಶಿಷ್ಟ ಜಾತಿಗಳೆ ಉಪಜಾತಿಗಳನ್ನೆಲ್ಲ ಸೇರಿಸಿ ರ್‍ಯಾಲಿಯೊಂದನ್ನು ಮಾಡಲು ನಿರ್ಧರಿಸಿ ಅದರಂತೆ ದಿ:೧೨-೩-೨೦೦೧ ರಂದು ದಸಂಸವು ಬೃಹತ್ ರ್‍ಯಾಲಿಯೊಂದನ್ನು ಆಯೋಜಿಸಿತು.

ಅಂದು ರಾಜ್ಯದ ಇತಿಹಾಸದಲ್ಲಿಯೇ ಪ್ರಥಮ ಬಾರಿಗೆ ಪರಿಶಿಷ್ಟ ಜಾತಿಗಳು ಮೀಸಲಾತಿಯನ್ನು ಜನಸಂಖ್ಯಾವಾರು ವರ್ಗೀಕರಿಸಲು ಒಂದು ಕಡೆ ಸೇರಿಕೊಂಡು ಸರ್ಕಾರದ ಗಮನವನ್ನು ಸೆಳೆಯಲು ಪ್ರಯತ್ನಿಸಿದೆ. ರಾಜ್ಯದ ಎಲ್ಲಾ ಜಿಲ್ಲೆಗಳಿಂದಲೂ ದಲಿತರು ಬೆಂಗಳೂರಿಗೆ ಆಗಮಿಸಿದರು. ಸುಮಾರು ೪೦,೦೦೦ ಸಾವಿರಕ್ಕೂ ಹೆಚ್ಚು ಜನರನ್ನೊಳಗೊಂಡಂತೆ ರ್‍ಯಾಲಿಯು ರಾಜ್ಯಸಂಚಾಲಕರಾದ ಎಂ.ಜಯಣ್ಣನವರ ನೇತೃತ್ವದಲ್ಲಿ ಜಕ್ಕರಾಯನ ಕೆರೆಯಿಂದ ಮೆರವಣಿಗೆ ಹೊರಟು ಪ್ರಮುಖ ಬೀದಿಗಳ ಮಾಲಕ ಸರ್ಕಾರಿ ಕಲಾ ಕಾಲೇಜಿನ ಆವರಣದಲ್ಲಿ ನಡೆಯುವ ಬಹಿರಂಗ ಸಭೆಯ ಸ್ಥಳಕ್ಕೆ ಆಗಮಿಸಿತು. ಅಲ್ಲಿ ನಡೆದ ಸಭೆಯು ದಸಂಸ ಹಿರಿಯ ಮುಖಂಡರಾದ, ಎಂ.ಗಿರಿಯಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ಅಲ್ಲಿ ಭಾಗವಹಿಸಿದ ಪ್ರಮುಖರಲ್ಲಿ ಮುಖ್ಯವಾಗಿ ರಾಜ್ಯಸಂಚಾಲಕ, ಎಂ.ಜಯಣ್ಣ, ರಾಜ್ಯ ಸಂಘಟನ ಸಂಚಾಲಕ ಶ್ರೀಧರ ಕಲವೀರ್, ಬಂಡಾಯ ಸಾಹಿತಿಗಳಾದ ಪ್ರೊ.ಚಂದ್ರಶೇಖರ್ ಪಾಟೀಲ್, ಡಾ.ಎಲ್.ಹನುಮಂತಯ್ಯ, ಮಾಜಿ ಸಂಸದ ಪಿ.ಕೊದಂಡ ರಾಮಯ್ಯ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರಾಗಿದ ಪ್ರೊ.ರವಿವರ್ಮಕುಮಾರ್ ಮುಂತಾದವರು ಭಾಗವಹಿಸಿದ್ದರು.

ಭಾಗವಹಿಸಿದವರೆಲ್ಲರೂ ಮೀಸಲಾತಿಯ ವರ್ಗೀಕರಣವನ್ನು ಬೆಂಬಲಿಸಿ ಮಾತನಾಡಿ ಆದಷ್ಟು ಬೇಗ ಈ ಸಂಬಂಧ ಆಯೋಗ ರಚನೆ ಮಾಡವಂತೆ ಸರ್ಕಾರಕ್ಕೆ ಒತ್ತಡ ತರಬೇಕೆಂದರು. ದಸಂಸ ಮುಖಂಡರು ಮಾತನಾಡಿ ಈ ಕೂಡಲೆ ಸರ್ಕಾರ ಕ್ರಮ ಕೈಗೊಳ್ಳದೆ ಹೋದರೆ ಚಳುವಳಿ ಉಗ್ರ ಸ್ವರೂಪ ಪಡೆದುಕೊಳ್ಳುವುದು ಎಂದು ಸರ್ಕಾರಕ್ಕೆ ಎಚ್ಚರಿಕೆ ನೀಡಿದರು. ಇದೇ ಸಂದರ್ಭದಲ್ಲಿ ಮಾತನಾಡಿದ ಪ್ರೊ.ಚಂದ್ರಶೇಖರ ಪಾಟೀಲ್ ಪರಿಶಿಷ್ಟರಿಗೆ ಸೀಗಬೇಕಾದ ಒಳ ಮೀಸಲಾತಿ ಸಿಗಬೇಕು. ಸರ್ಕಾರ ಒಬ್ಬನಿಗೆ ಹೊಟ್ಟೆ ತುಂಬಾ ಊಟ ನೀಡಿ ಇನ್ನೊಬ್ಬನಿಗೆ ಉಪವಾಸ ಕೆಡವಿದರೆ ಈ ರೀತಿಯ ಹೋರಾಟಗಳು ತನ್ನಿಂತಾನೆ ಹುಟ್ಟಿಕೊಳ್ಳುತ್ತವೆ ಎಂದು, ಮನುಷ್ಯ ಹಂಚಿಕೊಂಡು ತಿನ್ನುವುದನ್ನು ಕಲಿಯಬೇಕೆ ಹೊರತು ಹರಕೊಂಡು ತಿನ್ನಬಾರದು ಎಂದು ತಿಳಿಸಿದರು. ಇಂತಹ ಸಂದರ್ಭದಲ್ಲಿ ಸಬಲ ವರ್ಗಕ್ಕೆ ಸೇರಿದ ಬುದ್ಧಿ ಜೀವಿಗಳು ಈ ಹಕ್ಕೋತ್ತಾಯಗಳನ್ನು ಅರ್ಥಮಾಡಿಕೊಂಡು ಈ ಆಂದೋಲನಕ್ಕೆ ಸಹಕಾರ ನೀಡಬೇಕು ಎಂದು ಕರೆಕೊಟ್ಟರು. ಹೀಗೆ ಇವತ್ತಿನ ಸಂದರ್ಭದ ಸ್ಥಿತಿಯನ್ನು ಸೂಕ್ಷ್ಮವಾಗಿ ತಿಳಿಸಿದ ಅವರು ಈ ವರ್ಗೀಕರಣ ಮೀಸಲಾತಿ ಆಗುವುದು ಸರಿ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಈ ರ್‍ಯಾಲಿ ಸಂದರ್ಭದಲ್ಲಿಯೇ 'ವರ್ಗೀಕರಣ ಮೀಸಲಾತಿ'ಗೆ ಸಂಬಂಧಿಸಿದಂತೆ ಆಯೋಗ ರಚಿಸಬೇಕೆಂಬ ಪ್ರಧಾನ ಬೇಡಿಕೆಯೊಂದಿಗೆ ಇನ್ನೂ ಹಲವು ಬೇಡಿಕೆಗಳನ್ನು ಒಳಗೊಂಡ ಮನವಿ ಪತ್ರವನ್ನು ಸರ್ಕಾರಕ್ಕೆ ನೀಡಲಾಯಿತು.

ರ್‍ಯಾಲಿ ಮಾಡಿದ ನಂತರವು ಸರ್ಕಾರ ಯಾವುದೇ ಕ್ರಮ ಕೈಗೊಳ್ಳದೆ ಹೋದುದರಿಂದ ದಸಂಸ ವರ್ಗೀಕರಣ ಮೀಸಲಾತಿ ಹೋರಾಟವನ್ನು ಮುಂದುವರಿಸಿತು. ಎಲ್ಲ ಜಿಲ್ಲಾ ಕೇಂದ್ರಗಳಲ್ಲಿ ಈ

ಸಂಬಂಧ ದಿ: ೨೪-೭-೨೦೦೧ದಂದು ಧರಣಿ ಕಾರ್ಯಕ್ರಮವನ್ನು ಕೈಗೊಂಡಿತು. ಅಂದು ಬೆಂಗಳೂರಿನಲ್ಲಿ ರಾಜ್ಯ ಸಮಿತಿಯು ಮುಖ್ಯಮಂತ್ರಿಯನ್ನೂ ಭೇಟಿ ಮಾಡಿ ಮನವಿ ನೀಡಿತು. ನಂತರ ದಿ:೨೮-೮-೨೦೦೧ ಮತ್ತೊಮ್ಮೆ ರಾಜ್ಯಪಾಲರನ್ನು ಭೇಟಿ ಮಾಡಿ ರಾಷ್ಟ್ರಪತಿಗಳ ಗಮನಕ್ಕೆ ತರುವಂತೆ ಕೇಳಿಕೊಳ್ಳಲಾಯಿತು. ಹೀಗೆ ಈ ಹೋರಾಟವನ್ನು ಮುಂದುವರಿಸಿದ ದಸಂಸ ಮನವಿಗಳನ್ನು ಸರ್ಕಾರಕ್ಕೆ ನೀಡುತ್ತಾ ಹೋಯಿತು. ಆದರೆ ಇದಾವುದಕ್ಕೂ ಸರ್ಕಾರ ಪ್ರತಿಕ್ರಿಯಿಸಲಿಲ್ಲ. ಈ ಸಂಬಂಧ ಪರಿಶಿಷ್ಟ ಜಾತಿಯ ಮಂತ್ರಿಗಳೊಂದಿಗೆ ಮಾತನಾಡಿದಾಗ ವರ್ಗೀಕರಣ ಮೀಸಲಾತಿಯನ್ನು ಒಪ್ಪುವ ಪರಿಶಿಷ್ಟ ಜಾತಿಯ ಮತ್ತು ಇತರೆ ಮಂತ್ರಿಗಳು ಮುಖ್ಯಮಂತ್ರಿಗಳೊಂದಿಗೆ ಮಾತುಕತೆಗೆ ಕರೆದಾಗ ಬರಲು ಮುಂದಾಗುವುದಿಲ್ಲ ಎಂದು ರಾಜ್ಯ ಸಂಚಾರಕರಾದ ಎಂ.ಜಯಣ್ಣ ಆರೋಪಿಸುತ್ತಾರೆ.

ದಸಂಸವು ಮತ್ತೊಮ್ಮೆ ಸರ್ಕಾರವನ್ನು ಎಚ್ಚರಿಸಲು ಬೆಂಗಳೂರಿನಲ್ಲಿ ರ್‍ಯಾಲಿಯೊಂದನ್ನು ಹಮ್ಮಿಕೊಳ್ಳಲು ತೀರ್ಮಾನಿರುವುದಾಗಿ ದಿ:೨೩-೧೦-೦೧ರಂದು ಚಿತ್ರದುರ್ಗದಲ್ಲಿ ನಡೆದ ಪತ್ರಿಕ ಗೋಷ್ಠಿಯಲ್ಲಿ ಹೊಸದಾಗಿ ರಾಜ್ಯ ಸಂಚಾಲಕರಾಗಿ ಆಯ್ಕೆಯಾದ ಎಸ್ .ಶಿವಣ್ಣ ಈ ವಿಷಯ ತಿಳಿಸಿದರು. ಅದರಂತೆ ದಿ.೬.೧.೦೨ರಂದು ಹರಿಹರದಲ್ಲಿರುವ ಪ್ರೊ.ಬಿ.ಕೃಷ್ಣಪ್ಪನವರ ಸಂಘರ್ಷ ಭೂಮಿ ಸಮಾಧಿಯಿಂದ ಕಾಲ್ನಡಿಗೆ ಗಥಾ ಆರಂಭಗೊಂಡಿತ್ತು. ಅದು ಎಲ್ಲಾ ಜಿಲ್ಲೆಗಳಲ್ಲಿ ಸಂಚರಿಸಿ ೧೬ ದಿನಗಳಲ್ಲಿ ಬೆಂಗಳೂರನ್ನು ದಿ.೨೧.೧.೦೨ರಂದು ತಲುಪಿತು. ಅಂದು ಏರ್ಪಡಿಸಿದ್ದ ಪ್ರತಿಭಟನೆ ರ್‍ಯಾಲಿಯನ್ನು ರಾಜ್ಯದ ಎಲ್ಲಾ ಭಾಗಗಳಿಂದಲೂ ಬಂದ ಸುಮಾರು ೬೦ ಸಾವಿರಕ್ಕೂ ಹೆಚ್ಚು ಜನರು ಭಾಗವಹಿಸಿದ್ದರು. ಈ ಒಂದು ರ್‍ಯಾಲಿಯಲ್ಲಿ ಮಾದಿಗ ಮೀಸಲಾತಿ ಹೋರಾಟ ಸಮತಿಯವರು ಸಹ ಭಾಗವಹಿಸಿದ್ದು ವಿಶೇಷವಾಗಿ ಕಂಡು ಬಂದಿತು. ರ್‍ಯಾಲಿಯ ರಾಜ್ಯ ಸಂಚಾಲಕರಾದ ಶಿವಣ್ಣನವರ ನೇತೃತ್ವದಲ್ಲಿ ಜಕ್ಕರಾಯನ ಕೆರೆಯಿಂದ ಮೆರವಣಿಗೆ ಹೊರಟು ಪ್ರಮುಖ ಬೀದಿಗಳ ಮೂಲಕ ಸರ್ಕಾರಿ ಕಲಾ ಕಾಲೇಜು ಆವರಣದಲ್ಲಿ ಏರ್ಪಡಿಸಿದ್ದ ಬಹಿರಂಗ ಸಭೆಯ ಸ್ಥಳಕ್ಕೆ ಬಂದಿತು. ಅಲ್ಲಿ ನಡೆದ ಸಭೆಯಲ್ಲಿ ರಾಜ್ಯ ಸಂಘಟನ ಸಂಚಾಲಕರಾದ ಎಂ.ಜಯಣ್ಣ, ಮಾವಳ್ಳಿ ಶಂಕರ್, ನಿವೃತ್ತ ಹೈಕೋರ್ಟ್ ನ್ಯಾಯಾಧೀಶ, ಹೆಚ್.ಜಿ.ಬಾಲಕೃಷ್ಣ ಬಹುಜನ ಸಮಾಜ ಪಕ್ಷದ ಅಧ್ಯಕ್ಷ ಬಿ.ಗೋಪಾಲ್, ಪಿ.ಕೋದಂಡ ರಾಮಯ್ಯ, ಶ್ರೀಧರನ್, ಸಾಹಿತಿಗಳಾದ ಮೊಗಳ್ಳಿ ಗಣೇಶ್, ಬಿ.ಟಿ.ಲಲಿತ ನಾಯಕ, ಸಿ.ಕೆ.ಮಹೇಶ್ ಮುಂತಾದವರು ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಸಿ.ಕೆ.ಮಹೇಶ್ ಬರೆದ 'ಅಂಬೇಡ್ಕರ್ ಮತ್ತು ವರ್ಗೀಕರಣ ಮೀಸಲಾತಿ' ಪುಸ್ತಕ ಬಿಡುಗಡೆ ಮಾಡಲಾಯಿತು.

ರಾಜ್ಯ ಸಂಚಾಲಕರಾದ ಎಸ್ .ಶಿವಣ್ಣನವರು ಸಮಾವೇಶ ಉದ್ಘಾಟಿಸಿ ಮಾತನಾಡುತ್ತಾ ಸರ್ಕಾರವು ಈ ಕೂಡಲೇ ಎಚ್ಚೆತ್ತುಕೊಂಡು ಮೀಸಲಾತಿಯನ್ನು ವರ್ಗೀಕರಿಸಲು ಒಂದು ಆಯೋಗ ರಚಿಸದೆ ಅದರ ಪರಿಣಾಮ ಎದುರಿಸಬೇಕಾಗುತ್ತದೆ ಎಂದು ಎಚ್ಚರಿಸಿದರು. ಹೆಚ್.ಜಿ. ಬಾಲಕೃಷ್ಣ ಮಾತನಾಡಿ ಆಂಧ್ರ ಮಾದರಿಯಲ್ಲಿ ಇಲ್ಲಿಯು ವರ್ಗೀಕರಣ ಮಾಡಬೇಕಾಗಿರುವುದು ಅನಿವಾರ್ಯ ಎಂದರು.

ಇದೇ ಸಂದರ್ಭದಲ್ಲಿ ಮಾತನಾಡಿದ ರಾಜ್ಯ ಸಂಘಟನ ಸಂಚಾಲಕ ಎಂ.ಜಯಣ್ಣ ಈ ಹೋರಾಟವನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿ ಆಯೋಗ ರಚಿಸದೆ ಹೋದರೆ ಮುಂದಿನ ದಿನಗಳಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಜೈಲ್ ಬರೋ ಚಳವಳಿ ಮಾಡಬೇಕಾಗುವುದು ಎಂದರಲ್ಲದೇ ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬುವಂತಹ ಸಂದರ್ಭದಲ್ಲಿ ಯಾವುದೇ ಜಾತಿಗೆ ಅನ್ಯಾಯವಾಗದಂತೆ ಸರ್ಕಾರ ಎಚ್ಚರಿಕೆ ವಹಿಸಬೇಕೆಂದು ತಿಳಿಸಿದರು. ಬಹುಜನ ಸಮಾಜ ಪಕ್ಷದ ಅಧ್ಯಕ್ಷರಾದ ಬಿ.ಗೋಪಾಲ್ ಮಾತನಾಡಿ ಈ ವರ್ಗೀಕರಣ ಮೀಸಲಾತಿಯನ್ನು ಬಿ.ಎಸ್.ಪಿ ಸಂಪೂರ್ಣವಾಗಿ ಬೆಂಬಲಿಸಿರುವುದನ್ನು ತಿಳಿಸಿದ ಅವರು. ಒಂದೇ ಜಾತಿಗೆ ಸೇರಿದ ಮಂತ್ರಿಗಳು ಮುಖ್ಯಮಂತ್ರಿಗಳನ್ನು ಆಯೋಗ ರಚಿಸದಂತೆ ತಡೆಯುತ್ತಿವೆ. ರಾಜ್ಯ ಸಂಘಟನ ಸಂಚಾಲಕ ಮಾವಳ್ಳಿ ಶಂಕರ್ ಮಾತನಾಡುತ್ತಾ 'ಸಮಕಾಲೀನ ಸಮಾನತೆಯ ಹಂಚಿಕೆಗಾಗಿ ಈ ಜಾಥ' ನಡೆದಿದೆ. ಇದನ್ನೂ ಅರ್ಥಮಾಡಿಕೊಂಡು ಸರ್ಕಾರ ಕೂಡಲೇ ಆಯೋಗ ರಚನೆ ಮಾಡಿ ಮೀಸಲಾತಿ ವರ್ಗೀಕರಣ ಮಾಡಬೇಕೆಂದು ಒತ್ತಾಯಿಸಿದರು.

ಇದೇ ಸಂದರ್ಭದಲ್ಲಿ ಸಾಹಿತಿಗಳಾದ ಬಿ.ಟಿ.ಲಲಿತ ನಾಯಕ್ ಮಾತನಾಡಿ ಈ ವರ್ಗೀಕರಣಕ್ಕೆ ತಮ್ಮ ಬೆಂಬಲ ಸೂಚಿಸಿದರು. ಇನ್ನೋರ್ವ ಸಾಹಿತಿ ಮೊಗಳ್ಳಿ ಗಣೇಶ ಮಾತನಾಡುತ್ತಾ ಈ ಒಳ ಮೀಸಲಾತಿ ಹೋರಾಟವನ್ನು ನಾನು ಯಾವ ರೀತಿ ಭಾವಿಸುತ್ತೇನೆಂದರೆ ಇದು ಮೀಸಲಾತಿ ಹೋರಾಟದ ಮುಂದುವರಿದ ಭಾಗವಾಗಿ ಇದನ್ನು ಭಾವಿಸಬೇಕಾಗುತ್ತದೆ. ಈ ಒಳ ಮೀಸಲಾತಿ ಹೋರಾಟ ನಮ್ಮ ಒಗ್ಗಟ್ಟಿನ ಸಂಕೇತವೆಂದು ಭಾವಿಸಬೇಕೆ ಹೊರತು ಒಂದು ಬಗೆಯ ಒಡಕು ಎಂದು ಭಾವಿಸಬಾರದೆಂದರು. ರಾಜ್ಯ ಕಾರ್ಯಕಾರಿ ಸಮಿತಿ ಸದಸ್ಯ ಲೇಖಕ ಸಿ.ಕೆ.ಮಹೇಶ್ ಮಾತನಾಡಿ ಮೀಸಲಾತಿ ವರ್ಗೀಕರಣ ಎನ್ನುವುದು ಹಿಂದೂ ಸಂಸ್ಕೃತಿಯಲ್ಲಿ ಯಾವ ಅವ್ವ ಸಂಸ್ಕೃತಿ ಹುಟ್ಟಿತೋ ಅಂತ ಅವ್ವ ಸಂಸ್ಕೃತಿಯ ವಾರಸುದಾರರಾದ ಮಾತಂಗ ಕುಲದವರು, ನಾಗ ಕುಲದವರು ದಸ್ಯಗಳು ಹುಟ್ಟಿ ಹಾಕಿರುವಂತಹ ವಿಚಾರಧಾರೆ, ಹಂಚಿಕೊಂಡು ತಿನ್ನುವ ತಾತ್ವಿಕ ನೆಲೆಯ ಮೇಲೆ ಮೀಸಲಾತಿ ವರ್ಗೀಕರಣ ಅನ್ನುವಂತಹ ವಿಚಾರ ಅಡಗಿಕೊಂಡಿದೆ. ಅಂತಹ ಅವ್ವ ಸಂಸ್ಕೃತಿಯು ಬುದ್ಧನ ಮೂಲಕ 'ಬಹು ಜನ ಹಿತಾಯ ಬಹುಜನ ಸುಖಾಯ' ಅನ್ನುವಂತಹ ತಾತ್ವಿಕ ದರ್ಶನ ಹೊರಟಿತೋ ಆ ತತ್ವದಲ್ಲಿಯೂ ಕೂಡ ಮೀಸಲಾತಿ ವರ್ಗೀಕರಣ ಇರುವುದನ್ನು ನೋಡಲಿಕ್ಕೆ ಸಾಧ್ಯ ಇದೆ. ಅದು ಮುಂದುವರಿದ ಭಾಗವೇ ಅಂಬೇಡ್ಕರ್‌ರು ಮಾಡಿರುವಂತಹದು ಅದನ್ನು ಪ್ರಯೋಗಿಕವಾಗಿ ಕರ್ನಾಟಕದಲ್ಲಿ ೨೫ ವರ್ಷಗಳಿಂದ ಕೃಷ್ಣಪ್ಪನವರು ಮಾಡಿಕೊಂಡು ಬಂದಿರುವಂತಹದು ಈ ಕಾರಣದಿಂದಾಗಿ ಇದೊಂದು ಚಾರಿತ್ರಿಕವಾದ, ಸೈದ್ಧಾಂತಿಕವಾದ ವಿಚಾರವಾಗಿದೆ. ಮೀಸಲಾತಿ ವರ್ಗೀಕರಣ ಇದು ಅಪ್ರಸ್ತುತವಲ್ಲ, ಅಸಂಗತ ಅಲ್ಲ, ಅಂತ ಹೇಳುತ್ತಾ ಮೀಸಲಾತಿ ವರ್ಗೀಕರಣ ಮೂಲಕವೇ ದಲಿತರ ಏಕೀಕರಣ, ದಲಿತರ ಏಕೀಕರಣದ ಮೂಲಕವೇ ಈ ನಾಡನ್ನು ಆಳಲಿಕ್ಕೆ ಸಾಧ್ಯ ಎಂದು ತಾತ್ವಿಕವಾಗಿ ಮಾತನಾಡಿದರು. ಇನ್ನೂ ಕೆಲವರು ಮಾತನಾಡಿ ಸರ್ಕಾರ ಆದಷ್ಟು ಬೇಗ ಆಯೋಗ

ರಚನೆ ಮಾಡಿ ವರ್ಗೀಕರಣ ಮೀಸಲಾತಿ ಜಾರಿಯಲ್ಲಿ ತರುವಂತೆ ಮಾಡಬೇಕೆಂದು ಒತ್ತಾಯಿಸಿದರು. ಸಂಘಟನ ಸಂಚಾಲಕರಾದ ಶ್ರೀಧರ ಕಲವೀರ ಮಾತನಾಡಿ ವರ್ಗೀಕರಣ ಮೀಸಲಾತಿಯ ಅಗತ್ಯ ಮತ್ತು ಆನಂತರ ದಲಿತರ ನಡುವೆ ಏಕತೆಯನ್ನು ಉಂಟಾಗುವಂತೆ ಮನಮುಟ್ಟುವಂತೆ ತಿಳಿಸಿಕೊಟ್ಟರು. ವೈಜ್ಞಾನಿಕವಾದ ರೀತಿಯಲ್ಲಿ ಆಯೋಗವು ಕೆಲಸ ನಿರ್ವಹಿಸಿ ಪರಿಶಿಷ್ಟ ಜಾತಿಯ ಪ್ರತಿಯೊಂದು ಜಾತಿಗಳಿಗೂ ಅವಕಾಶ ಸಿಗುವಂತಹ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಬೇಕೆಂದು ತಿಳಿಸಿದರು.

'ಕರ್ನಾಟಕ ರಾಜ್ಯದಲ್ಲಿ ವಿವಿಧ ಪರಿಶಿಷ್ಟ ಜಾತಿಗಳ ಮೀಸಲಾತಿ ವರ್ಗೀಕರಣಕ್ಕಾಗಿ(ಒಳ ಮೀಸಲಾತಿ) ಕಾಯ್ದೆ ರಚಿಸಲು ಮತ್ತು ಅಧ್ಯಯನ ಮಾಡಿ ವರದಿ ಸಲ್ಲಿಸಲು ಆಯೋಗವನ್ನು ಸರ್ಕಾರವು ಕೂಡಲೇ ರಚಿಸಬೇಕು' ಎಂಬುದಾಗಿದೆ. ಪರಿಶಿಷ್ಟರ ಮೀಸಲಾತಿ ಹಂಚಿಕೆಯಲ್ಲಿ ಆಗಿರುವ ಏರುಪೇರನ್ನು ಸರಿಪಡಿಸಲು ಯಾವ ಯಾವ ಪರಿಶಿಷ್ಟ ಜಾತಿಗಳ ಸಂಖ್ಯೆ ಎಷ್ಟಿದೆ ಮತ್ತು ಆ ಪರಿಶಿಷ್ಟ ಜಾತಿಗಳಿಗೆ ಈವರೆಗೆ ದಕ್ಕಿರುವ ಮೀಸಲಾತಿ ಪ್ರಮಾಣದ ತಲಾ ಪಾಲೆಷ್ಟು, ಮೀಸಲಾತಿ ಹಂಚಿಕೆಯಾಗಲಿರುವ ಏರುಪೇರೆಷ್ಟು ಹಾಗೂ ಇವನ್ನೆಲ್ಲಾ ಸರಿಪಡಿಸಲು ಜಾರಿಗೊಳಿಸಬೇಕಾಗಿರುವ ಪರಿಶಿಷ್ಟ ಜಾತಿಗಳ ಮೀಸಲಾತಿ ವರ್ಗೀಕರಣ ಕಾಯ್ದೆಯ ಸ್ವರೂಪಗಳ ಬಗ್ಗೆ ಅಧ್ಯಯನ ಮಾಡಲು ಸುಪ್ರಿಂಕೋರ್ಟಿನ ನ್ಯಾಯಾಧೀಶರ ಅಧ್ಯಕ್ಷತೆ ಇರುವ ವಿವಿಧ ಪರಿಶಿಷ್ಟ ಜಾತಿಗಳ ಸೂಕ್ತ ಮತ್ತು ತಜ್ಞ ಪ್ರತಿನಿಧಿಗಳಿರುವ ಆಯೋಗವನ್ನು ರಾಜ್ಯ ಸರ್ಕಾರವು ಈ ಕೂಡಲೇ ರಚಿಸಬೇಕೆಂದು ಈ ರ್‍ಯಾಲಿ ಸಂದರ್ಭದಲ್ಲಿ ದಸಂಸ ಆಗ್ರಹಿಸುತ್ತದೆ ಎಂದು ಸಮಾವೇಶ ನಂತರ ನೀಡಿದ ಮನವಿಯಲ್ಲಿ ಸಲ್ಲಿಸಿದ ಪ್ರಧಾನ ಬೇಡಿಕೆ ಇದಾಗಿತ್ತು.

### ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಪ್ರತ್ಯೇಕ ಮೀಸಲಾತಿ ಹೋರಾಟ

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಪರಿಶಿಷ್ಟ ಜಾತಿಯ ಮೀಸಲಾತಿಯನ್ನು ಅದರ ಒಳ ಜಾತಿಗಳಿಗೆ ಜನಸಂಖ್ಯಾವಾರು ಹಂಚಿಕೆ ಮಾಡುವಂತೆ ಸರ್ಕಾರದ ಗಮನ ಸೆಳೆಯಲು ವಿವಿಧ ಸಂಘಟನೆಗಳು ಧರಣಿ, ವಿಚಾರ ಸಂಕಿರಣ, ರ್‍ಯಾಲಿ, ಸಮಾವೇಶ ಮುಂತಾದ ಪ್ರತಿಭಟನೆಗಳನ್ನು ಮಾಡಿವೆ. ಅಂಥಹ ಸಂಘಟನೆಗಳೆಂದರೆ 'ಮಾದಿಗ ದಂಡೋರ', 'ಮಾದಿಗರ ಮೀಸಲಾತಿ ಹೋರಾಟ ಸಮಿತಿ', 'ಅಖಿಲ ಕರ್ನಾಟಕ ಆದಿಜಾಂಬವ ಸಂಘ' ಹಾಗೂ 'ಜಿಲ್ಲಾ ದಲಿತ ಸಂಘರ್ಷ ಸಮಿತಿ' (ಪ್ರೊ.ಬಿ.ಕೆ)ಗಳಾಗಿವೆ. ಇವುಗಳಲ್ಲಿ ಮೊದಲು ಈ ಕುರಿತು ಹೋರಾಟ ಆರಂಭಿಸಿದ್ದು 'ಮಾದಿಗ ದಂಡೋರ' ಸಂಘಟನೆ. ಆನಂತರದಲ್ಲಿ ಉಳಿದವು ಆ ಮಾರ್ಗದಲ್ಲಿ ಮುನ್ನೆಡೆದಿವೆ. ಈ ಹಿನ್ನೆಲೆಯಲ್ಲಿ ಈ ಎರಡು ಜಿಲ್ಲೆಗಳಲ್ಲಿ ಅವುಗಳು ಪ್ರತ್ಯೇಕ ಮೀಸಲಾತಿ ಬೇಡಿಕೆಯ ಅಥವಾ ವರ್ಗೀಕರಣ ಮೀಸಲಾತಿ ಬೇಡಿಕೆಯ ಈಡೇರಿಕೆಗಾಗಿ ನಡೆಸಿದ ಹೋರಾಟದ ವಿವಿಧ ಕ್ರಮಗಳನ್ನು ಇಲ್ಲಿ ವಿವರಿಸಿ ಚರ್ಚಿಸಲಾಗಿದೆ.

## ಬಳ್ಳಾರಿ ಜಿಲ್ಲೆಯ ಜಾತಿ ಸಂಘಟನೆಗಳು ನಡೆಸಿದ ಹೋರಾಟ

ಬಳ್ಳಾರಿ ಜಿಲ್ಲೆಯಲ್ಲಿ ಪ್ರತ್ಯೇಕ ಮೀಸಲಾತಿ ಹೋರಾಟವನ್ನು ಆರಂಭಿಸಿದ್ದು 'ಮಾದಿಗ ದಂಡೋರ' ಸಂಘಟನೆ. ಆಂಧ್ರಪ್ರದೇಶದಲ್ಲಿ ನಡೆಯುತ್ತಿದ್ದ ಮಾದಿಗರ ಹೋರಾಟದ ಪ್ರಭಾವ ಮೊದಲು ಆಂಧ್ರದ ಗಡಿ ಭಾಗಗಳಲ್ಲಿ ಮೊದಲಾಗಿದೆ. ಪರಿಣಾಮವಾಗಿ ಚಿತ್ರದುರ್ಗಕ್ಕಿಂತಲೂ ಮೊದಲು ಬಳ್ಳಾರಿ ಜಿಲ್ಲೆಯಲ್ಲಿ 'ಮಾದಿಗ ದಂಡೋರ' ಹುಟ್ಟಿಕೊಂಡಿತು. ಇಲ್ಲಿ ಈ ಸಂಘಟನೆ ಉಗಮವಾಗಲು ಪ್ರಮುಖ ಕಾರಣಕರ್ತರು ಜೆ.ಜಗನ್ನಾಥ ಮತ್ತು ಬಿ ಆರೋಗ್ಯಸ್ವಾಮಿ ಮುಂತಾದವರು. ಇತರ ಮುಖಂಡತ್ವದಲ್ಲಿ ಸಮಿತಿಯೊಂದು ದಿನಾಂಕ ೧೨.೦೭.೧೯೯೮ರಂದು ಬಳ್ಳಾರಿ ಜಿಲ್ಲಾ ಶಾಖೆಯನ್ನು ರಾಜ್ಯಾಧ್ಯಕ್ಷರಾದ ಮಾಪಣ್ಣ ಹದನೂರು ಮತ್ತು ಪ್ರಧಾನ ಕಾರ್ಯದರ್ಶಿ ಎಂ.ಶಂಕರಪ್ಪ ಬಂದು ಉದ್ಘಾಟಿಸಿದರು. ಅಂದು ನಡೆದ ಸಭೆಯಲ್ಲಿ ಪ್ರತ್ಯೇಕ ಮೀಸಲಾತಿ ಹೋರಾಟದಲ್ಲಿ ಮಾದಿಗರನ್ನು ತೊಡಗಿಸಿಕೊಳ್ಳುವಂತೆ ಕರೆ ನೀಡಲಾಯಿತು. ಇದು ನಮ್ಮದೇ ಆದಂತಹ ಸಂಘಟನೆ, ಜಾತಿ ಸಮಸ್ಯೆ, ನೋವು, ನಲಿವು, ಅನ್ಯಾಯಗಳಿಗೆ ಪರಿಹಾರ ಕಂಡುಕೊಳ್ಳುವ ಉದ್ದೇಶದಿಂದ ಸೇರಿರುತ್ತದೆ. ಈ ಸಂಘಟನೆ ಯಾವುದೇ ಒಂದು ಜಾತಿ, ವ್ಯಕ್ತಿ, ಪಕ್ಷ, ಸರಕಾರ ಹಾಗೂ ಸಂಘ ಸಂಸ್ಥೆಗಳ ವಿರೋಧಿಯಲ್ಲ ಎಂದು ಸ್ಪಷ್ಟಪಡಿಸಿದರು. ಹೀಗೆ ಉದ್ಘಾಟನೆಗೊಂಡ 'ಮಾದಿಗ ದಂಡೋರ' ಶಾಖೆ ತ್ವರಿತಗತಿಯಲ್ಲಿ ತಾಲ್ಲೂಕು ಶಾಖೆಗಳನ್ನು ಆರಂಭಿಸಿತು. ಇದರಿಂದಾಗಿ ಬಳ್ಳಾರಿ, ಹೊಸಪೇಟೆ, ಸಂಡೂರು, ಕಂಪ್ಲಿ, ಕೊಟ್ಟೂರು, ಸಿರುಗುಪ್ಪ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ಮುಂತಾದ ಕಡೆಗಳಲ್ಲಿ ಶಾಖೆಗಳು ಹೋರಾಟವನ್ನು ಕೈಗೊಂಡವು.

ಮಾದಿಗ ದಂಡೋರ ಸಂಘಟನೆ ಹುಟ್ಟಿಕೊಂಡ ಕೆಲವೇ ತಿಂಗಳಲ್ಲಿ ಮತ್ತೊಂದು ಸಂಘಟನೆ ಅದೇ ಹೆಸರಿನಲ್ಲಿ ದಿನಾಂಕ ೭.೦೯.೧೯೯೮ರಂದು ಮಹಾನಂದಿ ಕೊಟ್ಟಂನಲ್ಲಿ ಸಭೆ ನಡೆಸುವುದನ್ನು ತಡೆಗಟ್ಟುವಂತೆ ಆಗ ಜಿಲ್ಲಾಧ್ಯಕ್ಷರಾಗಿದ್ದ ಜೆ.ಜಗನ್ನಾಥ ಪೋಲಿಸ್‌ಗೆ ದೂರು ಸಲ್ಲಿಸಿರುವುದು ಕಂಡುಬರುತ್ತದೆ.

ಗುಲಬರ್ಗಾದಲ್ಲಿ ದಿನಾಂಕ ೦೭.೧೧.೧೯೯೮ರಂದು ನಡೆದ ಸಮಾವೇಶಕ್ಕೆ ಭಾಗವಹಿಸಲು ಇಲ್ಲಿಯ ಮಾದಿಗ ದಂಡೋರ ಸಂಘಟನೆಯ ಪೂರ್ವಭಾವಿ ಸಭೆ ನಡೆಸಿತು. ಆ ಸಮಾವೇಶದಲ್ಲಿ ಭಾಗವಹಿಸಲು ಹೋರಡಲು ತೀರ್ಮಾನ ತೆಗೆದುಕೊಂಡು ಇಲ್ಲಿಂದ ಸುಮಾರು ಎರಡು ಸಾವಿರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಮಾದಿಗರು ಭಾಗವಹಿಸಿದರು. ಇದೇ ರೀತಿಯಲ್ಲಿ ಬಳ್ಳಾರಿ ಜಿಲ್ಲಾ ಸಮಾವೇಶ ವೊಂದನ್ನು ಮಾಡಲು ಜಿಲ್ಲಾ ಸಮಿತಿ ನಿರ್ಧರಿಸಿತು. ಅದರಂತೆ ದಿನಾಂಕ ೨೩.೧೨.೧೯೯೮ರಂದು ಬಳ್ಳಾರಿ ಜಿಲ್ಲಾ ಸಮಾವೇಶವನ್ನು ಏರ್ಪಡಿಸಿ ಆಂಧ್ರಪ್ರದೇಶದ ಮಾದಿಗರ ನಾಯಕ ಮಂದಾಕೃಷ್ಣ ಮಾದಿಗನನ್ನು ಕರೆಸಿತು. ಅಂದು ಜಿಲ್ಲೆಯ ಎಲ್ಲಾ ಭಾಗಗಳಿಂದ ಸುಮಾರು ನಾಲ್ಕು ಸಾವಿರ

ಮಾದಿಗರು ಬಳ್ಳಾರಿಯಲ್ಲಿ ಸೇರಿಕೊಂಡು ಮೆರವಣಿಗೆ ನಡೆಸಿದರು. ಈ ಮೆರವಣಿಗೆಯಲ್ಲಿ ಮಾದಿಗ ದಂಡೋರ ರಾಜ್ಯಾಧ್ಯಕ್ಷರಾದ ಮಾಪಣ್ಣ ಹದನೂರು ಮತ್ತು ಪ್ರಧಾನ ಕಾರ್ಯದರ್ಶಿ ಎಂ.ಶಂಕರಪ್ಪ ಭಾಗವಹಿಸಿದ್ದರು. ಈ ಮಧ್ಯೆ ದಿನಾಂಕ ೧೪.೧೦.೧೯೯೮ರಂದು ಬಳ್ಳಾರಿಯಲ್ಲಿ ಆದಿಜಾಂಬವ ಸ್ವಾಭಿಮಾನ ಸಮಾವೇಶವೊಂದು ನಡೆದು ಅದು ಸಹ ಈ ಬೇಡಿಕೆಯನ್ನು ಎತ್ತಿ ಹಿಡಿದಿದೆ. ಈ ಹಿನ್ನೆಲೆಯಲ್ಲಿ ನಡೆಯುವ ಕಾರ್ಯಕ್ರಮದಲ್ಲಿ ಮಾತ್ರವಲ್ಲದೆ ಆಂಧ್ರ ಪ್ರದೇಶದಲ್ಲಿ ಮಾದಿಗರು ನಡಸುತ್ತಿದ್ದ ಹೋರಾಟಕ್ಕೆ ಬೆಂಬಲಿಸಲು 'ಹೈದರಾಬಾದ್ ಮುತ್ತಿಗೆ' ಕಾರ್ಯಕ್ರಮದಲ್ಲಿ ಭಾಗವಹಿಸಲು ತೆರಳಲು ನಿರ್ಧರಿಸಿದ್ದು ಉಂಟು. ಆದರೆ ಅಲ್ಲಿಯ ಸರ್ಕಾರ ದಿನಾಂಕ ೧೨.೦೪.೧೯೯೯ರಂದು ಮಧ್ಯ ರಾತ್ರಿಯಲ್ಲಿ ಮಂದಾಕೃಷ್ಣ ಮಾದಿಗರನ್ನು ಬಂಧಿಸಿತು. ಇದರಿಂದಾಗಿ ಆ ಕಾರ್ಯಕ್ರಮ ನಡೆಯಲಿಲ್ಲ. ಆದರೆ ಸರ್ಕಾರದ ಈ ಕ್ರಮವನ್ನು ಜಿಲ್ಲಾ ಮಾದಿಗ ದಂಡೋರ ಸಂಘಟನೆ ದಿನಾಂಕ ೨೦.೦೪.೧೯೯೯ ರಂದು ಪ್ರತಿಭಟನೆ ನಡೆಸಿತು. ಮಂದಾಕೃಷ್ಣಾ ಮಾದಿಗರನ್ನೂ ಕೂಡಲೇ ಬಿಡುಗಡೆ ಮಾಡಬೇಕೆಂದು ಒತ್ತಾಯಿಸಿ ಮನವಿಯನ್ನು ನೀಡಲಾಯಿತು.

ಈ ಮಧ್ಯೆ ಆಂಧ್ರಪ್ರದೇಶದ ಪ್ರತ್ಯೇಕ ಮೀಸಲಾತಿ ಜಾರಿಗೆ ರಾಷ್ಟ್ರಪತಿಯವರ ಒಪ್ಪಿಗೆಯನ್ನು ಸ್ವಾಗತಿಸಿತು. ಜಿಲ್ಲಾ ಸಮಿತಿ, ಜಿಲ್ಲಾಧ್ಯಕ್ಷರಾದ ಜೆ.ಜಗನ್ನಾಥ ಅವರಿಗೆ ರಾಜ್ಯ ಸಮಿತಿಯವರು ದಿನಾಂಕ ೧೪.೦೨.೧೯೯೯ರಂದು ಹೆಚ್ಚಿನ ಜವಾಬ್ದಾರಿ ನೀಡಿದ್ದು ಅವರು ಬಳ್ಳಾರಿ, ಕೊಪ್ಪಳ, ಗದಗ, ಹುಬ್ಬಳ್ಳಿ, ಬೆಳಗಾಂ ಜಿಲ್ಲೆಗಳಲ್ಲಿ ಸಂಘಟನೆಯನ್ನು ಬಲಪಡಿಸುವಂತೆ ಸೂಚಿಸಿತು.

ಜಿಲ್ಲಾ ಸಮಿತಿಯು ದಿನಾಂಕ ೨೩.೧೨.೧೯೯೯ರಂದು ಜನಸಂಖ್ಯೆಯ ಆಧಾರದ ಮೇಲೆ ಮೀಸಲಾತಿಯನ್ನು ವರ್ಗೀಕರಿಸುವಂತೆ ಮುಖ್ಯಮಂತ್ರಿಗಳಿಗೆ ಮನವಿ ಸಲ್ಲಿಸಿದೆ. ಆನಂತರದಲ್ಲಿ ದಿನಾಂಕ ೨೦.೦೩.೨೦೦೨ರಲ್ಲಿ ರಾಜ್ಯ ಮತ್ತು ರಾಷ್ಟ್ರಮಟ್ಟದ ಕಾಂಗ್ರೆಸ್ ಮುಖಂಡರಿಗೂ ಮನವಿಯನ್ನು ನೀಡಿ ದೇವರಾಜು ಅರಸು ಮುಖ್ಯಮಂತ್ರಿಯಾಗಿದ್ದಾಗ ಪರಿಶಿಷ್ಟ ಜಾತಿಗೆ ಅಸ್ಪೃಶ್ಯೇತರರನ್ನು ಸೇರ್ಪಡೆ ಮಾಡಿದ್ದರಿಂದ ನಿಜವಾಗಿಯೂ ಹಿಂದುಳಿದಿರುವ ಮಾದಿಗರಿಗೆ ಸಾಮಾಜಿಕ ನ್ಯಾಯ ಸಿಗುವಲ್ಲಿ ತೊಡಕಾಗಿದೆ. ಆದ್ದರಿಂದ ಜನಸಂಖ್ಯಾವಾರು ಮೀಸಲಾತಿ ಹಂಚಿಕೆ ಮಾಡಿದ್ದೆ ಆದರೆ ಮಾದಿಗರಿಗೆ ನ್ಯಾಯ ದೊರಕುತ್ತದೆ ಎಂದು ತಿಳಿಸಿದ್ದರು.

ರಾಜಕಾರಣಿಗಳ ಮುಖಂಡತ್ವದಲ್ಲಿ ಹುಟ್ಟಿಕೊಂಡು ಮಾದಿಗರ ಮೀಸಲಾತಿ ಹೋರಾಟ ಸಮಿತಿ ರಾಜ್ಯದಲ್ಲಿ ಅಸ್ತಿತ್ವಕ್ಕೆ ಬಂದು ಅವರು ಜಿಲ್ಲಾ ಮಟ್ಟದಲ್ಲಿ ಶಾಖೆಗಳನ್ನು ತೆರೆಯಲು ಆರಂಭಿಸಿದ್ದರಿಂದ ಬಳ್ಳಾರಿ ಜಿಲ್ಲೆಯಲ್ಲಿ ದಿನಾಂಕ ೦೮.೧೦.೨೦೦೦ದಂದು ಜಿಲ್ಲಾ ಶಾಖೆ ಸ್ಥಾಪನೆಯಾಯಿತು. ಅದರ ಅಧ್ಯಕ್ಷರಾಗಿ ಹಿಂದೆ ಮಾದಿಗ ದಂಡೋರದ ಅಧ್ಯಕ್ಷರಾಗಿದ್ದ ಬಿ.ಆರೋಗ್ಯಸ್ವಾಮಿಯವರನ್ನು

ಅಧ್ಯಕ್ಷರಾಗಿ ಮಾಡಿ ಒಂದು ಸಮಿತಿ ಅಸ್ತಿತ್ವಕ್ಕೆ ಬಂದಿತು. ಅನಂತರ ವಿವಿಧ ತಾಲ್ಲೂಕುಗಳಲ್ಲಿ ಅದರ ಶಾಖೆಗಳು ಆರಂಭಗೊಂಡವು. ಈ ಸಂಘಟನೆಯು ಸಹ ಮಾದಿಗರಿಗೆ ಪ್ರತ್ಯೇಕ ಮೀಸಲಾತಿ ನೀಡುವಂತೆ ಆಗ್ರಹಿಸಿ ಹೋರಾಟ ಮಾಡತೊಡಗಿದೆ.

**ಜಿಲ್ಲಾ ದಸಂಸವು ಕೈಗೊಂಡ ಹೋರಾಟ**

ರಾಜ್ಯ ದಲಿತ ಸಂಘರ್ಷ ಸಮಿತಿ (ಪ್ರೊ.ಬಿ.ಕೆ) ಯು ವರ್ಗೀಕರಣ ಮೀಸಲಾತಿ ಹೋರಾಟವನ್ನು ಕೈಗೊಳ್ಳಲು ತೀರ್ಮಾನಿಸಿದ್ದು ಬಳ್ಳಾರಿ ಜಿಲ್ಲಾ ಶಾಖೆಯು ಅದನ್ನು ಸ್ವಾಗತಿಸಿ ಅದರ ಸೂಚನೆಯಂತೆ ಈ ಜಿಲ್ಲೆಯಲ್ಲಿ ಹೋರಾಟವನ್ನು ತೀವ್ರಗೊಳಿಸಿತು. ವರ್ಗೀಕರಣ ಮೀಸಲಾತಿಗೆ ಸಂಬಂಧಿಸಿದಂತೆ ಸಭೆ, ಸಮಾರಂಭ ನಡೆಸಿರುವುದು ಮಾತ್ರವಲ್ಲದೇ ರಾಜ್ಯಮಟ್ಟದಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಈ ಜಿಲ್ಲೆಯ ನಲವತ್ತಕ್ಕು ಹೆಚ್ಚು ಜನರು ಭಾಗವಹಿಸಿದ್ದಾರೆ. ಜಿಲ್ಲಾ ಮಟ್ಟದಲ್ಲಿ ಧರಣಿಯನ್ನು ನಡೆಸಿದೆ. ವಿಚಾರ ಸಂಕಿರಣ ಸಹ ನಡೆಸಿ ಪರಿಶಿಷ್ಟ ಜಾತಿಯ ಮೀಸಲಾತಿಯನ್ನು ಜಾತಿವಾರು ಸಂಖ್ಯೆಗೆ ಅನುಗುಣವಾಗಿ ವರ್ಗೀಕರಿಸುವಂತೆ ಸರ್ಕಾರವನ್ನು ಒತ್ತಾಯಿಸಿತು. ಈ ಸಂಬಂಧ ಬೆಂಗಳೂರಿನ ದಿನಾಂಕ ೧೩.೦೩.೨೦೦೧ ಮತ್ತು ದಿನಾಂಕ ೦೬.೦೧.೨೦೦೨ರಂದು ನಡೆದ ಎರಡು ರ್‍ಯಾಲಿಯಲ್ಲಿ ಈ ಜಿಲ್ಲೆಯಿಂದ ಸುಮಾರು ಐದು ಸಾವಿರಕ್ಕೂ ಹೆಚ್ಚು ಜನ ಭಾಗವಹಿಸಿದ್ದರು. ಈ ಜಿಲ್ಲೆಯ ಸಂಘಟನೆಗೆ ಸಮರ್ಥವಾದ ನಾಯಕತ್ವವನ್ನು ಹೊಂದಿರುವ ಮುಂಡರಗಿ ನಾಗರಾಜ್ ಅವರು ಸಭೆ, ಸಮಾರಂಭ, ಧರಣಿ ರ್‍ಯಾಲಿ ಮುಂತಾದ ಕಾರ್ಯಕ್ರಮಗಳಿಗೆ ಹೆಚ್ಚು ಜನರನ್ನು ಕರೆದುಕೊಂಡು ಹೋಗಿ ಅವುಗಳನ್ನು ಯಶಸ್ವಿಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಈ ರೀತಿ ಜಿಲ್ಲೆಯ ದಸಂಸವು ವರ್ಗೀಕರಣ ಮೀಸಲಾತಿ ಬೇಡಿಕೆಯನ್ನು ಈಡೇರಿಸಲು ಸರ್ಕಾರಕ್ಕೆ ಒತ್ತಡ ತರುವಲ್ಲಿ ಪ್ರಯತ್ನಿಸಿದೆ.

ಹೀಗೆ ಮಾದಿಗರ ಜಾತಿ ಸಂಘಟನೆಗಳು ಮತ್ತು ಜಾತ್ಯಾತೀತ ಸಂಘಟನೆಯಿಂದ ದಸಂಸವು ಮಾದಿಗರಿಗೆ ಅನ್ಯಾಯವಾಗಿರುವುದನ್ನು ಸರಿಪಡಿಸುವ ಸಲುವಾಗಿ ಒಳ ಮೀಸಲಾತಿ ನೀಡುವಂತೆ ಹೋರಾಟ ಕೈಗೊಂಡಿದ್ದಾರೆ. ಮೇಲಿನ ಹೋರಾಟಗಳು ಮಾತ್ರವಲ್ಲದೇ ಇನ್ನು ಅನೇಕ ಹೋರಾಟಗಳನ್ನು ಈ ಸಂಬಂಧ ಮಾಡಲಾಗಿದ್ದರೂ ಮಾಹಿತಿ ಲಭ್ಯವಿಲ್ಲದ ಪ್ರಯುಕ್ತ ತಿಳಿಸಲಾಗಿಲ್ಲ.

**ಚಿತ್ರದುರ್ಗ ಜಿಲ್ಲೆಯಲ್ಲಿ ಜಾತಿ ಸಂಘಟನೆಗಳು ನಡೆಸಿದ ಹೋರಾಟ**

ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರತ್ಯೇಕ ಮೀಸಲಾತಿ ಹೋರಾಟ ಸಮಿತಿಯು ಇಲ್ಲಿ ಸಹ ಆರಂಭಗೊಂಡಿದೆ. ಈ ಜಿಲ್ಲೆಯಲ್ಲಿ ಆ ಬಗ್ಗೆ ತೀವ್ರವಾಗಿ ಹೋರಾಟ ಮಾಡಿರುವುದು ಕಂಡುಬರುತ್ತದೆ. ಇಲ್ಲಿ 'ಮಾದಿಗ ದಂಡೋರ' ಮಾದಿಗ ಮೀಸಲಾತಿ ಹೋರಾಟ ಸಮಿತಿ ಹಾಗೂ ದಲಿತ ಸಂಘರ್ಷ ಸಮಿತಿ ಪರಿಶಿಷ್ಟ ಜಾತಿಯ ಮೀಸಲಾತಿಯನ್ನು ಜನಸಂಖ್ಯಾವಾರು ವರ್ಗೀಕರಿಸುವಂತೆ ಹೋರಾಟ ನಡೆಸಿದ ಸಂಘಟನೆಗಳಲ್ಲಿ ಪ್ರಮುಖವು.

### ಜಾತಿಯ ಸಂಘಟನೆಗಳು ಕೈಗೊಂಡ ಹೋರಾಟ

ಚಿತ್ರದುರ್ಗ ಜಿಲ್ಲೆಯಲ್ಲಿ ಬಿ.ಪಿ.ಪ್ರಕಾಶ್, ಹುಲ್ಲೂರು ಕುಮಾರ್, ನಾಗರಾಜ್ ಮುಂತಾದವರ ಪ್ರಯತ್ನದಿಂದಾಗಿ 'ಮಾದಿಗ ದಂಡೋರ' ಶಾಖೆಯನ್ನು ತೆರೆಯಲಾಗಿದೆ. ರಾಜ್ಯ ಸಮಿತಿಯ ಎಂ.ಶಂಕರಪ್ಪ ಬಂದು ಈ ಶಾಖೆಯನ್ನು ಉದ್ಘಾಟನೆ ಮಾಡಿ ಮಾದಿಗರ ನ್ಯಾಯಯುತವಾದ ಬೇಡಿಕೆಯ ಈಡೇರಿಕೆಗಾಗಿ ಈ ಜನಾಂಗದ ನೌಕರರು, ವಿದ್ಯಾವಂತರು ಸಂಘಟಿತರಾಗಿ ಹೋರಾಟ ಮಾಡಬೇಕಾಗುತ್ತದೆಂದು ಕರೆ ಕೊಟ್ಟಿತು. ಅಲ್ಲಿಂದ ಆರಂಭಗೊಂಡ 'ಮಾದಿಗ ದಂಡೋರ' ಸಭೆ ನಡೆಸಿ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಇದರ ಶಾಖೆಗಳನ್ನು ತೆರೆಯಿತು. ಹೀಗೆ ಅಸ್ತಿತ್ವಕ್ಕೆ ಬಂದ ಶಾಖೆಗಳು ತ್ವರಿತಗತಿಯಲ್ಲಿ ಹೋರಾಟವನ್ನು ಮಾಡತೊಡದವು. ಇಂತಹ ಸಂಘಟನೆಯ ಬೆಳವಣಿಗೆಗೆ ಮತ್ತು ಅದು ಕೈಗೊಳ್ಳುವ ಹೋರಾಟಗಳಿಗೆ ಈ ಜಿಲ್ಲೆಯ ನೌಕರರನೇಕರು ಹಣಕಾಸು ನೆರವು ನೀಡಿ ಸಹಕರಿಸಿದ್ದಾರೆ.

ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನಲ್ಲಿ ದಿನಾಂಕ ೧.೧೧.೯೮ರಂದು ಮಾದಿಗ ದಂಡೋರ ತಾಲ್ಲೂಕು ಶಾಖೆಯ ಸಮಾಲೋಚನಾ ಸಭೆಯನ್ನು ರಾಜ್ಯದ ಮುಖಂಡರನ್ನೊಳಗೊಂಡಂತೆ ಅನೇಕರನ್ನು ಆಹ್ವಾನಿಸಿತ್ತು. ಆ ಒಂದು ಸಭೆಯಲ್ಲಿ ನಾವು ಇದುವರೆವಿಗೂ ಸಾಮಾಜಿಕ ಸಮಸ್ಯೆಗಳ ವಿರುದ್ಧ ವಿವಿಧ ಬಗೆಯ ಮತ್ತು ಸಂಘಟನೆಯ ಹೆಸರಲ್ಲಿ ಹೋರಾಡುತ್ತಾ ಬಂದಿದ್ದೇವೆ. ಮುಖ್ಯವಾಗಿ ನಾವು ಆರ್ಥಿಕ ಮತ್ತು ರಾಜಕೀಯ ಹಕ್ಕುಗಳನ್ನು ಜನಸಂಖ್ಯಾ ಪ್ರಮಾಣದಲ್ಲಿ ದೊರಕಿಲ್ಲದಿರುವುದನ್ನು ಗಮನಿಸದೆ ಹೋಗಿದ್ದೇವೆ. ಆದರೆ ಇಂದು ಆ ಕುರಿತು ಆಲೋಚಿಸುವ ಅಗತ್ಯ ಇರುವುದರಿಂದ ಕ್ರಮಕೈಗೊಳ್ಳಲು ಸಮಾಲೋಚನಾ ಸಭೆಯನ್ನು ಏರ್ಪಡಿಸಿ ಚರ್ಚಿಸಿದೆ.

ಈ ಮಧ್ಯೆ ಹಿರಿಯೂರಲ್ಲಿ ಕರ್ನಾಟಕ ರಾಜ್ಯ ಹರಿಜನ ಹೋರಾಟ ಸಮಿತಿ(ರಿ) ರಾಜ್ಯ ಶಾಖೆ ಅಸ್ತಿತ್ವಕ್ಕೆ ಬಂದಿರುವುದು ಕಂಡುಬರುತ್ತದೆ. ಈ ಸಂಘದ ಕಛೇರಿ ಉದ್ಘಾಟನಾ ಸಮಾರಂಭವನ್ನು ದಿನಾಂಕ ೨೭.೧೨.೯೯ರಂದು ನಡೆಸಲಾಗಿದೆ. ಅಂದು ಭಾರತ ರತ್ನ ಡಾ.ಬಿ.ಆರ್.ಅಂಬೇಡ್ಕರ್ ಮತ್ತು ಕ್ರಾಂತಿಕಾರಿ ಬಸವಣ್ಣನವರ ಸ್ಮರಣ ದಿನಾಚರಣೆ ಕಾರ್ಯಕ್ರಮವನ್ನು ಸಹ ಹಮ್ಮಿಕೊಂಡಿತ್ತು.

ಜಿಲ್ಲಾ ಮಾದಿಗ ದಂಡೋರ ಶಾಖೆಯ ಪರಿಶಿಷ್ಟ ಜಾತಿ ಮೀಸಲಾತಿಯಲ್ಲಿ ಮಾದಿಗರಿಗೆ ಪ್ರತ್ಯೇಕ ಮೀಸಲಾತಿ ಅನಿವಾರ್ಯವೇ ಎಂಬ ವಿಷಯದ ಮೇಲೆ ವಿಚಾರ ಸಂಕಿರಣ ಏರ್ಪಡಿಸಿತ್ತು. ದಿನಾಂಕ ೧೪.೦೩.೯೯ರಂದು ನಡೆದ ವಿಚಾರ ಸಂಕಿರಣದ ಸಭೆಯಲ್ಲಿ ಮಾದಿಗರ ಸ್ವಾಮಿಗಳಾದ ಕೋಡಿಹಳ್ಳಿ ರುದ್ರಾಕ್ಷಿಮುನಿ ದೇಶೀಕೇಂದ್ರ ಸ್ವಾಮೀಜಿ ಅಧ್ಯಕ್ಷತೆಯನ್ನು ವಹಿಸಿದ್ದರು. ಆ ಒಂದು ಸಭೆಯಲ್ಲಿ ಸಾಹಿತಿಗಳಾದ ಬಂಜಗೆರೆ ಜಯಪ್ರಕಾಶ್ ಮತ್ತು ಯಾದವರೆಡ್ಡಿ ಹಾಗೂ ಎಂ.ಶಂಕರಪ್ಪ ವಿಷಯ ಮಂಡಿಸಿದರು. ಅಂದು ನಡೆದ ಸಂವಾದ ಗೋಷ್ಠಿಯಲ್ಲಿ ಪ್ರತ್ಯೇಕ ಮೀಸಲಾತಿಯ ಅಗತ್ಯ ಆ ನಿಟ್ಟಿನಲ್ಲಿ ಕೈಗೊಳ್ಳಬೇಕಾದ ಕ್ರಮ ಮುಂತಾದ ಅಂಶಗಳು ಚರ್ಚಿತಗೊಂಡವು. ಅನಂತರದಲ್ಲಿ

ದಿನಾಂಕ ೨೭.೦೪.೧೯೯೯ರಂದು ಮಾದಿಗ ನೌಕರರ ಕುಂದುಕೊರತೆ, ಸಂಘಟನೆ ಮತ್ತು ಇತರ ಸಮಸ್ಯೆಗಳ ಬಗ್ಗೆ ಚರ್ಚಿಸಲು ಜಿಲ್ಲಾಮಟ್ಟದ ಮಾದಿಗ ನೌಕರರ ಸಭೆಯನ್ನು ಚಿತ್ರದುರ್ಗದಲ್ಲಿ ನಡೆಸಿದೆ.

ಮಾದಿಗ ದಂಡೋರ ಸಂಘಟನೆಯ ಜಿಲ್ಲಾ ಶಾಖೆಯು ಕಾರ್ಯಕರ್ತರಿಗೆ ವಿಚಾರ ನೀಡಿ ಗಟ್ಟಿಗೊಳಿಸಲು ಮೂರು ದಿನಗಳ ತರಬೇತಿ ಶಿಬಿರವನ್ನು ಚಿತ್ರದುರ್ಗ ನಗರದ ಡಾ. ಬಿ.ಆರ್. ಅಂಬೇಡ್ಕರ್ ಕಲ್ಯಾಣ ಮಂಟಪದಲ್ಲಿ ನಡೆಸಿರುವುದು ಕಂಡುಬರುತ್ತದೆ. ಆ ಶಿಬಿರದಲ್ಲಿ ಅನೇಕ ವಿದ್ಯಾವಂತರನ್ನು ಕರೆಸಿ ಮಾದಿಗರ ಕುರಿತ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಹಾಗೂ ಹಾಜಕೀಯ ಸ್ಥಿತಿಗತಿ, ಬುದ್ಧ, ಬಸವ, ಅಂಬೇಡ್ಕರ್ ಮತ್ತು ಬಾಬು ಜಗಜೀವನರಾಮ್‌ರವರ ವಿಚಾರ ಸಾಮ್ಯತೆಗಳು ಮತ್ತು ಮಾದಿಗರ ಸ್ಥಿತಿ ಎಂಬ ವಿಷಯಗಳ ಮೇಲೆ ಜಯರಾಮಪ್ಪ ಟಿ., ಸಿ.ಕೆ.ಜಯರಾಯ್ ಹಾಗೂ ಪ್ರೊ.ಗುರುರಾಜ ಬೀಡಿಕರ್ ಉಪನ್ಯಾಸ ನೀಡಿ ಚರ್ಚೆಗೆ ಅವಕಾಶ ಮಾಡಿದರು.

ರಾಜಕೀಯೇತರ ವ್ಯಕ್ತಿಗಳ ಮುಖಂಡತ್ವವಿರುವ ಮಾದಿಗ ದಂಡೋರ ಮತ್ತು ಮಾದಿಗ ರಾಜಕಾರಣಿಗಳ ಮುಖಂಡತ್ವ ಹೊಂದಿದ್ದ ಮಾದಿಗ ಮೀಸಲಾತಿ ಹೋರಾಟ ಸಮಿತಿಯ ಜಿಲ್ಲೆ ಶಾಖೆಗಳು ಇಲ್ಲಿ ಪ್ರತ್ಯೇಕವಾಗಿ ಸಂಘಟಿತಗೊಂಡಿರದೆ ಇವೆರಡು ಸಂಘಟನೆಯ ಮುಖಂಡತ್ವ ಒಂದೇ ತಂಡದಲ್ಲಿ ಇರುವುದು ಕಂಡುಬರುತ್ತದೆ. ಅವರು ಮಾದಿಗರಿಗೆ ಆಗಿರುವಂತಹ ಅನ್ಯಾಯವನ್ನು ಎತ್ತಿ ಹಿಡಿಯಲು ಅನೇಕ ಅಂಶಗಳನ್ನು ತೋರಿಸುತ್ತಾರೆ. ಕರ್ನಾಟಕದಲ್ಲಿ ೩೩ ಮೀಸಲು ವಿಧಾನಸಭಾ ಕ್ಷೇತ್ರದಲ್ಲಿ ೮ ಜನ ಮಾದಿಗ ಶಾಸಕರಿದ್ದರೆ ಅವರಿಗಿಂತ ಅರ್ಧದಷ್ಟು ಕಡಿಮೆ ಇರುವ ಇನ್ನೊಂದು ಜಾತಿಯಲ್ಲಿ ೧೯ ಶಾಸಕರಿದ್ದಾರೆ. ಅಷ್ಟೆ ಅಲ್ಲ ರಾಜ್ಯದ ಕ್ಯಾಬಿನೆಟ್‌ನಲ್ಲಿ ಒಬ್ಬ ಮಾದಿಗ ಮಂತ್ರಿಯಿಲ್ಲ. ಇದು ರಾಜಕೀಯ ಕ್ಷೇತ್ರದಲ್ಲಿ ಮಾದಿಗರಿಗೆ ಅನ್ಯಾಯವಾಗುತ್ತಿರುವ ಸಂಗತಿಯಾದರೆ ಪದವಿ ಪಡೆದ ಅಸಂಖ್ಯಾ ಮಾದಿಗ ವಿದ್ಯಾರ್ಥಿಗಳು ನೌಕರಿಯಿಲ್ಲದೆ ಬೀದಿಪಾಲಾಗಿದ್ದಾರೆ. ಸ್ವಂತ ಉದ್ಯೋಗ ಕೈಗೊಳ್ಳಲು ಬ್ಯಾಂಕುಗಳಲ್ಲಿ ಸಾಲ ಸಿಗುತ್ತಿಲ್ಲ. ಹಳ್ಳಿಗಳಲ್ಲಿ ಉಳ್ಳವರ ಹೊಲದಲ್ಲಿ ಕೂಲಿ ಮಾಡಿ ಓದಿಸಿದ ತಂದೆ ತಾಯಿಗಳು ವಿದ್ಯಾವಂತ ಮಕ್ಕಳ ಬದುಕು ನಾಶವಾಗುತ್ತಿರುವುದನ್ನು ಅಸಹಾಯಕರಾಗಿ ನೋಡುತ್ತಿದ್ದಾರೆ. ಈ ರೀತಿಯಾಗಿ ಮಾದಿಗರಿಗೆ ರಾಜಕೀಯ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಅಭಿವೃದ್ಧಿ ಹೊಂದಲು ಸಾಮಾಜಿಕ ನ್ಯಾಯದ ಹೆಸರಲ್ಲಿ ನೀಡುತ್ತಿರುವ ಮೀಸಲಾತಿಯಿಂದ ಅನ್ಯಾಯವಾಗುತ್ತಿದೆ. ಮಾದಿಗರಿಗೆ ಆಗುತ್ತಿರುವ ಅನ್ಯಾಯವನ್ನು ಸರಿಪಡಿಸಬೇಕಾಗಿರು ವುದು ನಮ್ಮೆಲ್ಲರ ಹೊಣೆಗಾರಿಕೆಯಾಗಿದೆ. ಈ ಹಿನ್ನೆಲೆಯಲ್ಲಿ ಮಾದಿಗ ದಂಡೋರ(ಮಾದಿಗ ಮೀಸಲಾತಿ ಹೋರಾಟ ಸಮಿತಿ) ಜಿಲ್ಲಾ ಶಾಖೆ ಪರಿಶಿಷ್ಟ ಜಾತಿಯ ಜನಸಂಖ್ಯಾವಾರು ಪ್ರತ್ಯೇಕ ಮೀಸಲಾತಿಯನ್ನು ವಿಭಾಗಿಸಿಕೊಡಬೇಕೆಂದು ಹೋರಾಟ ಆರಂಭಿಸಿದ್ದು, ಮೂರು ಹಂತದ ಕಾರ್ಯಕ್ರಮಗಳನ್ನು ನಡೆಸಲು

ತೀರ್ಮಾನಿಸಿ ಈ ಕಾರ್ಯಕ್ರಮಗಳಿಗೆ ಸಹಕರಿಸುವಂತೆ ಮಾದಿಗ ವಿದ್ಯಾರ್ಥಿಗಳು, ನೌಕರರು, ರಾಜಕಾರಣಿಗಳು, ವಿಚಾರವಂತರನ್ನು ಕೋರಿತು.

ಮೊದಲ ಹಂತದ ಕಾರ್ಯಕ್ರಮದಲ್ಲಿ ಒಂದು ವಾರದವರೆಗೂ ಧರಣಿಯನ್ನು ಏರ್ಪಡಿಸಲು ನಿರ್ಧರಿಸಿದ್ದುದರಿಂದ ದಿನಾಂಕ ೧೦.೧.೨೦೦೦ದಂದು ಜಿಲ್ಲಾಧಿಕಾರಿಗಳ ಕಛೇರಿಯ ಹತ್ತಿರ ಇರುವ ಸರ್ಕಲ್ ಬಳಿ ಧರಣಿ ಯಶಸ್ವಿಯಾಗಿ ಮಾಡಿತು. ಅಂದು ಮಾದಿಗ ಬಂಧುಗಳು ೧೫ ಸೈಕಲ್‌ಗಳನ್ನು ಮಾದಿಗ ದಂಡೋರ ಸಂಘಟನೆಗೆ ಕೊಡುಗೆಯಾಗಿ ನೀಡಿದರು.

ಎರಡನೆಯ ಹಂತದಲ್ಲಿ ಮಾದಿಗ ಜನಾಂಗದ ನೌಕರರನ್ನು ಒಂದು ಕಡೆ ಸೇರಿಸಿ ಕಾರ್ಯಕ್ರಮ ಮಾಡಿತು. ದಿನಾಂಕ ೧೬.೦೧.೨೦೦೨ರಂದು ಚಿತ್ರದುರ್ಗ ನಗರದಲ್ಲಿ ಸಭೆ ಏರ್ಪಡಿಸಿ ಒಳ ಮೀಸಲಾತಿ ಕುರಿತಂತೆ ಚರ್ಚೆ ನಡೆಸಿತು.

ಮೂರನೆಯ ಹಂತದಲ್ಲಿ ಜಿಲ್ಲೆಯ ಪ್ರತಿಯೊಂದು ಗ್ರಾಮಗಳಿಗೂ ತೆರಳಿ ಅವರಲ್ಲಿ ಈ ಹೋರಾಟದ ಬಗ್ಗೆ ಮನವರಿಕೆ ಮಾಡಿ ಹೋರಾಟದಲ್ಲಿ ಹೆಚ್ಚು ಹೆಚ್ಚು ತೊಡಗಿಕೊಳ್ಳಲು ಸೈಕಲ್ ಜಾಥವನ್ನು ಏರ್ಪಡಿಸಿತು. ಈಗಾಗಲೇ ಮಾದಿಗ ಜನಾಂಗದ ಬಂಧುಗಳು ನೀಡಿರುವ ಸೈಕಲ್‌ಗಳನ್ನು ಆ ಜಾಥಾಕ್ಕೆ ಬಳಸಿಕೊಳ್ಳಲಾಗಿದೆ. ಈ ರೀತಿಯ ಕಾರ್ಯಕ್ರಮಗಳನ್ನು ಮಾಡುವುದರ ಮೂಲಕ ಸರ್ಕಾರದ ಗಮನ ಸೆಳೆಯಲು ಪ್ರಯತ್ನಿಸಿದೆ.

ಮಾದಿಗರ ಮೀಸಲಾತಿ ಹೋರಾಟ ಸಮಿತಿಯ ಚಳ್ಳಕೆರೆ ಶಾಖೆ ದಿನಾಂಕ ೦೫.೧೦.೨೦೦೦ದಂದು ಸಭೆಯನ್ನು ನಡೆಸಿ ಮೀಸಲಾತಿಯಿಂದ ವಂಚಿತರಾಗಿರುವ ಮಾದಿಗರಿಗೆ ನ್ಯಾಯ ಒದಗಿಸುವ ನಿಟ್ಟಿನಲ್ಲಿ ಕ್ರಮಕೈಗೊಳ್ಳುವಂತೆ ಮಾಡಲು ಬಯಸಿತು. ಹಿರಿಯೂರು ತಾಲ್ಲೂಕಿನ ಮಾದಿಗ ದಂಡೋರ, ಮೀಸಲಾತಿ ಹೋರಾಟ ಸಮಿತಿಯು ಪರಿಶಿಷ್ಟ ಜಾತಿ ಮೀಸಲಾತಿಯಲ್ಲಿ ಎ.ಬಿ.ಸಿ.ವರ್ಗೀಕರಣಕ್ಕೆ ಒತ್ತಾಯಿಸಿ ಹಿರಿಯೂರು ತಾಲ್ಲೂಕು ಕಛೇರಿ ಮುಂಭಾಗದಲ್ಲಿ ಒಂದು ದಿನದ ಸಾಂಕೇತಿಕ ಧರಣಿ ಸತ್ಯಾಗ್ರಹ ಮಾಡಿದೆ.

ಚಿತ್ರದುರ್ಗದಲ್ಲಿ ಮಾದಿಗ ಮೀಸಲಾತಿ ಹೋರಾಟ ಸಮಿತಿಯು ೨೦೦೨ರಲ್ಲಿ ನಗರಕ್ಕೆ ಆಗಮಿಸಿದ ಸಚಿವರಾದ ಶ್ರೀ ಡಿ.ಬಿ.ಚಂದ್ರೇಗೌಡ, ಡಾ. ಪರಮೇಶ್ವರ ಮುಂತಾದವರಿಗೆ ದಿಗ್ಬಂಧನ ಹಾಕಿ ಸುಮಾರು ೧ ಗಂಟೆಯ ಕಾಲ ಪ್ರತಿಭಟಿಸಿದರು. ಅಂದು ಮೀಸಲಾತಿ ವರ್ಗೀಕರಣ ಕುರಿತು ಮುಖ್ಯಮಂತ್ರಿಗಳೊಂದಿಗೆ ಮಾತನಾಡುತ್ತೇವೆಂದು ಸಚಿವರು ಭರವಸೆ ಕೊಟ್ಟರು.

ಹಿರಿಯೂರು ತಾಲ್ಲೂಕಿನ ಮಾದಿಗ ದಂಡೋರ ಮೀಸಲಾತಿ ಹೋರಾಟ ಸಮಿತಿಯವರು ಮಹಾದಂಡೆಯಾತ್ರೆಯ ಜಿಲ್ಲಾ ಜಾಗೃತಿ ಸಮಾವೇಶವನ್ನು ದಿನಾಂಕ ೧೦.೦೩.೨೦೦೨ರಂದು ಏರ್ಪಡಿಸಲು ನಿರ್ಧರಿಸಿ ಜಿಲ್ಲೆಯ ಕೆಲವು ತಾಲ್ಲೂಕುಗಳಿಗೆ ಈ ಕಾರ್ಯಕ್ರಮದ ಬಗ್ಗೆ ಸೂಚನೆ ಕೊಡದೆ ಏಕಾಏಕಿ

ಕರಪತ್ರವನ್ನು ಮಾಡಿಸಿ ಜಿಲ್ಲಾ ಸಮಾವೇಶವನ್ನು ಮಾಡತೊಡಗಿದರು. ಈ ವಿಷಯ ತಿಳಿದ ಇತರೆ ತಾಲ್ಲೂಕಿನ ಪದಾಧಿಕಾರಿಗಳು ಸಮಾಧಾನವಾಗಿಯೇ ಇದನ್ನು ವಿರೋಧಿಸಿದರೂ ಅವರು ನಿರ್ಧರಿಸಿರುವ ಆ ಕಾರ್ಯಕ್ರಮವನ್ನು ತಡೆಗಟ್ಟದೆ ಸಹಕರಿಸಿರುವುದು ಉಂಟು. ಅಂದು ಸುಮಾರು ಮೂರು ಸಾವಿರಕ್ಕೂ ಹೆಚ್ಚು ಮಾದಿಗರು ಸಮಾವೇಶ ನಡೆಸಿದರು. ಆ ಸಮಾವೇಶಕ್ಕೆ ಮಂದಾಕೃಷ್ಣ ಮಾದಿಗರು ಮುಖ್ಯ ಅತಿಥಿಗಳಾಗಿದ್ದರು. ಆದರೆ ಬರಲಾಗಿಲ್ಲ. ಈ ರೀತಿಯಾಗಿ ಮಾದಿಗ ದಂಡೋರ ಮತ್ತು ಮಾಡಿದ ಮೀಸಲಾತಿ ಹೋರಾಟ ಸಮಿತಿಯ ಹೆಸರಲ್ಲಿ ಚಿತ್ರದುರ್ಗ ಜಿಲ್ಲೆಯ ಮಾದಿಗರು ವಿವಿಧ ಕಾರ್ಯಕ್ರಮಗಳನ್ನು ಜಿಲ್ಲಾಯಾದ್ಯಂತ ನಡೆಸಿ ಸರ್ಕಾರದ ಗಮನ ಸೆಳೆದು ಮಾದಿಗರ ನ್ಯಾಯೋಚಿತ ಬೇಡಿಕೆಯನ್ನು ಈಡೇರಿಸುವಂತೆ ಒತ್ತಡ ತಂದರು. ಈ ಮೇಲಿನ ಘಟನೆಗಳಲ್ಲದೆ ಇನ್ನು ಅನೇಕ ಕಾರ್ಯಕ್ರಮಗಳನ್ನು ನಡೆಸಲಾಗಿದೆ.

**ಜಿಲ್ಲಾ ದಸಂಸ ಕೈಗೊಂಡ ಹೋರಾಟ :** ಚಿತ್ರದುರ್ಗ ಜಿಲ್ಲೆಯಲ್ಲಿಯೂ ದಸಂಸ(ಪ್ರೊ.ಬಿ.ಕೆ.) ರಾಜ್ಯ ಸಮಿತಿಯ ಆದೇಶದಂತೆ ಜಿಲ್ಲಾ ಶಾಖೆ ವರ್ಗೀಕರಣ ಮೀಸಲಾತಿ ಹೋರಾಟವನ್ನು ಕೈಗೊಂಡಿದೆ. ಈ ಜಿಲ್ಲೆಯಲ್ಲಿ ಸಂಘಟನೆಯಲ್ಲಿ ತೊಡಗಿಕೊಂಡ ಪ್ರಮುಖರ ತಂಡವಿದ್ದು ಅದು ವ್ಯವಸ್ಥಿತವಾಗಿ ಕಾರ್ಯಕ್ರಮಗಳನ್ನು ಈ ಸಂಬಂಧ ರೂಪಿಸಿಕೊಂಡು ಹೋಗಿರುವುದು ಕಂಡುಬರುತ್ತದೆ. ಈ ಜಿಲ್ಲೆಯಾದ್ಯಂತ ವರ್ಗೀಕರಣ ಮೀಸಲಾತಿಯ ಅಗತ್ಯತೆ ಬಗ್ಗೆ ಅನೇಕ ವಿಚಾರ ಸಂಕಿರಣಗಳನ್ನು ಮಾಡಿರುವುದಿದೆ. ಈ ಸಂಬಂಧ ಬೆಂಗಳೂರಿನಲ್ಲಿ ನಡೆದ ರಾಜ್ಯಮಟ್ಟದ ವಿಚಾರ ಸಂಕಿರಣ ಮತ್ತು ರ್‍ಯಾಲಿಗಳಿಗೆ ಭಾಗವಹಿಸಿದ್ದು ಇಲ್ಲಿಂದ ಸುಮಾರು ಐದು ಸಾವಿರಕ್ಕೂ ಹೆಚ್ಚು ಜನರು ರ್‍ಯಾಲಿಯಲ್ಲಿ ಭಾಗವಹಿಸುವಂತೆ ಮಾಡಿರುವುದು ತಿಳಿದುಬರುತ್ತದೆ. ಈ ರೀತಿ ಪರಿಶಿಷ್ಟ ಜಾತಿಯ ಮೀಸಲಾತಿಯನ್ನು ಜನಸಂಖ್ಯಾವಾರು ವರ್ಗೀಕರಣ ಮಾಡಲು ಅನೇಕ ಕಾರ್ಯಕ್ರಮಗಳನ್ನು ಜಿಲ್ಲಾ ದಸಂಸವು ಮಾಡಿ ಸರ್ಕಾರದ ಗಮನ ಸೆಳೆಯಲು ಪ್ರಯತ್ನಿಸಿದೆ.

**ಪ್ರತ್ಯೇಕ ಮೀಸಲಾತಿ ಬೇಡಿಕೆ ಪರ ಮತ್ತು ವಿರೋಧಗಳು**

ಪರಿಶಿಷ್ಟ ಜಾತಿಯ ಮೀಸಲಾತಿಯಲ್ಲಿ ಪ್ರತ್ಯೇಕ ಮೀಸಲಾತಿ ಅಥವಾ ವರ್ಗೀಕರಣ ಮೀಸಲಾತಿ ಬೇಡಿಕೆಯ ಹೋರಾಟಕ್ಕೆ ಸಂಬಂಧಿಸಿದಂತೆ ಅದರ ಪರವಾದ ಮತ್ತು ವಿರೋಧಗಳು ವ್ಯಕ್ತವಾಗಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಅವರು ತಮ್ಮ ವಾದಗಳ ಸಮರ್ಥನೆಗೆ ಅನೇಕ ಅಂಕಿ ಅಂಶಗಳನ್ನು ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯಕ್ಕೆ ಸಂಬಂಧಿಸಿದಂತೆ ನೀಡುತ್ತಾ ಹೋಗುತ್ತಾರೆ. ಸ್ವಾತಂತ್ರ್ಯೋತ್ತರ ಕರ್ನಾಟಕದ ಸಂದರ್ಭದಲ್ಲಿ ಸಾಮಾಜಿಕ ನ್ಯಾಯದ ಹೆಸರಲ್ಲಿ ಶೋಷಿತ ಜಾತಿಗಳಿಗೆ ನೀಡುತ್ತಿರುವ ಸೌಲಭ್ಯವನ್ನು ಯಾವ ಪ್ರಮಾಣದಲ್ಲಿ ನೀಡಲಾಗುತ್ತಿದೆ ಮತ್ತು ಸೌಲಭ್ಯವನ್ನು ಪಡೆಯುವಂತಹ ಜನಾಂಗಗಳ ಸಂಖ್ಯೆ ಎಷ್ಟು ಎನ್ನುವಂತಹ ಅಂಶವನ್ನು ನೋಡಿದಾಗ ಆಶ್ಚರ್ಯವಾಗು

ತ್ತದೆ. ಅಲ್ಲದೆ ಕೇವಲ ಅಸ್ಪೃಶ್ಯರು ಮಾತ್ರವಲ್ಲದೆ ವಿವಿಧ ಮಾನದಂಡಗಳನ್ನು ಅನುಸರಿಸಿ ಅಸ್ಪೃಶ್ಯೇತರ ಜಾತಿಗಳನ್ನು ಪರಿಶಿಷ್ಟ ಜಾತಿಗೆ ಸೇರಿಸುತ್ತಾ ಹೋಗಿರುವುದರಿಂದ ಅವುಗಳ ಸಂಖ್ಯೆ ೧೦೧ ಆಗಿವೆ. ಇವುಗಳೆಲ್ಲವು ಸರ್ಕಾರ ನೀಡುತ್ತಿರುವ ಶೇ ೧೫ರಷ್ಟು ಅವಕಾಶಗಳಿಗಾಗಿಯೇ ತಮ್ಮ ತಮ್ಮಲ್ಲಿ ಪೈಪೋಟಿ ನಡೆಸಬೇಕಾಗಿರುವುದರಿಂದ ಜನಾಂಗದ ಜನಸಂಖ್ಯೆಯ ಪ್ರಮಾಣದಲ್ಲಿಯೇ ಅವಕಾಶಗಳು ದೊರತರೆ ಅಭಿವೃದ್ಧಿ ಹೊಂದಲು ಸಾಧ್ಯವಾಗುತ್ತದೆ. ಕೆಲವರು ಪ್ರತ್ಯೇಕ ಅಥವಾ ವರ್ಗೀಕರಣ ಮೀಸಲಾತಿಯನ್ನು ಬೆಂಬಲಿಸಿದರೆ, ಈ ಕ್ರಮದಿಂದಾಗಿ ಸಿಗುವಂತೆ ಅವಕಾಶಗಳು ಕಡಿಮೆಯಾಗಬಹುದೆಂಬ ಮತ್ತು ದಲಿತ ನಡುವೆ ಒಡಕು ಹೆಚ್ಚುತ್ತದೆ ಎಂಬ ಭಯದಿಂದ ಕೆಲವರು ಜನಾಂಗಗಳು ವಿರೋಧಿಸುವುದನ್ನು ಕಾಣಬಹುದು. ಇಲ್ಲಿ ವರ್ಗೀಕರಣ ಅಥವಾ ಪ್ರತ್ಯೇಕ ಮೀಸಲಾತಿಗೆ ಸಂಬಂಧಿಸಿದಂತೆ ಜಾತಿ ಸಂಘಟನೆಗಳು ವಿವಿಧ ಜನಾಂಗದ ರಾಜಕೀಯ ಮುಖಂಡರು, ಚಿಂತಕರು ಮುಂತಾದವರು ಹೇಳಿಕೆ ಅಥವಾ ಅಭಿಪ್ರಾಯಗಳನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ.

ಪ್ರತ್ಯೇಕ ಅಥವಾ ವರ್ಗೀಕರಣ ಮೀಸಲಾತಿ ಹೋರಾಟವು ಪ್ರಮುಖವಾಗಿ ಪರಿಶಿಷ್ಟ ಜಾತಿಯಲ್ಲಿರುವ ಮಾದಿಗರು ಮತ್ತು ಹೊಲೆಯರ ನಡುವಿನ ಸಂಘರ್ಷ ಎಂಬಂತೆ ಪ್ರತಿಬಿಂಬಿತವಾಗುತ್ತಿದೆ. ಅದಕ್ಕೆ ಇವೆರಡು ಜಾತಿಯ ಮುಖಂಡರು ಜನಸಂಖ್ಯೆ ಹೆಚ್ಚು ನಮ್ಮದಿದೆ ಅವಕಾಶಗಳನ್ನು ಕಡಿಮೆ ಸಂಖ್ಯೆ ಇರುವ ಅವರು ಪಡೆದುಕೊಂಡಿದ್ದಾರೆಂದು ಒಬ್ಬರಿಗೊಬ್ಬರು ಆರೋಪಿಸ ತೊಡಗಿದ್ದರಿಂದ ಇದು ಮಾದಿಗ ಮತ್ತು ಹೊಲೆಯರ ನಡುವಿನ ಸಂಘರ್ಷಕ್ಕೆ ಎಡೆಮಾಡಿಕೊಟ್ಟಿದೆ. ಮೊದಲು ಪ್ರತ್ಯೇಕ ಮೀಸಲಾತಿಯ ಬೇಡಿಕೆಯನ್ನು ಇಟ್ಟುಕೊಂಡು ಹೋರಾಟ ಆರಂಭಿಸಿದವರು ಇಲ್ಲಿಯ ಮಾದಿಗರು. ಅವರು ಅನೇಕ ಅಂಕಿ ಅಂಶಗಳನ್ನು ಮುಂದುಮಾಡಿ ತಾವು ಹೋರಾಡುತ್ತಿರುವುದು ಸರಿ ಎಂದು ಹೇಳಲಾಗುತ್ತಿದೆ. ೧೯೧೧ರ ಜನಗಣತಿಯ ಪ್ರಕಾರ ದಕ್ಷಿಣ ಭಾರತದಲ್ಲಿ ಪರಿಶಿಷ್ಟ ಜಾತಿಯ ಶೇ.೫೦ರಷ್ಟು ಆದಿಜಾಂಬವ ಜನರಿದ್ದರೆ. ಇತ್ತೀಚಿನ ಹಾವನೂರು ವರದಿ ಅಂಕಿ ಅಂಶಗಳ ಪ್ರಕಾರ ಈ ಜನಾಂಗವು ಶೇ.೫೭.೨ರಷ್ಟು ಕರ್ನಾಟಕದಲ್ಲಿಯೇ ನೆಲೆಸಿದ್ದಾರೆ.[೨೮] ಈ ಪ್ರಮಾಣದಲ್ಲಿ ಮೀಸಲಾತಿ ಸೌಲಭ್ಯವನ್ನು ಪಡೆಯಲಾಗಿಲ್ಲ. ಹೆಚ್ಚಿನ ಅವಕಾಶಗಳನ್ನು ಹೊಲೆಯರೆ ಪಡೆದುಕೊಂಡಿದ್ದಾರೆಂದು ಮಾದಿಗರು ಕೆಲವೊಂದು ಅಂಕಿ ಅಂಶಗಳನ್ನು ನೀಡುತ್ತಾರೆ. ಇದುವರೆವಿಗೂ ಮಾದಿಗರಿಗೆ ಒಂದೇ ಒಂದು ಇಂಜಿನಿಯರಿಂಗ್ ಹಾಗೂ ಮೆಡಿಕಲ್ ಕಾಲೇಜು ಇಲ್ಲ. ಆದರೆ ಬಲಗೈ(ಹೊಲೆಯರು)ಯವರಿಗೆ ಎರಡೆರಡು ಇಂಜಿನಿಯರಿಂಗ್ ಹಾಗೂ ಮೆಡಿಕಲ್ ಕಾಲೇಜು ಸ್ಥಾಪಿಸಿಕೊಂಡು ಬಲಾಢ್ಯರಾಗಿದ್ದಾರೆ.'' ರಾಜ್ಯ ಸಚಿವ ಸಂಪುಟದಲ್ಲಿ ಮಾದಿಗ ಜನಾಂಗಕ್ಕೆ ಯಾವುದೇ ಕ್ಯಾಬಿನೆಟ್ ದರ್ಜೆಯ ಸ್ಥಾನವಿಲ್ಲ''[೨೯] ರಾಜ್ಯದ ಅನೇಕ ವಿಶ್ವವಿದ್ಯಾಲಯದಲ್ಲಿರುವ ಬೋಧಕರ ಸಂಖ್ಯೆ ತೆಗೆದುಕೊಂಡರೆ ಹೆಚ್ಚಿನ ಅವಕಾಶಗಳು ಹೊಲೆಯರಿಗೆ ದೊರಕಿವೆ. ಈ ರೀತಿ ಪರಿಶಿಷ್ಟ ಜಾತಿಯ ಒಳಪಂಗಡಗಳನ್ನೆಲ್ಲಾ ಒಟ್ಟುಗೂಡಿಸಿ ಮೀಸಲಾತಿ ನೀಡಿದಾಗ ಈ ರೀತಿ ಸಂಖ್ಯೆಯಲ್ಲಿ ಕಡಿಮೆ ಇರುವ ಪ್ರಬಲರಾಗಿರುವ

ಜಾತಿಗಳು ಹೆಚ್ಚು ಅವಕಾಶಗಳನ್ನು ಪಡೆಯಲು ಸಾಧ್ಯವಾಗುತ್ತದೆ. ಇದನ್ನು ಸರಿಪಡಿಸಲು ನಮ್ಮ ಜನಸಂಖ್ಯಾ ಪ್ರಮಾಣದಲ್ಲಿ ಮೀಸಲಾತಿಯನ್ನು ಹಂಚಿಕೆ ಮಾಡಿ ಮಾದಿಗರಿಗೆ ಪ್ರತ್ಯೇಕ ಮೀಸಲಾತಿಗೆ ಅವಕಾಶ ಮಾಡಿಕೊಡಿರೆಂದು ಈ ರಾಜ್ಯದ ಮಾದಿಗರು ಧರಣಿ, ಜಾತಾ, ರ್‍ಯಾಲಿ, ಸಮಾವೇಶ, ವಿಚಾರ ಸಂಕಿರಣ ಮುಂತಾದ ಕಾರ್ಯಕ್ರಮಗಳನ್ನು ಮಾಡಿ ಸರ್ಕಾರದ ಗಮನ ಸೆಳೆಯಲು ಪ್ರಯತ್ನಿಸುತ್ತಿದ್ದಾರೆ.

ಪ್ರತ್ಯೇಕ ಮೀಸಲಾತಿ ಬೇಡಿಕೆಯನ್ನು ಪ್ರಮುಖವಾಗಿ ವಿರೋಧಿಸುವವರು ಹೊಲೆಯರು. ಮಾದಿಗರು ಮಾಡುವ ಆರೋಪಕ್ಕೆ ಪ್ರತಿಯಾಗಿ ತಾವು ಆರೋಪಿಸತೊಡಗಿದ್ದಾರೆ. ೧೯೫೫ರಲ್ಲಿ ಸ್ಥಾಪಿತಗೊಂಡಿರುವ ಆದಿಕರ್ನಾಟಕ ಸಂಘ(ಬಲಗೈ) ಹೊರಡಿಸಿರುವ ಕರಪತ್ರವೊಂದರಲ್ಲಿ ಮಾದಿಗ ಮತ್ತು ಹೊಲೆಯರು ಸರ್ಕಾರದ ಸೌಲಭ್ಯಗಳನ್ನು ಎಷ್ಟೆಷ್ಟು ಪಡೆದುಕೊಂಡಿರುವರೆಂಬುದನ್ನು(ಅಧಿಕಾರ ಮತ್ತು ರಾಜಕೀಯ ಅಧಿಕಾರಗಳು) ತಿಳಿಸುತ್ತಲೆ ಹೊಲೆಯರ ಸಂಖ್ಯೆ ೬೦ ಲಕ್ಷ ಇದ್ದರೆಂತಲೂ ಮಾದಿಗರು ೨೭ ಲಕ್ಷ ಇದ್ದಾರೆಂದು ತಿಳಿಸುತ್ತಾ ಅವಕಾಶಗಳನ್ನು ಹೆಚ್ಚು ಮಾದಿಗರೆ ಪಡೆದುಕೊಂಡಿದ್ದಾರೆಂದು ಆರೋಪಿಸುತ್ತಾರೆ.[೬೦] ಹಾಗೆಯೇ ಲೋಕಸೇವಾ ಆಯೋಗದಲ್ಲಿ ಸದಸ್ಯರು, ಅಧ್ಯಕ್ಷರಾಗಿದ್ದ ಬಹುತೇಕ ಮಂದಿ ಮಾದಿಗ ಜನಾಂಗಕ್ಕೆ ಸೇರಿದವರು ಇದರಿಂದ ನೇಮಕಾತಿಯಲ್ಲಿ ಬಲಗೈ(ಛಲವಾದಿ) ಜನಾಂಗದವರಿಗೆ ಬಾರಿ ಅನ್ಯಾಯವಾಗಿದೆ[೬೧] ಎಂದು ಕರ್ನಾಟಕ ಛಲವಾದಿಗಳ ಸಂಘ ದೂರಿದೆ. ಇದರ ಅಧ್ಯಕ್ಷ ಟಿ.ನಾರಾಯಣಸ್ವಾಮಿ ತಮ್ಮ ಹೇಳಿಕೆಯನ್ನು ಸಮರ್ಥಿಸುವುದಕ್ಕೆ ಪೂರಕವಾಗಿ ೧೯೭೧ರಿಂದ ನಡೆಸಿದ ವಿವಿಧ ಜನಗಣತಿ ಅಂಕಿ ಅಂಶಗಳನ್ನು ಮುಂದಿಡುತ್ತಾರೆ. ೧೯೯೧ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿ ೭೩,೬೯,೨೭೯ ಜನರು ಪರಿಶಿಷ್ಟ ಜಾತಿಗೆ ಸೇರಿದ್ದು ಅವರಲ್ಲಿ ಬಲಗೈ(ಛಲವಾದಿ) ಗುಂಪಿಗೆ ಸೇರಿದವರು ಶೇ ೬೫ರಷ್ಟಿದ್ದರೆ, ಮಾದಿಗರ ಸಂಖ್ಯೆ ಶೇ ೩೫ರಷ್ಟು ಮಾತ್ರ ಇದೆ ಎಂದು ವಾದಿಸುವ ಇವರು ಪ್ರತ್ಯೇಕ ಮೀಸಲಾತಿ ಬೇಕೆನ್ನುವ ಮಾದಿಗರ ಬೇಡಿಕೆಯನ್ನು ತೀವ್ರವಾಗಿ ವಿರೋಧಿಸುತ್ತಾರೆ.[೬೨] ಹೀಗೆ ಮಾದಿಗ ಮತ್ತು ಹೊಲೆಯರ ಜನಾಂಗಕ್ಕೆ ಸೇರಿರುವ ಜಾತಿ ಸಂಘಟನೆಗಳು ಪರಸ್ಪರ ದೋಷಾರೋಪಣೆ ಮಾಡುತ್ತಲೆ ಎರಡು ಜಾತಿಗಳ ನಡುವೆ ದ್ವೇಷ-ಅಸೂಯೆ, ಅನುಮಾನಗಳನ್ನು ಹೆಚ್ಚುವಂತೆ ಮಾಡಿವೆ.

ಈ ರೀತಿಯಾಗಿ ಮಾದಿಗರು ಮತ್ತು ಹೊಲೆಯರು ಕಿತ್ತಾಟದಲ್ಲಿ ತೊಡಗಿಕೊಂಡಿರುವುದನ್ನು ತಡೆಗಟ್ಟಿ, ಅವರು ಪರಸ್ಪರ ಸಮಧಾನದಿಂದ ಚರ್ಚೆ ಮೂಲಕ ಈ ಸಮಸ್ಯೆಯನ್ನು ಬಗೆಹರಿಸಿಕೊಳ್ಳ ಬೇಕೆಂದು ದಲಿತ, ಹಿಂದುಳಿದ ಹಾಗೂ ಪ್ರಗತಿಪರ ಸಂಘಟನೆಗಳು ಈ ಕುರಿತು ವಿಚಾರ ಸಂಕಿರಣ ಏರ್ಪಡಿಸಿರುವುದುಂಟು. ಬೆಂಗಳೂರಿನಲ್ಲಿ ಡಾ.ಬಾಬಾ ಸಾಹೇಬ್ ಅಂಬೇಡ್ಕರ್ ಅಧ್ಯಯನ ಕೇಂದ್ರ ಮತ್ತು ಡಾ.ಲೋಹಿಯಾ ಸಮತಾ ಸಂಘಟನೆಗಳು ಜಂಟಿಯಾಗಿ ವಿಚಾರ ಸಂಕಿರಣವೊಂದನ್ನು ದಿ:೨-೧-೨೦೦೦ರಂದು ಗಾಂಧಿ ಭವನದಲ್ಲಿ ಏರ್ಪಡಿಸಿದ್ದರು. ಇದು 'ಮೀಸಲಾತಿಯ ವಿಭಾಗೀಕರಣ ಒಂದು

ಚರ್ಚೆ'' ಎಂಬ ವಿಷಯದಲ್ಲಿ ಮೇಲೆ ಚರ್ಚೆಗೆ ಅವಕಾಶ ಮಾಡಿಕೊಟ್ಟು ಅದರ ಸಾಧಕ ಬಾಧಕಗಳನ್ನು ತಿಳಿದುಕೊಂಡು ಒಟ್ಟಾಗಿ ಈ ಸಮಸ್ಯೆ ಪರಿಹರಿಸಿಕೊಳ್ಳುವಂತಹ ಭಾವನೆಗಳು ಮೂಡಲು ಪ್ರಯತ್ನಿಸಿದೆ. ಅದೇ ರೀತಿಯಾಗಿ ಬೆಂಗಳೂರಿನ 'ಸಮನ್ವಯ ವಿಕಾಸ ವೇದಿಕೆ'ವತಿಯಿಂದ ಪುರಭವನದಲ್ಲಿ ''ಪರಿಶಿಷ್ಟರ ಮೀಸಲಾತಿಯ ವರ್ಗೀಕರಣ ಮತ್ತು ಸಾಮಾಜಿಕ ನ್ಯಾಯ' ಚಿಂತನ ಗೋಷ್ಠಿಯನ್ನು ಏರ್ಪಡಿಸಿತ್ತು. ಅದರ ಅಧ್ಯಕ್ಷತೆಯನ್ನು ವಹಿಸಿದ್ದ ವೀರಭದ್ರ ಚನ್ನಮಲ್ಲ ಸ್ವಾಮಿಜಿ ಮಾತನಾಡುತ್ತಾ ಅಣ್ಣತಮ್ಮಂದಿರು ಪಾಲು ಹಂಚಿಕೊಳ್ಳುವಾಗ ಸಂಬಂಧವನ್ನು ಉಳಿಸಿಕೊಂಡು ಪಾಲು ಹಂಚಿಕೊಳ್ಳಬೇಕೇ ಹೊರತು ಸಂಬಂಧ ಕಡಿದುಕೊಳ್ಳುವುದು ವಿವೇಕವಲ್ಲ'' ಎಂದು ಪರೋಕ್ಷವಾಗಿ ಪರಸ್ಪರ ಆರೋಪ ಮಾಡುತ್ತಾ ಹೊರಟಿರುವ ಮಾದಿಗ ಮತ್ತು ಹೊಲೆಯರ ಕುರಿತು ಹೇಳಿರುವಂತಹದು.

ಪ್ರತ್ಯೇಕ ಮೀಸಲಾತಿ ಬೇಡಿಕೆ ಮಾದಿಗ-ಹೊಲೆಯರ ನಡುವೆ ಉಂಟು ಮಾಡುತ್ತಿರುವ ದ್ವೇಷ-ಅಸೂಯೆಯನ್ನು ತಡೆಗಟ್ಟಲು ಪರಿಶಿಷ್ಟ ಜಾತಿಯ ಮೀಸಲಾತಿಯಲ್ಲಿ ಒಳಮೀಸಲಾತಿಯ ಹಂಚಿಕೆಯನ್ನು ಮಾಡುವಂತೆ ಹೋರಾಟ ಕೈಗೊಂಡ ದಸಂಸ ಕ್ರಮ ಗಮನಾರ್ಹ. ತಡವಾಗಿಯಾದರೂ ಪರಿಶಿಷ್ಟ ಜಾತಿಗಳ ನಡುವಿನ ಏಕತೆ ಮತ್ತು ಅಭಿವೃದ್ಧಿಯ ದೃಷ್ಟಿಯಿಂದ ತಾಯಿ ಸ್ಥಾನದಲ್ಲಿ ನಿಂತು ಸಮಸ್ಯೆ ಬಗೆಹರಿಸಲು ಗಮನಹರಿಸಿದೆ. ಇದು ರಾಜ್ಯದ ಎಲ್ಲಾ ಭಾಗಗಳಲ್ಲಿ ಈ ಸಂಬಂಧ ವಿಚಾರ ಸಂಕಿರಣ, ಧರಣಿ, ಜಾತಾ, ರ್‍ಯಾಲಿ, ಸಮಾವೇಶ ಮುಂತಾದ ಕಾರ್ಯಕ್ರಮಗಳನ್ನು ಮಾಡುತ್ತಾ ಪರಿಶಿಷ್ಟ ಜಾತಿಯ ಒಳಪಂಗಡಗಳಿಗೆ ವರ್ಗೀಕರಣ ಮೀಸಲಾತಿಯ ಅವಶ್ಯಕತೆ ಏನು ಅನ್ನುವುದನ್ನು ಮನವರಿಕೆ ಮಾಡಿಸತೊಡಗಿದೆ. ಅದರಂತೆ ಮಾದಿಗ, ಹೊಲೆಯ, ಬೋವಿ, ಲಂಬಾಣಿ, ಕೊರಚ ಮುಂತಾದ ಜನಾಂಗಗಳ ಮುಖಂಡರನ್ನು ಒಟ್ಟಾಗಿಸಿ ರಾಜ್ಯಮಟ್ಟದ ಸಮಾವೇಶ, ರ್‍ಯಾಲಿ ಮಾಡಿ ಸರ್ಕಾರದ ಗಮನ ಸೆಳೆಯಲು ಪ್ರಯತ್ನಿಸಿದೆ. ಆದಷ್ಟು ಬೇಗ ಈ ಸಮಸ್ಯೆ ಬಗೆಹರಿಸಲು ಸರ್ಕಾರ ಆಯೋಗ ರಚನೆ ಮಾಡಬೇಕೆಂದು ಒತ್ತಡ ತರುತ್ತಿದೆ. ಆದರೆ ಹೊಲೆ-ಮಾದಿಗರ ನಡುವಿನ ಕಿತ್ತಾಟವನ್ನು ಕಂಡು ಕಾಣದಂತೆ ಕುಳಿತುಕೊಂಡಿರುವ ಮತ್ತೊಂದು ದಸಂಸವು ಇದ್ದು ಅದು ಮೂಲ ದಸಂಸ ದಿಂದ ಉಚ್ಚಾಟಿತರಾದ ಮುಖಂಡರುಗಳು ತಮ್ಮ ಬೆಂಬಲಿಗರೊಂದಿಗೆ ಕೂಡಿಕೊಂಡು ಪ್ರತ್ಯೇಕ ಸಂಘಟನೆಯಾಗಿದೆ. ಈ ಸಂಘಟನೆಯ ಕರಪತ್ರದಲ್ಲಿ ಈ ಸಮಸ್ಯೆಯ ಮಿಂಚುನೋಟ ಹರಿಸಿದ್ದರೂ ಯಾವುದೇ ತೀವ್ರತರ ಹೋರಾಟವನ್ನು ಕೈಗೊಂಡಿಲ್ಲ. ಬಹುಶಃ ಈ ಸಂಘಟನೆಯಲ್ಲಿ ಹೆಚ್ಚಿನ ಸಂಖ್ಯೆ ಹೊಲೆಯರೆ ಇರುವುದು ಕಾರಣವಾಗಿರಬಹುದು. ಹೊಲೆಯ ಜಾತಿಗೆ ಸೇರಿರುವ ಶ್ರೀಧರ ಕಲವೀರ ಮಾವಳ್ಳಿ ಶಂಕರ್ ಮುಂತಾದ ರಾಜ್ಯಮಟ್ಟದ ದಸಂಸ ಮುಖಂಡರು ಈ ಸಮಸ್ಯೆ ಬಗೆಹರಿಸಿ ಮಾದಿಗ ಹೊಲೆಯರ ನಡುವೆ ಏಕತೆಯನ್ನು ಕಾಪಾಡಿಕೊಳ್ಳಲು ಪ್ರಾಮಾಣಿಕ ಪ್ರಯತ್ನ ಮಾಡುತ್ತಿದ್ದಾರೆ.

ದಸಂಸ ಸಂಸ್ಥಾಪಕರಲ್ಲಿ ಒಬ್ಬರಾದ ಸಾಹಿತಿ ದೇವನೂರು ಮಹದೇವ ಅವರು 'ವರ್ಗೀಕರಣ ಮೀಸಲಾತಿ' ಕುರಿತ ತಮ್ಮ ಅಭಿಪ್ರಾಯವನ್ನು ದಿ:೨೭-೧-೦೧ರ ಪ್ರಜಾವಾಣಿ ದಿನ ಪತ್ರಿಕೆಯಲ್ಲಿ

ತಿಳಿಸಿದ್ದಾರೆ. ಅದರ ಪ್ರಕಾರ ಸೂಚಿಸಿರುವ ಮೀಸಲಾತಿಯೊಳಗಿನ ಆದ್ಯತೆ ಪರಿಕಲ್ಪನೆಯ ಕೆಲವು ಅಂಶಗಳು ಅರ್ಥಪೂರ್ಣವೆ ಆಗಿವೆ. ಆದರೆ ಈ ಬೇಡಿಕೆ 'ಎಡಗೈ' ಪಂಗಡದವರು ಇಟ್ಟಿರುವುದರಿಂದ ಬೇಡ ಅನ್ನಲು ನನಗೆ ಹಕ್ಕಿಲ್ಲವೇನೋ ಎಂದು ಹೇಳುತ್ತಾ ಇದೇ ಬೇಡಿಕೆಯನ್ನು 'ಬಲಗೈ' ಪಂಗಡದವರು ಕೇಳಿದರೆ ಬೇಡ ಎನ್ನುತ್ತೇನೆ ಎನ್ನುವ ಅವರ ಮಾತು ಇಂದು ಅವರು ಯಾವ ನೆಲೆಯಲ್ಲಿ ನಿಂತು ಮಾತಾಡುತ್ತಿದ್ದಾರೆಂಬುದು ಗೋಚರವಾಗುತ್ತದೆ. ಒಂದು ಕಾಲಕ್ಕೆ ಇಡೀ ಶೋಷಿತ ಸಮುದಾಯಗಳ ನಾಯಕರಾಗಿದ್ದ ಇವರು ಇಂದು ತನ್ನ ಜಾತಿ(ಹೊಲೆಯರ) ನೆಲೆಯಲ್ಲಿ ನಿಂತು ಮಾತನಾಡುತ್ತಾ ಪ್ರತ್ಯೇಕ ಮೀಸಲಾತಿ ಬೇಡಿಕೆಯನ್ನು ವಿರೋಧಿಸುತ್ತಿರುವುದು ದುರಂತ.

ದಸಂಸ ಕಟ್ಟುವಲ್ಲಿ ಕವಿ ಸಿದ್ಧಲಿಂಗಯ್ಯನವರು ಪ್ರಮುಖ ಪಾತ್ರವಹಿಸಿದವರು ಒಬ್ಬರು. ಇವರು ಜಾತಿಯಲ್ಲಿ ಹೊಲೆಯ ಜನಾಂಗಕ್ಕೆ ಸೇರಿದ್ದು. ಹೊಲೆ-ಮಾದಿಗರ ನೋವು, ಸಂಕಟ, ರೋಷವನ್ನು ತಮ್ಮ ಬರಹಗಳ ಮೂಲಕ ವ್ಯಕ್ತಪಡಿಸಿ ಶೋಷಿಸುವ ಸಮುದಾಯಗಳ ವಿರುದ್ಧ ಸಿಡಿದೆದ್ದವರು. ಇಂದು ಮಾದಿಗ-ಹೊಲೆಯರ ನಡುವಿನ ಕಿತ್ತಾಟವನ್ನು ಕಂಡು ಕಾಣದೆ ಕಣ್ಣುಮುಚ್ಚಿ ಕುಳಿತಿರುವುದು ಕಂಡುಬರುತ್ತದೆ.

ದಲಿತ ಕಥೆಗಾರರಲ್ಲಿ ಒಬ್ಬರಾದ ಮೊಗಳ್ಳಿ ಗಣೇಶ್ ಅವರು ತಮ್ಮ ಕೃತಿಯಾದ 'ದಲಿತರು ಮತ್ತು ಜಾಗತೀಕರಣ' ಕೃತಿಯ ಬರಹಗಳಲ್ಲಿ ಅದರ ವಿರುದ್ಧದ ಧ್ವನಿ ಇರುವುದು ಕಂಡುಬರುತ್ತದೆ. ನಗರ ಕೇಂದ್ರಿತ ಹೊಲೆ-ಮಾದಿಗರು ಸವಲತ್ತುಗಳ ಸವಿಕಂಡು ಆ ಹಿನ್ನೆಲೆಯಲ್ಲಿ ಎಡಗೈ ಬಲಗೈ ಆಗಿ ಮೀಸಲಾತಿಯನ್ನು ವಿಂಗಡಿಸಬೇಕೆಂದು ವಾದಿಸುವುದು ಅತ್ಯಂತ ಅಪಾಯಕಾರಿಯಾದದ್ದು. ಇದರ ಲಾಭ ಮೇಲು ಜಾತಿಗಳಿಗೆ ಮೀಸಲಾಗುತ್ತದೆ. ಯಾರೂ ಇದನ್ನು ಬದಲಾವಣೆ ಎಂದು ಕರೆಯಲಾರರು, ಕರೆಯಬಾರದು[೪೪] ಎನ್ನುವ ಅಭಿಪ್ರಾಯ ಹೊಂದಿದ್ದ ಇವರು ಇತ್ತೀಚೆಗೆತಮ್ಮ ಅಭಿಪ್ರಾಯದಲ್ಲಿ ಬದಲಾವಣೆ ಮಾಡಿಕೊಂಡಿರುವುದು ಕಂಡುಬರುತ್ತದೆ. ದಿ: ೨೧-೧-೦೨ರಲ್ಲಿ ದಸಂಸ ವತಿಯಿಂದ ಮೀಸಲಾತಿ ವರ್ಗೀಕರಣಕ್ಕಾಗಿ ನಡೆದ ರ್‍ಯಾಲಿಯ ಸಂದರ್ಭದಲ್ಲಿ ಮಾತನಾಡುತ್ತಾ ಈ ಒಳ ಮೀಸಲಾತಿ ಹೋರಾಟವನ್ನು ನಾನು ಯಾವ ರೀತಿ ಭಾವಿಸುತ್ತೇನೆಂದರೆ ಈ ಮೀಸಲಾತಿ ಹೋರಾಟದ ಮುಂದುವರಿದ ಭಾಗವಾಗಿ ನಾವು ಇದನ್ನು ಭಾವಿಸಬೇಕಾಗುತ್ತದೆ. ಈ ಒಳಮೀಸಲಾತಿ ನಾವು ನಮ್ಮ ಒಟ್ಟು ಸಮುದಾಯದ ಒಗ್ಗಟ್ಟಿನ ಸಂಕೇತವಾಗಿ ಪರಿಗಣಿಸಬೇಕೇ ಹೊರತು ಇದನ್ನು ಯಾವುದೇ ಬಗೆಯ ಒಡಕು ಎಂದು ಭಾವಿಸಬಾರದು ಎಂಬ ಅವರ ಮಾತುಗಳಲ್ಲಿ ಅವರು ಪರಿಶಿಷ್ಟ ಜಾತಿಯ ಮೀಸಲಾತಿಯನ್ನು ವರ್ಗೀಕರಣ ಪರವಾದ ನಿಲುವಿಗೆ ಬಂದಿರುವುದು ಕಂಡುಬರುತ್ತದೆ.

ಮಾದಿಗ ಸಂಬಂಧಿತ ಸಮಗಾರ ಜನಾಂಗಕ್ಕೆ ಸೇರಿದ ಪ್ರೊ.ಲಕ್ಷ್ಮಣ್ ತೆಲಗಾವಿ, ಸಮಾಜಶಾಸ್ತ್ರ ಅಧ್ಯಾಪಕ ಗುರುರಾಜ್ ಬೀಡಿಕರ್ ಮುಂತಾದವರು ಮಾದಿಗರಿಗೆ ಪ್ರತ್ಯೇಕ ಮೀಸಲಾತಿಯ ಬೇಡಿಕೆಯ

ಹೋರಾಟವನ್ನು ಸಂಪೂರ್ಣವಾಗಿ ಬೆಂಬಲಿಸುತ್ತಾರೆ. ಮಾದಿಗ ಜನಾಂಗಕ್ಕೆ ಸೇರಿದ ಬಂಡಾಯ ಸಾಹಿತಿ ಹಾಗೂ ಕವಿಯಾಗಿ ಗುರುತಿಸಿಕೊಂಡಿರುವ ಎಲ್.ಹನುಮಂತಯ್ಯ(ಇಂದು ವಿಧಾನ ಪರಿಷತ್ ಸದಸ್ಯರಾಗಿದ್ದಾರೆ), ಪ್ರೊ.ಯಲ್ಲಪ್ಪ ಭೂತಯ್ಯ, ಡಾ.ಜಿ.ನಂದನ್ , ಡಾ.ದುರ್ಗಾದಾಸ್ , ಸಿ.ಕೆ.ಮಹೇಶ್ ಮುಂತಾದವರು ಈ ಹೋರಾಟದಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ರಾಜಕಾರಣಿಗಳ ಅಭಿಪ್ರಾಯಕ್ಕೆ ಬಂದರೆ ಮಾದಿಗರಿಗೆ ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿಯನ್ನು ಹಂಚುವುದು ನ್ಯಾಯಂದು ಈ ಬಗ್ಗೆ ನಡೆಯುವ ಹೋರಾಟವನ್ನು ಸಂಪೂರ್ಣವಾಗಿ ಬೆಂಬಲಿಸಿ ಕೆ.ಎಚ್.ಮುನಿಯಪ್ಪ, ಜಿ.ರಾಮಕೃಷ್ಣ, ಡಿ.ಮಂಜುನಾಥ್, ಎಚ್. ಆಂಜನೇಯ, ಕೆ.ಬಿ.ಶಾಣಪ್ಪ, ಸಿ.ರಮೇಶ್ ಮುಂತಾದವರು 'ಮಾದಿಗ ಮೀಸಲಾತಿ ಹೋರಾಟ ಸಮಿತಿ'ಯಿಂದ ಕೈಗೊಳ್ಳುವ ಹೋರಾಟಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿರುವುದು ಕಂಡುಬರುತ್ತದೆ. ಇಂಥಹ ಹೋರಾಟವನ್ನು ಹೊಲೆಯ ಜನಾಂಗದ ಬಹುತೇಕ ಎಲ್ಲಾ ರಾಜಕಾರಣಿಗಳು ಪ್ರಭಲವಾಗಿ ವಿರೋಧಿಸುತ್ತಾರಾದರೂ ಕೆಲವರು ಈ ಬೇಡಿಕೆಯನ್ನು ಬೆಂಬಲಿಸುತ್ತಾರೆ. ದಿ:೨೭-೧-೦೨ರಂದು ಮಾದಿಗ ದಂಡೋರದಿಂದ ಸಚಿವರಿಗೆ ದಿಗ್ಬಂಧನ ಹಾಕಿದ್ದಾಗ ಉನ್ನತ ಶಿಕ್ಷಣ ಸಚಿವ ಡಾ.ಜಿ.ಪರಮೇಶ್ವರ್ ಈ ಬೇಡಿಕೆಗೆ ತನ್ನ ವಿರೋಧವಿಲ್ಲ ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿ ಹಂಚಿಕೆಯಾದರೆ ಪರಿಶಿಷ್ಟ ಜಾತಿಯ ಎಲ್ಲಾ ಜನಾಂಗಕ್ಕೂ ನ್ಯಾಯ ನೀಡಿದಂತಾಗುತ್ತದೆ ಎಂದು ತಿಳಿಸಿದರು.

ಈ ರೀತಿ ಮಾದಿಗರ ಜಾತಿ ಸಂಘಟನೆ ಮತ್ತು ಜಾತ್ಯಾತೀತ ಸಂಘಟನೆಯಾಗಿರುವ ದಲಿತ ಸಂಘರ್ಷ ಸಮಿತಿ (ಪ್ರೊ.ಬಿ.ಕೆ)ಗಳು ಪರಿಶಿಷ್ಟ ಜಾತಿಯ ಮೀಸಲಾತಿಯನ್ನು ಒಳಜಾತಿಗಳ ಜನಸಂಖ್ಯಾವಾರು ವರ್ಗೀಕರಿಸುವಂತೆ ಸರ್ಕಾರದ ಮೇಲೆ ಒತ್ತಡ ತರಲು ಪ್ರಯತ್ನಿಸಿವೆ. ಈ ಬಗೆಯ ಹೋರಾಟ ಮಾಡಲು ಒಂದು ಕಡೆ ಮಾದಿಗರು ಸಂಘಟಿತರಾಗಿ ಸರ್ಕಾರದ ಗಮನ ಸೆಳೆಯಲು ತೊಡಗಿದ್ದ ಮತ್ತೊಂದು ಕಡೆ ಹೊಲೆಯರು ಮಾದಿಗರ ಬೇಡಿಕೆಯ ವಿರುದ್ಧ ತೊಡಗಿದ್ದು ಅವರೆಡು ಜಾತಿಗಳ ನಡುವೆ ದ್ವೇಷ-ಅಸೂಯೆ, ಅನುಮಾನಗಳು ಉಂಟಾಗುವಂತೆ ಮಾಡಿದ್ದವು. ಸ್ವಾತಂತ್ರ್ಯೋತ್ತರ ಕಾಲದ ೭೦ರ ದಶಕದಲ್ಲಿ ಅಂಬೇಡ್ಕರ್ ವಿಚಾರಗಳ ನೆಲೆಯಲ್ಲಿ ಸಂಘಟನೆ ಕಟ್ಟುವಲ್ಲಿ ಪ್ರಮುಖ ಪಾತ್ರವಹಿಸಿ ಏಕತೆಯನ್ನು ಪ್ರದರ್ಶಿಸಿದ್ದರು. ಆದರೆ ಪ್ರತ್ಯೇಕ ಮೀಸಲಾಗಿ ಬೇಡಿಕೆ ಅವೆರಡರಲ್ಲಿ ಉಂಟು ಮಾಡುತ್ತಿರುವ ಬಿರುಕನ್ನು ತಡೆಗಟ್ಟಲು ಆಲೋಚಿಸಿದ ದಸಂಸ ಜನಸಂಖ್ಯಾವಾರು ಮೀಸಲಾತಿ ವರ್ಗೀಕರಿಸುವುದು ನ್ಯಾಯವು ಹಾಗೂ ಅದು ಅಂಬೇಡ್ಕರರ ಕನಸ್ಸು ಕೂಡ ಎಂದರಿತು ತಾನು ಸಹ ಪ್ರತ್ಯೇಕವಾಗಿ ಹೋರಾಟದಲ್ಲಿ ತೊಡಗಿಕೊಂಡಿದೆ. ಈ ರೀತಿ ಹೋರಾಟದಲ್ಲಿ ತೊಡಗಿಕೊಂಡಿರುವ 'ಮಾದಿಗ ದಂಡೋರ', ಮಾದಿಗ ಮೀಸಲಾತಿ ಹೋರಾಟ ಸಮಿತಿ' ಹಾಗೂ ದಸಂಸ ಮುಂತಾದವುಗಳು ರಾಜ್ಯದ್ಯಾಂತ ಧರಣಿ, ವಿಚಾರ ಸಂಕಿರಣ, ಜಾಥಾ, ಸಮಾವೇಶ, ರ್‍ಯಾಲಿ ಮುಂತಾದ ಕಾರ್ಯಕ್ರಮಗಳನ್ನು ನಡೆಸಿ ಸರ್ಕಾರದ ಗಮನಸೆಳೆದು ಮೀಸಲಾತಿಯನ್ನು ಜನಸಂಖ್ಯಾವಾರು

ವರ್ಗೀಕರಿಸುವಂತೆ ಮನವಿಯ ಮೂಲಕ ಒತ್ತಡ ಪ್ರಯತ್ನಿಸಿದವು. ಆದರೆ ಈ ಕುರಿತು ಸರ್ಕಾರವು ಯಾವುದೇ ಕ್ರಮ ಕೈಗೊಳ್ಳಲಿಲ್ಲ. ದಸಂಸ ಕಾರ್ಯಕ್ರಮವೆಂದರೆ ಸರ್ಕಾರವೇ ನಡುಗುವ ಕಾಲವೊಂದಿತ್ತು. ಆದರೆ ಇಂದು ಅದು ಎರಡು ಬಾರಿ ರಾಜ್ಯಮಟ್ಟದ ರ್‍ಯಾಲಿಯನ್ನು ಮಾಡಿದರೂ ಅಂತಹ ಯಾವುದೇ ಕಾರ್ಯಕ್ರಮಗಳಿಗೆ ಸರ್ಕಾರ ಜಗ್ಗಲಿಲ್ಲ. ಇದಕ್ಕೇ ಕಾರಣವೂ ಇಲ್ಲದಿಲ್ಲ. ಮಾದಿಗ-ಹೊಲೆಯರ ನಡುವಿನ ಅನೈಕ್ಯತೆ ಮತ್ತು ಮೀಸಲಾತಿ ವರ್ಗೀಕರಣ ಕ್ರಮಕ್ಕೆ ಮುಂದಾದ ತಕ್ಷಣವೆ ಈ ಬೇಡಿಕೆಯನ್ನು ವಿರೋಧಿಸುವ ಹೊಲೆಯರು, ಅದೇ ಜಾತಿಗೆ ಸೇರಿರುವ ಹಿರಿಯ ಮಂತ್ರಿಗಳ ವಿರೋಧ ಕಟ್ಟಿಕೊಂಡು ಪಕ್ಷದಲ್ಲಿ ಆಂತರಿಕ ಕಲಹವುಂಟಾಗುವ ಸಾಧ್ಯತೆ ಇರುವುದರಿಂದ ಆಡಳಿತ ರೂಢ ಕಾಂಗ್ರೆಸ್ ಪಕ್ಷ ಸುಮ್ಮನಿದೆ ಎನ್ನಬಹುದು.

ಪರಿಶಿಷ್ಟ ಜಾತಿಯ ಮೀಸಲಾತಿಯನ್ನು ವರ್ಗೀಕರಿಸಿರುವ ಬೇಡಿಕೆ ಇವೇ ಮೊದಲಲ್ಲ. ಈಗಾಗಲೇ ಬೇರೆ ಕೆಲವು ರಾಜ್ಯಗಳಲ್ಲಿ ಇದು ಜಾರಿಯಲ್ಲಿದೆ. ಪಂಜಾಬ್, ಹರಿಯಾಣ ರಾಜ್ಯಗಳ ಮೀಸಲಾತಿ ವರ್ಗೀಕರಣಕ್ಕೆ ಯಾವ ಸಪ್ಪಳವಾಗಲಿಲ್ಲ. ನಿಶ್ಯಬ್ದವಾಗಿ ಅನುಷ್ಠಾನವಾಗಿದೆ.[೮೫] ಅಲ್ಲದೆ ಆಂಧ್ರದಲ್ಲಿ ಹೊಲೆಯರ ವಿರೋಧದ ನಡುವೆಯೂ ಮೀಸಲಾತಿಯನ್ನು ABCDಯಾಗಿ ವರ್ಗೀಕರಿಸಿರುವುದು ಇದೆ. ಈ ಉದಾಹರಣೆಗಳು ಇದ್ದರೂ ಇಲ್ಲಿ ಹೊಲೆಯರು ಯಾಕೆ ವಿರೋಧ ಮಾಡುತ್ತಾರೆ. ಸರ್ಕಾರ ಈ ಕ್ರಮ ಕೈಗೊಳ್ಳಲು ಏಕೆ ಮುಂದಾಗುತ್ತಿಲ್ಲವೆಂಬುದು ಆಶ್ಚರ್ಯ. ಈ ಸಂದರ್ಭದಲ್ಲಿ ಜೆ.ಹೆಚ್.ಹಟ್ಟನ್ ಅವರ ಹೇಳಿಕೆ ನೆನಪುಮಾಡಿಕೊಳ್ಳಬೇಕಾಗುತ್ತದೆ. ಪರಿಶಿಷ್ಟ ಜಾತಿಗಳನ್ನು ಗುರುತಿಸುವಾಗ ನೈಜ ಮತ್ತು ಜೀವಂತ ವ್ಯತ್ಯಾಸಗಳಿಂದೊಡಗೂಡಿದ ಮೂಲ (ಹೊಲೆಯ) ಮತ್ತು ಮಾದಿಗ ಜಾತಿಗಳನ್ನು ಆದಿ ಆಂಧ್ರ (ಆದಿಕರ್ನಾಟಕ/ಪರಿಶಿಷ್ಟಜಾತಿ) ಎಂಬ ಹೆಸರಿನಿಂದ ಕರೆದು ಜಾತಿ ನಿರ್ಮೂಲನೆ ಮಾಡುತ್ತೇವೆಂದು ಹೇಳುವುದು ಭಯಾನಕ ಮತ್ತು ಅಕ್ರಮ ನಡೆವಳಿಕೆ ಅದು ಯಾವ ಒಳಿತನ್ನೂ ಆ ಜಾತಿಗಳಿಗೆ ಮಾಡುವುದಿಲ್ಲ. ಸಂಖ್ಯಾಬಲದಿಂದ ಪ್ರಾಮುಖ್ಯವೆನಿಸುವ ಮತ್ತು ಎದ್ದು ಕಾಣುವಂತಹ ಪ್ರತ್ಯೇಕ ಹೆಸರುಗಳನ್ನೇ ಉಳಿಸಿಕೊಂಡು, ತಮ್ಮ ಸ್ವಾಭಿಮಾನವನ್ನು ಬೆಳಸಿಕೊಳ್ಳಲು (ಮೀಸಲಾತಿ ಮುಂತಾದ ಸವಲತ್ತು ಪಡೆಯಲು) ಉತ್ತೇಜನ ಕೊಡುವುದೇ ಅವುಗಳ ಪ್ರಗತಿಗೆ ಸೂಕ್ತ ಮಾರ್ಗ[೮೬] ಎಂದಿದ್ದರು. ಈ ರೀತಿ ಅಂದೇ ಮಾದಿಗ ಮತ್ತು ಹೊಲೆಯರ ಹೆಸರಿನಲ್ಲಿ ಗುರುತಿಸಿದ್ದರೆ ಇಂದು ಈ ಸಮಸ್ಯೆ ಉದ್ಭವಿಸುತ್ತಿರಲಿಲ್ಲ ಎನ್ನಬಹುದು. ಅದಕ್ಕೆ ಬದಲಾಗಿ ಆದಿಕರ್ನಾಟಕ, ಆದಿದ್ರಾವಿಡ, ಆದಿ ಆಂಧ್ರ ಎನ್ನುವ ಪದಗಳು ಮಾದಿಗ-ಹೊಲೆಯ ಜಾತಿಗಳೆರಡರಲ್ಲಿ ಬಳಸಿರುವುದರಿಂದ ಪ್ರತ್ಯೇಕವಾಗಿ ಇವೆರಡು ಜಾತಿಗಳ ಜನಸಂಖ್ಯೆ ನಿಖರವಾಗಿ ತಿಳಿಯಲು ಸಾಧ್ಯವಾಗುತ್ತಿಲ್ಲ. ಇದರಿಂದ ಇವರೆಡು ಜಾತಿಗಳು ಹೆಚ್ಚಿನ ಸಂಖ್ಯೆ ನಮ್ಮದಿದೆ ಆದರೆ ಸೌಲಭ್ಯವನ್ನೆಲ್ಲಾ ಕಡಿಮೆ ಸಂಖ್ಯೆಯಲ್ಲಿ ರುವಂತವರು ಪಡೆದಿದ್ದಾರೆಂದು ಒಬ್ಬರಿಗೊಬ್ಬರು ಆರೋಪಿಸತೊಡಗಿದ್ದಾರೆ.

ಹಾವನೂರು ವರದಿಯು ಮಾದಿಗರ ಸಂಖ್ಯೆ ಪರಿಶಿಷ್ಟ ಜಾತಿ ಜನಸಂಖ್ಯೆಯ ಅರ್ಧಕ್ಕಿಂತಲೂ ಹೆಚ್ಚು ಇದೆ ಎಂದು ತಿಳಿಸಿರುವುದು ಗಮನಾರ್ಹ. ಅಲ್ಲದೇ ಸಾಮಾಜಿಕ ನ್ಯಾಯದ ಹೆಸರಲ್ಲಿ ನೀಡುತ್ತಿರುವ ಸೌಲಭ್ಯಗಳನ್ನು ಇನ್ನೂ ಪಡೆಯದಿರುವ ಅನೇಕ ಸಣ್ಣಪುಟ್ಟ ಜಾತಿಗಳು ಪರಿಶಿಷ್ಟ ಜಾತಿಯಲ್ಲಿವೆ. ವರ್ಗೀಕರಣ ಮೀಸಲಾತಿ ಕೇವಲ ಮಾದಿಗ ಹೊಲೆಯರಿಗೆ ಸಂಬಂಧಿಸಿದ್ದಲ್ಲ. ಇಡೀ ಪರಿಶಿಷ್ಟ ಜಾತಿಯ ಒಳಗಡೆ ಇರುವ ಎಲ್ಲ ಜಾತಿಗಳಿಗೂ ಸಂಬಂಧಿಸಿರುವಂಥದು. ಇದರಿಂದಾಗಿ ಈ ಸಮಸ್ಯೆಯನ್ನು ಗಂಭೀರವಾಗಿ ತೆಗೆದುಕೊಳ್ಳದೆ ಹೋದರೆ ಮುಂದಿನ ದಿನಗಳಲ್ಲಿ ಇವರ ಸ್ಥಿತಿಯನ್ನು ಊಹಿಸಿಕೊಳ್ಳಲೂ ಸಾಧ್ಯವಾಗುವುದಿಲ್ಲ. ಜನಸಂಖ್ಯಾವಾರು ಮೀಸಲಾತಿ ಹಂಚಿಕೆ ನ್ಯಾಯೋಚಿತ. ಆದರೆ ಹಂಚುವಿಕೆಯ ಕ್ರಮ ಕಷ್ಟವೆನಿಸಿದರೂ ವರ್ಗೀಕರಿಸುವುದು ಅನಿವಾರ್ಯ. ಇದು ಆಯಾ ಜಾತಿಯ ಜನಸಂಖ್ಯಾ ಪ್ರಮಾಣದಲ್ಲಿ ಅಭಿವೃದ್ಧಿ ಹೊಂದಲಿಕ್ಕೆ ಅನುಕೂಲ. ಇದು ಮೇಲು ನೋಟಕ್ಕೆ ಪರಿಶಿಷ್ಟ ಜಾತಿಗಳನ್ನು ಛಿದ್ರ ಛಿದ್ರ ಮಾಡುತ್ತದೆ ಎಂದು ಕಂಡುಬಂದರೂ ಆಳದಲ್ಲಿ ಅವುಗಳ ನಡುವಿನ ಸಂಬಂಧ ಇನ್ನಷ್ಟು ಗಟ್ಟಿಗೊಳಿಸುವ ಸಾಧ್ಯತೆಯನ್ನು ಅಲ್ಲಗಳೆಯಲಾಗದು.

**ಅಡಿಟಿಪ್ಪಣಿಗಳು**

೧. ಕರ್ನಾಟಕ ವಿಕಾಸ ಜೂನ್, ೨೦೦೦, ಪು.೨೨

೨. ಅದೇ, ಪು.೯

೩. ಕರ್ನಾಟಕದಲ್ಲಿ ಪಂಚಾಯತ್ ಕಾಯ್ದೆಗಳು, ಎ.ಶ್ರೀಧರ, ೨೦೦೦, ಪು.೨

೪. ಪಂಚಾಯತ್ ರಾಜ್ ಮತ್ತು ಮಹಿಳೆ: ಒಂದು ಅಧ್ಯಯನ, ಎಂ.ಯರಿಸ್ವಾಮಿ, ೧೯೯೭, ಪು.೧೫-೧೬

೫. ಕರ್ನಾಟಕ ವಿಕಾಸ ಜನವರಿ ೨೦೦೦, ಪು.೯

೬. ದೇಶಿಯತೆಯ ನೆರಳಲ್ಲಿ ವಿಕೇಂದ್ರಿಕರಣ, ಚಂದ್ರಪೂಜಾರಿ ಎಂ, ೨೦೦೧, ಪು.೭೭

೭. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೨, ೧೯೮೫, ಪು.೫೮೪

೮. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ಎಸ್.ಚಂದ್ರಶೇಖರ್, ೧೯೮೫, ಪು.೨೨

೯. ಅದೇ, ಪು.೩೯೨

೧೦. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ದ್ವಿತಿಯ ಸಂಪುಟ, ಸೂರ್ಯನಾಥ ಕಾಮತ್, ೧೯೭೭, ಪು.೫೦೮

೧೧. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ತೃತಿಯ ಸಂಪುಟ, ಸೂರ್ಯನಾಥ ಕಾಮತ್, ೧೯೮೦, ಪು. ೮೭೦

೧೨. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೨, ೧೯೮೫, ಪು.೫೮೧

೧೩. ಅದೇ, ಪು.೫೮೧

೧೪. ಅದೇ, ಪು.೩೯೨

೧೪ಎ. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ೧೯೮೫, ಪು.೫೯

೧೫. ಅದೇ, ಪು.೮೨

೧೬. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ದ್ವಿತಿಯ ಸಂಪುಟ, ಸೂರ್ಯನಾಥ ಕಾಮತ್, ೧೯೭೭, ಪು.೫೦೮

೧೭. ಅದೇ, ಪು.೪೭೯

೧೮. ಇತಿಹಾಸದರ್ಶನ ಸಂ-೯, ಕರ್ನಾಟಕ ಇತಿಹಾಸ ಅಕಾಡೆಮಿ, ಪು.೨೩೦

೧೯. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೨, ೧೯೮೫, ಪು.೫೮೪

೨೦. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ೧೯೮೫, ಪು ೫೮-೫೯

೨೧. ಅದೇ, ಪು.೫೯

೨೨. ಅದೇ, ಪು.೪೧

೨೩. ಅದೇ, ಪು.೪೨

೨೪. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೨, ೧೯೮೫, ಪು.೫೮೫

೨೫. ದೇಶಿಯತೆಯ ನೆರಳಲ್ಲಿ ವಿಕೇಂದ್ರಿಕರಣ, ಎಂ.ಚಂದ್ರಪೂಜಾರಿ, ೨೦೦೧, ಪು.೮೮

೨೬. ಕರ್ನಾಟಕ ವಿಕಾಸ ಜನವರಿ ೨೦೦೦, ಪು.೯

೨೭. ಅದೇ, ಪು.೯

೨೮. ದೇಶಿಯತೆಯ ನೆರಳಲ್ಲಿ ವಿಕೇಂದ್ರಿಕರಣ, ಎಂ.ಚಂದ್ರಪೂಜಾರಿ, ೨೦೦೧, ಪು.೮೮

೨೯. ಕರ್ನಾಟಕ ವಿಕಾಸ ಜನವರಿ ೨೦೦೦, ಪು.೧೦

೩೦. ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆಗಳು, ಎ.ಶ್ರೀಧರ, ೨೦೦೦, ಪು.೪

೩೧. ಅದೇ, ಪು.೩

೩೨. ಅದೇ, ಪು.೪

೩೩. ಅದೇ, ಪು.೪

೩೪. ಅದೇ, ಪು.೬

೩೫. ದೇಶಿಯತೆಯ ನೆರಳಲ್ಲಿ ವಿಕೇಂದ್ರಿಕರಣ, ಎಂ.ಚಂದ್ರಪೂಜಾರಿ, ೨೦೦೧, ಪು.೮೮

೩೬. ಮುನ್ನೆಡೆಯ ಕೂಡ್ಲಿಗಿ, ಪು.೧೧೧

೩೭. ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆಗಳು, ಎ.ಶ್ರೀಧರ, ೨೦೦೦, ಪು.೧೪

೩೮. ಅದೇ, ಪು.೧೪

೩೯. ಕರ್ನಾಟಕ ವಿಕಾಸ ಜನವರಿ ೨೦೦೦, ಪು.೧೧

೪೦. ಅದೇ, ಪು.೧೨

೪೧. ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆಗಳು, ಎ.ಶ್ರೀಧರ, ೨೦೦೦, ಪು.೧೯

೪೨. ಅದೇ, ಪು.೧೭

೪೩. ಅದೇ, ಪು.೨೮

೪೪. ಕರ್ನಾಟಕ ವಿಕಾಸ ಜನವರಿ ೨೦೦೦, ಪು.೧೨

೪೫. ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆಗಳು, ಶ್ರೀಧರ ಎ., ೨೦೦೦, ಪು.೩೩-೩೪

೪೬. ಅದೇ, ಪು.೩೩

೪೭. ಮಾನಸ, ಏಪ್ರಿಲ್ ೭, ೨೦೦೦

೪೮. ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆಗಳು, ೨೦೦೦, ಪು.೩೩

೪೯. ಕರ್ನಾಟಕ ವಿಕಾಸ, ಜನವರಿ ೨೦೦೦, ಪು.೧೩

೫೦. ಭಗೀರಥ ಸಂಕಲ್ಪ, ೧೯೯೯, ಪು.೧೦೨

೫೧. ಮೈಸೂರು ರಾಜ್ಯ, ಪು.೩೫೯

೫೨. ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂ,೫, ಪು.೩೦೯

೫೩. ಅದೇ, ಪು.೩೧೪

೫೪. ಅದೇ, ಪು.೩೧೪

೫೫. ಅದೇ, ಪು.೩೧೬

೫೬. ಅದೇ, ಪು.೩೨೩

೫೭. ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ ೯, ಪು.೪೬೫

೫೮. ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ, ಮನಜ, ೧೯೭೯, ಪು.೨೧೨

೫೯. ಅದೇ, ಪು.೨೧೩

೬೦. ಅಂಬೇಡ್ಕರ್ ಮತ್ತು ಮೀಸಲಾತಿ ವರ್ಗೀಕರಣ, ಸಿ.ಕೆ.ಮಹೇಶ್, ೨೦೦೦, ಪು.೧೩೯

೬೧. ಅದೇ, ಪು.೧೨೩

೬೨. ಅದೇ, ಪು.೧೨೪

೬೩. ಅದೇ, ಪು.೧೨೭

೬೪. ಅದೇ, ಪು.೧೨೮

೬೫. ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ಪ್ರೊ.ಲಕ್ಷ್ಮಣ್ ತೆಲಗಾವಿ, ೧೯೯೯, ಪು.೧೪೩

೬೬. ಅಂಬೇಡ್ಕರ್ ಮತ್ತು ಮೀಸಲಾತಿ ವರ್ಗೀಕರಣ, ಸಿ.ಕೆ.ಮಹೇಶ್, ೨೦೦೦, ಪು.೧೨೮-೧೨೯

೬೭. ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ೧೯೯೯, ಪು.೧೪೪

೬೮. ಅದೇ, ಪು.೧೪೪

೬೯. ಅದೇ, ಪು.೧೪೬

೭೦. ಅದೇ, ಪು.೧೪೪-೧೪೫

೭೧. ಅದೇ, ಪು.೧೪೨

೭೨. ಅದೇ, ಪು.೧೪೫

೭೩. ಮುಟ್ಟಿಸಿಕೊಂಡವರು, ಬಿ.ವಿ.ವೀರಭದ್ರಪ್ಪ, ಬಿ.ಟಿ. ಜಾಹ್ನವಿ, ೧೯೯೮, ಪು.೨೩೬

೭೪. ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ೧೯೯೯, ಪು.೧೪೭

೭೫. ಮುಟ್ಟಿಸಿಕೊಂಡವರು, ೧೯೯೮, ಪು.೨೩೬

೭೬. ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ೧೯೯೯, ಪು.೧೪೯-೧೫೦

೭೭. ಪ್ರಜಾವಾಣಿ, ದಿ: ೧.೨.೨೦೦೦

೭೮. ಆದಿಕರ್ನಾಟಕರು (ಆದಿಜಾಂಬವ) ಮತ್ತು ಮೀಸಲಾತಿ, ಟಿ. ಯಲ್ಲಪ್ಪಬೂತಯ್ಯ, ೧೯೯೮, ಪು.೪

೭೯. ಲಂಕೇಶ್ ಪತ್ರಿಕೆ, ಅಕ್ಟೋಬರ್ ೪, ೨೦೦೧

೮೦. ಸಂಜೆವಾಣಿ ದಿ.೨೧.೫.೧೯೯೪

೮೧. ಲಂಕೇಶ್ ಪತ್ರಿಕೆ, ಅಕ್ಟೋಬರ್ ೪, ೨೦೦೦

೮೨. ಅದೇ,

೮೩. ಬಹುಜನವಾಣಿ, ದಿ.೧೨.೩.೨೦೦೧

೮೪. ದಲಿತರು ಮತ್ತು ಜಾಗತೀಕರಣ, ಮೊಗಳ್ಳಿ ಗಣೇಶ್, ೧೯೯೯, ಪು.೬೬

೮೫. ಅಂಬೇಡ್ಕರ್ ಮತ್ತು ವರ್ಗೀಕರಣ ಮೀಸಲಾತಿ, ೨೦೦೦, ಪು.೧೩೯

೮೬. ಆದಿ ಕರ್ನಾಟಕರು ಮತ್ತು ಮೀಸಲಾತಿ, ಟಿ.ಯಲ್ಲಪ್ಪ ಬೂತಯ್ಯ, ಪು.೬

## ಅಧ್ಯಾಯ ೭

# ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮಾದಿಗರು

೭.೧ ಗ್ರಾಮ ದೈವಗಳ ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಮಾದಿಗರ ಪಾತ್ರ

೭.೨ ಮಾದಿಗರ ಪ್ರಮುಖ ಆರಾಧ್ಯ ದೈವಗಳು

೭.೩ ಮಾದಿಗರ ಗುರು ಪರಂಪರೆ

೭.೪ ಜನಪದ ಕಲೆಗಳು ಮತ್ತು ಮಾದಿಗರು

೭.೫ ಸಾಹಿತ್ಯ ಮತ್ತು ಸಂಶೋಧನ ಕ್ಷೇತ್ರದಲ್ಲಿ ಮಾದಿಗರು

ಮಾದಿಗರು ಸಾಂಸ್ಕೃತಿಕ ಲೋಕಕ್ಕೆ ನೀಡಿರುವ ಕೊಡುಗೆ ಮಹತ್ವದ್ದು. ಸಾಮಾಜಿಕ-ಧಾರ್ಮಿಕ ಸಂದರ್ಭದಲ್ಲಿ ನಡೆಯುವ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಅವರು ವಹಿಸುವ ಪಾತ್ರ ಪ್ರಮುಖವಾದುದು. ಅದು ಇತರ ಜಾತಿಗಳೊಂದಿಗಿನ ಸಮಾಜೋ-ಸಾಂಸ್ಕೃತಿಕ ಸಂಬಂಧ ಮಾತ್ರವಲ್ಲದೆ ಮಾದಿಗರ ಜೀವನ, ಪರಂಪರೆ, ಸಂಪ್ರದಾಯ ಮುಂತಾದ ಮುಖಗಳನ್ನು ಪರಿಚಯಿಸುತ್ತದೆ. ಈ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಲೋಕಕ್ಕೆ ನೀಡಿದ ಇವರ ಕೊಡುಗೆಯನ್ನು ತಿಳಿಯುವ ಸಲುವಾಗಿ ಗ್ರಾಮದೇವತೆಗಳ ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಇವರ ಪಾತ್ರ, ಆರಾಧಿಸುವ ದೈವಗಳು, ಗುರುಪರಂಪರೆ, ಜನಪದ ಕಲೆಗಳ ಪ್ರಾವಿಣ್ಯತೆ ಹಾಗೂ ಸಾಹಿತ್ಯ ಮತ್ತು ಸಂಶೋಧನ ಕ್ಷೇತ್ರದಲ್ಲಿ ಇವರ ಪಾತ್ರವನ್ನು ಕುರಿತಂತೆ ಚರ್ಚಿಸಲಾಗಿದೆ.

## ೭.೧ ಗ್ರಾಮ ದೈವಗಳ ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಮಾದಿಗರ ಪಾತ್ರ

ಗ್ರಾಮದೈವಗಳು ಗ್ರಾಮೀಣ ಬದುಕಿನ ಒಂದು ಭಾಗವಾಗಿದ್ದು ಅನಾದಿಕಾಲದಿಂದಲೂ ಹಾಸು ಹೊಕ್ಕಾಗಿ ಬೆರೆತು ಬೆಳೆದು ಬಂದಿವೆ. ಪ್ರತಿಯೊಂದು ಗ್ರಾಮದಲ್ಲಿ ಒಂದೊಂದು ನಿರ್ದಿಷ್ಟ ದೇವತೆ ಪ್ರತಿಷ್ಠಾಪನೆಗೊಂಡಿರುತ್ತದೆ. ಇವುಗಳ ಉಗಮದ ಹಿಂದೆ ಸಾಂಸ್ಕೃತಿಕ ಚರಿತ್ರೆ ಇದ್ದೇ ಇರುತ್ತದೆ. ಗ್ರಾಮದಲ್ಲಿ ನೆಲೆಸಿರುವ ಜನ ಮತ್ತು ಪ್ರಾಣಿಗಳನ್ನು ರೋಗರುಜಿನಗಳಿಂದ ಕಾಪಾಡುವ ಮತ್ತು ಮಳೆ-ಬೆಳೆ ಅಭಿವೃದ್ಧಿಗೊಳ್ಳಲಿ ಎಂಬ ನಂಬಿಕೆಯಿಂದ ಗ್ರಾಮದೇವತೆ ಹೆಸರಲ್ಲಿ ಹಬ್ಬ, ಜಾತ್ರೆ, ಉತ್ಸವಗಳನ್ನು ಮಾಡುತ್ತಾರೆ. ಆಗ ಗ್ರಾಮೀಣ ಜನರ ಸಾಮಾಜಿಕ ಪಾಲ್ಗೊಳ್ಳುವಿಕೆ ಕಂಡುಬರುತ್ತದೆ. ಇಂತಹ ಸಂದರ್ಭಗಳಲ್ಲಿ ಗ್ರಾಮದಲ್ಲಿ ವಾಸಿಸುವ ಪ್ರತಿಯೊಂದು ಜನಾಂಗವು ಒಂದೊಂದು ಕಾರ್ಯವನ್ನು ಮಾಡುವ ಹೊಣೆಯನ್ನು ಹೊತ್ತಿರುತ್ತದೆ. ಈ ಬಗೆಯ ಹೊಣೆ ಹೊತ್ತವರಲ್ಲಿ ಮಾದಿಗರು ಸಹ ಒಬ್ಬರು. ಹಬ್ಬ, ಜಾತ್ರೆ, ಉತ್ಸವಗಳು ನಡೆಯುವ ದಿನವನ್ನು ಗ್ರಾಮದ ಎಲ್ಲರಿಗೂ ತಿಳಿಯುವಂತೆ ಮಾಡುವ 'ಸಾರುವಿಕೆ' ಕೆಲಸ ಇವರದಾಗಿರುತ್ತದೆ. ಇದಲ್ಲದೆ ಬಲಿ ಹಾಕುವ(ಬೇಟೆ ಕಡಿಯುವ), ಚರಗ ಚೆಲ್ಲುವ, ಸಿಡಿ ಆಡುವ, ಎಡೆಹಾಕುವ ಇನ್ನು ಮುಂತಾದ ಕಾರ್ಯಗಳನ್ನು ಮಾದಿಗರು ನೆರವೇರಿಸಬೇಕಾಗುತ್ತದೆ. ಈ ಕಾರ್ಯಗಳನ್ನು ಮಾಡಬೇಕಾದ ಸಾಮಾಜಿಕ ಒತ್ತಡ ಇವರ ಮೇಲಿದ್ದು ಅವುಗಳನ್ನು ತಪ್ಪದೆ ಪಾಲಿಸುತ್ತಾರೆ. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ಸಂಬಂಧಿಸಿದಂತೆ ನಡೆಯುವ ಗ್ರಾಮದೇವತೆಗಳ ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಮಾದಿಗರ ಪಾತ್ರ ಕುರಿತು ಚರ್ಚಿಸಲಾಗಿದೆ.

**ಸಾರುವಿಕೆ**

ಯಾವುದೇ ಹಬ್ಬ, ಜಾತ್ರೆ, ಉತ್ಸವಗಳು ಆರಂಭಗೊಳ್ಳುವುದು 'ಸಾರುವಿಕೆ' ಕಾರ್ಯದಿಂದಲೇ. ನಿರ್ದಿಷ್ಟಪಡಿಸಿದ ದಿನದಂದು ನಡೆಯುವ ಈ ಕಾರ್ಯಕ್ರಮಗಳನ್ನು ಗ್ರಾಮದಲ್ಲಿ ವಾಸಿಸುವ ಪ್ರತಿಯೊಂದು ಸಮುದಾಯಕ್ಕೂ ತಿಳಿಸುವುದಾಗಿರುತ್ತದೆ. ಇಂತಹ ಕಾರ್ಯವನ್ನು ಕೈಗೊಳ್ಳುವವರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಮಾದಿಗರು, ಇವರು ಗ್ರಾಮ ಮುಖಂಡನ ಆಜ್ಞೆಯಂತೆ ಈ ಕಾರ್ಯ ಮಾಡುತ್ತಾರೆ. ಸಾರುವ ವ್ಯಕ್ತಿಯನ್ನು ಸಾರುವಯ್ಯ, 'ಗುರಿಕಾರ' ಎಂದು ಕರೆಯುವರು. ಹೆಚ್ಚಿನ ಸಂದರ್ಭಗಳಲ್ಲಿ ಸಾರುವ ವ್ಯಕ್ತಿ ಕೆಳಜಾತಿಯವನಾಗಿರುತ್ತಾನೆ. ಅದರಲ್ಲೂ ಅಸ್ಪೃಶ್ಯ ಪಂಗಡಕ್ಕೆ ಸೇರಿದವನಾಗಿರುತ್ತಾನೆ.[1] ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಹಬ್ಬ, ಜಾತ್ರೆ, ಉತ್ಸವಗಳು ನಡೆಯುವ ದಿನವನ್ನು ತಮಟೆ ವಾದ್ಯದ ಮೂಲಕ ಆ ಕಾರ್ಯಕ್ರಮಗಳಿಗೆ ಭಾಗವಹಿಸುವ ಅನೇಕ ಗ್ರಾಮಗಳಿಗೆ ಸುದ್ದಿಯನ್ನು ತಿಳಿಸುವ ಕೆಲಸವನ್ನು ಮಾದಿಗ ಜನಾಂಗದವರೆ ಹೆಚ್ಚಾಗಿ ಮಾಡುತ್ತಾರೆ. ಬಳ್ಳಾರಿ ಜಿಲ್ಲೆಯ ಕೆಲಪೊಂದು ಭಾಗದಲ್ಲಿ ಹರಿಜನರು ಸಾರು ಹಾಕುವ ವೇಳೆ ಜಾಗಟೆ ಬಾರಿಸುತ್ತಾ ಸಾಗುತ್ತಾರೆ.[2] ಹೀಗೆ ತಮಟೆ, ಜಾಗಟೆ ವಾದ್ಯಗಳನ್ನು ಮಾದಿಗರು ಬಡಿಯುತ್ತಾ ಸಾರುವುದು ಕಂಡುಬರುತ್ತದೆ.

ಚಿತ್ರದುರ್ಗ ಜಿಲ್ಲೆಗಳ ಲಿಂಗಾಯಿತರೆ ಹೆಚ್ಚಾಗಿರುವ ಹಳ್ಳಿಗಳಲ್ಲಿ ವೀರಭದ್ರನ ಉತ್ಸವದಲ್ಲಿ ದಾರಿ ಗುಡಿಸಿ ನೀರು ಸಿಂಪಡಿಸಿ ತೋರಣ ಕಟ್ಟುವುದು ಅವರ ಕೆಲಸ.[3] ಕೇವಲ ಸಾರುವಿಕೆ ಮಾತ್ರವಲ್ಲದೆ ಇನ್ನೂ ಅನೇಕ ಕೆಲಸ ಕಾರ್ಯಗಳನ್ನು ಇವರು ಮಾಡಬೇಕಾಗಿರುತ್ತದೆ. 'ಮಾವಿನ ಸೋಪ್ಪು ತರಬೇಕು, ಹಗ್ಗ ಕಟ್ಟಬೇಕು, ಸುಡಿಗೆ ಕಟ್ಟಬೇಕು, ಅಲ್ಲಿಂದ ಮನೆಗೆ ಎರಡು ಮೂರು ಸುಡಿಗೆ ಕಟ್ಟಬೇಕು ತೇರು ಆಗುವವರೆಗೂ ಸುಡಿಗಳನ್ನು ಹಿಡಿದುಕೊಂಡು ಓಡಾಡಬೇಕು. ಅಷ್ಟು ಮಾಡಿದ್ದಕ್ಕೆ ಒಂದು ಗಾಲಿ ಎಡೆ ಕೋಡೋರು"(ತುರವನೂರು ಯದ್ರಪ್ಪ) ಎಂದು ತಿಳಿದುಬರುತ್ತದೆ. ಚಿತ್ರದುರ್ಗದ ತಾಲ್ಲೂಕಿನ ಅಳಗವಾಡಿ ಗ್ರಾಮವೊಂದರಲ್ಲಿ ಹಬ್ಬದ ಹದಿನೈದು ದಿನ ಮುಂಚೆ ಆದಿಕರ್ನಾಟಕ ಜಾತಿಗೆ ಸೇರಿದವನೊಬ್ಬನು ಸಾರುತ್ತಾ ಬರುತ್ತಾನೆ. ಇವತ್ತಿಗೆ ಹದಿನೈದು ದಿನಕ್ಕೆ 'ಮೊದಲಿಗಿತ್ತಿ' ಎಂದು ಸಾರುತ್ತಾನೆ. ಆತ ಸಾರುವಾಗ ಎಲ್ಲರೂ ಅವರವರ ಮನೆಯಲ್ಲಿ ದೀಪಗಳನ್ನು ಹಚ್ಚುತ್ತಾರೆ. ಇರುವ ದಿನ ಬೇರೆ ಊರಿನವರೇನಾದರೂ ಅಲ್ಲಿದ್ದ ಪಕ್ಷದಲ್ಲಿ ಹಬ್ಬಹರಿದಿನದಲ್ಲಿ ಅವರು ಆ ಊರಿನಲ್ಲಿರಬೇಕಾಗುತ್ತದೆ."[4] ಹೀಗೆ ಹಬ್ಬ, ಉತ್ಸವ, ಜಾತ್ರೆ, ಸಂದರ್ಭದಲ್ಲಿ ಸಾರುವಿಕೆಯ ಕೆಲಸವನ್ನು ಮಾದಿಗ ಜನಾಂಗದವರು ಮಾಡುತ್ತಾರೆ ಎಂಬುದು ಮೇಲಿನ ಅಂಶ ಖಚಿತಪಡಿಸುತ್ತದೆ. ಬಳ್ಳಾರಿ ಜಿಲ್ಲೆಯ ಹರಪನಹಳ್ಳಿಯಲ್ಲಿ ಬ್ರಾಹ್ಮಣರು ಮತ್ತು ಲಿಂಗಾಯಿತರಾದಿಯಾಗಿ ಕೆಲಜಾತಿಗಳ ಜನ ಹೋಳಿ ಹಬ್ಬ ಇನ್ನೂ ಒಂದು ವಾರವಿರುವಾಗಲೇ ತಮ್ಮ ಅಸ್ಪೃಶ್ಯರಾದ ಮಾದಿಗರು ಹಲಗೆಯನ್ನು

ಬಾರಿಸುತ್ತ ಬೀದಿ ಬೀದಿ ಅಲೆಯುತ್ತ ಈ ಹಬ್ಬವನ್ನು ಉದ್ಘಾಟಿಸುತ್ತಾರೆ.[೯] ಈ ಬಗೆಯಲ್ಲಿ ಮಾದಿಗ ಜನಾಂಗ ಸಾಂಸ್ಕೃತಿಕ ಕಾರ್ಯಕ್ರಮಗಳು ಯಾವುದೇ ಗ್ರಾಮದಲ್ಲಿ ನಡೆಯುವ ಮೊದಲು 'ಸಾರುವಿಕೆ'ಯಿಂದ ಎಲ್ಲರಿಗೂ ತಿಳಿಸಿ ಅದಕ್ಕೆ ಸಿದ್ಧಗೊಳಿಸುವಂತೆ ಮಾಡುವುದು ಎರಡು ಜಿಲ್ಲೆಯ ಗ್ರಾಮಗಳಲ್ಲಿಯೂ ಕಂಡುಬರುತ್ತದೆ. ಇಲ್ಲಿ ಕೆಲವೊಂದು ಘಟನೆಗಳನ್ನು ಮಾತ್ರವೇ ಉದಾಹರಣೆ ನೀಡಲಾಗಿದೆ. ಸಾರುವಿಕೆ ಮಾತ್ರವಲ್ಲದೆ, ತೋರಣ ಕಟ್ಟುವ, ಸುಡಿಗೆ ಹಿಡಿಯುವ, ಕಸ ಹೊಡೆದು ಸ್ವಚ್ಛಗೊಳಿಸುವ ಮುಂತಾದ ಕೆಲಸಗಳನ್ನು ಸಹ ಮಾಡುವುದು ಅಧ್ಯಯನಕ್ಕೊಳಪಡಿಸಿದ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಒಟ್ಟು ೩೯ ಗ್ರಾಮಗಳಲ್ಲಿ ಮಾದಿಗರು ಮೇಲಿನ ಕೆಲಸಗಳನ್ನು ಮಾಡುವುದು ಕಂಡುಬಂದಿತು.

**ಗಟೆ ಹೊರುವುದು**

ಇದೊಂದು ವಿಶಿಷ್ಟ ಆಚರಣೆಯಾಗಿದ್ದು ಯಾವುದೇ ಗ್ರಾಮದಲ್ಲಿ ನಡೆಯುವ ಗ್ರಾಮದೇವತೆಗಳ ಹಬ್ಬ, ಜಾತ್ರೆ, ಸಂದರ್ಭಗಳಲ್ಲಿ ಮಾದಿಗ ಜನಾಂಗವು 'ಗಟೆ' ಹೊರುವ ಕಾರ್ಯವನ್ನು ಮಾಡುತ್ತಾರೆ. ಹೊಸದೊಂದು ಮಡಿಕೆಯಲ್ಲಿ ಹೆಂಡ ಅಥವಾ ಅನ್ನದ ಮಿಶ್ರಿತನೀರನ್ನು ಅದರಲ್ಲಿ ಹಾಕಿ ಪೂಜೆ ಮಾಡಿರುವ ಒಂದು ಮಡಿಕೆಗೆ 'ಗಟೆ' ಎನ್ನುತ್ತಾರೆ. ಮಾರಮ್ಮನ ಹಬ್ಬಗಳ ಸಂದರ್ಭವೊಂದರಲ್ಲಿ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಕಸ್ತೂರಿ ರಂಗಪ್ಪನ ಹಳ್ಳಿ ಗ್ರಾಮದಲ್ಲಿ 'ಗಟೆ' ಮಾದಿಗರು ಹೊರದಿದ್ದರೆ ಹಬ್ಬ ಆಚರಿಸುವ ಹಾಗಿಲ್ಲ. ಹಾಗೆಯೇ ಅದೇ ತಾಲ್ಲೂಕಿನ ಬಗ್ಗನಡು ಗ್ರಾಮದಲ್ಲಿ ಆಚರಿಸುವ ಕರಿಯಮ್ಮನ ಜಾತ್ರೆಯಲ್ಲಿ ಮಾದಿಗರು ಗಟೆ ತೆಗೆದುಕೊಂಡು ಹೋಗದಿದ್ದರೆ ಬಲಿಕೊಡುವುದಿಲ್ಲ. (ರಂಗನಾಥ, ಬಗ್ಗನಡು) ಯಾವುದೇ ಭಾಗದಲ್ಲಿ ನಡೆಯುವ ಜಾತ್ರೆ, ಹಬ್ಬಗಳಲ್ಲಿ 'ಗಟೆ' ಹೊರುವ ಸಂಪ್ರದಾಯ ಅನೇಕ ಗ್ರಾಮಗಳಲ್ಲಿ ಆಚರಣೆಯಲ್ಲಿರುವುದು ಕಂಡುಬರುತ್ತದೆ.

**ಬಲಿಕೊಡುವುದು ಮತ್ತು ಚರಗ ಚೆಲ್ಲುವುದು**

ಗ್ರಾಮದೇವತೆಯ ಹಬ್ಬ, ಜಾತ್ರೆ, ಉತ್ಸವಗಳ ಸಂದರ್ಭದಲ್ಲಿ ಬಲಿ ಕೊಡುವ ಮತ್ತು ಚರಗ ಚೆಲ್ಲುವ ಕಾರ್ಯವನ್ನು ಸಹ ಮಾಡಲಾಗುತ್ತದೆ. ಈ ಕಾರ್ಯ ಮಾಡುವವರು ಬಹುಸಂಖ್ಯೆಯಲ್ಲಿ ಮಾದಿಗರೆಂಬುದು ಅಧ್ಯಯನದಿಂದ ತಿಳಿದುಬಂದಿತು. ಚಿತ್ರದುರ್ಗ ಜಿಲ್ಲೆಯ ಕುರುಡಿಹಳ್ಳಿ, ಗೊರಮಿಕಲ್ಲು, ದೇರಿಗೆರೆ, ಬಗ್ಗನಡು, ಕಾಟನಾಯಕನಹಳ್ಳಿ ಮುಂತಾದವು ಬಳ್ಳಾರಿ ಜಿಲ್ಲೆಯಲ್ಲಿ ಮಾರಮ್ಮನ ಬಣವಿಕಲ್ಲು ಮುಂತಾದ ಕಡೆಗಳಲ್ಲಿ ಮಾದಿಗರು ಕೋಣ ಕಡಿಯುವ ಕೆಲಸವನ್ನು ಮಾಡುತ್ತಾರೆ. ಇತ್ತೀಚೆಗೆ ಕೋಣ ಕಡಿಯುವುದು ಕಡಿಮೆಯಾಗಿದೆ.

ಬಳ್ಳಾರಿ ಜಿಲ್ಲೆಯ ಯಾವುದೇ ಗ್ರಾಮದಲ್ಲಿ ಕೋಣ ಕಡಿಯಲು ಹರಿಜನರು ಇರಲೇಬೇಕು. ಊರ ಒಳಿತಿಗಾಗಿ ಚರಗವನ್ನು ಚೆಲ್ಲಲು ಅವನೇ ಬೇಕು. ಚರಗ ಚೆಲ್ಲುವಿಕೆಯು ಬಲಿಯ ಮತ್ತೊಂದು

ರೂಪ. ಬೇಡ ಮತ್ತು ಕುರುಬರು ಸಹ ಇವರ ಜೊತೆ ಕೋಣ ಬಲಿಯ ಕಾರ್ಯದಲ್ಲಿ ಪಾಲ್ಗೊಳ್ಳುವರು. ಹೊಸಪೇಟೆಯ ನಾಯಕರ ಕೇರಿಗಳಲ್ಲಿ ಹರಿಜನರು ಪಟ್ಟದ ಕೋಣವನ್ನು ಕಡಿದರೆ ನಾಯಕರು ಹರಕೆಯ ಕೋಣವನ್ನು ಕಡಿಯುವ ಅಂಶ ತಿಳಿಯುತ್ತದೆ.[೬] ಈ ಅಂಶವು ಮಾದಿಗ ಜನಾಂಗವನ್ನು ಕೋಣ ಕಡಿಯಲು ಬಳಸಿರುವುದನ್ನು ಖಚಿತಪಡಿಸುತ್ತದೆ. ಚರಗ ರಕ್ತ ಮತ್ತು ಸಗಣಿಯ ಮಿಶ್ರಿತವಾದುದ್ದಾಗಿದೆ. ಕೋಣದ ರಕ್ತವನ್ನು ಸಂಕಟಿಯಲ್ಲಿ ಬೆರೆಸಿಕೊಂಡು ಬೆತ್ತಲೆಯಾಗಿ ಆ ಗ್ರಾಮದ ಗಡಿಯವರೆಗೆ ಗದ್ದೆಗಳಲ್ಲಿ ಉಲಸು ಚೆಲ್ಲಲು ಹೋಗಬೇಕು. ಈ ಕಡೆ ಆತನ ಪತ್ನಿ ಬಿಳಿ ಉಡುಪು ಧರಿಸಿ ತನ್ನ ಮೂಗುತಿಯನ್ನು ತಿರುಗಿಸುತ್ತಾ ಇರಬೇಕು. ಬಲಿ ಚೆಲ್ಲುವಾಗ ಅನೇಕ ಭೂತಗಳ ಕಾಟದಿಂದ ತೊಂದರೆ ಆದರೆ ಆ ವ್ಯಕ್ತಿ ಮೂರ್ಛೆ ಹೋಗುವ ಸಂಭವವುಂಟು. ಆ ಸಮಯದಲ್ಲಿ ಮರಿಕುರಿಯನ್ನು ಬಲಿಕೊಟ್ಟು ಮುಂದೆ ಸಾಗುವುದುಂಟು. ಇದಕ್ಕೆ ಉಪವಾಸ, ವ್ರತಗಳನ್ನು ಪಾಲಿಸಬೇಕಾಗುತ್ತದೆ. ತನ್ನ ಗಂಡನಿಗೇನಾದರೂ ತೊಂದರೆಯಾಗದಿದ್ದರೆ ತಿರುಗಿಸುವ ಮೂಗುತಿ ನಿಂತು ಬಿಡತ್ತದೆನ್ನುವ ನಂಬಿಕೆಯಿದೆ. ಈ ರೀತಿ ಚರಗ ಚೆಲ್ಲುವ ಉಲುಸು ಹೊರುವ ಸಮಯದಲ್ಲಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿಯಲ್ಲಿ ಹರಿಜನರ ವ್ಯಕ್ತಿಯೊಬ್ಬ ಸತ್ತಿದ್ದಕ್ಕೆ ಅಂದಿನಿಂದ ಉಲುಸು(ಚರಗ) ಚೆಲ್ಲುವುದನ್ನು ನಿಲ್ಲಿಸಿ ಬಿಟ್ಟಿದ್ದಾರೆಂದು ಗುಡಿಯ ಪೂಜಾರಿಗಳು ತಿಳಿಸುತ್ತಾರೆ.[೭] ಈ ರೀತಿ ಅನೇಕ ಕಡೆಗಳಲ್ಲಿ ಚರಗ ಚೆಲ್ಲುವ ಕಾರ್ಯವನ್ನು ಮಾದಿಗರು ಮಾಡುವುದು ಕಂಡುಬರುತ್ತದೆ. ಚರಗ ಚೆಲ್ಲಿದ್ದಕ್ಕೆ ಪ್ರತಿಯಾಗಿ ಚರಗ ಚೆಲ್ಲುವ ಆಚರಣೆಯಲ್ಲಿ ಪಾಲ್ಗೊಂಡ ದಂಪತಿಗಳಿಗೆ ಊರಿನ ಗ್ರಾಮಸ್ಥರು ಅವರಿಗೆ ಧವಸ, ಧಾನ್ಯ, ಉಡುಗೆ-ತೊಡುಗೆ ಹಾಗೂ ೫೦೧ ರೂ.ಗಳನ್ನು ನೀಡುತ್ತಿದ್ದರೆಂದು ಕೂಡ್ಲಿಗಿ ಗ್ರಾಮದಲ್ಲಿ ಚರಗ ಚೆಲ್ಲಿದ ವ್ಯಕ್ತಿ ಸಾರಪ್ಪ ತಿಳಿಸಿದ್ದಾರೆ.[೮] ಕೆಲವು ಕಡೆ ಮುತ್ತೈದೆ ಹೆಣ್ಣು ಮಕ್ಕಳು ಚರಗ ಚೆಲ್ಲುವುದು ಅಧ್ಯಯನ ಸಂದರ್ಭದಲ್ಲಿ ಕಂಡುಬಂದಿದೆ. ಕೂಡ್ಲಿಗಿ ತಾಲ್ಲೂಕಿನ ಬಣವಿಕಲ್ಲು ಗ್ರಾಮದಲ್ಲಿ ಮತ್ತೈದೆ ಹೆಣ್ಣುಮಕ್ಕಳು ಚರಗ ಚೆಲ್ಲುತ್ತಾರೆ.

ಈ ರೀತಿ ಗ್ರಾಮೀಣ ಪ್ರದೇಶಗಳಲ್ಲಿ ನಡೆಯುವ ಯಾವುದೇ ದೇವತೆಯ ಹಬ್ಬ, ಜಾತ್ರೆ, ಉತ್ಸವಗಳನ್ನು ಮಾಡುವ ಮೊದಲು ಈ ವಿಷಯವನ್ನು ಎಲ್ಲರಿಗೂ ತಿಳಿಯುವಂತೆ ಮಾಡವ ಕಾರ್ಯವೇ 'ಸಾರುವಿಕೆ'. ಗ್ರಾಮದ ರಕ್ಷಣೆ ಮತ್ತು ಅಭಿವೃದ್ಧಿಯ ದೃಷ್ಟಿಯಿಂದ ನಡೆಸುವ ಬಲಿ ಹಾಕುವುದು, ಚರಗ ಚೆಲ್ಲುವುದು, ಸಿಡಿ ಆಡುವ ಕಾರ್ಯಗಳನ್ನು ಕೆಳಜಾತಿಗಳು ಮಾಡಬೇಕಾದ ಅನಿವಾರ್ಯತೆ ಏನೆಂದು ಪ್ರಶ್ನಿಸಿಕೊಂಡರೆ, ನಮಗೆ ಮುಖ್ಯವಾಗಿ ಕಂಡುಬರುವ ಅಂಶ ಸಾಮಾಜಿಕ ಮತ್ತು ಸಾಂಸ್ಕೃತಿಕ ಒತ್ತಡಗಳ ಪರಿಣಾಮವಾಗಿ. ಇಂದಿಗೂ ಈ ಕಾರ್ಯಗಳು ಮುಂದುವರಿದುಕೊಂಡು ಬಂದಿವೆ. ಒಂದು ವೇಳೆ ಅದನ್ನು ಮಾದಿಗರು ನಿರಾಕರಿಸಿದ್ದೇ ಆದರೆ ಗ್ರಾಮದ ಮೇಲು ಜಾತಿಗಳ

ಕೋಪಕ್ಕೆ ತುತ್ತಾಗಿ ನಾನಾ ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಹಿನ್ನೆಲೆಯಲ್ಲಿ ಆ ಕಾರ್ಯಗಳಿಂದ ಎಷ್ಟೆ ತೊಂದರೆ ಅನುಭವಿಸಿದರೂ ಮಾದಿಗರು ಮಾಡಬೇಕಾದ ಅನಿವಾರ್ಯತೆ ಇದೆ.

**ಪ್ರಥಮ ಪೂಜೆ ಮತ್ತು ಪೂಜಾರಿಕೆ ಸ್ಥಾನ**

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಮಾದಿಗ ಜನಾಂಗವು ವಿಶೇಷ ಮಾನ್ಯತೆ ಪಡೆದಿದೆ. ಅನೇಕ ಹಬ್ಬ-ಜಾತ್ರೆ, ಉತ್ಸವ ಸಂದರ್ಭಗಳಲ್ಲಿ ಪೂಜೆ ಆರಂಭಗೊಳ್ಳುವುದು ಇವರಿಂದಲೇ. ಇವರು ಪೂಜೆ ಅಥವಾ ನೈವೇದ್ಯ ಮಾಡಿದ ನಂತರವೆ ಮುಂದಿನ ಕಾರ್ಯಕ್ರಮಗಳು ಜರುಗುತ್ತವೆ. ಕೆಲವು ಕಡೆ ಪೂಜಾರಿಕೆ ಸ್ಥಾನವನ್ನು ಸಹ ಪಡೆದಿದ್ದಾರೆ. ಈ ಹಿನ್ನೆಲೆಯಲ್ಲಿ ಮಾದಿಗ ಜನಾಂಗ, ದೊರೆತಿರುವ ಈ ಮಹತ್ವದ ಸಂದರ್ಭಗಳನ್ನು ಇಲ್ಲಿ.?

**ನುಂಕೇಮಲೆ ಕಾಲಭೈರವ ಜಾತ್ರೆ**

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರಿನ ತಾಲ್ಲೂಕಿನಲ್ಲಿ ನಡೆಯುವ ಒಂದು ಪ್ರಸಿದ್ಧ ಜಾತ್ರೆ ಇದು. ಈ ಜಾತ್ರೆಗೆ ಕೇವಲ ತಾಲ್ಲೂಕಿನ ವಿವಿಧ ಸಮುದಾಯಕ್ಕೆ ಸೇರಿದ ಜನರು ಮಾತ್ರವಲ್ಲದೆ ತಾಲ್ಲೂಕಿನ ಸುತ್ತಮುತ್ತ ಇರುವ ಇತರೆ ತಾಲ್ಲೂಕಿನ ಜನರು ಸಹ ಬರುತ್ತಾರೆ. ಈ ಜಾತ್ರೆಯ ಸಂದರ್ಭದಲ್ಲಿ ನಡೆಯುವ ನುಂಕೇಮಲೆ ಕಾಲಭೈರವನ ಪೂಜೆಗೆ ಮೊದಲು ದೂರದಲ್ಲಿರುವ 'ಹರಳಯ್ಯನ ಪಾದಗಟ್ಟ'ಕ್ಕೆ ಪೂಜೆ ಸಲ್ಲಿಸುವುದು ಕಂಡುಬರುತ್ತದೆ. ಬಹಳ ಹಿಂದಿನಿಂದಲೂ ಈ ಪದ್ಧತಿ ಮುಂದುವರಿದುಕೊಂಡು ಬಂದಿದೆ. ಈ ಸಂಬಂಧ ಐತಿಹ್ಯವೊಂದು ಹೀಗೆ ಹೇಳುತ್ತದೆ : "ಒಮ್ಮೆ ಗುಂಕೇ ಬೈರವನು ರಾಕ್ಷಸನೊಬ್ಬನನ್ನು ಸಂಹಾರ ಮಾಡಲು ಹೋದಾಗ ತನ್ನ ಕುದುರೆಯ ಲಗಾಮು ಕಿತ್ತುಹೋಯಿತಂತೆ ಆಗ ಆತನ ಸಹಾಯಕ್ಕೆ ಹರಳಯ್ಯ ಬಂದು ತನ್ನ ಕಾಲ ಹೆಬ್ಬೆರಳಿನ ನರವನ್ನು ಕಿತ್ತು ಲಗಾಮು ಸರಿಪಡಿಸಿಕೊಟ್ಟಿದ್ದರಿಂದ ರಾಕ್ಷಸನನ್ನು ಕೊಲ್ಲಲು ಸಾಧ್ಯವಾಯಿತು. ಇದರಿಂದ ಸಂತೋಷಗೊಂಡ ಬೈರವನು ಹರಳಯ್ಯನಿಗೆ ನಿನಗೇನು ಬೇಕು ಕೇಳು ಕೊಡುತ್ತೇನೆ ಎಂದು ಹೇಳಿದನು. ಆಗ ಹರಳಯ್ಯ ಇಲ್ಲಿ ಯಾರೇ ಪೂಜೆ ಮಾಡಿದರೂ ಆ ಪೂಜೆ ಮೊದಲು ನನಗೆ ಸಲ್ಲಬೇಕು ಮತ್ತು ಬೆಟ್ಟದ ಮೇಲಿರುವ ಹೊಂಡದ ನೀರನ್ನು ಎಲ್ಲರೂ ಬಳಸಲು ಸಮಾನ ಅವಕಾಶ ಮಾಡಿಕೊಡಬೇಕೆಂದು ಕೇಳಿಕೊಂಡ. ಅದಕ್ಕೆ ಆಗಲಿ ಎಂದು ಮಾತು ಕೊಟ್ಟ ಕಾರಣ ಇಂದಿಗೂ ಮೊದಲ ಪೂಜೆ ಹರಳಯ್ಯನಿಗೆ ಸಲ್ಲುತ್ತ ಬಂದಿದೆ. ಈ ಐತಿಹ್ಯವನ್ನು ವೈಜ್ಞಾನಿಕವಾಗಿ ಆಲೋಕಿಸಿದರೆ ಇದು ಸಾಧ್ಯವೇ? ಎಂಬ ಪ್ರಶ್ನೆ ಉಂಟಾದರೂ ಈ ಐತಿಹ್ಯದ ಹಿಂದೆ ಹರಳಯ್ಯ ಭೈರವನಿಗೆ ಮಾಡಿರಬಹುದಾದ ಸಹಾಯವನ್ನು ಅಲ್ಲಗಳೆಯಲಾಗದು.

ನುಂಕೇಮಲೆ ಕಾಲಭೈರವ ಜಾತ್ರೆ ಸಂದರ್ಭದಲ್ಲಿ 'ಸಿಡಿಯ ಆಚರಣೆ' ಪ್ರಮುಖವಾದ ಇನ್ನೊಂದು ಭಾಗವಾಗಿದೆ. ಈ ಸಿಡಿಯನ್ನು ಆಡುವವರು ನಾಯಕ ಜನಾಂಕ್ಕೆ ಸೇರಿದವರೇ ಆಗಿದ್ದರು, ಆ

ಸಂದರ್ಭದಲ್ಲಿ 'ಕೊಂಡಿದುಡ್ಡ'ನ್ನು ಎತ್ತುವ ಹೊಣೆ ಮಾದಿಗರದಾಗಿರುತ್ತದೆ. ಆಗ ಇವರನ್ನು ಮಾದಿಗರೆಂದು ಕರೆಯುವಂತಿಲ್ಲ 'ಗೊರವರು' ಎಂಬ ಪ್ರತ್ಯೇಕ ಹೆಸರಿನಿಂದ ಕರೆಯಲಾಗುತ್ತದೆ. ಕೊಂಡಿ ದುಡ್ಡನ್ನು ದೇವರಿಗೆ ವರ್ಷಕ್ಕೊಮ್ಮೆ ಅರ್ಪಿಸಿದರೆ ವರ್ಷದವರೆಗೂ ಮನೆಯಲ್ಲಿ ಚೇಳು ಕಾಣಿಸಿಕೊಳ್ಳುವುದಿಲ್ಲ ಎಂಬ ನಂಬಿಕೆಯಿದೆ. ಈ ಜಾತ್ರೆಯಲ್ಲಿ ಮಾದಿಗರು 'ಕೊಂಡದುಡ್ಡೊಗ.... ಕೊಂಡಿದುಡ್ಡೋಗ...' ಎಂದು ಕೂಗುವರು. ಮಾದಿಗರ ಹರಳಯ್ಯನಿಗೆ ಮೊದಲು ಪೂಜೆ ಮೊದಲು ಸಲ್ಲುವುದಲ್ಲದೇ ಆ ಜಾತ್ರೆಯ ಸಂದರ್ಭದಲ್ಲಿ 'ಕೊಂಡಿ ದುಡ್ಡ'ನ್ನು ಎತ್ತುವ ಕೆಲಸವು ಸಹ ಮಾದಿಗರದೆ ಆಗಿರುತ್ತದೆ.

### ನಾಯಕನ ಹಟ್ಟಿ ಜಾತ್ರೆ

ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನಲ್ಲಿ ನಡೆಯುವ ಪ್ರಸಿದ್ಧ ನಾಯಕನ ಹಟ್ಟಿ ತಿಪ್ಪೇಸ್ವಾಮಿ ಜಾತ್ರೆಯು ಹೋಳಿ ಹುಣ್ಣಿಮೆಯಲ್ಲಿ ನಡೆಯುತ್ತದೆ. ಈ ಜಾತ್ರೆಯಲ್ಲಿ ಚಿತ್ರದುರ್ಗ ಜಿಲ್ಲೆ ಮಾತ್ರವಲ್ಲದೇ ಇತರೆ ಜಿಲ್ಲೆಗಳ ಜನರು ಸಹ ಭಾಗಿಯಾಗುತ್ತಾರೆ. ಈ ಜಾತ್ರೆ ಈ ಭಾಗದಲ್ಲಿ 'ಹಟ್ಟಿ ಹುಣ್ಣಿಮೆ' ಎಂದೇ ಹೆಸರಾಗಿದೆ. ಶಿಷ್ಟರಲ್ಲಿ 'ತಿಪ್ಪೇರುದ್ರಸ್ವಾಮಿ' ಎಂದು ಸಂಸ್ಕೃತೀಕರಣಗೊಂಡಿರುವ ಈತನ ಹೆಸರು ಜನಪದರಲ್ಲಿ ಆತ್ಮೀಯವಾಗಿ 'ತಿಪ್ಪೇಸ್ವಾಮಿ, ತಿಪ್ಪಯ್ಯ' ಎಂದೇ ಚಲಾವಣೆಯಲ್ಲಿದೆ.[೯] ಈ ದೈವದ ಪ್ರಭಾವದ ಹಿನ್ನೆಲೆಯಲ್ಲಿ ಅನೇಕ ಜಾತಿಯ ಜನರು ತಮ್ಮ ಮಕ್ಕಳಿಗೆ ತಿಪ್ಪೇಸ್ವಾಮಿಯ ಹೆಸರನ್ನೆ ಇಟ್ಟಿರುವುದು ಚಿತ್ರದುರ್ಗ ಜಿಲ್ಲೆಯಾದ್ಯಂತ ಕಂಡುಬರುತ್ತದೆ. ಮಾದಿಗ ಜನಾಂಗದಲ್ಲಿಯೂ ತಿಪ್ಪೇಸ್ವಾಮಿ, ತಿಪ್ಪಯ್ಯ, ತಿಪ್ಪಮ್ಮ, ತಿಪ್ಪಕ್ಕ ಎಂಬ ಹೆಸರನ್ನು ಹೊಂದಿರುವವರು ಇದ್ದಾರೆ. ಹೀಗೆ ವಿವಿಧ ಜನಸಮುದಾಯಗಳ ಮೇಲೆ ಪ್ರಭಾವ ಬೀರಿರುವ ತಿಪ್ಪೇಸ್ವಾಮಿ ಜಾತ್ರೆಯ ಸಂದರ್ಭದಲ್ಲಿ ನಡೆಯುವ ರಥೋತ್ಸವ ಅತ್ಯಂತ ಪ್ರಮುಖವಾದ ಘಟ್ಟ. ಅತ್ಯಂತ ಹೆಚ್ಚು ಪ್ರಾಮುಖ್ಯತೆ ಗಳಿಸಿರುವ ಈ ರಥೋತ್ಸವದಲ್ಲಿ ಮಾದಿಗರು ಬಂದು 'ಗಿಣ್ಣದ ಎಡೆ' ಹಾಕಿದ ನಂತರವೇ ತೇರು ಮುಂದೆ ಹರಿಯುವುದು.[೧೦] ಸಾಮಾಜಿಕವಾಗಿ ಅತ್ಯಂತ ಕೆಳಸ್ಥಾನದಲ್ಲಿರುವ ಮಾದಿಗರಿಗೆ ತಿಪ್ಪೇಸ್ವಾಮಿ ರಥೋತ್ಸವ ಸಂದರ್ಭದಲ್ಲಿ ಸಿಕ್ಕಿರುವ ಈ ಮಹತ್ವದ ಪಾತ್ರದ ಹಿಂದೆ ಮಾದಿಗರು ಮತ್ತು ತಿಪ್ಪೇಸ್ವಾಮಿಯ ನಡುವಿನ ಸಂಬಂಧವೇನೆಂಬ ಪ್ರಶ್ನೆ ಮೂಡುತ್ತದೆ. ಆದರೆ ಇಲ್ಲಿ ಕೇವಲ ಈ ಜಾತ್ರೆಯ ಸಂದರ್ಭದಲ್ಲಿ ಮಾದಿಗರ ಪಾತ್ರವನ್ನಷ್ಟೇ ಗಮನಿಸಲಾಗಿದೆ.

### ಕೊಟ್ಟೂರು ಬಸವೇಶ್ವರ ಜಾತ್ರೆ

ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕಿನ ಕೊಟ್ಟೂರಿನಲ್ಲಿ ನಡೆಯುವ ಬಸವೇಶ್ವರ ಜಾತ್ರೆಯು ಪ್ರಮುಖವಾದ ಜಾತ್ರೆ ಆಗಿದೆ. ಈ ಜಾತ್ರೆಗೆ ವಿವಿಧ ಧರ್ಮ ಮತ್ತು ಜಾತಿಯ ಜನರು ಭಾಗವಹಿಸುತ್ತಾರೆ. ಇಂತಹ ಜಾತ್ರೆಯಲ್ಲಿ ಮಾದಿಗ ಜನಾಂಗಕ್ಕೆ ವಿಶೇಷ ಮಾನ್ಯತೆ ನೀಡಿರುವುದು

ಕಂಡುಬರುತ್ತದೆ. ಜಾತ್ರೆಯ ಸಂದರ್ಭ ಮಾದಿಗರ ಮನೆಯಿಂದ ಮೊದಲು ನೈವೇದ್ಯ ಬರಬೇಕು ಆನಂತರವೇ ಮುಂದಿನ ಕಾರ್ಯಗಳು ನಡೆಯುತ್ತವೆ. ಈ ರೀತಿ ವಿಶೇಷ ಮಾನ್ಯತೆ ದೊರಕಿರುವ ಹಿನ್ನೆಲೆಯಲ್ಲಿ ಐತಿಹ್ಯವೊಂದು ಈ ರೀತಿ ಹೇಳುತ್ತದೆ : ಕೊಟ್ಟೂರು ಗುರುಬಸವೇಶ್ವರರು ಪಂಚಗಣಾಧೀಶ್ವರರಲ್ಲೊಬ್ಬರು. ಶಿಕಾರಿಪುರದಿಂದ ಬಂದ ಗುರು ಬಸವೇಶ್ವರರು ಶಿಖಾಪುರ(ಕೊಟ್ಟೂರು) ಗ್ರಾಮಕ್ಕೆ ಬಂದು ನೆಲೆಸಿದರು. ಇಲ್ಲಿಗೆ ಬಂದಾಗ ಮೂರು ಕಲ್ಲು ಮಠದಲ್ಲಿ ಉಳಿದು ಮನೆಮನೆಗೂ ತೆರಳಿ ಧಾನ್ಯ ಸಂಗ್ರಹಿಸಿ ಸಾಮಾನ್ಯ ಮನುಷ್ಯರಂತೆ, ಒಮ್ಮೊಮ್ಮೆ ಹುಚ್ಚರಂತೆ ವರ್ತಿಸುತ್ತಿದ್ದರಂತೆ. ಮೂರು ಕಲ್ಲುಮಠದ ಹತ್ತಿರ ಎರಡು ಕಲ್ಲು ಇಟ್ಟು ಅಡುಗೆ ಮಾಡುವಾಗ ಈ ಗ್ರಾಮದ ಹರಿಜನ ಮಹಿಳೆಯು ಇನ್ನೊಂದು ಕಲ್ಲು ಇಟ್ಟು ಅಡುಗೆ ಮಾಡಲು ಹೇಳಿದಳಂತೆ. ಇದರಿಂದ ಆಗಿನಿಂದಲೇ ಇವರುಳಿದ ಸ್ಥಳಕ್ಕೆ ಮೂರು ಕಲ್ಲುಮಠ ಎಂಬ ಹೆಸರು ಬಂದಿತಂತೆ. ಈ ಮಠವು ಈಗಲೂ ಇರುವುದರ ಬಗ್ಗೆ ತಿಳಿಸುತ್ತಾರೆ. ಅಡುಗೆ ಮಾಡಲು ನೆರವಾಗಿದ್ದರ ಕಾರಣದಿಂದ ಇವತ್ತಿಗೂ ಜಾತ್ರೆಯ ವೇಳೆ ಹರಿಜನ ಮಹಿಳೆಯ ಮನೆತನದಿಂದ ಮೊದಲು ಪೂಜೆ ಹಾಗೂ ನೈವೇದ್ಯಕ್ಕಾಗಿ ಗಿಣ್ಣವನ್ನು ನೀಡುವುದಿದೆ.[೧೧] ಮಾದಿಗ ಜನಾಂಗದ ಮಹಿಳೆ ಸಹಾಯ ಮಾಡಿರುವ ಹಿನ್ನೆಲೆಯಲ್ಲಿಯೇ ಈ ರೀತಿಯ ಮಾನ್ಯತೆ ದೊರೆತಿರುವುದು ತಿಳಿದುಬರುತ್ತದೆ.

### ಹುಲಿಗಮ್ಮನ ಜಾತ್ರೆ

ಹುಲಿಗಮ್ಮ ಜಾತ್ರೆಯ ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲ್ಲೂಕಿನಲ್ಲಿ ನಡೆಯುವ ಪ್ರಸಿದ್ಧ ಜಾತ್ರೆಯಾಗಿದೆ. ಈ ದೇವರಿಗೆ ನಡೆದುಕೊಳ್ಳುವ ಅನೇಕ ಮಾದಿಗರು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತಾರೆ. ಈ ದೇವರ ಹೆಸರನ್ನೂ ತಮ್ಮ ಮಕ್ಕಳಿಗೂ ಇಟ್ಟಿರುವುದರಿಂದ ಇಂದು ಈ ಭಾಗದಲ್ಲಿ 'ಹುಲಿಗಮ್ಮ' 'ಹುಲಿಗಪ್ಪ' ಹೆಸರುಗಳು ಹೆಚ್ಚಾಗಿ ಈ ಜನಾಂಗದಲ್ಲಿ ಕಂಡುಬರುತ್ತವೆ. ಕೊಪ್ಪಳ ತಾಲ್ಲೂಕಿನ ಹುಲಿಗಿ ಗ್ರಾಮಕ್ಕೆ ಈ ಹೆಸರು ಬಂದುದು ಬಹುಶಃ ಹುಲಿಗಮ್ಮ ದೇವತೆ ಪ್ರತಿಷ್ಠಾಪಿತಗೊಂಡ ಹಿನ್ನೆಲೆ ಇರಬಹುದು. ಈ ದೇವತೆಯ ಜಾತ್ರೆ ಸಂದರ್ಭದಲ್ಲಿಯೂ ಮೊದಲು ಹುಲಿಗಮ್ಮನ ಗುಡಿ ಎದುರು ಇರುವ 'ಮಾತಂಗಿ' (ಮಾದಿಗರ ಹೆಣ್ಣುಮಗಳು) ಗುಡಿಗೆ ಮೊದಲು ನೈವೇದ್ಯ ಮಾಡಲಾಗುತ್ತದೆ. ಈ ರೀತಿಯ ಮಾನ್ಯತೆ ದೊರಕಿದ ಕುರಿತು ಐತಿಹ್ಯವೊಂದು ಈ ರೀತಿ ತಿಳಿಸುತ್ತದೆ : ಹುಲಿಗಮ್ಮ ಹರಿಗೋಲು ಪಟ್ಟಣರಾಯನ ತೋಟದಲ್ಲಿ ಕೆಲಸ ಮಾಡುತ್ತಿದ್ದಳು. ಆಕೆ ಒಂದು ದಿನ ಮೆಣಸಿನಕಾಯಿ, ಉಳ್ಳಾಗಡ್ಡೆ, ಬದನೆಕಾಯಿಗಳನ್ನು ಕದ್ದು ಮಾತಂಗಮ್ಮನ ಮನೆಗೆ ತಂದು ಬಚ್ಚಿಟ್ಟಿದ್ದಳು. ತರುವಾಗ ಕೆಲವನ್ನು ದಾರಿಯಲ್ಲಿ ಚೆಲ್ಲಿಕೊಂಡು ಬಂದಿದ್ದಳು. ಇದನ್ನು ಅನುಸರಿಸಿ ಹುಡುಕಿದ ಶಾನುಬೋಗ(ಗೌಡ) ಮಾತಂಗಿಯೇ ಕದ್ದಿರುವಳೆಂದು ಭಾವಿಸಿ, ಅವಳನ್ನು ಹಿಡಿದು ಒಡೆದು ಮೂಗನ್ನು ಕೊಯ್ದುಬಿಟ್ಟ. ಈ ರೀತಿ ತಾನು ಮಾಡಿಲ್ಲದ ತಪ್ಪಿಗೆ ಮೂಗನ್ನು ಬಲಿಕೊಡಬೇಕಾಗಿ ಬಂದ ಮಾತಂಗಿಗೆ ಕೃತಜ್ಞಪೂರ್ವಕವಾಗಿ ಹುಲಿಗಮ್ಮ ತನಗೆ ಬರುವ ನೈವೇದ್ಯದಲ್ಲಿ

ಮೊದಲು ನಿನಗೆ ದೊರಕಲಿ ಎಂದು ಹೇಳಿದಳಂತೆ.[೧೨] ಆ ಪ್ರಕಾರ ಅಂದಿನಿಂದ ಇಂದಿನವರೆಗೂ ಹುಲಿಗಮ್ಮನ ಜಾತ್ರೆಯಲ್ಲಿ ಮೊದಲು 'ಮಾತಂಗಿ'ಗೆ ನೈವೇದ್ಯ ನೀಡಲಾಗುತ್ತದೆ.

**ಗಾಳೆಮ್ಮನ ಜಾತ್ರೆ**

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನಲ್ಲಿ ನಡೆಯುವ ಪ್ರಮುಖ ಜಾತ್ರೆಗಳಲ್ಲಿ ಇದು ಒಂದು. ಈ ಜಾತ್ರೆಯು ಹೊಸಪೇಟೆಯಿಂದ ಕಮಲಾಪುರ ಮಾರ್ಗದ ರಸ್ತೆಯ ಎಡಭಾಗದಲ್ಲಿ 'ಗಾಳೆಮ್ಮ' ದೇವಾಲಯದ ಹತ್ತಿರ ನಡೆಯುತ್ತದೆ. ಜಾತ್ರೆಯ ಸಂದರ್ಭದಲ್ಲಿ ಮಾದಿಗ ಜನಾಂಗಕ್ಕೆ ಸೇರಿದ ಜೋಗಮ್ಮರು ವಿಶೇಷ ಪಾತ್ರವಹಿಸುವುದು ಕಂಡುಬರುತ್ತದೆ. ''ಪಡಲಿಗಿ ಹಿಡಿದ ಐವರು ಜೋಗಮ್ಮಗಳು ಆಚರಣಾ ವಿಧಿಗಳುದ್ದಕ್ಕೂ ಇರಬೇಕಾಗುತ್ತದೆ. ಸಾಮಾನ್ಯವಾಗಿ ಹರಿಜನ ಪಂಗಡಕ್ಕೆ ಸೇರಿದ ಇವರನ್ನು ಸಮೀಪದ ಹೊಸಮಲಪನಗುಡಿ ಅಥವಾ ಮಲಪನಗುಡಿಯಿಂದ ಕರೆತರಲಾಗುತ್ತದೆ. ಅವರು ಜಾತ್ರಾವಧಿಯ ವಿಶೇಷ ಘಟ್ಟಗಳಲ್ಲೆಲ್ಲಾ 'ಗಾಳೆಮ್ಮ ನಿನ್ನಾಲ್ಕುದೋ ಉಧೋ!, ಹುಲಿಗಮ್ಮ, ನಿನ್ನಾಲ್ಕುಧೋ! ಮಾರಮ್ಮ ನಿನ್ನಾಲ್ಕುದೋ! ಇತ್ಯಾದಿಯಾಗಿ ಹೇಳುತ್ತಾರೆ. ಅವರಿಗೆ ಒಟ್ಟು ಆಚರಣೆಯಲ್ಲಿ ವಿಶೇಷ ಆಧ್ಯತೆ ಇದೆ. ತೇರಿನ ಮುನ್ನಾದಿನ(ಚತುರ್ದಶಿ)ದಿಂದ ಮರುದಿನ(ಪಾಡ್ಯ)ದವರೆಗೆ ಒಟ್ಟು ಮೂರು ದಿನಗಳ ಆಚರಣೆಗಳಲ್ಲಿ ಅವರ ಪಾಲ್ಗೊಳ್ಳುವಿಕೆ ಯಿದೆ. ಮೂರನೆಯ ದಿನ ಅವರಿಗೆ ಉಡಿ ತುಂಬಿಸಿ, ಕಳುಹಿಸಿಕೊಡುವ ಸಂಪ್ರದಾಯವಿದೆ. ಈ ಅಹ್ವಾನಿತ ಜೋಗಮ್ಮರಲ್ಲದೆ ಇತರೆ ಜೋಗಮ್ಮಗಳು ಜಾತ್ರೆಗೆ ಬರುತ್ತಾರೆ. ಆದರೆ ಅವರಿಗೆ ಅಂತಹ ಮರ್ಯಾದೆಯೇನು ಸಲ್ಲುವುದಿಲ್ಲ.[೧೩] ಈ ರೀತಿಯಾಗಿ ಮಾದಿಗ ಜನಾಂಗಕ್ಕೆ ಸೇರಿದ ಜೋಗಮ್ಮಗಳಿಗೆ ವಿಶೇಷ ಮಾನ್ಯತೆ ದೊರಕಿರುವುದು 'ಗಾಳೆಮ್ಮ'ನ ಜಾತ್ರೆಯ ಸಂದರ್ಭದಲ್ಲಿ ಕಂಡುಬರುತ್ತದೆ.

**ಜಡೆ ಸಿದ್ದೇಶ್ವರ ಜಾತ್ರೆ**

ಬಳ್ಳಾರಿ ಜಿಲ್ಲೆಯ ಎಮ್ಮಿಗನೂರು ಗ್ರಾಮದಲ್ಲಿ ಜಡೆಸಿದ್ದೇಶ್ವರ ದೇವರ ಹೆಸರಲ್ಲಿ ಜಾತ್ರೆ ನಡೆಯುತ್ತದೆ. ಈ ಜಾತ್ರೆಯ ಸಂದರ್ಭದಲ್ಲಿ ಮಾದಿಗ ಜನಾಂಗವು ವಿಶೇಷ ಮಹತ್ವ ಪಡೆದುಕೊಂಡಿದ್ದಾರೆ. ಅಲ್ಲಿ ನಡೆಯುವ ದಾಸೋಹ ವಾದ್ಯಗಳ ಸಮೇತವಾಗಿ ಹರಿಜನರಿಂದ ಅಕ್ಕಿ, ಬೇಳೆ ಪ್ರಸಾದ ಸೇವೆ ಬಂದ ನಂತರವೇ ದಾಸೋಹದ ಅಡುಗೆ ಆರಂಭಿಸಬೇಕೆಂಬ ನಿಯಮವಿದೆ.[೧೪] ಇದರ ಪ್ರಕಾರ ಮಾದಿಗರ ಮನೆಗಳಿಂದ ಪ್ರಸಾದ ಬಂದ ನಂತರವೇ ಅಡುಗೆ ಆರಂಭಿಸಲಾಗುತ್ತದೆ.

**ಸಿಡಿ ಆಡುವುದು ಮತ್ತು ಪೂಜಾರಿಕೆ**

ಮಾದಿಗರು ಕೆಲವು ಭಾಗಗಳಲ್ಲಿ ಸಿಡಿ ಆಡುವ ಕಾರ್ಯವನ್ನು ಮಾಡುವುದು ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಬೆಲಗೋಡು ಗ್ರಾಮದ ಸಿಡಿ ಆಡುವವರು ಹರಿಜನರಾಗಿದ್ದಾರೆ.[೧೫] ಸಿಡಿ ಆಡುವುದು ಮಾತ್ರವಲ್ಲದೆ ಕೆಲವೊಂದು ಭಾಗದಲ್ಲಿ ಕೊಂಡ ಹಾಯುವ

ಕಾರ್ಯವನ್ನು ಸಹ ಮಾಡುವುದು ಕಂಡುಬರುತ್ತದೆ. ಇದೇ ಜಿಲ್ಲೆಯ ಸುಗ್ಗೇನಹಳ್ಳಿ ಗ್ರಾಮದ ದುರುಗಮ್ಮ, ನಲ್ಲಾಪುರ ತಾಯಮ್ಮನಲ್ಲಿ ಹರಿಜನ ಪೂಜಾರಿಗಳು ಕೊಂಡ ಹಾಯುತ್ತಾರೆ.[೧೬] ಈ ರೀತಿ ಮಾದಿಗರು ಕೆಲವೊಂದು ಭಾಗಗಳಲ್ಲಿ ಕೊಂಡ ಹಾಯುವ ಪದ್ಧತಿಯನ್ನು ಇನ್ನು ಮುಂದುವರಿಸಿಕೊಂಡು ಬಂದಿರವುದನ್ನು ಕಾಣಬಹುದು.

ಕೆಲವು ಭಾಗಗಳಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಪೂಜಾರಿ ಸ್ಥಾನವನ್ನು ಕೂಡ ಮಾದಿಗರು ಪಡೆದುಕೊಂಡಿರುವುದು ಕಂಡುಬರುತ್ತದೆ. ಆದರೆ ಇವರಿಗೆ ಪೂಜಾರಿಕೆಯ ಸ್ಥಾನ ದೊರಕಿರುವುದು ಮಾತಂಗಿ, ಎಲ್ಲಮ್ಮ, ಮಾರಮ್ಮ, ಮುಂತಾದ ಸ್ತ್ರೀ ದೇವತೆಗಳ ಗುಡಿ ಇರುವ ಕಡೆ ಮಾತ್ರ. ಪುರುಷ ದೈವಗಳ ಪೂಜಾರರು ಸಹ ಇದ್ದಾರೆ. ಚಿತ್ರದುರ್ಗದ ಬೆಟ್ಟದಲ್ಲಿ ಸ್ಥಾಪಿತಗೊಂಡಿರುವ ಉಚ್ಚಂಗಮ್ಮ(ರೇಣುಕೆ) ದೇವಾಲಯದ ಎದುರು ಇರುವ ಮಾತಂಗಿ ಗುಡಿಗೆ ಮಾದಿಗ ಜನಾಂಗದ ಪೂಜಾರಿಗಳೆ ಇದ್ದರೆಂಬುದು ತಿಳಿದುಬರುತ್ತದೆ. ರೇಣುಕೆಗೆ ಮಂಗಳಾರತಿಯಾದ ನಂತರ ಆ ಧೂಪವನ್ನೇ ಮಾತಂಗಿಗೂ ಬೆಳಗುವರು. ಮಾತಂಗಿಯ ವಿಗ್ರಹಕ್ಕೆ ಆದಿಕರ್ನಾಟಕ ಜಾತಿಯ ಜೋಗತಿಯ(ಬಸವಿ) ಪೂಜಾರಿಣಿಯಾಗಿರುವಳೆಂಬ.[೧೭] ಅಂಶವನ್ನು ಹುಲ್ಲೂರು ಶ್ರೀನಿವಾಸ ಜೋಯಿಸರು ತಮ್ಮ ಲೇಖನವೊಂದರಲ್ಲಿ ಉಲ್ಲೇಖಿಸಿದ್ದಾರೆ. ಇದೇ ರೀತಿ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಕಸ್ತೂರಿರಂಗಪ್ಪನ ಹಳ್ಳಿಯಲ್ಲಿ 'ಈರಗಾರ'(ವೀರಣ್ಣ) ದೇವಾಲಯಕ್ಕೆ ಮಾದಿಗರೇ ಪೂಜಾರಿ ಆಗಿದ್ದಾರೆ.

ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲ್ಲೂಕಿನ 'ಹುಲಿಗಮ್ಮ' ಗ್ರಾಮದಲ್ಲಿ ಹುಲಿಗಮ್ಮನ ದೇವಾಲಯದ ಎದುರು ಇರುವ ಮಾತಂಗಿಯ ಪೂಜಾರರು ಮಾದಿಗರು. ಇದಲ್ಲದೇ ಈ ಜಿಲ್ಲೆಯಲ್ಲಿ ಗ್ರಾಮ ದೈವಗಳ ಮೇಲೆ ಅಧ್ಯಯನ ಕೈಗೊಂಡಿದ್ದ ಡಾ.ಗೋವಿಂದ ಅವರು ಯಾವುದೇ ಗ್ರಾಮದಲ್ಲಿ ಸ್ತ್ರೀ ದೇವತೆಗಳ ಪೂಜಾರಿಗಳು ಮಾದಿಗ ಜನಾಂಗದವರೆಂದು ತಿಳಿಸುತ್ತಾರೆ. ವಿವಿಧ ಗ್ರಾಮಗಳಲ್ಲಿ ಈ ಜನಾಂಗದವರು ಪೂಜಾರಿಗಳಾಗಿರುವುದನ್ನು ದಾಖಲಿಸಿದ್ದಾರೆ. ಬೈಲುವದ್ದಿಗೆರೆ ಗ್ರಾಮದಲ್ಲಿ ಹುಲುಗಪ್ಪ, ಧರ್ಮಸಾಗರ ಹುಲುಗಪ್ಪ, ಎರ್ರಪ್ಪ ಹೊಸದರೋಜಿ, ಪರಸಪ್ಪ ತಿಮ್ಮಲಾಪುರ, ಪಂಪಾಪತಿ ಕುಡತಿನಿ, ಮಾರೆಮ್ಮ ರಾಮಸಾಗರ, ಮರಿಯಪ್ಪ ಕೂಡ್ಲಿಗಿ, ಸಂಜೀವಪ್ಪ ಅನಂತಶಯನಗುಡಿ, ಹುಲುಗಪ್ಪ ಮರಿಯಮ್ಮನ ಹಳ್ಳಿ, ಮೈಲಾರಪ್ಪ ಹನುಮನಹಳ್ಳಿ, ಪೂಜಾರಿ ಹುಲುಗಮ್ಮ ನಾಗೇನಹಳ್ಳಿ, ದುರ್ಗಪ್ಪ ಹನುಮನಹಳ್ಳಿ, ಶಿವಕಮ್ಮ ಕೊಂಡನಾಯಕನ ಹಳ್ಳಿ, ಕೆಂಚಪ್ಪ ಕಾರಿಗನೂರು, ಪಕೀರಮ್ಮ ಪಾಪಿನಾಯಕನ ಹಳ್ಳಿ, ಕರೆಸ್ವಾಮಿ ಕೊಟ್ಟೂರು, ಪರುಶುರಾಮ ತಂಬ್ರಹಳ್ಳಿ, ಮರಿಕೆಂಚಮ್ಮ ಕಮಲಾಪುರ, ಹುಲುಗಪ್ಪ ಸಂಡೂರು, ಹನುಮಂತಪ್ಪ ಸುಶೀಲಾ ನಗರ, ರಾಮಲಪ್ಪ ಹೊಸಪೇಟೆ, ಕೆಂಚಪ್ಪ ಸುಗ್ಗೇನಹಳ್ಳಿ ಗ್ರಾಮಗಳಲ್ಲಿ ಪೂಜಾರಿಗಳಾಗಿದ್ದಾರೆ.[೧೮] ಈ ರೀತಿ ಬಳ್ಳಾರಿ ಜಿಲ್ಲೆಯ ಅನೇಕ ಗ್ರಾಮಗಳಲ್ಲಿ ಈ ಜನಾಂಗದ ಪೂಜಾರಿಗಳಿರುವುದು ಕಂಡುಬರುತ್ತದೆ.

ಈ ರೀತಿ ಮಾದಿಗ ಜನಾಂಗದವರು ಜಾತ್ರೆ, ಹಬ್ಬ, ಉತ್ಸಾವಗಳ ಸಂದರ್ಭದಲ್ಲಿ ಪಡೆದಿರುವ ಮಹತ್ವ ಎಂದೋ ಮಾಡಿದ ಸಹಾಯ ಮತ್ತು ತಾವು ಮಾಡದ ತಪ್ಪಿಗಾಗಿ ಶಿಕ್ಷೆ ಪಡೆದ ಕೃತಜ್ಞತೆಯ ರೂಪವಾಗಿ ಮೊದಲ ಪೂಜೆ, ಅಥವಾ ನೈವೇದ್ಯ ಪಡೆಯುವುದು ಆರಂಭಗೊಂಡು ಇಂದಿಗೂ ಮುಂದುವರೆದಿದೆ. ಹಾಗೆಯೇ ಸಿಡಿ ಆಡುವುದು, ಚರಗ ಚೆಲ್ಲುವುದು ಮುಂತಾದ ಅಪಾಯಕಾರ ಸಂದರ್ಭಗಳಲ್ಲಿ ಕೆಳಜಾತಿಗಳನ್ನು ಬಳಸಿಕೊಳ್ಳಲಾರಂಭಿಸಿದ್ದು ಅದು ಇಂದಿಗೂ ಮುಂದುವರಿದುಕೊಂಡು ಬಂದಿದೆ. ಅನೇಕ ಗ್ರಾಮದ ಸ್ತ್ರೀ ದೇವತೆಯ ಪೂಜಾರಿಗಳು ಮತ್ತು ಮಾದಿಗರ ಹಟ್ಟಿಗಳಲ್ಲಿ ಸ್ಥಾಪನೆಗೊಂಡ ದೈವಗಳ ಪೂಜಾರಿಗಳು ಮಾದಿಗರೇ ಇರುತ್ತಾರೆ. ಅದರಲ್ಲಿ ಸ್ತ್ರೀ ದೇವತೆಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ಪೂಜಾರರು ಮಾದಿಗರು ಕಂಡುಬಂದರೆ ಕೆಲವೊಂದು ಗ್ರಾಮಗಳಲ್ಲಿ ಪುರುಷ ದೇವರುಗಳಿಗೂ ಪೂಜಾರಿಗಳಾಗಿರುವುದು ಕಂಡುಬರುತ್ತದೆ.

## ೭.೨ ಮಾದಿಗರ ಪ್ರಮುಖ ಆರಾಧ್ಯ ದೈವಗಳು

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ದೈವಗಳನ್ನು ವಿಶೇಷವಾಗಿ ಆರಾಧನೆ ಮಾಡುತ್ತಾರೆ. ಕೆಲವೊಂದು ಮಾದಿಗರು ಸ್ತ್ರೀ ಮತ್ತು ಪುರುಷ ದೈವಗಳೆರಡನ್ನೂ ಆರಾಧಿಸುವರು. ಆದರೆ ದೈವಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಪುರುಷ ಸ್ತ್ರೀ ದೇವತೆಗಳನ್ನು ಆರಾಧಿಸುತ್ತಾರೆ. ಇವರು ಆರಾಧಿಸುವ ಸ್ತ್ರೀ ದೈವಗಳು ಈ ರೀತಿ ಇವೆ : ಮಾರಮ್ಮ, ಮಾತಂಗಿ, ಎಲ್ಲಮ್ಮ, ಉಚ್ಚೆಂಗಮ್ಮ, ಕರಿಯಮ್ಮ, ಗಲ್ಲೆಮ್ಮ, ಎಳವಮ್ಮ, ಹುಲಿಗಮ್ಮ, ಗಾಳೆಮ್ಮ, ದುರ್ಗಮ್ಮ, ಕಣಿವೆ ಮಾರಮ್ಮ, ಮುಂತಾದವು. ಪುರುಷದೈವಗಳಲ್ಲಿ. ತಿಪ್ಪೇಸ್ವಾಮಿ, ಹರಳಯ್ಯ, ಮರಳುಸಿದ್ದ, ಈರಗಾರ, ಭೂತಪ್ಪ, ರಂಗಪ್ಪ, ಪೆನ್ನ ಓಬಳಸ್ವಾಮಿ ಮುಂತಾದವು. ಈ ರೀತಿ ಆರಾಧನೆಗೊಳ್ಳುತ್ತಿರುವ ದೈವಗಳು ಮತ್ತು ಮಾದಿಗರ ನಡುವೆ ಸಂಬಂಧ ಆಯಾ ದೇವರುಗಳ ಚರಿತ್ರೆಯನ್ನು ವಿವಿಧ ಮೂಲಗಳಿಂದ ನೋಡಿದಾಗ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಈ ಎರಡು ಜಿಲ್ಲೆಗಳಲ್ಲಿ ಮಾದಿಗರಿಂದ ಆರಾಧನೆಗೊಳ್ಳುತ್ತಿರುವ ದೈವಗಳನ್ನು ಕುರಿತು ಇಲ್ಲಿ ಚರ್ಚೆ ಮಾಡಲಾಗಿದೆ.

### ಮಾರಮ್ಮ

ಪ್ರತಿಯೊಂದು ಗ್ರಾಮದಲ್ಲಿಯೂ ಮಾರಮ್ಮನನ್ನು ಆರಾಧಿಸುವುದು ಕಂಡುಬರುತ್ತದೆ. ಇದು ಕೇವಲ ಮಾದಿಗರು ಮಾತ್ರವೇ ಆರಾಧಿಸುವ ದೇವತೆಯಲ್ಲ. ಗ್ರಾಮದ ಪ್ರತಿಯೊಂದು ಜನಸಮುದಾಯವು ಮಾರಮ್ಮನನ್ನು ಆರಾಧಿಸುತ್ತದೆ. ಕೆಲವೊಂದು ಗ್ರಾಮಗಳಲ್ಲಿ ಎರಡು 'ಮಾರಮ್ಮ'ನ ಗುಡಿಗಳನ್ನು ಕಾಣುತ್ತೇವೆ. ಒಂದು 'ಊರು ಮಾರಮ್ಮ'ನದು ಎರಡನೇಯದು 'ಹಟ್ಟಿ ಮಾರಮ್ಮ'ನದು. ಇಲ್ಲಿ ಊರಮಾರಮ್ಮನ ಹಬ್ಬ, ಜಾತ್ರೆ, ಉತ್ಸವಗಳು ನಡೆದರೆ ಇಡೀ ಗ್ರಾಮದ ಜನರೆಲ್ಲರೂ ಭಾಗವಹಿಸಿದರೆ ಪ್ರತಿಷ್ಠಾಪಿತಗೊಂಡಿರುವ 'ಹಟ್ಟಿ ಮಾರಮ್ಮ' ಮಾದಿಗ ಕೇರಿಯಲ್ಲಿ ಅಥವಾ ಹಟ್ಟಿಗಳಿಗೆ ಮಾತ್ರವೇ

ಸೀಮಿತವಾಗಿರುತ್ತದೆ. ಮಾರಮ್ಮ ಮತ್ತು ಮಾದಿಗರಿಗೆ ಕುರಿತ ಕಥೆಯೊಂದು ಈ ರೀತಿ ಇದೆ : ಮಾದಿಗರ ಹುಡುಗನೊಬ್ಬ ತನ್ನ ಜಾತಿಯನ್ನು ಮಾರೆಮಾಚಿ ಬ್ರಾಹ್ಮಣ ಹುಡುಗಿಯನ್ನು ಪ್ರೀತಿಸಿ ಮದುವೆಯಾಗುತ್ತಾನೆ. ಆತನ ಜಾತಿಯ ಬಗ್ಗೆ ಅವಳಿಗೆ ತಿಳಿದಿರುವುದಿಲ್ಲ. ಅವರು ಸುಮಾರು ವರ್ಷಗಳ ಕಾಲ ಜೊತೆಯಾಗಿ ಜೀವನ ಮಾಡುತ್ತಾರೆ. ಅನಂತರದಲ್ಲಿ ತನ್ನ ಗಂಡನ ಜಾತಿ ತಿಳಿಯುತ್ತದೆ. ಇದರಿಂದ ಕೋಪಗೊಂಡ ಅವಳು ತನ್ನ ಮನೆಯವರಿಗೆ ಮತ್ತು ಇಡೀ ಗ್ರಾಮದವರಿಗೆ ಅವನ ವಿರುದ್ಧ ದೂರು ನೀಡುತ್ತಾಳೆ. ಮೋಸಮಾಡಿ ನನ್ನನ್ನು ಮದುವೆಯಾಗಿದ್ದಾನೆಂದು ಹೇಳುತ್ತಾಳೆ. ಈ ರೀತಿ ಸುಳ್ಳು ಹೇಳಿ ಸಮಾಜದ ಅತ್ಯಂತ ಕೆಳಜಾತಿಯಾದ ಮಾದಿಗರ ಹುಡುಗ ಬ್ರಾಹ್ಮಣ ಜಾತಿಯ ಹುಡುಗಿಯನ್ನು ಮದುವೆಯಾಗುವುದು ಒಂದು ದೊಡ್ಡ ಅಪರಾಧವೆಂಧು ತೀರ್ಮಾನಿಸಿ ಅತನಿಗೆ ಮರಣದಂಡನೆ ಶಿಕ್ಷೆಯನ್ನು ಬಲವಂತವಾಗಿ ನೀಡುತ್ತಿದೆ. ಈ ಹಿನ್ನೆಲೆಯಲ್ಲಿ ಹುಟ್ಟಿಕೊಂಡ 'ಮಾರಮ್ಮನ' ಆರಾಧನೆ ಇಂದಿಗೂ ಮುಂದುವರಿದುಕೊಂಡು ಬಂದಿದೆ ಎನ್ನಬಹುದು. ಇಲ್ಲಿ ಬ್ರಾಹ್ಮಣ ಹುಡುಗಿಯ ಸಂಕೇತವಾಗಿ ಮಾರಮ್ಮ, ಕೋಣದ ರೂಪದಲ್ಲಿ ಮಾದಿಗರ ಹುಡುಗನನ್ನು ಗುರುತಿಸಿ ಮಾರಮ್ಮನನ್ನು ಶಾಂತಗೊಳಿಸುವ ಸಲುವಾಗಿ ಕೋಣವನ್ನು ಬಲಿಕೊಡುವುದು ಆರಂಭಗೊಂಡಿತು. ಈ ಕಾರಣದಿಂದಾಗಿ 'ಮಾರಮ್ಮ'ನ ಹಬ್ಬ ಜಾತ್ರೆ ಸಂದರ್ಭದಲ್ಲಿ ಕೋಣ ಅಥವಾ ಕುರಿಯನ್ನು ಬಲಿಕೊಡುವುದು ಇಂದಿಗೂ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲೂ ಕಾಣಬಹುದು.

ಎಲ್ಲಮ್ಮ

ಎಲ್ಲಮ್ಮನಿಗೆ ಉತ್ಸವಾಂಬಾ, ಉಚ್ಚಂಗಮ್ಮ, ಉಚ್ಚಂಗಿ ಎಲ್ಲಮ್ಮ, ಉಚ್ಚೆಂಗಿ, ರೇಣುಕೆ ಮೊದಲಾದ ನಾನಾ ಹೆಸರುಗಳಿವೆ.[19] ಈ ಹೆಸರುಗಳಲ್ಲಿ ಪ್ರಸಿದ್ಧಿಯಾದ ದೇವಾಲಯಗಳು ಅನೇಕ ಕಡೆ ಇರುವುದು ಕಂಡುಬರುತ್ತದೆ. ಅವುಗಳೆಂದರೆ "ಚಂದ್ರಗುತ್ತಿ, ಉಚ್ಚಂಗಿದುರ್ಗ, ಉಚ್ಚಂಗಿಪುರ ಯಾನೆ ಹೊಸದುರ್ಗ, ಚಿತ್ರದುರ್ಗ, ಆದವಾನಿ, ಮಂತ್ರಾಲಯ ಮತ್ತು ಹಿರಿಯ ಆರ್ಯನದುರ್ಗ(ಅಥವಾ ಉಚ್ಚಂಗಿದುರ್ಗ-ಮೊಳಕಾಲ್ಮೂರು ಬಳಿ) ಮುಂತಾದ ಸ್ಥಳಗಳಲ್ಲಿವೆ.[20] ಜಮದಗ್ನಿ ಋಷಿಯ ಹೆಂಡತಿ ರೇಣುಕೆ. ಈ ಕುರಿತು ಪುರಾಣ ಮತ್ತು ದಂತಕಥೆಗಳು ಮಾಹಿತಿಯನ್ನು ನೀಡುತ್ತವೆ. ಹುಲ್ಲೂರು ಶ್ರೀನಿವಾಸ ಜೋಯಿಸರು, ತಮ್ಮ ಲೇಖನವೊಂದರಲ್ಲಿ ಈ ರೀತಿ ಉಲ್ಲೇಖಿಸಿದ್ದಾರೆ : ಹರಪನಹಳ್ಳಿ ತಾಲ್ಲೂಕಿನಲ್ಲಿರುವ ಉಚ್ಚಂಗಿದುರ್ಗವೇ ಉತ್ತುಂಗ ಮಹಾರಾಜನ ರಾಜಧಾನಿ. ಈ ರಾಜನ ಕುಮಾರಿ ಉಚ್ಚಂಗಿ ಅಚ್ಚೆಯೇ ರೇಣುಕೆ. ಜಮದಗ್ನಿ ಋಷಿಯ ಪತ್ನಿ. ಈ ದಂಪತಿಗಳ ಐದನೆಯ ಮಗನೇ ಪರುಶುರಾಮ. ಸೊರಬ, ತೀರ್ಥಹಳ್ಳಿ, ಶಿಕಾರಿಪುರ, ಸಹ್ಯಾದ್ರಿ, ಅದರ ಪಶ್ಚಿಮದ ತೀರಪ್ರದೇಶ ಇವೇ ಪರುಶುರಾಮನ ಕ್ಷೇತ್ರ. ಹೈಹಯ ವಂಶೀಕನಾದ ನರ್ಮದಾತೀರದ ಮಾಹಿಷ್ಮತಿಯ ಅರಸನೇ ಕಾರ್ತವೀರ್ಯಾರ್ಜುನ. ರಾವಣನನ್ನು ಸೇರೆಯಲ್ಲಿಟ್ಟ ಮಹಾವೀರ ಜಮದಗ್ನಿ ಋಷಿಯ ಸುರಭಿಗಳನ್ನು

ಕಂಡು ಹರ್ಷಿಸಿ, ಅವುಗಳನ್ನು ತನ್ನ ದೇಶಕ್ಕೆ ತೆಗೆದುಕೊಂಡು ಹೋಗಲು ಬಲಪ್ರಯೋಗ ಮಾಡಿದನು. ಈ ಸಂದರ್ಭದಲ್ಲಿ ಋಷಿವರ್ಯನು ಮಡಿದನು. ರೇಣುಕೆಯು ಸಹಗಮನ ಮಾಡಿದಳು. ಈ ಮಹಾಸತಿಯೊಡನೆ ಅವಳ ನೆಚ್ಚಿನ ಸೇವಕಿಯರಾದ ಮಾತಂಗಿ, ಮಾವುರಾಣಿ ಎಂಬ ಮತಂಗ ಕನ್ಯೆಯರೂ ತಮ್ಮ ಸ್ವಾಮಿನಿಯ ಪಾದಕಮಲದಲ್ಲಿ ಪ್ರಾಣಾರ್ಪಣೆ ಮಾಡಿದರು. ಸಹಗಮನ ನಡೆದ ಚಂದ್ರಗುತ್ತಿಯಲ್ಲಿ ರೇಣುಕೆಯ ಮಹಾಸತಿಗಲ್ಲೂ, ಸಮೀಪದಲ್ಲಿಯೇ ಮತಂಗ ಕನ್ಯೆಯರ ವೀರಗಲ್ಲುಗಳೂ ಪ್ರತಿಷ್ಠಾಪಿಸಲ್ಪಟ್ಟವು. ತವರು ಮನೆಯಾದ ಉಚ್ಚಂಗಿ ದುರ್ಗದಲ್ಲಿಯೂ ಅದೇ ರೀತಿ ಪ್ರತಿಮೆಗಳು ನಿಲ್ಲಿಸಲ್ಪಟ್ಟವು.[೨೧] ಅಲ್ಲಿಂದ ಆರಂಭಗೊಂಡ ಇವರ ಆರಾಧನೆಯು ಇಂದಿಗೂ ಮುಂದುವರೆದಿದೆ. ಅದರಲ್ಲೂ ಮುಖ್ಯವಾಗಿ ಕೆಳಜಾತಿಗಳು ಈ ದೇವರಿಗೆ ಹೆಚ್ಚಾಗಿ ನಡೆದುಕೊಳ್ಳುತ್ತಾರೆ.

ಪಾಳೆಯಗಾರ ಕಾಲದಲ್ಲಿ ಚಿತ್ರದುರ್ಗದಲ್ಲಿ ಉಚ್ಚಂಗಮ್ಮನ ಹೆಸರಲ್ಲಿ ದೇವಾಲಯ ನಿರ್ಮಾಣ ಮಾಡಲಾಗಿದ್ದು, ಅದರ ಜೊತೆಯಲ್ಲಿ ಮಾತಂಗಿಗೆ ಚಿಕ್ಕದೊಂದು ಗುಡಿಯನ್ನು ನಿರ್ಮಾಣಮಾಡಿರುವುದು ಇಂದಿಗೂ ಬೆಟ್ಟದಲ್ಲಿ ಕಾಣಬಹುದಾಗಿದೆ. ಈ ದೇವತೆಯನ್ನು ಆರಾಧಿಸುವ ಅನೇಕ ಕುಟುಂಬಗಳು ಚಿತ್ರದುರ್ಗ ಜಿಲ್ಲೆಯಲ್ಲಿವೆ. ಈ ದೇವತೆಯ ಹೆಸರಲ್ಲಿ ಜೋಗಪ್ಪ ಮತ್ತು ಜೋಗಮ್ಮಗಳು ಈ ಜನಾಂಗದಲ್ಲಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಚಿತ್ರದುರ್ಗಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಎಲ್ಲಮ್ಮನ ಭಕ್ತರು ಈ ಜನಾಂಗದಲ್ಲಿ ಇರುವುದು ಕಂಡುಬರುತ್ತದೆ. ಈ ಹಿಂದೆ ಎರಡು ಜಿಲ್ಲೆಗಳಲ್ಲಿಯೂ 'ಎಲ್ಲಮ್ಮ'ನ ಹೆಸರಲ್ಲಿ 'ಬಸವಿ' ಮತ್ತು ಜೋಗಮ್ಮ ಹಾಗೂ ಜೋಗಪ್ಪಗಳನ್ನು ಬಿಡುವುದು ಪ್ರತಿಯೊಂದು ಗ್ರಾಮದಲ್ಲಿಯೂ ಕಂಡುಬರುತ್ತಿತ್ತು. ಆದರೆ ಇಂದು ಅದು ಕಡಿಮೆಯಾಗಿ ಇಂದಿಗೂ ಸಹ ಅನೇಕರು 'ಬಸವಿ' ಬಿಡುವುದು, ತಲೆಯಲ್ಲಿ ಜಡೆ ಬಂದರೆ ಜೋಗಮ್ಮ ಅಥವಾ ಜೋಗಪ್ಪಗಳಾಗುವುದು ನಡೆಯುತ್ತದೆ. ಇದರೊಂದಿಗೆ 'ಗಂಡು ಜೋಗಿ'ಗಳು ಸಹ ಈ ಜನಾಂಗದಲ್ಲಿ ಇರುವುದು ಕಂಡುಬರುತ್ತದೆ. ಇವರು 'ಚೌಡಿಕೆ' ಇಲ್ಲವೇ ಪುಟ್ಟಿಯಲ್ಲೊಂದು ಭಂಡಾರದ ಗಂಟೆನೊಂದಿಗೆ ತಿರುಗಾಡಿ ಎಲ್ಲಮ್ಮ ಅಥವಾ ರೇಣುಕೆಯ ಕುರಿತು ಹಾಡುಗಳನ್ನೂ ಹಾಡುತ್ತಾರೆ. ಈ ಬಗೆಯ ಜೋಗಪ್ಪ ಮತ್ತು ಜೋಗಮ್ಮಗಳು ಚಿತ್ರದುರ್ಗಕ್ಕಿಂತ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಎಲ್ಲಮ್ಮನ ಸಂಪ್ರದಾಯದ ಅನೇಕ ದೈವಗಳು ಇಲ್ಲಿ ನೆಲೆಸಿರುವ ಕಾರಣಕ್ಕೆ ಈ ಭಾಗದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಎಲ್ಲಮ್ಮನ ಆರಾಧಕರು ಇದ್ದಾರೆ.

**ಮಾತಂಗಿ**

ಮಾದಿಗರು ಆರಾಧನೆ ಮಾಡುವ ಸ್ತ್ರೀ ದೇವತೆಗಳಲ್ಲಿ 'ಮಾತಂಗಿ'ಯು ಒಂದು. ಇವರು 'ಮಾತಂಗಿಯ ಮಕ್ಕಳು' ನಾವು ಎಂದುಹೇಳಿಕೊಳ್ಳುತ್ತಾರೆ. ಈ ದೇವತೆಯ ಗುಡಿಗಳು ಪ್ರತ್ಯೇಕವಾಗಿ ಸ್ಥಾಪನೆಗೊಂಡಿರುವುದು ಕಂಡುಬರುವುದಿಲ್ಲವಾದರೂ ಅನೇಕ ಸ್ತ್ರೀ ದೇವತೆಗಳ ದೇವಾಲಯದ ಎದುರು ಚಿಕ್ಕದೊಂದು ಗುಡಿಯನ್ನು ಹೊಂದಿರುತ್ತವೆ. ಇಂತಹ ಗುಡಿಗಳು ಚಿತ್ರದುರ್ಗ ಮತ್ತು

ಬಳ್ಳಾರಿ ಜಿಲ್ಲೆಗಳಲ್ಲಿ ಕೆಲವು ಗ್ರಾಮಗಳಲ್ಲಿ ಕಂಡುಬರುತ್ತವೆ. ಚಿತ್ರದುರ್ಗ ಬೆಟ್ಟದಲ್ಲಿರುವ ಉಚ್ಚಂಗಮ್ಮ ದೇವಸ್ಥಾನದ ಹೊರಗೆ ಮಾತಂಗಿಯ ಗುಡಿ ಇದೆ. ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲ್ಲೂಕಿನ ಹುಲಿಗಿ ಗ್ರಾಮದಲ್ಲಿ ಹುಲಿಗಮ್ಮ ಗುಡಿಯ ಎದುರಿಗೆ ಮಾತಂಗಿ ಗುಡಿಯು ಚೌಕಾಕಾರದಲ್ಲಿ ರಚನೆಯಾಗಿದ್ದರೂ ಗರ್ಭಗುಡಿಯಲ್ಲಿ ಕಪ್ಪುಕಲ್ಲಿನ ದೇವಿ ಮೂರ್ತಿ ಇದೆ. ಈ ಗುಡಿಯನ್ನು ಈಚೆಗೆ ಸಿಮೆಂಟಿನಿಂದ ಕಟ್ಟಲಾಗಿದೆ. ಗರ್ಭಗುಡಿಯು ಮಣ್ಣಿನ ರಚನೆಯಾಗಿದ್ದು, ಗರ್ಭಗುಡಿಯಲ್ಲಿದ್ದ ಮೂಲ ಮೂರ್ತಿಯನ್ನು ಬೇರೆಡೆ ಸಾಗಿಸಲಾಗಿದೆ[೨೨] ಇದಲ್ಲದೇ ಪ್ರಸಿದ್ಧ ಐತಿಹಾಸಿಕ ಸ್ಥಳ ಹಂಪಿಯ ಮತಂಗ ಪರ್ವತದಲ್ಲಿ ಮಾತಂಗಿ ದೇವತೆಯ ಗುಡಿಯಿದೆ. ಮೂರು ಅಡಿ ಎತ್ತರದ ದೇವಿ ಕರಂಡಮುಕುಟ, ಕೈಗಳಲ್ಲಿ ತ್ರಿಶೂಲ, ಭರ್ಜಿ, ಬಾಣ, ಬಿಲ್ಲು, ಪಾನ ಬಟ್ಟಲು ಹಿಡಿದಿದ್ದಾಳೆ. ಸಿಂಹವಾಹಿನಿಯಾಗಿ ಮಹಿಷಾಸುರನನ್ನು ಬಲಕಾಲಿನಿಂದ ತುಳಿಯುವುದು ಕಾಣಸಿಗುತ್ತದೆ. ಈ ಮಾತಂಗಿ ಆದಿಜಾಂಬವನ ಮಗಳೆಂಬ ಪ್ರತೀತಿ ಇದೆ. ಮಾತಂಗಿಯ ಕುರಿತು ಐತಿಹ್ಯ ಈ ರೀತಿ ತಿಳಿಸುತ್ತದೆ : ಮಾತಂಗ ಮುನಿಯ ಮಗಳು ಮಾತಂಗಿ ಹುಟ್ಟಿದ್ದು ಹಂಪಿಯ ಪರಿಸರದಲ್ಲಿಯೇ. ಮಾತಂಗಮುನಿಯ ಅವಾಸ ಕ್ಷೇತ್ರವು ಇದಾಗಿತ್ತೆಂದು ಹಲವಾರು ಕೃತಿಗಳಿಂದ ತಿಳಿಯುತ್ತದೆ. ಇಲ್ಲಿ ಮತಂಗಮುನಿಯ ಮಗಳಾದ ಮಾತಂಗಿಯು ಹುಟ್ಟಿದ ಬಳಿಕ, ಆಕೆಗೆ ಈತನಲ್ಲಿರುವ ವಿದ್ವತ್ತನ್ನು ಧಾರೆ ಎರೆದನಂತೆ. ಇದರಿಂದ ಆಕೆ ವಿದ್ಯಾಧಿದೈವವಾಗಿ ಪೂಜೆಗೆ ಅರ್ಹಳಾದಳೆಂಬ ಐತಿಹ್ಯವಿದೆ. ಅಂತೆಯೇ ಕಲಿಯುಗದ ಆರಂಭಕ್ಕಿಂತ ಎಂಟು ದಿವಸ ಮುಂಚೆ ಎಲ್ಲಮ್ಮ ಆದಿಜಾಂಬವ ಮುನಿಯ ಮಂತ್ರಗಳಿಂದ ಜನಿಸಿದಳಂತೆ. ಒಂಬತ್ತು ಗಂಟೆಯಷ್ಟರಲ್ಲೇ ದೊಡ್ಡವಳಾಗಿ ತನ್ನ ತಂದೆಯನ್ನೆ ಮದುವೆಯಾಗಲು ಪ್ರಯತ್ನಿಸಿ ವಿಫಲವಾದಳು. ಇದಕ್ಕೆ ಆದಿಜಾಂಬವನು ಸಂಜೀವಿನಿ ಗಿಡದ ಬೇರನ್ನು ನೀಡಿ, ಮತಂಗ ಪರ್ವತದ ಹತ್ತಿರ ಕಳುಹಿಸಿದನಂತೆ. ಮುಂದೆ ಈ ಕಲಿಯುಗದಲ್ಲಿ ಪೂಜೆಗೆ ಅರ್ಹಳಾದಳೆಂದು ತಿಳಿದುಬರುತ್ತದೆ.[೨೩]

ಮಾತಂಗಿಯ ಕುರಿತು ಸಿಗುವ ಅನೇಕ ಐತಿಹ್ಯಗಳು ಒಂದೊಂದು ರೀತಿಯ ಮಹಿತಿಯನ್ನು ತಿಳಿಸುತ್ತಾ ಹೋಗುತ್ತವೆ. ಈ ಎಲ್ಲ ಐತಿಹ್ಯಗಳಲ್ಲಿ ಕಂಡುಬರುವ ಮುಖ್ಯ ಅಂಶವೆಂದರೆ 'ಮಾತಂಗಿಯು ಮತಂಗಮುನಿ, ಆದಿಜಾಂಬವ ಮುಂತಾದ ಮಾದಿಗ ಜನಾಂಗದ ಪುರುಷರೊಂದಿಗೆ ಸಂಬಂಧ ವ್ಯಕ್ತವಾಗುತ್ತದೆ. ಈ ಎಲ್ಲಾ ಸಂಬಂಧಗಳ ಜೊತೆಯಲ್ಲಿ ಮಾದಿಗರು ನಾವು 'ಮಾತಂಗಿಯ ಮಕ್ಕಳು' ಎಂದು ಕರೆದುಕೊಳ್ಳುತ್ತಿದ್ದು, ಈ ಹಿನ್ನೆಲೆಯಲ್ಲಿ ಮಾತಂಗಿ ಮತ್ತು ಮಾದಿಗ ಜನಾಂಗದ ನಡುವಿನ ಸಂಬಂಧ ಇರುವುದನ್ನು ಅರಿಯಬಹುದಾಗಿದೆ.

**ಹರಿಜನ ಕೇರಿ ದುರ್ಗಮ್ಮ**

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಅನೇಕ ಗ್ರಾಮಗಳ ಮಾದಿಗರ ಕೇರಿಗಳಲ್ಲಿ 'ದುರ್ಗಮ್ಮ' ಪೂಜೆಗೊಳ್ಳುತ್ತಿರುವುದು ಕಂಡುಬರುತ್ತದೆ. ''ದುರ್ಗಮ್ಮ ದುರ್ಗದ ಯುದ್ಧದ ದೇವತೆ``ಯಾಗಿದೆ.[೨೪]

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕು ಬಣವಿಕಲ್ಲು ಗ್ರಾಮವೊಂದರಲ್ಲಿ ವಿಶೇಷವಾದ ಜಾತ್ರೆಯನ್ನು ಮಾದಿಗರ ಕೇರಿಯಲ್ಲಿ 'ದುರ್ಗಮ್ಮ' ದೇವತೆಯ ಹೆಸರಲ್ಲಿ ಮಾಡುವರು. ಈ ಜಾತ್ರೆಗೆ ಸುತ್ತಮುತ್ತಲಿನ ಸುಮಾರು ಇಪ್ಪತ್ತು ಹಳ್ಳಿಗಳ ಮಾದಿಗರು ಭಾಗವಹಿಸುತ್ತಾರೆ. ೪ ದಿನಗಳ ಕಾಲ ನಡೆಯುವ ಈ ಜಾತ್ರೆಯಲ್ಲಿ ಗಂಗೆ ಪೂಜೆ ಅಥವಾ ಹೊಳೆಗೆ ಹೋಗುವುದು, ಬಲಿಕೊಡುವುದು, ಮುತ್ತೈದೆ ಹೆಣ್ಣು ಮಕ್ಕಳಿಂದ ಚರಗ ಚಲ್ಲುವುದು, ಆನಂತರ ಜಾತ್ರೆ ಅಥವಾ 'ಪರಸೆ'-ಹೀಗೆ ಕ್ರಮವಾಗಿ ನಡೆಯುತ್ತವೆ. ಈ ದುರ್ಗಮ್ಮನ ಪೂಜಾರಿಕೆಯು, ಮಾದಿಗರಲ್ಲಿ ಕಂಡುಬರುವ ಕುರಿಯರು ಎಂಬ ಬೆಡಗಿನವರಿಗೆ ಮಾತ್ರವೇ ಸೀಮಿತವಾಗಿದೆ.

**ಹೊಸೂರಮ್ಮನ ಜಾತ್ರೆ**

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಮಾರಮ್ಮನಹಳ್ಳಿಯಲ್ಲಿ 'ಹೊಸೂರಮ್ಮ' ದೇವತೆಯ ಹೆಸರಲ್ಲಿ ಮಾದಿಗರು ಜಾತ್ರೆ ಮಾಡುವುದು ವಿಶೇಷವಾಗಿ ಕಂಡುಬರುತ್ತದೆ. ಈ ಜಾತ್ರೆಯ ವಿಶೇಷವೆಂದರೆ ಮಾದಿಗ ಜನಾಂಗದಲ್ಲಿ ಕಂಡುಬರುವ ಬೆಡಗಿನಲ್ಲಿ ಒಂದಾದ 'ಐಹೊಳೆ' ಬೆಡಗಿನ ಅಣ್ಣ ತಮ್ಮಂದಿರು ಸೇರಿಕೊಂಡು ಆಚರಿಸುತ್ತಾರೆ. ಈ ದೇವತೆಯ ಪೂಜಾರಿಕೆಯು ಸಹ ಅದೇ ಬೆಡಗಿನವರಿಗೆ ಸೀಮಿತವಾಗಿದೆ. ಈ ಗ್ರಾಮದಲ್ಲಿ ಈ ದೇವತೆ ನೆಲೆಸಿದ ಬಗ್ಗೆ ಗ್ರಾಮದ ಹಿರಿಯರಾದ ಯರಪ್ಪ ಈ ರೀತಿ ಹೇಳುತ್ತಾರೆ : ಗುಡೆಕೋಟೆಯಲ್ಲಿ ನೆಲೆಸಿದ್ದ 'ಐಹೊಳೆ' ಬೆಡಗಿನ ಅಣ್ಣ ತಮ್ಮಂದಿರು ಹಿಂದೆ ಚರ್ಮದ ವ್ಯಾಪಾರ ಮಾಡಲು ಹೊಸಪೇಟೆಗೆ ಹೋಗಿದ್ದರು. ಅಲ್ಲಿಂದ ಬರುವಾಗ ದೊಡ್ಡವನು ಹೊಸೂರಮ್ಮ, ಚಿಕ್ಕವನು ಹುಲಿಗಮ್ಮನ ಜ್ಯೋತಿಯನ್ನು ತಂದಂದಿನಿಂದ, ಆರಾಧನೆ ಆರಂಭಗೊಂಡಿತು. ಗುಡೆಕೋಟೆಯಲ್ಲಿ ಸಣ್ಣವನು ಅಲ್ಲಿಯೇ ನೆಲೆಸಿದ್ದರಿಂದ ಅಲ್ಲಿ ಹೊಸೂರಮ್ಮನನ್ನು ಆರಾಧನೆ ಮಾಡುವುದು ಆರಂಭವಾಯಿತೆನ್ನುತ್ತಾರೆ. ಈ ರೀತಿ ನೆಲೆಗೊಂಡ ಹೊಸೂರಮ್ಮ ಜಾತ್ರೆಯನ್ನು ಶಿವರಾತ್ರಿಯ ಹಿಂದೆ ಅಥವಾ ಮುಂದೆ ನಡೆಸಲಾಗುತ್ತದೆ. ಐದು ಇಲ್ಲವೇ ಒಂಬತ್ತು ಇಲ್ಲವೇ ಹನ್ನೆರಡು ವರ್ಷಗಳಿಗೊಮ್ಮೆ ಆಚರಿಸುವ ಈ ಜಾತ್ರೆಗೆ ಆ ಗ್ರಾಮದ ಸುತ್ತ ಮುತ್ತ ಇರುವ ಗುಡೆಕೋಟೆ, ನಾಗರ ಹುಣಸೆ, ದಿಬ್ಬದಹಳ್ಳಿ, ಹುರುಡಿಹಳ್ಳಿ, ಬಣವಿಕಲ್ಲು, ಭೀಮಸಮುದ್ರ, ಕುರಿಹಟ್ಟಿಗಳಲ್ಲಿ ನೆಲೆಸಿರುವ 'ಐಹೊಳೆ' ಬೆಡಗಿನವರು ಬಂದು ಜಾತ್ರೆಯಲ್ಲಿ ಭಾಗವಹಿಸುತ್ತಾರೆ. ಜೊತೆಗೆ ಆ ಕುಲದ ನೆಂಟರಿಷ್ಟರು ಸಹ ಬರುತ್ತಾರೆ. ಮೂರು ದಿನಗಳ ಕಾಲ ನಡೆಯುವ ಈ ಜಾತ್ರೆಗೆ ತಗಲುವ ಖರ್ಚನ್ನು ಕೇವಲ 'ಐಹೊಳೆ' ಬೆಡಗಿನ ಅಣ್ಣತಮ್ಮಂದಿರಿಂದ ಮಾತ್ರವೇ ವಸೂಲು ಮಾಡಲಾಗುತ್ತದೆ. ಮೊದಲನೆಯ ದಿನ ಗಂಗೆ ಪೂಜೆಗೆ 'ಹೊಸೂರಮ್ಮ' ದೇವರನ್ನು ಹೊರಡಿಸಲಾಗುವುದು. (ಈಗ ಆ ಮೂರ್ತಿ ಇಲ್ಲ) ಹೊರಡುವ ಮೊದಲು ಸಿಡೇಗಲ್ಲಿನ 'ಚೌಡಿಕೆ' ತಿಪ್ಪಯ್ಯ ತನ್ನ 'ಚೌಡಿಕೆ'ಯನ್ನು ತಂದು ವಾದ್ಯ ಮಾಡಿದ ನಂತರ ದೇವರನ್ನು ಹೊರಡಿಸಲಾಗುವುದು. ಅಂದು ಹೊಳೆಗೆ ಹೋಗಿ ಗಂಗೆ ಪೂಜೆ ಮಾಡಿಕೊಂಡು ಬರುತ್ತಾರೆ.

ಎರಡನೆಯ ದಿನ 'ಕೋರಿ' ಹುಡುಗನ ತಲೆಯ ಮೇಲೆ 'ಗಟೆ' ಹೊರಿಸಿ ದೇವಸ್ಥಾನದ ಹತ್ತಿರ ತಂದು ಅದನ್ನು ಕೆಳಗಿಟ್ಟು ಅಲ್ಲಿ ಐದು ಜನ 'ಕೋರಿ' ಹುಡುಗರು ಅದನ್ನು ಮುಟ್ಟುತ್ತಾರೆ. ಆಗ 'ಚೌಡಿಕೆ' ಬಾರಿಸಿಕೊಂಡು ಪದ ಹಾಡುವುದನ್ನು ನಿಲ್ಲಿಸಿದಾಗ ಅದರ ಮೇಲಿನ ಕೈಯನ್ನು ಹಿಂದಕ್ಕೆ ತೆಗೆದುಕೊಳ್ಳುತ್ತಾರೆ. ಮೂರನೆ ದಿನ 'ಕುಂಬಗಳನ್ನು ಹೊರಿಸಿಕೊಂಡು ಊರಲ್ಲಿ ಸುತ್ತಿ ವಾಪಸ್ಸು ದೇವಾಲಯದ ಬಳಿಬರುತ್ತಾರೆ. ಆಗ ಅಲ್ಲಿ ಜಾತ್ರೆಗೆ ಬಂದ ನೆಂಟರಿಷ್ಟರು 'ಮುಯ್ಯಿ' ಮಾಡುತ್ತಾರೆ. ಅಲ್ಲಿರುವ ಹೂವು ಹಣ್ಣು ಇತ್ಯಾದಿಯನ್ನು ಐಹೊಳೆ ಬೆಡಗಿನ ಅಣ್ಣ ತಮ್ಮಂದಿರು ಹಂಚಿಕೊಳ್ಳುತ್ತಾರೆ. ಅಲ್ಲಿಗೆ ಮೂರು ದಿನಗಳ ಜಾತ್ರೆ ಮುಗಿಯುತ್ತದೆ. ಆದರೆ ಈ ಜಾತ್ರೆಯಲ್ಲಿ ವಿಶೇಷವಾಗಿ ಕಂಡುಬರುವುದೇನೆಂದರೆ ಆ ಮೂರು ದಿನಗಳಲ್ಲಿ ಯಾವುದೇ(ಬೇಟೆ ಕಡಿಯುವುದಿಲ್ಲ) 'ಬಲಿ' ಕೊಡುವುದಿಲ್ಲ. ಮೂಲದಲ್ಲಿ ಒಂದೇ ಕುಟುಂಬಕ್ಕೆ ಸೇರಿದ ಬೆಡಗಿನವರು ಜೀವನ ನಿರ್ವಹಣೆಗಾಗಿ ಬೇರೆ ಬೇರೆ ಕಡೆ ವಲಸೆ ಹೋಗಿ ಅಲ್ಲಿಯೇ ನೆಲೆಸಿದ್ದು ಅವರೆಲ್ಲರೂ ಒಂದು ಕಡೆ ಸೇರಿ ಸಂತೋಷ, ಸಂಭ್ರಮ ಹಂಚಿಕೊಳ್ಳಲು ತಮ್ಮ ಮನೆದೇವರ ಜಾತ್ರೆಯನ್ನು ಆಚರಿಸಲು ಈ ರೀತಿ ಜಾತ್ರೆ ಆರಂಭಿಸಿರಬಹುದು.

ಎಳವಮ್ಮನ ಜಾತ್ರೆ

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ನೆರ್ಲಗುಂಟೆ ಗ್ರಾಮದಲ್ಲಿ ಈ ಜಾತ್ರೆ ನಡೆಯುತ್ತದೆ. ಮಾದಿಗರು ಮಾತ್ರವೇ ಆಚರಿಸುವ ಜಾತ್ರೆ ಇದಾಗಿದೆ. ಈ ಜಾತ್ರೆಯು ಐದು, ಇಲ್ಲವೇ, ಒಂಬತ್ತು ಇಲ್ಲವೇ ಹನ್ನೆರಡು ವರ್ಷಗಳಿಗೊಮ್ಮೆ, ಶೂನ್ಯಮಾಸದಲ್ಲಿ ಮೂರು ದಿನಗಳ ಕಾಲ ನಡೆಯುತ್ತದೆ. ಈ ಎಳವಮ್ಮ ಕುರಿತ ಒಂದು ಐತಿಹ್ಯ ಹೀಗಿದೆ : 'ಹಿಂದೆ ಇಂಪ್ಲಿ' ಕಾಯಿಲೆ(ಅಂದರೆ ಮೈಮೇಲೆಲ್ಲ ಗುಳ್ಳೆಗಳಾಗುವುದು) ಬಂದು ಇದರ ವಾಸನೆಗೆ ಜನ ಸಾಯುತ್ತಿದ್ದರು. ಆಗ 'ಎಳವಮ್ಮ' ಎನ್ನುವಂಥ ಮಾರಿ ನಾನು ಇಂಪ್ಲಿ ಕಾಯಿಲೆಯನ್ನು ಹೊಡೆದೊಡಿಸಿ ನಿಮ್ಮನ್ನೆಲ್ಲಾ ರಕ್ಷಣೆ ಮಾಡುತ್ತೇನೆ ಎಂದು ಭರವಸೆ ಕೊಟ್ಟು ಆ ಕಾಯಿಲೆಯಿಂದ ಇವರನ್ನು ರಕ್ಷಣೆ ಮಾಡುತ್ತಾಳೆ. ಅದಕ್ಕೆ ಪ್ರತಿಯಾಗಿ ಮಾದಿಗರು 'ಎಳವಮ್ಮ' ಮಾರಿಯ ಹೆಸರಲ್ಲಿ ಮೂರು ದಿನಗಳ ಕಾಲ ಜಾತ್ರೆ ಮಾಡುತ್ತಾರೆ. ಮೊದಲನೆ ದಿನ ಹೊಸಮಡಕೆಯನ್ನು ತಂದು ಅವುಗಳಿಗೆಲ್ಲ ಬಿಳಿ ಸುಣ್ಣದಿಂದ ಚುಕ್ಕೆ ಚುಕ್ಕೆಗಳನ್ನು ಇಟ್ಟು ಅಲಂಕಾರ ಮಾಡುತ್ತಾರೆ. ಅನ್ನವನ್ನು ಅದರ ಒಳಗಡೆ ಹಾಕಲಾಗಿದ್ದು, ಇದನ್ನು 'ಜಾನಗದ ಸೊರೆ' ಎಂದು ಕರೆಯುತ್ತಾರೆ. ಈ ಸೊರೆಯನ್ನು ಮದುವೆಯಾಗದ ಹುಡುಗ ಅಥವಾ ಹುಡುಗಿಯರ ತಲೆ ಮೇಲೆ ಹೊರಿಸಿಕೊಂಡು ಹೋಗಿ ಎಳವಮ್ಮನಿಗೆ ಎಡೆ ಹಾಕಲಾಗುತ್ತದೆ. ಆನಂತರ ಅಲ್ಲಿಗೆ ತಂದಿರುವ ಎಲ್ಲಾ ಮಡಿಕೆಗಳ ಅನ್ನವನ್ನು ಒಂದು ಕಡೆ ಹಾಕಿ 'ದಾಸೋಹ' ಮಾಡುತ್ತಾರೆ. ಎರಡನೆಯ ದಿನ 'ಬಲಿ' ಕೊಡುವುದು ನಡೆಯುತ್ತದೆ. ಮೂರನೆಯ ದಿನ ದೇವರಿಗೆ ಎಡೆ ಹಾಕಿರುವ ಹೂ, ಹಣ್ಣು, ಕಾಯಿ ಇತ್ಯಾದಿಗಳನ್ನು ಹಂಚಿಕೆ ಮಾಡಲಾಗುತ್ತದೆ.

### ದೇವಿಗೆರೆ ಕರಿಯಮ್ಮ

ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ದೇವಿಗೆರೆ ಗ್ರಾಮದಲ್ಲಿ ಮಾದಿಗರು ಮಾತ್ರವೇ ಆಚರಿಸುವ ಜಾತ್ರೆ ಇದು. ಇದನ್ನು ಪ್ರತಿವರ್ಷ ಯುಗಾದಿ ಹಬ್ಬದ ನಂತರ ಆಚರಿಸುತ್ತಾರೆ. ಒಂದು ವಾರಗಳ ಕಾಲ ನಡೆಯುವ ಈ ಜಾತ್ರೆಯಲ್ಲಿ ಆ ಗ್ರಾಮದ ಸುತ್ತ ಮುತ್ತಲಿರುವ ಏಳು ಹಳ್ಳಿಗಳ ಮಾದಿಗರು ಭಾಗವಹಿಸುವರು. ಮೂರು ದಿನಗಳ ಕಾಲ 'ಮದಲಿಂಗಿತ್ತಿ' ಶಾಸ್ತ್ರದ ಪೂಜೆ ನಡೆಯುತ್ತದೆ. ನಾಲ್ಕನೆಯ ದಿನ ಬೇವಿನ ಸೀರೆ ಉಡಿಸಿಲಾಗುತ್ತದೆ. ಐದನೆಯ ದಿನ 'ಉತ್ಸವ' ಕಾರ್ಯ ಮಾಡಲಾಗುತ್ತದೆ. ಆರನೆಯ ದಿನದಲ್ಲಿ ತೇರು ಎಳೆಯುತ್ತಾರೆ. ಏಳನೆಯ ದಿನದಲ್ಲಿ ಸಿಡಿ ಆಡಿ, ಮಾರನೆ ದಿನ 'ಒಕುಳಿ'(ಬಣ್ಣ ಎರಚುವುದು) ಆಡುತ್ತಾರೆ. ಈ ರೀತಿ ಕ್ರಮವಾಗಿ ಕರಿಯಮ್ಮ ದೇವತೆ ಜಾತ್ರೆನಡೆಯುತ್ತದೆ. ಇದಲ್ಲದೇ ಅದೇ ಊರಿನಲ್ಲಿ 'ಬಸವನರು' ಬೆಡಗು ಅಥವಾ ಗೋತ್ರಕ್ಕೆ ಸಂಬಂಧಿಸಿದ ಲಕ್ಷ್ಮದೇವಮ್ಮ(ಮನೆದೇವರು)ನ ಜಾತ್ರೆಯನ್ನು ಸಹ ಮಾದಿಗರು ಮಾಡುವುದು ಕಂಡುಬರುತ್ತದೆ. ಈ ಜಾತ್ರೆಯನ್ನು ೧೨ ವರ್ಷಗಳಿಗೊಮ್ಮೆ ಮಾಡಲಾಗುತ್ತಿದ್ದು ಮೂರು ದಿನಗಳ ಕಾಲ ನಡೆಯುತ್ತದೆ. ಈ ಜಾತ್ರೆಯಲ್ಲಿ ಯಾವುದೇ ಬಲಿ ಕೊಡುವುದಿಲ್ಲ.

### ಗಲ್ಲೆಮ್ಮ

ಮಾದಿಗರು ಮಾತ್ರವೇ ವಿಶೇಷವಾಗಿ ಆರಾಧಿಸುವ ದೈವ 'ಗಲ್ಲೆಮ್ಮ'. ಹಿಂದೊಮ್ಮೆ ಮಾದಿಗರ ಕುಲಕಸುಬು ಚರ್ಮವೃತ್ತಿಯಾಗಿದ್ದು ಚರ್ಮ ಹದಮಾಡಲು ಬಳಸುತ್ತಿದ್ದ 'ಕರಿಬಾನಿ'ಯನ್ನು 'ಗಲ್ಲೆ' ಎಂದು ಕರೆಯಲಾಗುತ್ತಿತ್ತು. ಅದು ಈಗ 'ಗಲ್ಲೆಮ್ಮ' ಆಗಿ ಪೂಜಿಸಲ್ಪಡುತ್ತಿದೆ. ಇಂದು ಅದರ ಬಳಕೆ ನಿಂತು ಹೋಗಿದ್ದರೂ ಅನೇಕ ಹಬ್ಬ, ಜಾತ್ರೆಗಳ ಸಂದರ್ಭದಲ್ಲಿ ಮಾದಿಗರಿಂದ ಪೂಜೆಗೆ ಒಳಪಟ್ಟಿದೆ. ಈ ರೀತಿ ಪೂಜಿಸುವ 'ಗಲ್ಲೆಮ್ಮ'ಗಳು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಅನೇಕ ಹಳ್ಳಿಗಳಲ್ಲಿ ಕಂಡುಬರುತ್ತವೆ. 'ಗಲ್ಲೆಮ್ಮ'ನ ಹೆಸರಿನಲ್ಲಿ(ಯುಗಾದಿ ಹಬ್ಬದ ನಂತರದಲ್ಲಿ) ಹಬ್ಬವೊಂದನ್ನು ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಕಸ್ತೂರಿರಂಗಪ್ಪನ ಹಳ್ಳಿಯಲ್ಲಿ ಮಾದಿಗರು ಮಾಡುತ್ತಾರೆ. ಅಂದು ಪ್ರತಿಯೊಂದು ಮನೆಯ ಹೆಣ್ಣುಮಕ್ಕಳು 'ಗಲ್ಲೆಮ್ಮ'ನಿಗೆ ಆರತಿ ಎತ್ತುತ್ತಾರೆ.

### ಪೆನ್ನ ಓಬಳಸ್ವಾಮಿ

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಬಿ.ಜಿ.ಕೆರೆ ಗ್ರಾಮದಲ್ಲಿ ಮಾದಿಗರ 'ಹೆಗ್ಗೇರು' ಬೆಡಗಿನ ಮನೆದೇವರು ಪೆನ್ನ ಓಬಳಸ್ವಾಮಿಯಾಗಿದೆ. ಈ ದೇವರ ಹೆಸರಲ್ಲಿ ಜಾತ್ರೆಯನ್ನು ೩ ಅಥವಾ ೫, ಅಥವಾ ೯ ಅಥವಾ ೧೨ ವರ್ಷಗಳಿಗೊಮ್ಮೆ ಮಾಡುತ್ತಾರೆ. ಮೂರು ದಿನಗಳ ಕಾಲ ನಡೆಯುವ ಈ ಜಾತ್ರೆಯಲ್ಲಿ ಗ್ರಾಮದ ಇತರೆ ಬೆಡಗಿನ ಮಾದಿಗರು ಭಾಗವಹಿಸುತ್ತಾರೆ. ಮೊದಲನೆಯ ದಿನ ಗಂಗೆಪೂಜೆ, ಎರಡನೆಯ ದಿನ 'ಗಟೆ ಪೂಜೆ, ಮೂರನೆಯ ದಿನ ಹೂ, ಹಣ್ಣು, ಕಾಯಿಗಳ ಹಂಚಿಕೆ ನಡೆಯುತ್ತದೆ. ಈ ಜಾತ್ರೆಯಲ್ಲಿ ಯಾವುದೇ ಬಲಿ ಕೊಡುವುದಿಲ್ಲ.

ಈ ರೀತಿಯಲ್ಲಿ ಮಾದಿಗರು ಮೇಲೆ ತಿಳಿಸಿರುವ ಸ್ತ್ರೀ ಮತ್ತು ಪುರುಷ ದೈವಗಳನ್ನು ಆರಾಧಿಸುವುದು ಮಾತ್ರವಲ್ಲದೆ ಹರಳಯ್ಯ, ಮರುಳಸಿದ್ದ, ಈರಗಾರ ಮುಂತಾದ ದೇವರುಗಳನ್ನು ಸಹ ಆರಾಧಿಸುವುದು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕಂಡುಬರುತ್ತದೆ. ಅಧ್ಯಯನ ಸಂದರ್ಭದಲ್ಲಿ ವಿಶೇಷವಾಗಿ ಕಂಡುಬಂದ ಅಂಶವೆಂದರೆ ಮಾದಿಗರ ಪ್ರತಿಯೊಂದು ಬೆಡಗು ಅಥವಾ ಗೋತ್ರದವರು ಒಂದೊಂದು ಮನೆದೇವರನ್ನು ಹೊಂದಿದ್ದು, ಆ ಸಂಬಂಧ ನಡೆಸುವ ಜಾತ್ರೆ ಹಬ್ಬಗಳನ್ನು ೩,೬,೯ ಇಲ್ಲವೇ ೧೨ ವರ್ಷಗಳಿಗೊಮ್ಮೆ ಮಾಡಲಾಗುತ್ತದೆ. ಈ ಸಂದರ್ಭದಲ್ಲಿ ಯಾವುದೇ 'ಬಲಿ' ಕೊಡುವುದಿಲ್ಲ. ಈ ಬಗೆಯಲ್ಲಿ ಮಾದಿಗರ ಪ್ರತಿಯೊಂದು ಬೆಡಗು ಅಥವಾ ಗೋತ್ರದವರು ಆರಾಧಿಸುವ ಮನೆದೇವರ ಜಾತ್ರೆ ಕುರಿತು ವಿಶೇಷವಾಗಿ ಅಧ್ಯಯನ ಕೈಗೊಂಡಲ್ಲಿ ಇವರು ಆರಾಧಿಸುವ ಮನೆದೇವರುಗಳ ಮೂಲ ಯಾವುದು, ಯಾವ ಕಾರಣಗಳಿಗಾಗಿ ಒಂದೇ ಮನೆದೇವರಿಗೆ ಹೊಂದಿರುವ ಅನೇಕರು ವಿವಿಧ ಪ್ರದೇಶದಲ್ಲಿ ನೆಲೆಸಿದ್ದಾರೆ. ಮುಂತಾದ ವಿಷಯಗಳ ಕುರಿತು ಸಮಗ್ರ ಚಿತ್ರಣ ದೊರೆಯುತ್ತದೆ.

## ೭.೩ ಮಾದಿಗರ ಗುರು ಪರಂಪರೆ

### ಆದಿಜಾಂಬವ ಮಹಾಸಂಸ್ಥಾನ

ಮಾದಿಗ ಜನಾಂಗ ಗುರುಪರಂಪರೆಯೊಂದನ್ನು ಹೊಂದಿದ್ದು, ಮೂಲ ಪುರುಷನಾದ ಆದಿಜಾಂಬವನ ಹೆಸರಲ್ಲಿ 'ಆದಿಜಾಂಬವ ಮಹಾಸಂಸ್ಥಾನ' ಮಠವೊಂದು ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ಕೋಡಿಹಳ್ಳಿ ಗ್ರಾಮದಲ್ಲಿದೆ. ಇದು ಮಾದಿಗರ ಸಾಂಸ್ಕೃತಿಕ ಕೇಂದ್ರವಾಗಿದೆ. ಈ ಮಠ ಇರುವುದರ ಬಗ್ಗೆ ಥರ್‌ಸ್ಟನ್ ತನ್ನ ಕೃತಿಯಲ್ಲಿ ದಕ್ಷಿಣ ಭಾರತದಲ್ಲಿ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳನ್ನು ದಾಖಲಿಸಿದ್ದಾನೆ. ಕರ್ನಾಟಕದಲ್ಲಿ ಮಾದಿಗ ಜನಾಂಗಕ್ಕೆ ಸಂಬಂಧಿಸಿದಂತೆ ಸ್ಥಾಪನೆಗೊಂಡ ಮೊಟ್ಟ ಮೊದಲ ಮಠ ಇದಾಗಿದೆ. ಈ ಮಠವು ಸುಮಾರು ಐದು ನೂರು ವರ್ಷಗಳ ಚರಿತ್ರೆಯನ್ನೂ ಹೊಂದಿದೆ. ಸುಮಾರು ೪೦೦- ೫೦೦ ವರ್ಷಗಳ ಹಿಂದೆ ಆನಂದ ಮುನಿ ಸ್ವಾಮಿಗಳು ಕಡಪಾದಿಂದ ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕು ಕೋಡಿಹಳ್ಳಿಗೆ ಬಂದು ಮಠವನ್ನು ಸ್ಥಾಪನೆಮಾಡಿದರು.[೨೫] ಆನಂದ ಮುನಿಗಳಿಂದ ಸ್ಥಾಪನೆಗೊಂಡ ಆದಿಜಾಂಬವ ಮಠದಲ್ಲಿ ಗುರು ಪರಂಪರೆಗೆ ಸೇರಿದ ರುದ್ರಾಕ್ಷಿ ಮುನಿ ದೇಶೀಕೇಂದ್ರ ಸ್ವಾಮಿಗಳು ಮಠದ ಹೊಣೆಗಾರಿಕೆ ಹೊಂದಿದ್ದಾರೆ. ಈ ಮಠದ ವೈಶಿಷ್ಟ್ಯವೆಂದರೆ ಮದುವೆಯಾದವರು ಸ್ವಾಮಿಗಳಾಗಿರುವುದು.

### ಮೂಲ

ಆದಿ ಜಾಂಬವ ಗುರುಪರಂಪರೆಗೆ ಸಂಬಂಧಿಸಿದಂತೆ ವಿವಿಧ ಕಾಲಘಟ್ಟಗಳಲ್ಲಿ ಆಡಳಿತ ನಡೆಸುತ್ತಿದ್ದ ಅರಸರು, ಅಧಿಕಾರಿಗಳು ನೀಡಿರುವ ಅನೇಕ ದಾಖಲೆಗಳು ಇದ್ದು, ಅವು ಪರ್ಶಿಯನ್,

ಉರ್ದು, ತೆಲುಗು ಹಾಗೂ ಕನ್ನಡ ಭಾಷೆಗಳಲ್ಲಿವೆ. ಈ ಅಂಶ ಗುರುಪರಂಪರೆಗೆ ಸೇರಿದ ಮಾದಿಗರ ಪಂಚ ಪೀಠಗಳಲ್ಲಿ ಒಂದಾದ ಕೊಂಕಲ್ಲು ಪೀಠಕ್ಕೆ ಸೇರಿದ ಒಂಕಾರ ಮುನಿಸ್ವಾಮಿಯವರಿಂದ ತಿಳಿದುಬರುತ್ತದೆ. ಆದಿಜಾಂಬವ ಹೆಸರಲ್ಲಿ ಪಂಚಪೀಠಗಳು ಸ್ಥಾಪನೆಗೊಂಡಿರುವುದು ಕಂಡುಬರುತ್ತದೆ. ಈ ಪೀಠಗಳಿಗೆ ಸಂಬಂಧಿಸಿದ ವಿಷಯವನ್ನು ಕೆದಕಿನೋಡಿದರೆ ಅಶ್ಚರ್ಯ ಹಾಗೂ ಸ್ವಾರಸ್ಯಕರ ಸಂಗತಿಗಳು ದೊರೆಯುತ್ತವೆ. ಆದಿಜಾಂಬವರ ಮೂಲಮಠ ಆಂಧ್ರದಲ್ಲಿರುವ ಶ್ರೀಶೈಲ. ಇದು ಪಂಚಪೀಠಗಳಲ್ಲಿ ಒಂದಾಗಿದೆ. ಶ್ರೀ ವೆಂಕಟಸ್ವಾಮಿಯವರು, ಶ್ರೀ ಚಂದಮುನಿ ಸ್ವಾಮೀಜಿಯವರು ಮೂಲ ಪೀಠದ ಪ್ರಪ್ರಥಮ ಗುರುಗಳಾಗಿದ್ದರು.[೨೬] ಈ ಅಂಶವು ಮಾದಿಗರ ಮಠದ ಮೂಲ ಪೀಠ ಶ್ರೀಶೈಲ ಎಂಬುದನ್ನು ತಿಳಿಸುತ್ತದೆ. ಇನ್ನುಳಿದ ನಾಲ್ಕು ಮಠಗಳೆಂದರೆ ಕಡಪ ಪೀಠ, ಉಜ್ಜಿನಿಪೀಠ, ಕೊಂಕಲ್ಲುಪೀಠ ಹಾಗೂ ಕೊಡಿಹಳ್ಳಿ ಪೀಠ-ಈ ಪೀಠಗಳು ಏಕಕಾಲದಲ್ಲಿ ಸ್ಥಾಪಿತಗೊಂಡಿರುವುದಿಲ್ಲ. ಶ್ರೀಶೈಲ ಮತ್ತು ಬೆಜವಾಡಗಳಲ್ಲಿದ್ದ ಮಠಗಳು ಕ್ಷೀಣಿಸಲು ಚಂದಮುನಿ ಸ್ವಾಮಿಗಳು ಸೂಕ್ತವಾದ ಸ್ಥಳದಲ್ಲಿ ಮಠ ಸ್ಥಾಪಿಸಲು ಕಡಪಕ್ಕೆ ಬಂದರು.[೨೭] ಆಗ ಕಡಪದಲ್ಲಿ ಆಳ್ವಿಕೆ ಮಾಡುತ್ತಿದ್ದ ನವಾಬರು ಇವರನ್ನು ವಿವಿಧ ರೀತಿಯ ಪರೀಕ್ಷೆಗೆ ಗುರಿಮಾಡಿದಾಗ ಚಂದಮುನಿಸ್ವಾಮಿಗಳು ಅನೇಕ ಪವಾಡಗಳನ್ನು ಮಾಡಿ ತೋರಿಸಿದರು ನವಾಬನು ಈ ಪವಾಡವನ್ನು ನೋಡಿ ಸ್ವಾಮಿಗಳೇ ನೀವು ದೊಡ್ಡ ಸಾಧ್ವಿಗಳು ನಾವು ತಿಳಿಯದೆ ಅನೇಕ ಪರೀಕ್ಷೆಗಳಿಗೆ ನಿಮ್ಮನ್ನು ಗುರಿಮಾಡಿದೆವು. ನಮ್ಮ ಅಕ್ಷಮ್ಯ ಅಪರಾಧವನ್ನು ಮನ್ನಿಸಿ ನಾವು ಕೊಡುವ ಅಲ್ಪ ಕಾಣಿಕೆಯನ್ನು ಸ್ವೀಕರಿಸಿ ಈ ಊರಿನಲ್ಲಿಯೇ ನೆಲೆಸಬೇಕೆಂದು ಬೇಡಿಕೊಂಡನು. ಮಠ ನಿರ್ಮಿಸಲು ೪೦ ಎಕರೆ ಭೂಮಿಯನ್ನು ಚಂದಮುನಿ ಸ್ವಾಮಿಗಳಿಗೆ ದಾನವಾಗಿ ಕೊಟ್ಟನು. ಸ್ವಾಮಿಗಳು ಈ ಸ್ಥಳಕ್ಕೆ ಮಸಾಯಿ ಪೇಟೆ ಎಂದು ನಾಮಕರಣ ಮಾಡಿದರು.[೨೮] ಈ ಬಗೆಯಲ್ಲಿ ಮಠಗಳ ಸ್ಥಾಪನೆಯಾಯಿತು. ಆದಿಜಾಂಬವ ಸ್ವಾಮಿಗಳು ಉಜ್ಜಿನಿಯಿಂದ ಶೃಂಗೇರಿಗೆ, ಶೃಂಗೇರಿಯಿಂದ ಶ್ರೀಶೈಲಕ್ಕೆ, ಶ್ರೀಶೈಲದಿಂದ ಬೇಜವಾಡ(ಆಂಧ್ರ)ಕ್ಕೆ, ಬೇಜವಾಡದಿಂದ ಕಡಪ, ಕಡಪದಿಂದ ಕೊಂಕಲ್ಲುಮಠ, ಕೊಂಕಲ್ಲು ಮಠದಿಂದ ನೆಲಮಂಗಲಕ್ಕೆ ಸಂಚರಿಸಿದ್ದರಿಂದ ಒಟ್ಟು ಐದು ಪೀಠಗಳು ಸ್ಥಾಪನೆಗೊಳ್ಳಲು ಅವಕಾಶವಾಯಿತು. ಹೀಗೆ ಸ್ಥಾಪನೆಗೊಂಡ ಪಂಚಪೀಠಗಳಲ್ಲಿ ಕೊಂಕಲ್ಲು ಮತ್ತು ಕೋಡಿಹಳ್ಳಿ ಪೀಠಗಳಲ್ಲಿ ಮಾತ್ರವೇ ಗುರುಪರಂಪರೆಯವರು ಇರುವುದು ಕಂಡುಬರುತ್ತದೆ. ಕೊಂಕಲ್ಲು ಪೀಠದಲ್ಲಿ ಓಂಕಾರ ಮುನಿಸ್ವಾಮಿಗಳನ್ನೊಳಗೊಂಡಂತೆ ಸದಾನಂದ ಮುನಿಸ್ವಾಮಿಗಳು ಇದ್ದರೆ, ಕೋಡಿಯಲ್ಲಿ ರುದ್ರಾಕ್ಷಿ ಮುನಿಗಳು ಇದ್ದಾರೆ.

**ಕೋಡಿಹಳ್ಳಿ ಮಠದ ಗುರುಪರಂಪರೆ**

ಆನಂದ ಮುನಿಸ್ವಾಮಿಯವರಿಂದ ಸ್ಥಾಪನೆಗೊಂಡ ಕೋಡಿಹಳ್ಳಿ ಆದಿಜಾಂಬವ ಮಹಾಸಂಸ್ಥಾನ ಮುಂದುವರಿದು ಶಕ್ತಿಮುನಿ ಸ್ವಾಮಿಜಿಯುವರು, ಮಾರ್ಕಂಡಮುನಿ ಸ್ವಾಮಿಜಿಯುವರು, ಅಂಜಾನಂದ ಮುನಿ ಸ್ವಾಮಿಜಿಯುವರು, ಆದಿ ನಾರಾಯಣಮುನಿ ಸ್ವಾಮಿಜಿಯವರು, ಸರ್ವಾಗಮುನಿಸ್ವಾಮಿಜಿ

ಯವರು, ಅಗಸ್ತ್ಯ ಮುನಿ ಸ್ವಾಮಿಯವರು, ಸರ್ವಾಗಮುನಿಸ್ವಾಮಿಜಿಯವರು ಅಗಸ್ತ್ಯಮುನಿ ಸ್ವಾಮಿಯವರು, ಮಲ್ಲಮುನಿ ಸ್ವಾಮಿಜಿಯವರು, ಅಕಿಲಾಂಡ ಮುನಿಸ್ವಾಮಿಜಿಯವರು ಕೋಡಿಮಠದಲ್ಲಿ ಐಕ್ಯರಾಗಿರುತ್ತಾರೆ. ಶ್ರೀ ರುದ್ರಾಕ್ಷಿ ಮುನಿದೇಶಿಕೇಂದ್ರ ಸ್ವಾಮಿಜಿಯವರು ಮತ್ತು ಶ್ರೀ ಮಾರ್ಕಾಡಮುನಿ ಸ್ವಾಮಿಜಿಯವರು ಕೋಡಿಹಳ್ಳಿಮಠ ಮತ್ತು ನೆಲಮಂಗಲದಲ್ಲಿರುವ ಶಾಖಾ ಮಠಗಳನ್ನು ನೋಡಿಕೊಳ್ಳುತ್ತಿದ್ದಾರೆ.[೫೯] ಹೀಗೆ ಆದಿಜಾಂಬವ ಮಠ ಗುರುಪರಂಪರೆಗೆ ಸೇರಿದ ಸ್ವಾಮಿಗಳು ಇದದ್ದು ತಿಳಿದುಬರುತ್ತದೆ. ಈಗಿನ ಸ್ವಾಮಿಗಳು ಕೋಡಿಹಳ್ಳಿ ಪೀಠದ ರುದ್ರಾಕ್ಷಿ ಮುನಿಗಳು. ಇವರಲ್ಲದೆ ಹಿರಿಯೂರು ತಾಲ್ಲೂಕಿನ ಕೊಡಿಹಳ್ಳಿಯಲ್ಲಿ ಮಾರ್ಕಂಡಯ್ಯಮುನಿ, ಸಾನಂದ ಮುನಿ. ಇದೇ ತಾಲ್ಲೂಕಿನ ಹೇಳನಾಡು ಗ್ರಾಮದಲ್ಲಿ ಮುಲ್ಲಾಮುನಿ, ಲಕ್ಕಿಹಳ್ಳಿಯಲ್ಲಿ ಆನಂದಮುನಿಗಳು, ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ ಸದಾನಂದಮುನಿ(ಈಗ ಇಲ್ಲ), ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಬಿ.ಎ.ರುದ್ರಮುನಿ, ಬಳ್ಳಾರಿ ಮಾರ್ಗದ ಕೆರೆಕೊಂಡಾಪುರದಲ್ಲಿ ಸರ್ವಾಂಗಮುನಿ ಹಾಗೂ ಚಿತ್ರದುರ್ಗ ತಾಲ್ಲೂಕಿನ ಚಿಕ್ಕೇನಹಳ್ಳಿಯಲ್ಲಿ ರಾಮಸ್ವಾಮಿ(ಈಗ ಇಲ್ಲ) ಎಂಬುವರು ಗುರುಪರಂಪರೆಗೆ ಸೇರಿದ ಸ್ವಾಮಿಗಳಾಗಿದ್ದಾರೆ. ಈ ರೀತಿ ಮಾದಿಗ ಜನಾಂಗದ ಮಠಕ್ಕೆ ಸಂಬಂಧಿಸಿದ ಅನೇಕ ಕುಟುಂಬಗಳು ಅಲ್ಲಲ್ಲಿ ನೆಲೆಸಿರುವುದು ಕಂಡುಬರುತ್ತದೆ.

### ಮಠದ ಅಭಿವೃದ್ಧಿ ಕಾರ್ಯ

ಮಾದಿಗ ಜನಾಂಗದ ಯಾವುದೇ ರೀತಿಯ ಸಹಕಾರವಿಲ್ಲದೇ ಮಠವು ಆರ್ಥಿಕವಾಗಿ ಹಿಂದುಳಿದಿದ್ದು ಈ ಸಮುದಾಯದಿಂದ ನಿರ್ಲಕ್ಷ್ಯಕ್ಕೊಳಪಟ್ಟಿದೆ. ಆದರೂ ಆದಿಜಾಂಬವ ಮಠವು ಕೆಲವೊಂದು ಶಾಲೆಗಳನ್ನು ತೆರೆದು ಶಿಕ್ಷಣ ಕಲಿಯಲು ಅವಕಾಶ ಮಾಡಿಕೊಟ್ಟಿದೆ. ಹಿರಿಯೂರು ತಾಲ್ಲೂಕು ಆದಿವಾಲದಲ್ಲಿ ಕೋಡಿಹಳ್ಳಿ ಮಠದ ಶಾಖಾ ಮಠವಿದ್ದು ಈ ಮಠವನ್ನು ಶ್ರೀ ರುದ್ರಾಕ್ಷಿಮುನಿದೇಶಿಕೇಂದ್ರ ಸ್ವಾಮಿಜಿಯವರು ನೋಡಿಕೊಳ್ಳುತ್ತಿದ್ದಾರೆ. ಈ ಶಾಖಾ ಮಠದ ನೂತನ ಕಟ್ಟಡದ ನಿರ್ಮಾಣಕ್ಕೆ ಅಮೇರಿಕದಲ್ಲಿರುವ ವಿ.ಸೀ.ಸೀತರಾಮಯ್ಯನವರು ೩ ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದಾರೆ. ಪರಮ ಪೂಜ್ಯಜಗದ್ಗುರು ಬಾಲಗಂಗಾಧರನಾಥ ಮಹಾಸ್ವಾಮಿಗಳು ಆದಿವಾಲದಲ್ಲಿ ನಡೆಯುತ್ತಿರುವ ಶೈಕ್ಷಣಿಕ ಸಂಸ್ಥೆಗಳ ಅಭಿವೃದ್ಧಿಗೆ ಎಂಬತ್ತೈದು ಸಾವಿರ ರೂಪಾಯಿಗಳ ಧನ ಸಹಾಯ ಮಾಡಿರುತ್ತಾರೆ. ನೂತನವಾಗಿ ನಿರ್ಮಾಣವಾಗುತ್ತಿರುವ ಮಠದ ಕಟ್ಟಡಕ್ಕೆ ಹತ್ತು ಲಕ್ಷ ರೂಪಾಯಿಗಳ ಧನಸಹಾಯವನ್ನು ಮಾಡಿರುತ್ತಾರೆ.[೬೦] ಮಠದ ಅಭಿವೃದ್ಧಿಗೆ ಸಂಬಂಧಿಸಿದಂತೆ ಈ ಜನಾಂಗದ ಭಕ್ತರು ಮಾತ್ರವಲ್ಲದೇ ಇತರೆಯವರು ಕೂಡ ಸಹಾಯ ಮಾಡಿರುವುದು ಕಂಡುಬರುತ್ತದೆ.

ನೂತನ ಆದಿಜಾಂಬವ ಮಠದ ಕಟ್ಟಡವು ಹಿರಿಯೂರು ಪಟ್ಟಣದಲ್ಲಿ ಚಿತ್ರದುರ್ಗ ಮಾರ್ಗದ ರಾಷ್ಟ್ರೀಯ ಹೆದ್ದಾರಿಯ ಎಡ ಭಾಗದಲ್ಲಿ ಇಂದು ತಲೆ ಎತ್ತಿ ನಿಂತಿದೆ. ಈ ಆದಿಜಾಂಬವ ಮಠದ

ಉದ್ಘಾಟನೆಯ ದಿನಾಂಕ : ೩೦-೪-೯೯ನೇ ಶುಕ್ರವಾರ ಬುದ್ಧಪೌರ್ಣಮಿಯಂದು ನೇರವೇರಿತು. ಮಠದ ಗುರುಗಳ ಬಗ್ಗೆ ಗೌರವ ನೀಡಿ ಅದರ ಅಭಿವೃದ್ಧಿಯ ಕಡೆಗೆ ಮಾದಿಗರು ಇಂದು ಹೆಚ್ಚಿನ ಗಮನಹರಿಸತೊಡಗಿದ್ದಾರೆ. ಪ್ರತಿಯೊಂದು ಜನಾಂಗವು ತಮ್ಮ ಜನಾಂಗಕ್ಕೆ ಸಂಬಂಧಿಸಿದ ಸ್ವಾಮಿಗಳು ಹಾಗೂ ಮಠದ ಅಭಿವೃದ್ಧಿಗೆ ಶ್ರಮಿಸುವ ರೀತಿಯಲ್ಲಿ ಅನೇಕ ಸಭೆ ಸಮಾರಂಭಗಳನ್ನು ಏರ್ಪಡಿಸುತ್ತಾ ಬಂದಿದ್ದಾರೆ. ಪ್ರತ್ಯೇಕ ಮೀಸಲಾತಿ ಬೇಡಿಕೆ ಹೋರಾಟದ ಪರಿಣಾಮವಾಗಿ ರಾಜ್ಯಮಟ್ಟದಲ್ಲಿ ಆದಿಜಾಂಬನ ಸ್ವಾಮಿಗಳ ಬಗ್ಗೆ ಹೆಚ್ಚಿನ ಗೌರವ ಜನಾಂಗದಲ್ಲಿ ಮೂಡುವಂತಾಗಿದೆ. ಹಿರಿಯೂರು ತಾಲ್ಲೂಕಿನಲ್ಲಿರುವ ಮಾದಿಗ ಜನಾಂಗ ಮಾತ್ರ ಪೂರ್ಣ ಪ್ರಮಾಣದಲ್ಲಿ ತೊಡಗಿಕೊಂಡಿದ್ದಾರೆ. ಉಳಿದ ಭಾಗಗಳಲ್ಲಿರುವ ಮಾದಿಗರು ಸಹ ಇಂತಹ ಕಾರ್ಯದಲ್ಲಿ ಪಾಲ್ಗೊಳ್ಳಲು ಆಲೋಚಿಸುತ್ತಿರುವಾಗಲೇ ಚಿತ್ರದುರ್ಗದ ಬೃಹನ್ಮಠ(ಲಿಂಗಾಯಿತರ) ಸ್ವಾಮಿಗಳು ಮಠದ ಆಶ್ರಯದಲ್ಲಿ 'ಮಾದಾರ ಚನ್ನಯ್ಯ' ಪೀಠವನ್ನು ಸ್ಥಾಪಿಸಿ ಆ ಪೀಠಕ್ಕೆ ಪತ್ರಕರ್ತನಾಗಿದ್ದ ಡಿ.ಕೃಷ್ಣಮೂರ್ತಿ ಎಂಬುವರನ್ನು ಸ್ವಾಮಿಗಳಾಗಿ ಕೂರಿಸಿದ್ದಾರೆ. ಈ ರೀತಿಯ ಕ್ರಮ ಮಾದಿಗರಲ್ಲಿ ಆತಂಕ ಉಂಟುಮಾಡಿದೆ. ಒಳ್ಳೆಯ ದೃಷ್ಟಿಯಿಂದ ಮಾಡಿದ್ದರೂ ಮುಂದೊಂದು ದಿನ ಇದು ಮಾದಿಗರಲ್ಲಿ ಪ್ರಾದೇಶಿಕ ಭಿನ್ನತೆಯನ್ನು ಉಂಟುಮಾಡುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ.

ಬಾಲಬಸವರು

ಮಾದಿಗ ಜನಾಂಗದ ಗುರುಪರಂಪರೆಯಲ್ಲಿ ಬಾಲ ಬಸವರು ಒಬ್ಬರು. ಇವರು ಶೈವ ಪಂಥಕ್ಕೆ ಸೇರಿರುವ ಬಾಲಬಸವ ಮಾದಿಗ ಜಾತಿಯಲ್ಲೆ ಬರುವ ವಿಶಿಷ್ಟ ವ್ಯಕ್ತಿ. ತಂಬೂರಿ ಹಿಡಿದು ಊರುಗಳಿಗೆ ಭೇಟಿಕೊಟ್ಟು, ಬಸವ ಮತ್ತು ಹರಳಪ್ಪನ ಬಗೆಗೆ ಕಥೆಯನ್ನು ಹೇಳುವುದು ಈತನ ಕಾಯಕ[೩೧] ವಾಗಿದೆ. 'ಬಾಲಬಸವ' ಕುಟುಂಬಗಳ ಹುಟ್ಟಿಗೆ ಸಂಬಂಧಿಸಿದಂತೆ ಈ ಕುಟುಂಬಕ್ಕೆ ಸೇರಿದ ಬಾಲಬಸವ ಶ್ರೀ ಧನಂಜಯ ಶಾಸ್ತ್ರೀಯವರ ಪ್ರಕಾರ 'ಬಸವೇಶ್ವರರ' ದತ್ತು ಮಗನೇ 'ಬಾಲಬಸವ'. ಕಲ್ಯಾಣದ ಕ್ರಾಂತಿಯ ನಂತರ ಲಕ್ಷದ ತೊಂಬತ್ತಾರು ಗಣಗಳು, ಅರವತ್ಮೂರು ಮಂದಿ ಪುರೋಹಿತರು, ಅಷ್ಟದಿಗ್ಗಜರು ಕಲ್ಯಾಣ ಬಿಟ್ಟು 'ಉಳವಿ'ಗೆ ಹೋದರು. ಬಸವಣ್ಣನವರಿಗೆ ಮಕ್ಕಳಿರಲಿಲ್ಲ ಮಾದಾರರ ಹುಡುಗನನ್ನು ದತ್ತು ಮಗನನ್ನಾಗಿ ಸ್ವೀಕರಿಸಿ, ಇನ್ನು ಮುಂದೆ ನೀನು ಬಸವಣ್ಣನ ಮಗ ಬಾಲಬಸವ. ನಿಮ್ಮ ಕಾಯಕ ಮುಂದೆ ಆಗಬಹುದಾದ ವಿದ್ಯಾಮಾನ(ಸಂಗತಿ, ಘಟನೆ)ಗಳನ್ನು ಹೇಳುವುದು. ಭಿಕ್ಷಾಟನೆ ನಿನ್ನ ವೃತ್ತಿ. ಭಕ್ತಾದಿಗಳು ನೀಡಿದುದನ್ನು ಸಂತೋಷದಿಂದ ಸ್ವೀಕರಿಸಿ ಅವರಲ್ಲಿರುವ ದುರ್ನಡತೆಗಳನ್ನು ತಿದ್ದುವುದು ಮತ್ತು ಧರ್ಮವನ್ನು ಪ್ರಚಾರ ಮಾಡುವುದು ಎಂದು ಹೇಳಿದರಂತೆ.[೩೨] ಈ ಹಿನ್ನೆಲೆಯಲ್ಲಿ ಮಾದಿಗ ಜನಾಂಗದ ಕೆಲವು ಕುಟುಂಬಗಳು ವೀರಶೈವ ಧರ್ಮಪ್ರಚಾರದಲ್ಲಿ ತೊಡಗಿಕೊಂಡಿದ್ದರೆಂದು ತಿಳಿಯುತ್ತದೆ.

ಬಾಲಬಸವ ಕುಟುಂಬಗಳು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಕೆಲವು ಭಾಗಗಳಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕು ಕೆರೆಕೊಂಡಾಪುರ ಗ್ರಾಮದಲ್ಲಿ ಐದಾರು ಕುಟುಂಬಗಳಿವೆ. ಇವರು ಶೈವ ಪಂಥದವರಾಗಿದ್ದು ಸಸ್ಯಹಾರಿಗಳಾಗಿದ್ದಾರೆ. ಆಗಿದ್ದಾರೆ.[೨೨] ಬಳ್ಳಾರಿ ಜಿಲ್ಲೆಯಲ್ಲಿ ಏಕ ಮಾತ್ರ ಬಾಲಬಸವಣ್ಣನವರ ಕುಟುಂಬವಿದೆ. ಹರಿಜನರು ಲಿಂಗಧಾರಿಗಳಾಗಿ ಸಂಪ್ರದಾಯ ಪಾಲಿಸುತ್ತಿರುವ ಇವರು ಬೈರೇದೇವರ ಗುಡ್ಡದಲ್ಲಿದ್ದಾರೆ. ಬೆಳಗಿನ ಸಮಯದಲ್ಲಿ ಕಾಲಜ್ಞಾನ ಹೇಳುವುದು, ರಾತ್ರಿ ಸಮಯದಲ್ಲಿ ಲಕ್ಷಪತಿ ರಾಜನ ಕತೆ, ಗೋಣಿ ಬಸವೇಶ್ವರ ಕತೆ, ಮರುಳಸಿದ್ದೇಶ್ವರ ಕತೆಗಳನ್ನು ಹಾಡುತ್ತಾರೆ. ಸುತ್ತ ಮುತ್ತಲ ಪ್ರದೇಶದಲ್ಲಿ ಬಾಲಬಸವಣ್ಣ ಆಡುವ ಮಾತಿಗೆ ಪ್ರಾಮುಖ್ಯತೆ ಇದೆ.[೨೩] ಇಂತಹ ಬಾಲಬಸವ ಕುಟುಂಬಗಳು ಕರ್ನಾಟಕದ ಇತರ ಕಡೆಗಳಲ್ಲಿಯೂ ಇವೆ. ''ಕೆರೆಕೊಂಡಾಪುರ, ಗದಗ ತಾಲ್ಲೂಕಿನ ಹರ್ಲಾಪುರದಲ್ಲಿ ಹನ್ನೊಂದು ಮನೆಗಳಿವೆ(ಬಾಲಬಸಪ್ಪ ಶ್ರೀ ಧನಂಜಯಶಾಸ್ತ್ರಿ ಮತ್ತು ಬಿ.ಜಿ.ಬಸವರಾಜ್, ಕೆರೆಕೊಂಡಪುರ) ಇವುಗಳನ್ನು ಹೊರತು ಪಡಿಸಿದರೆ ಉಳಿದ ಕಡೆಗಳಲ್ಲಿ ಕಂಡುಬರುವುದು ವಿರಳ.

ಬಾಲಬಸವರು ಕಾವಿತೊಟ್ಟು, ಕೈಯಲ್ಲಿ ತಂಬೂರಿ ಮತ್ತು ನಾಗಬೆತ್ತ ಹಿಡಿದು ಭಿಕ್ಷಾಟನೆ ಮತ್ತು ಕಾಲಜ್ಞಾನ ಹೇಳಲು ಹೋಗುತ್ತಾರೆ. ಬಾಲಬಸವರಾಗಲು ಕೆಲವೊಂದು ವಿಶೇಷ ನಿಯಮಗಳನ್ನು ಪಾಲಿಸುವ ಅಗತ್ಯ ಕಂಡುಬರುತ್ತದೆ. ಬಾಲಬಸಪ್ಪ ಮುದ್ರೆ ಹೊರುವವರು ಮೊದಲು ದೀಕ್ಷೆ ಪಡೆದಿರಬೇಕು. ಪಂಚ ಸಿಂಹಾಸನ ಪೀಠಗಳಲ್ಲಿ ಒಂದಾದ ಉಜ್ಜಯಿನಿಯಲ್ಲಿ ಶಾಸ್ತ್ರೋಕ್ತವಾಗಿ ದೀಕ್ಷೆ ಪಡೆಯಬೇಕು. ಲಿಂಗ ದೀಕ್ಷೆ ಪಡೆದ ಮೇಲೆ ಮದುವೆಯಾಗುವರು. ಮದುವೆಯಾದವರು ಸಹ ಬಾಲಬಸಪ್ಪನ ಮುದ್ರೆಯನ್ನು ಹೊರುವರು. ಸಾಮಾನ್ಯವಾಗಿ ಕಾಲಜ್ಞಾನವನ್ನು ಸಾರುವವರು ಇಬ್ಬರಿರುತ್ತಾರೆ. ಅವರಲ್ಲಿ ಒಬ್ಬ ಬಾಲಬಸಪ್ಪ ನಾಗಬೆತ್ತವನ್ನು ಹಿಡಿದು ಹೆಗಲ ಮೇಲೆ ಒಂದು ದೊಡ್ಡದಾದ ಜೋಳಿಗೆಯನ್ನೂ ಹಾಕಿದವನಾದರೆ ಮತ್ತೊಬ್ಬ ಬಾಲಬಸಪ್ಪ ಒಂದು ಕೈಯಲ್ಲಿ ತಂಬೂರಿ ಇನ್ನೊಂದು ಕೈಯಲ್ಲಿ ನಾಗಬೆತ್ತವನ್ನು ಹಿಡಿದಿರುವನು. ವಚನಗಳನ್ನು ಸಾರುವಾಗ ಇಬ್ಬರದೂ ಒಂದೇ ಮಾತಾಗಿರುವುದು. ಊರು ಕೇರಿಗಳಿಗೆ ಹೋಗುವ ಮುನ್ನ ತಮ್ಮ ಹಟ್ಟಿಯಲ್ಲಿರುವ ದೇವಸ್ಥಾನದಲ್ಲಿ ದೇವರನ್ನು ಸ್ತುತಿಸಿ ನಂತರ ಇತರ ಊರುಗಳಿಗೆ ಹೋಗಿ ಕಾಲಜ್ಞಾನವನ್ನು ಸಾರುವರು. ಭಕ್ತಾದಿಗಳು ಹಣ, ಹಸು, ಹೊಸಬಟ್ಟೆಗಳನ್ನು ಉಡುಗೊರೆ ರೂಪದಲ್ಲಿ ಕೊಡುತ್ತಿದ್ದರಂತೆ.[೨೪] ಬಾಲಬಸವರು ಮುದ್ರೆ ಹಾಕಿಸಿಕೊಂಡು ಕಾಲಜ್ಞಾನ ಹೇಳುತ್ತಾ ವರ್ಷಕ್ಕೊಂದು ಬಾರಿ ಸಂಕ್ರಾತಿಯ ಕಾಲದಲ್ಲಿ ಭಿಕ್ಷಾಟನೆಗೆ ತೊಡಗಿಕೊಂಡಿರುತ್ತಾರೆ. ಆದರೆ ಇಂದು ಅಂತಹ ಬಾಲಬಸವರು ಭಿಕ್ಷಾಟನೆ ಮಾಡುವುದು ಹೆಚ್ಚಾಗಿ ಕಂಡುಬರುವುದಿಲ್ಲ. ಇವರು ತಮ್ಮ ಮಕ್ಕಳ ಮದುವೆಯನ್ನೂ ಗುರುಪರಂಪರೆಗೆ ಸೇರಿದವರೊಂದಿಗೆ ಮಾಡುತ್ತಾರೆ.

ಈ ರೀತಿಯಾಗಿ ಆದಿಜಾಂಬವ, ಬಾಲಬಸವ ಮಾತ್ರವಲ್ಲದೇ ಅನೇಕ ಕಡೆ ಕೆಲವೊಂದು ಮಠ, ಆಶ್ರಮಗಳನ್ನು ಮಾದಿಗರು ವಿವಿಧ ದೈವ ಮತ್ತು ಧಾರ್ಮಿಕ ವ್ಯಕ್ತಿಗಳ ಹೆಸರಿನಲ್ಲಿ ಸ್ಥಾಪನೆ ಮಾಡಿಕೊಂಡು ಆ ಮಠದಲ್ಲಿ ಜನಾಂಗದ ಅನೇಕರು ಗುರುಬೋಧೆ ಸ್ವೀಕರಿಸಿರುವುದು ಕಂಡುಬರುತ್ತದೆ. ಚಿತ್ರದುರ್ಗ ಜಿಲ್ಲೆಯ ಹಿರಿಯೂರು ಪಟ್ಟಣದಿಂದ ಚಳ್ಳಕೆರೆಗೆ ಹೋಗುವ ರಸ್ತೆಯ ಬಲಭಾಗದಲ್ಲಿ 'ಅಂಬಾ ಭವಾನಿ' ಗುಡಿ ಅಥವಾ ಮಠ ಇದ್ದು (ಇನ್ನೂ ಕಟ್ಟಡ ಹೊಂದಿಲ್ಲ. ಗುಡಿಸಲು ಮಾತ್ರ) ಅಲ್ಲಿ ಮಾದಿಗ ಜನಾಂಗದ ೧೦ಕ್ಕೂ ಹೆಚ್ಚು ಕಾವಿದಾರಿಗಳು ಇರುವುದು ಕಂಡುಬರುತ್ತದೆ. ಈ ಮಠದ ಸ್ಥಾಪನೆಗೆ ಪ್ರಮುಖ ಕಾರಣರು ಇದೇ ತಾಲ್ಲೂಕಿನ ಕಸ್ತೂರಿರಂಗಪ್ಪನ ಹಳ್ಳಿ ಗ್ರಾಮದ ಜಿ.ಹನುಮಂತಪ್ಪನವರು ಈ ಆಶ್ರಮದ ಸಮಿತಿಯ ಗೌರವ ಅಧ್ಯಕ್ಷರು ಸಹ ಆಗಿದ್ದಾರೆ. ಈ ಮಠ ಮಾತ್ರವಲ್ಲದೇ ಇದೇ ತಾಲ್ಲೂಕಿನ ಕಾಟನಾಯಕನಹಳ್ಳಿ ಗ್ರಾಮದಲ್ಲಿ 'ಶಾಂತಿ ಅವಧೂತ ಆಶ್ರಮ'ವೊಂದು ೧೯೮೬ರಲ್ಲಿ ಗುರುಬೋಧೆ ಪಡೆದಿರುವ ಮಾದಿಗರಿಂದ ಆರಂಭಗೊಂಡು ಇಂದು ಅದು ಈ ಜನಾಂಗದ ೩೦ ಶರಣರನ್ನು ಹೊಂದಿದೆ.

### ಆದಿಜಾಂಬವ ಸಮಾವೇಶ ಮತ್ತು ಕಲಾಮೇಳ

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನಲ್ಲಿ ಸುಮಾರು ೧೯೮೨-೮೩ರಲ್ಲಿ ಮಾದಿಗ ಜನಾಂಗದ ಆದಿಜಾಂಬವ ಸಮಾವೇಶ ನಡೆದಿದೆ. ಈ ಜನಾಂಗದ ರುದ್ರಾಕ್ಷಿ ಮುನಿದೇಶಿಕೇಂದ್ರ ಸ್ವಾಮಿಗಳಿಗೆ ಮಾದಿಗ ಜನಾಂಗದ 'ಅಡ್ಡಪಲ್ಲಕ್ಕಿ ಮಹೋತ್ಸವ' ಮಾಡುವುದರ ಮೂಲಕ ಹಿರಿಯೂರಿನಲ್ಲಿ ಬೃಹತ್ ಸಮಾವೇಶವೊಂದನ್ನು ನಡೆಸಲಾಯಿತು. ಅಂದು ನಡೆದ ಮೆರವಣಿಗೆಯಲ್ಲಿ ಮಾದಿಗ ಜನಾಂಗದ ಅನೇಕ ಕಲಾವಿದರ ಕಲಾ ಪ್ರದರ್ಶನ ನಡೆಯಿತು. ತಮಟೆವಾದ್ಯ, ಕೋಲಾಟ, ಭಜನೆ, ಪೌರಣಿಕ ಹಾಗೂ ಚಾರಿತ್ರಿಕ ವ್ಯಕ್ತಿಗಳ ವೇಷಭೂಷಣ ಪ್ರದರ್ಶನ, ಮುಂತಾದ ಪ್ರಕಾರಗಳ ಕಲೆಗಳು ಪ್ರದರ್ಶನಗೊಂಡವು.

ಬೆಂಗಳೂರು ನಗರದಲ್ಲಿ ಮಾದಿಗ ಜನಾಂಗಕ್ಕೆ ಸೇರಿರುವ ಕೆಲವು ಸಂಘಟನೆಗಳು ಪ್ರತಿವರ್ಷ 'ಜಾಂಬವ ಕಲಾಮೇಳ' ಎಂಬ ಸಾಂಸ್ಕೃತಿಕ ಕಾರ್ಯಕ್ರಮವನ್ನು ಏರ್ಪಡಿಸುತ್ತಾ ಬಂದಿವೆ. ೧೯೯೬ರಿಂದ ಆರಂಭಗೊಂಡ ಈ ಕಲಾಮೇಳ ೧೯೯೮ರಲ್ಲಿ ಮೂರನೆ ವಾರ್ಷಿಕ ಕಾರ್ಯಕ್ರಮವನ್ನೂ ಏರ್ಪಡಿಸಿತ್ತು. ಈ ಸಾಂಸ್ಕೃತಿಕ ಮೇಳವು ವಿವಿಧ ಉದ್ದೇಶಗಳನ್ನು ಒಳಗೊಂಡಿದೆ. ಅವುಗಳಲ್ಲಿ ಕಲಾಪ್ರದರ್ಶನ ಮತ್ತು ವಧು ವರರ ಅನ್ವೇಷಣೆ ಪ್ರಮುಖವಾಗಿವೆ. ಸಾಮಾಜಿಕವಾಗಿ ಹಿಂದುಳಿದಿರುವ ಈ ಜನಾಂಗದಲ್ಲಿ ಅನೇಕ ಕಲಾಪ್ರತಿಭೆಗಳು ಕೀಳರಿಮೆ ಹಾಗೂ ಸಹಕಾರ, ಪ್ರೋತ್ಸಾಹವಿಲ್ಲದೆ ತಮ್ಮ ಪ್ರತಿಭಾ ಪ್ರದರ್ಶನ ಮಾಡಲು ಸಾಧ್ಯವಾಗುವುದಿಲ್ಲ. ಅಂತಹ ಕಲಾಪ್ರತಿಭೆಗಳನ್ನು ಗುರುತಿಸಿ ಅವರನ್ನು ಬೆನ್ನು ತಟ್ಟಿ ಪ್ರೋತ್ಸಾಹಿಸುವ ಉದ್ದೇಶದಿಂದ ವಾರ್ಷಿಕ ಸಮಾರಂಭಗಳಲ್ಲಿ ಅನೇಕ ಬಗೆಯ

ಸಾಂಸ್ಕೃತಿಕ ಕಾರ್ಯಕ್ರಮಗಳ ಸ್ಪರ್ಧೆಯನ್ನು ಏರ್ಪಡಿಸಲಾಗುತ್ತದೆ. ತಮಟೆವಾದ್ಯ ಸ್ಪರ್ಧೆ, ಭಾವಗೀತೆ, ಚಿತ್ರಗೀತೆ, ಭಕ್ತಿಗೀತೆ, ಜಾನಪದಗೀತೆ, ಲಾವಣಿ, ಕೋಲಾಟ, ವೇಷಭೂಷಣಗಳ ಸ್ಪರ್ಧೆ, ಭರತನಾಟ್ಯ ಹಾಗೂ ಬ್ರೆಕ್ ಡಾನ್ಸ್-ಹೀಗೆ ಮಾದಿಗ ಜನಾಂಗದ ಹಲವು ಮುಖದ ಪ್ರತಿಭೆಗಳನ್ನು ಪ್ರೋತ್ಸಾಹಿಸಲು ಈ 'ಜಾಂಬವ ಕಲಾಮೇಳ' ಮಾಡಲಾಗುತ್ತದೆ.

ಎರಡನೆಯದು, ಮಾದಿಗ ಜನಾಂಗದಲ್ಲಿ ವೈವಾಹಿಕ ಜೀವನಕ್ಕೆ ಕಾಲಿಡಲಿರುವ ಯುವಕ-ಯುವತಿಯರಿಗೆ ವಧು-ವರ ಅನ್ವೇಷಣೆಯಂಥ ವಿಶಿಷ್ಟ ಕಾರ್ಯಕ್ರಮವನ್ನೂ ಏರ್ಪಡಿಸಲಾಗುತ್ತದೆ. ನಗರ ಪ್ರದೇಶದಲ್ಲಿ ವಾಸಿಸುವ ಅನೇಕ ಮಧ್ಯಮವರ್ಗ ಹಾಗೂ ಶ್ರೀಮಂತ ಕುಟುಂಬಗಳು ತಮ್ಮ ಮನೆಯಲ್ಲಿ ಇರುವ ಯುವಕ-ಯುವತಿಯರೊಂದಿಗೆ ಆಗಮಿಸಿರುತ್ತಾರೆ. ತಮಗೆ ಇಷ್ಟದವರೊಂದಿಗೆ ಮದುವೆ ಮಾಡಿಕೊಳ್ಳಲು ಪ್ರಾಥಮಿಕ ಹಂತದ ಮಾತುಕತೆ ನಡೆಸಲಾಗುತ್ತದೆ. ಹೀಗೆ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಕೆಲವು ಕಡೆ ಏರ್ಪಡಿಸುತ್ತಿರುವುದು ಕಂಡುಬರುತ್ತದೆ.

## ೬.೪ ಜನಪದ ಕಲೆಗಳು ಮತ್ತು ಮಾದಿಗರು

ಜನಪದ ಕಲೆಗಳು ಮಾನವನಲ್ಲಿ ಅಂತರ್ಗತವಾಗಿ ಅಡಗಿರುವ ಪ್ರತಿಭೆಯ ಅಭಿವ್ಯಕ್ತಿಗಳು ಇವುಗಳು ವೈಯಕ್ತಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಹುಟ್ಟಿ ಬೆಳೆದಂಥವು. ಹೀಗಾಗಿ ಮಾನವನ ಸಾಂಸ್ಕೃತಿಕ ಚರಿತ್ರೆಗೂ, ಜನಪದ ಕಲೆಗಳಿಗೂ ಅವಿನಾಭಾವ ಸಂಬಂಧವಿದೆ. ವ್ಯಕ್ತಿಗತವಾಗಿ ಮತ್ತು ವಿವಿಧ ಸಾಂಸ್ಕೃತಿಕ ಸಂದರ್ಭಗಳಲ್ಲಿ ಇವು ಪ್ರದರ್ಶನಕ್ಕೊಳಗಾಗುತ್ತವೆ. ಅಂತಹ ಜನಪದ ಕಲೆಗಳೆಂದರೆ ತಮಟೆ ವಾದ್ಯ, ಚೌಡಿಕೆ, ಕೋಲಾಟ, ಹಾಡುಗಾರಿಕೆ, ಕತೆ ಹೇಳುವುದು, ಕುಣಿತ, ವೀರಗಾಸೆ, ವೇಷಭೂಷಣ ಕಲೆ ಮುಂತಾದವುಗಳು. ಕೆಲವೊಂದು ಕಲೆಗಳು ನಿರ್ಧಿಷ್ಟವಾದ ಜಾತಿಗಳೇ ಪ್ರದರ್ಶನ ಮಾಡುವುದು ಕಂಡು ಬಂದರೆ ಕೋಲಾಟ, ಬಯಲಾಟ, ಮೋಡಿಯಂಥ ನಮ್ಮ ಬಹಳಷ್ಟು ಕಲೆಗಳಿಗೆ ಜಾತಿಯ ಮಿತಿಗಳೇ ಇಲ್ಲವೆಂಬುದನ್ನು ಗಮನಿಸಬಹುದು.[೩೬] ಈ ರೀತಿಯಾಗಿ ಕೆಲವು ಜನಪದ ಕಲೆಗಳು ಅನೇಕ ಅಂಶಗಳನ್ನು ತನ್ನ ಆಂತರ್ಯದಲ್ಲಿ ಅಡಗಿಸಿಕೊಂಡಿವೆ. ಒಂದು ನಾಡಿನ, ಜನಾಂಗ, ವರ್ಗದ ಬದುಕಿನ ಬೆಳವಣಿಗೆಯನ್ನು ಅವರ ಪರಂಪರೆ ಹಾಗೂ ಸಂಪ್ರದಾಯಗಳನ್ನು ಅರಿಯಬೇಕಾಗುತ್ತದೆ. ಮಾನವನ ಪ್ರತಿಹಂತದಲ್ಲಿ ಅವನ ಸಾಂಸ್ಕೃತಿಕ ಲೋಕದ ಕಲೆ ಪ್ರೇರಣೆಯ ವಸ್ತುವಾಗಿರುತ್ತದೆ.[೩೭] ಮಾದಿಗ ಜನಾಂಗದಲ್ಲಿ ಅಡಗಿರುವ ಜನಪದ ಕಲೆಗಳು ಸಾಂಸ್ಕೃತಿಕ ಲೋಕವನ್ನು ಶ್ರೀಮಂತಗೊಳಿಸಲು ಸಹಕಾರಿಯಾಗಿವೆ. ಜನಪದ ಕಲೆಗಳಲ್ಲಿ ಕೆಲವೊಂದು ಕೀಳು ಕಲೆಗಳೆಂದು ಭಾವಿಸಿದ್ದರಿಂದ ಅವುಗಳು ಕೇವಲ ಕೆಳಜಾತಿಗಳಲ್ಲಿ ಮಾತ್ರವೇ ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ನೆಲೆಸಿರುವ ಮಾದಿಗ ಜನಾಂಗದಲ್ಲಿ ಅಡಗಿರುವ ಜನಪದ ಕಲೆಗಳನ್ನು ಕುರಿತು ಚರ್ಚಿಸಲು ಯತ್ನಿಸಲಾಗಿದೆ.

**ತಮಟೆ ಅಥವಾ ಹಲಗೆ ವಾದ್ಯ ಮಾಡುವ ಕಲೆ**

ತಮಟೆ ಬಾರಿಸುವ ಕಲೆಯು ಜಾನಪದ ಕಲೆಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದದು. ಚರ್ಮ ವಾದ್ಯದ ಇತರೆ ಕಲೆಗಳ ಉಗಮದ ಪ್ರೇರಣೆಯೇ ತಮಟೆ ವಾದ್ಯ ಎಂದರೆ ಉತ್ಪ್ರೇಕ್ಷೆ ಅಲ್ಲ. ಕಬ್ಬಿಣದ ಪಗಡಕ್ಕೆ ಕೋಣದ ಚರ್ಮವನ್ನು ಬಿಗಿದು ಮಾದಿಗರೆ ಈ ವಾದ್ಯವನ್ನು ತಯಾರುಮಾಡುತ್ತಾರೆ. ಈ ವಾದ್ಯವನ್ನು ವಿವಿಧ ಸಾಂಸ್ಕೃತಿಕ ಸಂದರ್ಭಗಳಲ್ಲಿ ಬಳಕೆ ಮಾಡಲಾಗುತ್ತದೆ. ಇದು ಹಿಂದಿನಿಂದಲೂ ಇಂದಿನವರೆಗೆ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದಿದೆ. ಹಲಗೆ ಸಾಮೂಹಿಕವಾಗಿ ಬಾರಿಸುವ ವಾದ್ಯವಾಗಿರುವುದರೊಂದಿಗೆ ಏಕವಾದನ ಕಲೆಯು ಆಗಿದೆ. ಇದನ್ನು ಬಾರಿಸುವವರು ಹೊಲೆಯರು, ಮಾದಿಗರು ಇಲ್ಲವೇ ಕೊರಚರಾಗಿರುತ್ತಾರೆ.[೩೮] ಆದರೆ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಹೆಚ್ಚಾಗಿ ಈ ವಾದ್ಯವನ್ನು ಬಳಸುವುದು ಕಂಡುಬರುತ್ತದೆ. ಈ ಎರಡು ಜಿಲ್ಲೆಗಳ ಎಲ್ಲ ಗ್ರಾಮಗಳ ಮಾದಿಗರ ಮನೆಗಳಲ್ಲಿ ಒಂದಾದರೂ ತಮಟೆ ಇದ್ದೆ ಇರುತ್ತದೆ. ಇದು 'ಒಲೆಯಿಲ್ಲದ ಒಕ್ಕಲಿಲ್ಲ ಹಲಗೆ ಇಲ್ಲದ ಊರಿಲ್ಲ' ಎಂಬ ಗಾದೆಯನ್ನು ನಿಜಗೊಳಿಸುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ತಪ್ಪಡೆ(ತಮಟೆ) ಉರುಮೆ(ಅರೆ) ಕಹಳೆ, ಸನಾಯಿ ವಾದ್ಯಗಳನ್ನು ನುಡಿಸುವ ಕಲೆ ಎ.ಕೆ, ಮತ್ತು ಎ.ಡಿ ಜನಾಂಗದಲ್ಲಿ ಮಾತ್ರವೇ ಕಾಣಬಹುದು.[೩೯] ಆದರೆ ತಮಟೆಯನ್ನು ಬಳಸುವವರು ಮಾದಿಗರು ಹಬ್ಬ, ಹರಿದಿನ, ಜಾತ್ರೆ, ಮುಂತಾದ ಸಂದರ್ಭಗಳಲ್ಲಿ ಮಾತ್ರವೇ ಬಳಕೆ ಮಾದಿಗರು ತಮ್ಮ ಮದುವೆಗಳಲ್ಲೂ ಮಂಗಳವಾದ್ಯವಾಗಿ ಬಳಸುವುದು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತದೆ. ಹಿಂದೊಮ್ಮೆ ಮಾದಿಗರು ತಮ್ಮ ಮದುವೆಗಳಲ್ಲಿ ತಮಟೆಯನ್ನು ಬಳಸುತ್ತಿದ್ದರು. ಆದರೆ ಇಂದು ಚಿತ್ರದುರ್ಗ ಜಿಲ್ಲೆಯಲ್ಲಿ ತಮಟೆ ಬಳಸುವುದು ಕಂಡುಬರುವುದಿಲ್ಲ. ಇಂದು ಈ ಕಲೆಯನ್ನು ಕೆಲವು ಜಾತಿಯ ಜನರು ಪ್ರದರ್ಶಿಸುವುದು ಕಂಡು ಬಂದರೂ ಅದೂ ಕಡಿಮೆ ಪ್ರಮಾಣದಲ್ಲಿದೆ.

ತಮಟೆಯನ್ನು ಒಂದು ಕೀಳು ಕಲೆಯೆಂದು ಪರಿಗಣಿಸಿದ್ದರಿಂದ ಸಮಾಜದ ಅತ್ಯಂತ ಕೆಳಹಂತದ ಮಾದಿಗರಲ್ಲಿ ಮಾತ್ರವೇ ಈ ಕಲೆ ಕಂಡುಬರುತ್ತದೆ. ಈ ವಾದ್ಯವನ್ನು ಕೋಣದ ಚರ್ಮದಿಂದ ತಯಾರು ಮಾಡಬೇಕಾಗಿರುವ ಕಾರಣ ಮೇಲು ಜಾತಿಗಳು ಈ ಕಲೆಯನ್ನು ಕಲಿಯಲಾಗಲಿಲ್ಲ ಎನ್ನಬಹುದು. ಆದರೆ ಮಾದಿಗರು ಈ ಕಲೆಯನ್ನು ಕರಗತ ಮಾಡಿಕೊಂಡು ವಿವಿಧ ಭಂಗಿಗಳಲ್ಲಿ ತಮಟೆ ಬಡಿಯುತ್ತಾರೆ. ಅದರಿಂದ ಹೊರಡುವ ಶಬ್ದವು ಅತ್ಯಂತ ಆಕರ್ಷಕ. ಈ ಕಲೆಯನ್ನು ಬಲ್ಲವರು ಪ್ರತಿಯೊಂದು ಗ್ರಾಮದಲ್ಲೂ ಕಂಡುಬರುವರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಸಂಗ್ರಹಿಸಿದ ಮಾಹಿತಿಯನ್ವಯ ಅನೇಕ ತಮಟೆ ಕಲಾವಿದರ ತಂಡಗಳು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಇರುವುದು ತಿಳಿದುಬರುತ್ತದೆ. ಚಿತ್ರದುರ್ಗ ತಾಲ್ಲೂಕಿನ ಹುಲ್ಲೂರು ಗ್ರಾಮದಲ್ಲಿ ದುರ್ಗಾಂಬಿಕ ಕಲಾವಿದರ ಸಂಘ(ರಿ)ದಲ್ಲಿ ಹೆಚ್.ತಿಪ್ಪೇಸ್ವಾಮಿ ನೇತೃತ್ವದ ೧೫ ಜನ ತಮಟೆ ಕಲಾವಿದರು ಇದ್ದಾರೆ. ಚಳ್ಳಕೆರೆ ತಾಲ್ಲೂಕಿನ ನಾಯಕನ ಹಟ್ಟಿಯಲ್ಲಿ ಸಿಂಗಪ್ಪ, ಬೆಟ್ಟದ ನಾಗೇನಹಳ್ಳಿ

ಮೀರಸಾಬಿಹಳ್ಳಿಯಲ್ಲಿ ಹುಗ್ಗಿ ನಿಂಗಪ್ಪ ಮತ್ತು ಸಂಗಡಿಗರು, ಹಳೆದ್ಯಾಮವ್ವನ ಹಳ್ಳಿಯಲ್ಲಿ ತಿಪ್ಪಯ್ಯನ ತಂಡ, ವಿಡುಪನ ಕುಂಟೆಯಲ್ಲಿ ಮಹಾಲಿಂಗಪ್ಪನ ತಂಡ, ಹಿರಿಯೂರು ತಾಲ್ಲೂಕಿನ ಹರಿಶ್ಚಂದ್ರಘಾಟ್‌ನಲ್ಲಿ ಗೋವಿಂದರಾಜ್ ತಂಡ, ಹೊಸದುರ್ಗ ತಾಲ್ಲೂಕಿನ ಹೆಗ್ಗೆರೆಯಲ್ಲಿ ರಂಗಪ್ಪನ ತಂಡ, ಹೊಳಲ್ಕೆರೆ ತಾಲ್ಲೂಕಿನ ಕಾಲ್ಗೆರೆಯಲ್ಲಿ ದೇವೆಂದ್ರಪ್ಪನ ತಂಡ, ಮೊಳಕಾಲ್ಮೂರು ತಾಲ್ಲೂಕಿನ ಹೊಸದಡಗೂರನ ಗಂಗಣ್ಣನ ತಂಡಗಳಲ್ಲಿ ತಮಟೆ ವಾದ್ಯದ ಕಲಾವಿದರೂ ಇರುವುದು ಕಂಡುಬರುತ್ತದೆ. ಅಧ್ಯಯನ ಕ್ಕೊಳಪಡಿಸಿದ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ೩೯ ಹಳ್ಳಿಗಳಲ್ಲಿ ಕೆಲವೊಂದು ಗ್ರಾಮಗಳನ್ನು ಬಿಟ್ಟರೆ ಉಳಿದೆಲ್ಲಾ ಗ್ರಾಮಗಳಲ್ಲಿ ತಮಟೆವಾದ್ಯದ ಕಲಾವಿದರು ಇದ್ದಾರೆ.

**ಚೌಡಿಕೆ**

ಚೌಡಿಕೆಯು ಶಕ್ತಿ ದೇವತೆಯ ಆರಾಧನೆಯಲ್ಲಿ ಬಳಸುವ ಒಂದು ವಾದ್ಯ ಈ ವಾದ್ಯವನ್ನು ಮರ, ತಂತಿ ಹಾಗೂ ಚರ್ಮ(ಕುರಿಯ ಚರ್ಮ)ವನ್ನು ಬಳಸಿಕೊಂಡು ತಯಾರುಮಾಡಲಾಗುತದೆ. 'ಚೌಡಿಕೆ' ಬಾರಿಸುವವರು ಮುಖ್ಯವಾಗಿ ಎಲ್ಲಮ್ಮನ ಆರಾಧಕರಾದ ಜೋಗಮ್ಮ ಮತ್ತು ಜೋಗಪ್ಪಗಳು. ಚೌಡಿಕೆ ಸಂಪ್ರದಾಯ ಕರ್ನಾಟಕದಾದ್ಯಂತ ಪ್ರಚಲಿತವಿದ್ದರೂ ಇದರ ನಾಲ್ಕು ಮುಖ್ಯಕೇಂದ್ರಗಳೆಂದರೆ ಬಳ್ಳಾರಿ ಜಿಲ್ಲೆಯ ಉಚ್ಚಂಗಿ, ಶಿವಮೊಗ್ಗ ಜಿಲ್ಲೆಯ ಚಂದ್ರಗುತ್ತಿ ಹಾಗೂ ಬೆಳಗಾಂ ಜಿಲ್ಲೆಯ ಸವದತ್ತಿಗಳು. ಈ ಸ್ಥಳಗಳು ಪೌರಾಣಿಕ ಕಥೆಗಳ ಪ್ರಕಾರ ರೇಣುಕೆಯು ನೆಲೆಗೊಂಡ ಪುಣ್ಯಕ್ಷೇತ್ರಗಳಾಗಿ ಪ್ರಖ್ಯಾತವಾಗಿವೆ.[೪೦] ಈ ಹಿನ್ನೆಲೆಯಲ್ಲಿ ರೇಣುಕೆಯು ನೆಲೆಸಿರುವ ಪ್ರದೇಶಗಳಲ್ಲಿ ಅನೇಕರು ಈ ದೇವತೆಗೆ ನಡೆದುಕೊಳ್ಳುವುದು ಕಂಡುಬರುತ್ತದೆ. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳೆರಡರಲ್ಲೂ ಈ ದೇವತೆಯ ಭಕ್ತರು ದೊರಕುತ್ತಾರೆ. ಮುಖ್ಯವಾಗಿ ಎಲ್ಲಮ್ಮ ಅಥವಾ ರೇಣುಕೆಯ ಕಥೆಯನ್ನು ಹೇಳುವಾಗ ಈ 'ಚೌಡಿಕೆ' ವಾದ್ಯ ಇರಲೇಬೇಕು. ಈ ಚೌಡಿಕೆ ಸಂಪ್ರದಾಯದ ಹಾಡುಗಳನ್ನು ಜೋಗಪ್ಪ ಇಲ್ಲವೇ ಜೋಗಮ್ಮಗಳು ಹಾಡುತ್ತಾರೆ. ಈ ಹಾಡುಗಳನ್ನು ಜೋಗತಿಯ ಹಾಡುಗಳು ಎಂದು ಕರೆಯುವುದುಂಟು. ಇವು ಪ್ರಧಾನವಾಗಿ ಎಲ್ಲಮ್ಮ ಹಾಗೂ ಹುಲಿಗಮ್ಮ ದೇವತೆಗಳ ಸುತ್ತ ಹೆಣೆದ ಹಾಡುಗಳಾಗಿರುತ್ತವೆ. ಜನಪದ ಕಲೆಯ ಸತ್ವವನ್ನು ಒಳಗೊಂಡ ಈ ಹಾಡುಗಳಲ್ಲಿ ಧಾರ್ಮಿಕ ಸಂಪ್ರದಾಯಗಳ ಅಂಶಗಳೇ ಅಧಿಕವಾಗಿವೆ.[೪೧] ವೃತ್ತಿದಾಯಕರ ಸಾಲಿನಲ್ಲಿ ಬರುವ ಚೌಡಿಕೆಯವರು ಸವದತ್ತಿ ಎಲ್ಲಮ್ಮನ ಆರಾಧಕರು, ನೊಣವಿನ ಕೆರೆ, ಚಿಕ್ಕನಾಯ್ಕನಹಳ್ಳಿ, ತುರವೇಕೆರೆ, ಹೊಸದುರ್ಗ, ಚಿತ್ರದುರ್ಗ ಮತ್ತು ಉತ್ತರ ಕರ್ನಾಟಕದಲ್ಲಿ ಕಂಡುಬರುತ್ತಾರೆ.[೪೨] ಚೌಡಿಕೆ ವಾದ್ಯ ನುಡಿಸುತ್ತ ಎಲ್ಲಮ್ಮನ ಕುರಿತು ಹಾಡುವ ಅನೇಕ ಜೋಗಪ್ಪ ಮತ್ತು ಜೋಗಮ್ಮಗಳು ಹೆಚ್ಚಾಗಿ ಎಲ್ಲಮ್ಮನ ಸಂಪ್ರದಾಯಕ್ಕೆ ಸೇರಿದ ದೇವಾಲಯಗಳಿರುವ ಗ್ರಾಮಗಳಲ್ಲಿ ಇವರು ನೆಲೆಸಿರುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ 'ಚೌಡಿಕೆ'ಯೊಂದಿಗೆ ಹೋಗುವ ಜೋಗಪ್ಪ ಇಲ್ಲವೇ ಜೋಗಮ್ಮಗಳು ಕಡಿಮೆಯೆನಿಸಿದರೂ ಇಂದಿಗೂ ಚಿತ್ರದುರ್ಗ ಬೆಟ್ಟದಲ್ಲಿ ಪ್ರತಿಷ್ಠಾಪಿತಗೊಂಡಿರುವ ಉಚ್ಚೆಂಗಮ್ಮ ದೇವರಿಗೆ

ನಡೆದುಕೊಳ್ಳುವವರು ಇದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಇವರು ನೆಲೆಸಿದ್ದಾರೆ. ಏಕೆಂದರೆ ಎಲ್ಲಮ್ಮನ ಸಂಪ್ರದಾಯಕ್ಕೆ ಸೇರಿರುವ ಹುಲಿಗೆಮ್ಮ, ಗಾಳಮ್ಮ ಮುಂತಾದ ದೇವರುಗಳು ಈ ಭಾಗದಲ್ಲಿ ನೆಲೆಸಿರುವುದು ಕಾರಣವಾಗಿದೆ. ಮಾದಿಗ ಜನಾಂಗದಲ್ಲೂ 'ಚೌಡಿಕೆ' ಬಾರಿಸುವ ಕಲಾವಿದ ಸ್ತ್ರೀ ಮತ್ತು ಪುರುಷರು ಇರುವುದು ಕಂಡುಬರುತ್ತದೆ.

**ಕೋಲಾಟ**

ಜಾನಪದ ಕಲೆಗಳಲ್ಲಿ ಕೋಲಾಟವು ಒಂದು. ಇಂದಿಗೂ ಕೋಲಾಟ ಮಾಡುವುದನ್ನು ನೋಡಬೇಕೆಂದರೆ ಗ್ರಾಮೀಣ ಪ್ರದೇಶಗಳಿಗೆ ಹೋಗಬೇಕಾಗುತ್ತದೆ. ಇದೊಂದು ಸಾರ್ವತ್ರಿಕ ಕಲೆಯಾಗಿದ್ದು ಎಲ್ಲಾ ಜಾತಿಗಳಲ್ಲಿಯೂ(ಶೂದ್ರ ಹಾಗೂ ಅಸ್ಪೃಶ್ಯ) ಕೋಲಾಟ ಮಾಡುವವರನ್ನು ಕಾಣಬಹುದು. ಈ ಕೋಲಾಟವು ರೈತರು ಹಾಗೂ ಶ್ರಮಿಕರು ತಮ್ಮ ಬಿಡುವಿನ ವೇಳೆಯಲ್ಲಿ ಆಡಲಾಗುತ್ತದೆ. ಕೋಲಾಟ ಆಡಲು ಕನಿಷ್ಟ ಆರು ಮಂದಿಯಾದರೂ ಇರಬೇಕಾಗುತ್ತದೆ. ಅದಕ್ಕೆ ಬೇಕಾಗುವ ಪರಿಕರಗಳೆಂದರೆ ಪ್ರತಿಯೊಬ್ಬರ ಕೈಯಲ್ಲಿ ಎರಡೆರಡು ತುಂಡು ಕೋಲುಗಳು ಇರಬೇಕಾಗುತ್ತದೆ. ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕೋಲಾಟ ಆಡುತ್ತಿದ್ದರೆ ನೋಡಲು ಆಕರ್ಷಕವಾಗಿರುತ್ತದೆ. ಇದರೊಂದಿಗೆ ಕೋಲಾಟ ಪದಗಳು ಇರಲೇಬೇಕು ಅವಿಲ್ಲದೇ ಹೋದರೆ ಕೋಲಾಟ ಮಾಡಲಾಗದು. ಈ ಹಾಡುಗಳನ್ನು ಹೇಳುವವರು ಪ್ರತ್ಯೇಕವಾಗಿ ಇಲ್ಲವೇ ಕೋಲಾಟ ಮಾಡುವವರಲ್ಲಿ ಒಬ್ಬರಾಗಿರುತ್ತಾರೆ. ಅವರು ಹಾಡುವಾಗ ಕೋಲಾಟ ಆಡುವರು ಅವರೊಂದಿಗೆ(ಕೊರಸ್) ಹಾಡುತ್ತಾರೆ. ಈ ರೀತಿಯಾಗಿ ನಡೆಯುವ ಕೋಲಾಟವನ್ನು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಮಾದಿಗ ಜನಾಂಗದವರಲ್ಲಿ ಕಂಡುಬರುತ್ತದೆ. ಹಿಂದೆ ಹೆಚ್ಚಾಗಿ ಕಂಡುಬರುತ್ತಿದ್ದ ಈ ಕಲೆಯು ಇಂದು ಕೆಲವೊಂದು ಸಾಂಸ್ಕೃತಿಕ ಚಟುವಟಿಕೆಗಳ ಸಂದರ್ಭಗಳಿಗಷ್ಟೆ ಸೀಮಿತಗೊಂಡಿದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಆದಿಕರ್ನಾಟಕ ಜನಾಂಗ ಜಂಜಪ್ಪನ ಕತೆ ಹಾಡುವಲ್ಲಿ ಕೋಲು ಹಾಕುವಲ್ಲಿ ಪ್ರಾವಿಣ್ಯತೆ ಪಡೆದಿದೆ[೬] ಎಂಬ ಅಂಶವು ಗ್ರಾಮೀಣ ಪ್ರದೇಶದಲ್ಲಿ ಮಾದಿಗ ಜನಾಂಗವು ಕೋಲಾಟ ಮಾಡುವುದನ್ನು ನೋಡಿದರೆ ಖಚಿತವಾಗಿ ತಿಳಿಯುತ್ತದೆ. ಕೋಲಾಟ ಮಾಡುವ ಕಲಾವಿದರು ಈ ಜಿಲ್ಲೆಯಲ್ಲಿ ಚಿತ್ರದುರ್ಗ ತಾಲ್ಲೂಕಿನ ಸಿದ್ದಾಪುರದಲ್ಲಿ ಉಮೇಶ್ ಮತ್ತು ಸಂಗಡಿಗರು, ಗಂಜಿಗಟ್ಟೆಯಲ್ಲಿ ದುರುಗೇಶಪ್ಪ ಮತ್ತು ಸಂಗಡಿಗರು, ಸಿದ್ದಾಪುರದಲ್ಲಿ ಬಿ.ರುದ್ರಮುನಿ ಮತ್ತು ಸಂಗಡಿಗರು, ಹೊಸದುರ್ಗ ತಾಲ್ಲೂಕಿನ ಹೆಗ್ಗೆರೆಯಲ್ಲಿ ಹೆಗ್ಗೆರೆರಂಗಪ್ಪ ಮತ್ತು ಸಂಗಡಿಗರು (ಕನ್ನಡ ಸಂಸ್ಕೃತಿ ಇಲಾಖೆ) ಇರುವುದು ಕಂಡುಬರುತ್ತದೆ. ಅಲ್ಲದೆ ಕೋಲಾಟ ಪದಗಳನ್ನು ಹಾಡುವ ಚಳ್ಳಕೆರೆ ತಾಲ್ಲೂಕಿನ ಕರಿಕೆರೆ ಗ್ರಾಮದ ಮಾರಪ್ಪನಿಂಗದಹಳ್ಳಿ ಅವರು ೧೯೯೫ರಲ್ಲಿ ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿಯಿಂದ ಜಾನಪದ ಅಕಾಡೆಮಿ ಪ್ರಶಸ್ತಿಯನ್ನು ಪಡೆದಿರುವುದು

ಕಂಡುಬರುತ್ತದೆ.[೪೪] ಕೋಲಾಟ ಮಾಡುವುದು, ಜಿಲ್ಲೆಯ ಇತರೆ ಭಾಗಗಳಲ್ಲಿಯೂ ಕಂಡುಬರುತ್ತದೆ. ಹಿರಿಯೂರು ತಾಲ್ಲೂಕಿನ ಕಾಟನಾಯಕನಹಳ್ಳಿ, ಆಲೂರು, ನಂದಿಹಳ್ಳಿ, ಹೊಸದುರ್ಗ ತಾಲ್ಲೂಕಿನ ದೇವಿಗೆರೆ, ಬೀಸನಹಳ್ಳಿ, ಗೊರವಿನಕಲ್ಲು, ಮಧುರೆ, ಚಿತ್ರದುರ್ಗ ತಾಲ್ಲೂಕಿನ ಮದಕರಿಪುರದಲ್ಲಿ ಕೊಲ್ಲಾರಪ್ಪನ ತಂಡ, ಪಂಡರಹಳ್ಳಿ, ಸಿಂಗಾಪುರ, ಚಳ್ಳಕೆರೆ ತಾಲ್ಲೂಕಿನ ಕುರುಡಿಹಳ್ಳಿಯ ಮಾರಣ್ಣ ದುರ್ಗಪ್ಪನ ತಂಡ, ಹೆರೋಹಳ್ಳಿ ಮುಂತಾದ ಕಡೆ ಕೋಲಾಟ ಮಾಡುವ ಕಲಾವಿದರು ಕಂಡುಬಂದಿದ್ದು ಇಂದು ಈ ಕಲೆ ಮಾಯವಾಗುತ್ತಿರುವುದು ಕಂಡುಬರುತ್ತಿದೆ.

ಬಳ್ಳಾರಿಯ ಜಿಲ್ಲೆಯಲ್ಲಿ ಹಂಪಿಯ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕೋಲಾಟ ಎಲ್ಲಾ ಜಾತಿಯ ಜನರಲ್ಲಿ ಕಂಡುಬರುವ ಒಂದು ಸಾರ್ವತ್ರಿಕ ಕಲೆ.[೪೫] ಕೂಡ್ಲಿಗಿ ತಾಲ್ಲೂಕಿನ ಬಣವಿಕಲ್ಲು ಗ್ರಾಮದಲ್ಲಿ ೨ ಕೋಲಾಟ ತಂಡ ಇರುವುದು ತಿಳಿದುಬಂದಿತು.

ಹಾಡುಗಾರಿಕೆ

ಜನಪದ ಕಲೆಗಳಲ್ಲಿ ಹಾಡುಗಾರಿಕೆಯೂ ಒಂದು. ಹಾಡುಗಳಲ್ಲಿ ಅನೇಕ ವಿಭಾಗಗಳಿದ್ದು ಅವು ಜಾನಪದ ಗೀತೆ, ಭಾವಗೀತೆ, ಚಿತ್ರಗೀತೆ, ಭಜನೆಪದ, ತತ್ವಪದ, ಕೋಲಾಟ ಪದ, ಸುಗಮ ಸಂಗೀತ, ಹಿಂದೂಸ್ಥಾನಿ ಸಂಗೀತ ಹಾಗೂ ಸ್ತ್ರೀ ಸಂಪ್ರದಾಯದ ಹಾಡುಗಳಾಗಿವೆ. ಈ ಎಲ್ಲಾ ಬಗೆಯ ಹಾಡುಗಳನ್ನು ಹಾಡುವವರು ಮಾದಿಗ ಜನಾಂಗದಲ್ಲಿ ಕಂಡುಬರುತ್ತಾರೆ.

ಭಜನೆ ಪದ ಹಾಡುವವರು ಎರಡು ಜಿಲ್ಲೆಗಳ ಬಹುತೇಕ ಗ್ರಾಮಗಳಲ್ಲಿ ಇದ್ದಾರೆ. ಶಿವರಾತ್ರಿ ರಾಮನವಮಿ ಮುಂತಾದ ಹಬ್ಬಗಳಲ್ಲಿ ವಿಶೇಷವಾಗಿ ಭಜನೆ ಮಾಡುತ್ತಾರೆ. ಆಗ ಭಜನೆ ಪದಗಳನ್ನು ಹೆಚ್ಚಾಗಿ ಹಾಡುವುದು ಕಂಡುಬರುತ್ತದೆ. ಯಾರಾದರೂ ಸತ್ತಾಗ ಅಂದು ಅವರ ಮನೆಯಲ್ಲಿ 'ಭಜನೆ' ಮಾಡಲಾಗುತ್ತದೆ. ಈ ಭಜನೆ ಹಾಡುವವರಲ್ಲಿ ಪುರುಷರು ಮತ್ತು ಸ್ತ್ರೀಯರು ಕಂಡುಬರುತ್ತಾರೆ. ಅಧ್ಯಯನಕ್ಕೊಳಪಡಿಸಿದ ಒಟ್ಟು ೩೯ ಹಳ್ಳಿಗಳಲ್ಲಿ ೨೮ ಗ್ರಾಮಗಳಲ್ಲಿ ಭಜನೆ ಮಾಡುವ ಕಲಾವಿದರು ಇರುವುದು ತಿಳಿಯಿತು.

ಕೋಲಾಟ ಪದಗಳನ್ನು ಹಾಡುವವರಲ್ಲಿ ಅನೇಕರು ಈ ಜನಾಂಗದಲ್ಲಿ ಇದ್ದಾರೆ. ಇಂದು ಕೋಲಾಟ ಮರೆಯಾಗುತ್ತಿದ್ದು ಕೆಲವು ಗ್ರಾಮಗಳಲ್ಲಿ ಇನ್ನೂ ಉಳಿದುಕೊಂಡಿದೆ. ಕೋಲಾಟ ಪದಗಳನ್ನು ಹಾಡುವ ಮಾದಿಗ ಜನಾಂಗದ ಕಲಾವಿದರೊಬ್ಬರು ಜಾನಪದ ಶ್ರೀ ಪ್ರಶಸ್ತಿ ಪಡೆದಿರುವುದು ಕಂಡುಬರುತ್ತದೆ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಕರಿಕೆರೆ ಗ್ರಾಮದಲ್ಲಿ ಮಾರಪ್ಪ ಎಂಬುವವರು ೧೯೮೮ರಲ್ಲಿ 'ಜಾನಪದಶ್ರೀ' ಪ್ರಶಸ್ತಿ ಪಡೆದಿದ್ದಾರೆ.[೪೬]

ಮಾದಿಗ ಜನಾಂಗದ ಸ್ತ್ರೀಯರಲ್ಲಿ ಸ್ತ್ರೀ ಸಂಪ್ರದಾಯ ಹಾಡುಗಳ ಚಿನ್ನದ ಗಣಿಯೇ ಅಡಗಿರುವುದು ಎರಡು ಜಿಲ್ಲೆಗಳ ಗ್ರಾಮೀಣ ಪರಿಸರದಲ್ಲಿ ಕಂಡುಬರುತ್ತದೆ. ಅಧ್ಯಯನಕ್ಕೊಳಪಡಿಸಿದ ೩೯

ಹಳ್ಳಿಗಳಲ್ಲಿಯೂ ಸ್ತ್ರೀ ಸಂಪ್ರದಾಯದ ಹಾಡುಗಳನ್ನು ಹಾಡುವವರು ಸಿಗುತ್ತಾರೆ. 'ವಸಗೆ' 'ನಾಮಕರಣ' 'ಮದುವೆ'ಯಂತಹ ಕಾರ್ಯಗಳಲ್ಲಿ ಇವರ ಹಾಡುಗಳೇ ಪ್ರಧಾನವಾಗಿರುತ್ತವೆ. ಜಾನಪದ ವಿದ್ವಾಂಸ ಮೈಲಹಳ್ಳಿ ರೇವಣ್ಣನವರು ಚಿತ್ರದುರ್ಗ ಜಿಲ್ಲೆಯ ಜನಪದ ಕಾವ್ಯಗಳು ಕೃತಿಯಲ್ಲಿ ಸಂಗ್ರಹಿಸಿರುವ ಕಾವ್ಯಗಳೆಲ್ಲವು ಸ್ತ್ರೀಯರೇ ಹಾಡಿರುವಂಥವು. ಅದರಲ್ಲೂ ಮುಖ್ಯವಾಗಿ ಹರಿಜನ ಪಂಗಡದವರೆ ಹಾಡಿರುವಂಥವು.[೪೭] ಈ ರೀತಿಯಾಗಿ ಸ್ತ್ರೀ ಸಂಪ್ರದಾಯದ ಹಾಡುಗಳನ್ನು ಹಾಡುವ ಈ ಜನಾಂಗದವರಲ್ಲಿ ಅಡಗಿರುವ ಕಲೆಯನ್ನು ಗುರುತಿಸಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯು ಅನೇಕರಿಗೆ 'ಜಾನಪದಶ್ರೀ' ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಅವರೆಂದರೆ ಚಿತ್ರದುರ್ಗ ತಾಲ್ಲೂಕಿನ ಗುಡ್ಡದ ರಂಗವ್ವನ ಹಳ್ಳಿಯ ಓಬಳವ್ವ ಸ್ತ್ರೀ ಸಂಪ್ರದಾಯದ ಹಾಡುಗಳಿಗಾಗಿ(೧೯೮೯) ಮತ್ತು ತುರುವನೂರು ಗ್ರಾಮದ ಸಣ್ಣ ನರಸಿಂಹವ್ವ ತತ್ವಪದಗಳ ಹಾಡಿಗಾಗಿ, ೧೯೯೨ರಲ್ಲಿ ಚಳ್ಳಕೆರೆ ತಾಲ್ಲೂಕಿನ ಗೊರಲಕಟ್ಟೆಯ ಹನುಮಜ್ಜಿ, ೧೯೯೬ರಲ್ಲಿ ಮೊಳಕಾಲ್ಮೂರು ತಾಲ್ಲೂಕಿನ ಕೋನಸಾಗರದ ಪೆನ್ನಯ್ಯ ಪ್ರಶಸ್ತಿ ಪಡೆದವರಾಗಿದ್ದಾರೆ.[೪೮] ಜಿಶಂಪ ಅವರು ಹರಿಜನ ಜಾತಿಗೆ ಸೇರಿದ ಉಚ್ಚಂಗಿದುರ್ಗದ ಎಲಿಸವ್ವ ಸ್ತ್ರೀ ಸಂಪ್ರದಾಯದ ಹಾಡುಗಳನ್ನು ೧೯೬೭ರಲ್ಲಿ ಸಂಗ್ರಹಿಸಿ ದಕ್ಷಿಣ ಕನ್ನಡ ಜನಪದ ಪ್ರಕಾರಗಳಲ್ಲಿ ದಾಖಲಿಸಿರುವುದು ಕಂಡುಬರುತ್ತದೆ.[೪೯] ಈ ರೀತಿಯಲ್ಲಿ ಬೆಳಕಿಗೆ ಬಂದ ಕಲಾವಿದರು ಮಾತ್ರವಲ್ಲದೆ ಇನ್ನೂ ಅನೇಕರು ಈ ಜನಾಂಗದಲ್ಲಿ ಇದ್ದಾರೆ. ಯಾವ ಗ್ರಾಮಕ್ಕೆ ಹೋದರೂ ಸ್ತ್ರೀಸಂಪ್ರದಾಯದ ಹಾಡುಗಳನ್ನು ಹಾಡುವವರು ಇದ್ದೆ ಇರುತ್ತಾರೆ.

ಈ ರೀತಿಯಾಗಿ ಭಜನೆ, ಕೋಲಾಟ, ಸ್ತ್ರೀಸಂಪ್ರದಾಯದ ಹಾಡುಗಳನ್ನು ಮಾತ್ರವಲ್ಲದೆ ಜಾನಪದ ಗೀತೆಗಳನ್ನು ಅತ್ಯಂತ ಸೊಗಸಾಗಿ ಕೇಳುಗರ ಮನಮುಟ್ಟುವಂತೆ ಹಾಡುವ ಕಲಾವಿದರು ಈ ಜನಾಂಗದಲ್ಲಿ ಕಂಡುಬರುತ್ತಾರೆ. ಅಂಥವರಲ್ಲಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಯಲ್ಲಪ್ಪ, ಡಿ.ಓ.ಮೂರಾರ್ಜಿ ಕಂಡುಬಂದರೆ, ಚಳ್ಳಕೆರೆ ತಾಲ್ಲೂಕಿನಲ್ಲಿ ಚಂದ್ರಪ್ಪ ಎನ್ನುವವರು ಕಂಡುಬರುತ್ತಾರೆ. ಇನ್ನೂ ಅನೇಕರು ಎಲೆ ಮರೆಯ ಕಾಯಿಯಂತೆ ಯಾವುದೇ ಪ್ರೊತ್ಸಾಹವಿಲ್ಲದೆ ಕುಗ್ಗಿ ಹೋಗಿರುವುದು ಇದೆ.

**ಕಥೆಗಾರರು**

ಗ್ರಾಮೀಣ ಪರಿಸರದಲ್ಲಿ ಕಥೆ ಕೇಳುವುದೆಂದರೆ ಚಿಕ್ಕಮಕ್ಕಳಿಗೆ ಎಲ್ಲಿಲ್ಲದ ಆಸಕ್ತಿ. ಕಥೆ ಹೇಳುವವರ ಹತ್ತಿರ ಪ್ರತಿ ದಿನ ರಾತ್ರಿ ವೇಳೆಯಲ್ಲಿ ಕಥೆ ಕೇಳಲು ಹೋಗಿ ಮನೆಗೆ ಅವರು ವಾಪಸ್ಸು ಬರುವುದು ಕಥೆ ನಿಲ್ಲಿಸಿದ ಮೇಲೆಯೇ. ಮಕ್ಕಳ ಮನಸ್ಸಿನ ಮೇಲೆ ಪರಿಣಾಮ ಬೀರುವ ಕಥೆಗಾರಿಕೆಯನ್ನು ರೂಢಿಸಿಕೊಂಡ ಅನೇಕರು ಈ ಜನಾಂಗದಲ್ಲಿ ಕಾಣಸಿಗುತ್ತಾರಾದರೂ ಬೆಳಕಿಗೆ ಬಂದವರು ತುಂಬಾ ಕಡಿಮೆ. ನಾನು ಚಿಕ್ಕವಯಸ್ಸಿನವನಾಗಿದ್ದಾಗ ನಮ್ಮ ಗ್ರಾಮದಲ್ಲಿ(ಕಸ್ತೂರಿ

ರಂಗಪ್ಪನಹಳ್ಳಿ) ಪಾತಜ್ಜಿ ಮತ್ತು ಕಪ್ಪೆರಂಗಜ್ಜ ಎಂಬುವವರು ಕಥೆ ಹೇಳುವುದರಲ್ಲಿ ಎತ್ತಿದ ಕೈ.(ಅವರು ಈಗ ಇಲ್ಲ) ಕಥೆ ಹೇಳದ ದಿನಗಳೇ ಕಡಿಮೆ ಎನ್ನಬಹುದು. ಚಿತ್ರದುರ್ಗ ತಾಲ್ಲೂಕಿನ ತುರವನೂರು ಗ್ರಾಮದಲ್ಲಿ ಕಥಾಪ್ರಕಾರಕ್ಕಾಗಿಯೇ ಶಾಂತಜ್ಜಿ ಎಂಬುವವರು ೧೯೯೯ರಲ್ಲಿ 'ಜಾನಪದಶ್ರೀ' ಪ್ರಶಸ್ತಿಯನ್ನು ಪಡೆದಿದ್ದಾರೆ. ಈ ಕ್ಷೇತ್ರದಲ್ಲಿ ವಿಶೇಷವಾದ ಅಧ್ಯಯನ ಕೈಗೊಂಡರೆ ಹೆಚ್ಚಿನ ಸಂಖ್ಯೆಯಲ್ಲಿ ಕಥೆಗಾರರು ಬೆಳಕಿಗೆ ಬರಲು ಸಾಧ್ಯವಿದೆ.

### ರಂಗಭೂಮಿ ಕಲಾವಿದರು

ಮಾದಿಗ ಜನಾಂಗದಲ್ಲಿ ಅನೇಕರು ನಾಟಕ ರಚನೆ, ನಿರ್ದೇಶನ, ಅಭಿನಯ ಮುಂತಾದವುಗಳಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ನಾಟಕವನ್ನು ಈ ಜನಾಂಗದವರು ಅಭಿನಯಿಸುವುದಿದೆ. ಆದರೆ ಬಹುತೇಕರು ಹವ್ಯಾಸಿ ಕಲಾವಿದರಾಗಿದ್ದಾರೆ. ಆದರೆ ಬಳ್ಳಾರಿ ಜಿಲ್ಲೆಯ ಕಪ್ಪಗಲ್ಲು ಗ್ರಾಮದಲ್ಲಿ 'ಕಪ್ಪಗಲ್ ಮಾದಿಗ'ರೆಂದೇ ಖ್ಯಾತಿ ಪಡೆದ ರಂಗಭೂಮಿ ಕಲಾವಿದರು ಇರುವುದು ಒಂದು ವಿಶೇಷ. ಇವರು ಅಭಿನಯವನ್ನು ತಮ್ಮ ವೃತ್ತಿಯನ್ನಾಗಿ ಸ್ವೀಕರಿಸಿ ಊರಿಂದ ಊರಿಗೆ ಹೋಗಿ ನಾಟಕ ಮಾಡಿ ಜೀವನ ಮಾಡುತ್ತಿದ್ದರು. ಕಪ್ಪಗಲ್ಲು ಗ್ರಾಮಕ್ಕೆ ಹೋಗಿ ನಾಟಕ ಕಲಾವಿದರಾದ ಈರಮ್ಮ, ಮರಿಬಸಪ್ಪ ಹಾಗೂ ಅಂಬಣ್ಣನವರನ್ನು ಸಂದರ್ಶಿಸಿದ್ದಾಗ ಹೆಚ್ಚು ವಿವರಗಳು ಕಲಾವಿದರ ಬಗ್ಗೆ ತಿಳಿಯಿತು. ಮೂಲತಃ ನಾಟಕ ಕಲಾವಿದರ ಕುಟುಂಬಗಳ ಹಿಂದೆ ೧೮ ಮನೆಗಳಿದ್ದು ಅವರೆಲ್ಲರು ನಾಟಕವನ್ನು ಆಡುತ್ತಾ ಜೀವನ ಸಾಗಿಸುತ್ತಿದ್ದರು. ಅಂತಹ ಕಲಾವಿದರೆಂದರೆ ಈರಮ್ಮ, ಮರಿಬಸಪ್ಪ, ಅಂಬಣ್ಣ, ಸಣ್ಣಮಾರಮ್ಮ, ಪದ್ಮಮ್ಮ, ಷೇಕಮ್ಮ, ಪಾರ್ವತಮ್ಮ, ಓಂಕಾರಮ್ಮ, ಕಮಲಮ್ಮ, ಹುಸೇನಮ್ಮ, ಗಿರಿಮಲ್ಲಪ್ಪ, ಮರಬಸಪ್ಪ, ಸಂಜೀವಪ್ಪ, ಶಿವನಂದಪ್ಪ ಹಾಗೂ ರಂಗಪ್ಪನವರು ಮುಖ್ಯರು. ಇವರಲ್ಲಿ ಮಾರಮ್ಮ, ದೊಡ್ಡಮಾರಮ್ಮ, ಹುಲಿಗಮ್ಮ, ದೊಡ್ಡ ಹನುಮಂತಪ್ಪ, ನಾಗಭೂಷಣ, ಕೊತ್ತಲಪ್ಪ, ಬುದ್ದಪ್ಪ, ಮಾಯಪ್ಪ, ಕರೆಪ್ಪ, ಸಾರಥಿಬಸಪ್ಪ ಹಾಗೂ ಗಾದೆಪ್ಪನವರು ಸಾವನ್ನಪ್ಪಿದ್ದಾರೆ. ಆದರೂ ಈ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗುತ್ತಿರುವವರು ನಿಂಗಮ್ಮ ಮತ್ತು ಗುರುಶಾಂತಮ್ಮ ಮಾತ್ರ.

'ಕಪ್ಪಗಲ್ ಮಾದಿಗ' ನಾಟಕ ಕಲಾವಿದರು ಅನೇಕ ನಾಟಕಗಳನ್ನು ಆಡುತ್ತಿದ್ದು ಅವುಗಳಲ್ಲಿ ಪ್ರಮುಖವು ಹೀಗಿವೆ. 'ಕುಮಾರರಾಮ', 'ಕಂಸಾವರ', 'ದುಶ್ಯಾಸನ ಕಥೆ'ಗಳು. ಇವರು ನಾಟಕ ಆಡಲು ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ, ಭದ್ರಾವತಿ, ಶಿವಮೊಗ್ಗ, ಹರಿಹರ, ಸಿಂಧನೂರು ರಾಯಚೂರು, ಸಿರುಗುಪ್ಪ, ಹಿರೇಕೆರೂರು ಮುಂತಾದ ಪ್ರದೇಶಗಳಿಗೆ ಹೋಗುತ್ತಿದ್ದರಂತೆ. "ಕುಮಾರ ರಾಮನ ಕಥೆಯನ್ನು ಗರ್ಭೀಕರಿಸಿಕೊಂಡು ಕನ್ನಡದಲ್ಲಿ ರಚನೆಯಾದ ಯಕ್ಷಗಾನಗಳನ್ನು ಈಗಲೂ ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳಲ್ಲಿ ಆದಿಕರ್ನಾಟಕರು ಆಡುತ್ತಿದ್ದರೆಂಬುದಾಗಿ ದಿ.ಹುಲ್ಲೂರು ಶ್ರೀನಿವಾಸ ಜೋಯಿಸರು ತಮ್ಮ ಪುಸ್ತಕದಲ್ಲಿ ಸೂಚಿಸಿರುತ್ತಾರೆ."[೫] ಈ ಅಂಶವು ಮಾದಿಗರು ನಾಟಕ

ಕಲಾವಿದರಾಗಿದ್ದರೆಂಬುದನ್ನು ಖಚಿತಪಡಿಸುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚು ಬಯಲಾಟಗಳನ್ನು ಆಡುತ್ತಿರುವುದು ಕಂಡುಬರುತ್ತದೆ. ಪಾರಂಪರಿಕ ಕಲೆಯಾದ ಬಯಲಾಟ ಇಂದಿಗೂ ರೈತಾಪಿ ಜನಗಳ ಅದರಲ್ಲೂ ಕೆಳವರ್ಗದ ಜನಗಳ ಮಧ್ಯೆ ಜೀವ ಹಿಡಿದಿದೆ. ಇವರೆಲ್ಲ ಬಹುತೇಕ ಅನಕ್ಷರಸ್ಥರಿದ್ದು ಮತ್ತು ಪ್ರಧಾನವಾಗಿ ದುಡಿಮೆಗಾರರಾಗಿದ್ದುದರಿಂದ ಸುಗ್ಗಿಯಾದ ಮೇಲೆ ಹವ್ಯಾಸಿ ಬಯಲಾಟಗಳನ್ನು ಆಡುತ್ತಿದ್ದರು.[೫೫]

ಚಿತ್ರದುರ್ಗ ಜಿಲ್ಲೆಯಲ್ಲಿ ವೃತ್ತಿ ಕಲಾವಿದರಿಲ್ಲ. ಕೇವಲ ಹವ್ಯಾಸಿ ಕಲಾವಿದರು ಮಾತ್ರವೇ ಕಂಡುಬರುತ್ತಾರೆ. ಈ ಜಿಲ್ಲೆಯಲ್ಲಿ ನಾಟಕ ಕಲಿಸುವ ಅನೇಕರು ಈ ಜನಾಂಗದಲ್ಲಿ ಇದ್ದಾರೆ. ಹಿರಿಯೂರು ತಾಲ್ಲೂಕಿನ ಮಾನಗೊಂಡನಹಳ್ಳಿ ಗ್ರಾಮದ ಹನುಮಂತಪ್ಪ ಎಂಬುವವರು(ಈಗಿಲ್ಲ) ಆ ತಾಲ್ಲೂಕಿನ ಅನೇಕ ಗ್ರಾಮಗಳಲ್ಲಿ ನಾಟಕಗಳನ್ನು ಆಡಿಸಿದ್ದಾರೆ.ಅವರು ಪ್ರಮುಖವಾಗಿ ಆಡಿಸುತ್ತಿದ್ದ ನಾಟಕ 'ಸತ್ಯ ಹರಿಶ್ಚಂದ್ರ'ವಾಗಿದೆ. 'ಜಾನಪದಶ್ರೀ' ಪ್ರಶಸ್ತಿ ಪಡೆದ ಚಿತ್ರದುರ್ಗ ತಾಲ್ಲೂಕಿನ ತುರವನೂರು ಗ್ರಾಮದ ಶಾಂತಜ್ಜಿ ಅವರ ಪತಿ ನಿಂಗಪ್ಪ ಯಕ್ಷಗಾನ ಕಲಾವಿದರಾಗಿದ್ದರು. ಅವರು ನಿರ್ವಹಿಸುತ್ತಿದ್ದ ಶ್ರೀಕೃಷ್ಣನ ಪಾತ್ರ ಚಿತ್ರದುರ್ಗ ಜಿಲ್ಲೆಯಲ್ಲಿಯೇ ಹೆಸರುವಾಸಿಯಾಗಿತ್ತಂತೆ.[೫೬]

ಇಂದು ಈ ಜಿಲ್ಲೆಯ ಅನೇಕ ಗ್ರಾಮಗಳಲ್ಲಿ ಪೌರಾಣಿಕ ಚಾರಿತ್ರಿಕ ಮಾತ್ರವಲ್ಲದೇ ಸಾಮಾಜಿಕ ನಾಟಕಗಳನ್ನು ಆಡುವುದು ಕಂಡುಬರುತ್ತದೆ. ಇಂದಿನ ಟಿ.ವಿ., ಸಿನಿಮಾ ಮಾಧ್ಯಮಗಳ ಪ್ರವೇಶದಿಂದಾಗಿ ನಾಟಕ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದೆ. ಆದರೂ ಇಂದಿಗೂ ಅಲ್ಲೊಂದು ಇಲ್ಲೊಂದು ನಾಟಕ ಹವ್ಯಾಸಿ ಕಲಾವಿದರು ಅಭಿನಯಿಸುವುದನ್ನು ನೋಡಬಹುದಾಗಿದೆ.

**ಬ್ಯಾಂಡ್‌ಸೆಟ್ ಮಾಡುವವರು**

ಮದುವೆಯಂತಹ ಶುಭಕಾರ್ಯಗಳಲ್ಲಿ ಮಂಗಳವಾದ್ಯಗಳನ್ನು ಚಿತ್ರದುರ್ಗ ಬಳ್ಳಾರಿ ಜಿಲ್ಲೆಗಳಲ್ಲಿ ಮಾಡುವವರು(ಊದುವವರು) ಕೊರಚರು, ಹೊಲೆಯರು ಹಾಗೂ ಮಾದಿಗರಾಗಿರುತ್ತಾರೆ. ಆದರೆ ಈ ಭಾಗಗಳಲ್ಲಿ ಮಂಗಳವಾದ್ಯ ಎಂದು ಪರಿಗಣಿತವಾಗಿರುವ ಬ್ಯಾಂಡ್ ಸೆಟ್ ವಾದ್ಯಗಳನ್ನು ಮಾಡುವ ಮಾದಿಗರು ಅತ್ಯಂತ ಕಡಿಮೆ. ಚಿತ್ರದುರ್ಗ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಹಿರಿಯೂರು ತಾಲ್ಲೂಕಿನ ಮರಡಿಹಳ್ಳಿ ಗ್ರಾಮದಲ್ಲಿ ಮಣ್ಣಪ್ಪ ಸೇರಿದಂತೆ ಒಟ್ಟು ೧೨ ಜನ ಬ್ಯಾಂಡ್ ಸೆಟ್ ಮಾಡುವವರು ಇದ್ದರು. ಅವರು ಜಿಲ್ಲೆಯ ಅನೇಕ ಭಾಗಗಳಲ್ಲಿ ಮದುವೆ ಮುಂತಾದ ಕಾರ್ಯಗಳಿಗೆ ಹೋಗುತ್ತಿದ್ದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಇವರು ಭಾಗವಹಿಸಿ ಶಿಕ್ಷೆಯನು ಪಡೆದಿರುವರು. ಸ್ವಾತಂತ್ರ್ಯನಂತರಲ್ಲಿಯೂ ಬ್ಯಾಂಡ್ ಸಟ್ ಮಾಡುವುದನ್ನು ಮುಂದುವರಿಸಿದರು. ಆದರೆ ಈಗ ಆ ಕೆಲಸವ ನಿಲ್ಲಿಸಿದ್ದಾರೆ. ಇಂದು ಬ್ಯಾಂಡ್ ಸೆಟ್ ಊದುವವರ ಅನೇಕ ತಂಡಗಳು ಈ ಜನಾಂಗದಲ್ಲಿರುವುದು ಕಂಡುಬರುತ್ತದೆ. ಹಿರಿಯೂರು ತಾಲ್ಲೂಕಿನ ಉಪ್ಪಳಗೆರೆ, ತೆಕಲವಟ್ಟಿ, ಹರ್ತಿಕೋಟೆಗಳಲ್ಲೂ ಇದ್ದಾರೆ. ಚಿತ್ರದುರ್ಗ ನಗರದಲ್ಲಿ ಶ್ರೀನಿವಾಸ್ ಎಂಬುವವರು ಟ್ಯಾಶ್ಯುವಾದ್ಯ ಒಂದು ತಂಡವನ್ನು

ಕಟ್ಟಿಕೊಂಡು ಅನೇಕ ಶುಭಕಾರ್ಯಗಳಿಗೆ ಮೇಳ ಮಾಡಲು ಹೋಗುತ್ತಾರೆ. ಬಳ್ಳಾರಿ ಜಿಲ್ಲೆಯಲ್ಲಿ ಈ ರೀತಿಯ ತಂಡಗಳು ಕಂಡುಬರುವುದಿಲ್ಲ.

ತಮಟೆ ಅಥವಾ ಹಲಗೆ ಬಾರಿಸುವುದು, ಚೌಡಿಕೆ, ಕೋಲಾಟ, ಕಥೆಗಾರಿಕೆ, ನಾಟಕ ಅಭಿನಯ, ಹಾಡುಗಾರಿಕೆ, ಬ್ಯಾಂಡ್ ಸೆಟ್ ಮುಂತಾದ ಜಾನಪದ ಕಲೆಗಳನ್ನು ಉಳಿಸಿ ಬೆಳಸುತ್ತಿರುವವರಲ್ಲಿ ಮಾದಿಗರು ಸಹ ಒಬ್ಬರಾಗಿದ್ದಾರೆ. ಇವುಗಳಲ್ಲಿ ತಮಟೆ ಅಥವಾ ಹಲಗೆ ಬಾರಿಸುವ ಕಲೆ ಮಾದಿಗರಲ್ಲಿ ಕರಗತವಾಗಿದೆ.

## ೭.೫ ಸಾಹಿತ್ಯ ಮತ್ತು ಸಂಶೋಧನೆ ಕ್ಷೇತ್ರದಲ್ಲಿ ಮಾದಿಗರು

ಒಂದು ಕಾಲಕ್ಕೆ ಸಾಹಿತ್ಯ ಮತ್ತು ಸಂಶೋಧನೆ ಕೇವಲ ಬ್ರಾಹ್ಮಣ ವರ್ಗಕ್ಕೆ ಸೀಮಿತವಾಗಿತ್ತು. ಇಂತಹ ಸಂಪ್ರದಾಯವನ್ನು ಅಲುಗಾಡಿಸಿ ಮಾದಿಗರಂಥ ಕೆಳಜಾತಿಯ ಜನರು ಸಾಹಿತ್ಯ ರಚನೆಯಲ್ಲಿ ತೊಡಗುವಂತೆ ಮಾಡಿದ್ದು ೧೨ನೇ ಶತಮಾನದ ವಚನ ಚಳುವಳಿ. ಆನಂತರದಲ್ಲಿ ವಸಾಹತು ಶಾಹಿ ಕಾಲಘಟ್ಟದಲ್ಲಿ ಅಸ್ಪೃಶ್ಯರಿಗೆ ನೀಡಿದ ಶಿಕ್ಷಣ ಅವಕಾಶ ಮತ್ತು ಡಾ.ಅಂಬೇಡ್ಕರ್ ನಡೆಸಿದ ದೀರ್ಘ ಹೋರಾಟದ ಪರಿಣಾಮವಾಗಿ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಶಿಕ್ಷಣ ಪಡೆಯುವ ಅನುಕೂಲತೆಗಳು ಹೆಚ್ಚಾದವು. ಇದರಿಂದಾಗಿ ಸುಮಾರು ೭೦ರ ದಶಕದಿಂದ ಅನೇಕರು ಸಾಹಿತ್ಯ ಮತ್ತು ಸಂಶೋಧನಾ ಕ್ಷೇತ್ರದಲ್ಲಿ ಕೃಷಿ ಮಾಡಲು ಆರಂಭಿಸಿದರು. ಇತ್ತೀಚೆಗೆ ಅನೇಕರು ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ಮತ್ತು ಸಂಶೋಧನ ಕ್ಷೇತ್ರಗಳಲ್ಲಿ ತಮ್ಮ ಬರವಣಿಗೆಗಳ ಮೂಲಕ ಗುರುತಿಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಪ್ರದೇಶಗಳಲ್ಲಿ ನೆಲೆಸಿರುವ ಮಾದಿಗ ಜನಾಂಗದ ಅನೇಕರು ಸಾಹಿತ್ಯ ಮತ್ತು ಸಂಶೋಧನೆ ಕ್ಷೇತ್ರಕ್ಕೆ ಕೊಡುಗೆಯನ್ನು ನೀಡಿದ್ದಾರೆ. ಅವರ ಕೊಡಗೆಯನ್ನು ಕುರಿತು ಈ ಕೆಳಗೆ ಚರ್ಚಿಸಲಾಗಿದೆ.

### ಡಾ. ಮೈಲಹಳ್ಳಿ ರೇವಣ್ಣ

ಮಾದಿಗ ಜನಾಂಗಕ್ಕೆ ಸೇರಿದವರಾಗಿರುವ ಇವರು ಸಾಹಿತ್ಯ ಕ್ಷೇತ್ರದಲ್ಲಿ ಜಾನಪದ ವಿದ್ವಾಂಸರಾಗಿ ಗುರುತಿಸಿಕೊಂಡಿದ್ದಾರೆ. ಮೂಲತಃ ಚಿತ್ರದುರ್ಗ ಜಿಲ್ಲೆಯ ಗ್ರಾಮೀಣ ಪ್ರದೇಶದವರಾದ ಇವರು 'ಜಾನಪದಶ್ರೀ' ಪ್ರಶಸ್ತಿ ಪಡೆದ ಕತೆಗಾರ್ತಿ ಶಾಂತಜ್ಜಿಯ ಕಲಾಪುತ್ರರು. ಸಾಹಿತ್ಯದ ವಿದ್ಯಾರ್ಥಿಯಾಗಿದ್ದಾಗ, ಮಾದಿಗ ಜನಾಂಗದಲ್ಲಿ ಅಡಗಿರುವ ಜಾನಪದ ಸಾಹಿತ್ಯವನ್ನು ಕಂಡು ಬೆರಗಾಗಿ ಅಲ್ಲಿಂದಲೇ ತಮ್ಮ ಸಂಶೋಧನೆಯನ್ನು ಆರಂಭಿಸಿ ಜಾನಪದ ಸಾಹಿತ್ಯದ ಸಂಗ್ರಹಣೆ ಮಾಡುತ್ತ ಹೋದರು. 'ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜನಪದ ಕಾವ್ಯಗಳು' ಎಂಬ ವಿಷಯದ ಮೇಲಿನ ಇವರ ಮಹಾಪ್ರಬಂಧಕ್ಕೆ 'ಡಾಕ್ಟರೇಟ್ ' ಪದವಿ ಪಡೆದಿದ್ದಾರೆ. ಅಲ್ಲದೇ ಜಾನಪದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅನೇಕ ಕೃತಿಗಳನ್ನೂ ರಚಿಸಿರುವುದು ಕಂಡುಬರುತ್ತದೆ. ಅವುಗಳಲ್ಲಿ 'ಚಿತ್ರದುರ್ಗ ಸುತ್ತಿನ ಜಾನಪದ

ಕಾವ್ಯಗಳು'(೧೯೮೪), 'ದೇವಿಗುಮ್ಮ ಮತ್ತು ಇತರ ಜಾನಪದ ಕಥೆಗಳು((೧೯೮೫) 'ಜಂಬುನೇರಳೆ ಹಣ್ಣು ಜಗ್ಗಿಬಿದ್ದಾವೆ'(೧೯೯೪) ಮುಂತಾದವು ಮುಖ್ಯವಾಗಿವೆ. ಇವರು ಜಾನಪದ ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿರುವ ಸೇವೆಗಾಗಿ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಗೌರವ, ಪ್ರಶಸ್ತಿಗಳನ್ನು ನೀಡಿ ಸನ್ಮಾನಿಸಿದ್ದಾರೆ. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿಯಿಂದ 'ಅಕಾಡಮಿ' ಪ್ರಶಸ್ತಿಯನ್ನು ಮೂರು ಸಾರಿ ಪಡೆದಿದ್ದಾರೆ. ಚಿತ್ರದುರ್ಗದ ಶ್ರೀ ಮರುಘಾ ಮಠವು 'ಜಾನಪದ ರಕ್ಷಕ' ಪ್ರಶಸ್ತಿಯನ್ನು ನೀಡಿದರೆ ಭಾರತೀಯ ದಲಿತ ಸಾಹಿತ್ಯ ಅಕಾಡಮಿಯಿಂದ ೧೯೯೬ರಲ್ಲಿ 'ಅಂಬೇಡ್ಕರ್ ಫೆಲೋಶಿಪ್' ಪ್ರಶಸ್ತಿಯನ್ನು ಪಡೆದಿದ್ದಾರೆ. ಈ ರೀತಿ ಸಾಹಿತ್ಯ ಸಂಶೋಧನ ಕ್ಷೇತ್ರಗಳಲ್ಲಿ ಗುರುತಿಸಿಕೊಂಡು ಸೇವೆ ಸಲ್ಲಿಸುತ್ತಿರುವ ಇವರು ಪ್ರಸ್ತುತ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಉಪನಿರ್ದೇಶಕರಾಗಿದ್ದಾರೆ.

ಪ್ರೊ.ಲಕ್ಷ್ಮಣ್ ತೆಲಗಾವಿ

ಮಾದಿಗ ಜನಾಂಗ ಸಂಬಂಧಿತ ಜಾತಿಯಾದ ಸಮಗಾರ ಜನಾಂಗಕ್ಕೆ ಸೇರಿದ ಇವರು ಚರಿತ್ರೆ ವಿದ್ಯಾರ್ಥಿಯಾಗಿದು ಇವರ ಸಂಶೋಧನೆಗೆ ಚಿತ್ರದುರ್ಗ ಐತಿಹಾಸಿಕ ಕೋಟೆ ಪರಿಸರವು ಪ್ರೇರಣೆ ನೀಡಿತು. ವಿದ್ಯಾರ್ಥಿದೆಸೆಯಿಂದಲೇ ಸಂಶೋಧನೆ ಕೈಗೊಂಡ ಇವರು ಚಿತ್ರದುರ್ಗ ಚರಿತ್ರೆಗೆ ಸಂಬಂಧಪಟ್ಟ ಅನೇಕ ಲೇಖನಗಳನ್ನು ಬರೆದು ಪ್ರಕಟಿಸಿದ್ದರು. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದಲ್ಲಿ ಅಧ್ಯಾಪಕರಾಗಿರುವ ಇವರು ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದ ಚರಿತ್ರೆಯನ್ನು ಸಮಗ್ರವಾಗಿ ಅರಿಯಲು ಮೂವತ್ತು ವರ್ಷಗಳ ಕಾಲ ಸಂಶೋಧನೆಯಲ್ಲಿ ತಮ್ಮನ್ನು ತೊಡಗಿಕೊಂಡಿದ್ದಾರೆ. ಸಂಶೋಧನೆಯಲ್ಲಿ ಅವರು ತೆಗೆದ ಫೋಟೋಗಳು ಹತ್ತು ಸಾವಿರಕ್ಕೂ ಹೆಚ್ಚು ಇವೆ. ಅವರೊಬ್ಬ ಅತ್ಯುತ್ತಮ ಛಾಯಚಿತ್ರ ಗ್ರಾಹಕರೂ ಹೌದು. ಇವರು ಅನೇಕ ಮೌಲಿಕ ಕೃತಿಗಳನ್ನು ರಚಿಸಿರುವುದು ಮಾತ್ರವಲ್ಲದೆ ಅನೇಕ ಕೃತಿಗಳನ್ನು ಸಂಪಾದನೆ ಮಾಡಿ ಪ್ರಕಟಿಸಿರುವುದು ಕಂಡಬರುತ್ತದೆ. ಸಂಪಾದಿತ ಪ್ರಮುಖ ಕೃತಿಗಳೆಂದರೆ 'ಚಂದ್ರವಳ್ಳಿ: ಚಿತ್ರದುರ್ಗ ಜಿಲ್ಲೆಯ ಇತಿಹಾಸ ಕುರಿತ ಲೇಖನಗಳ ಸಂಗ್ರಹ(೧೯೭೬), 'ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು ಭಾಗ-೧,(೧೯೭೬), 'ಐತಿಹಾಸಿಕ ಚಿತ್ರದುರ್ಗ, ಚಿತ್ರದುರ್ಗ ಜಿಲ್ಲೆಯ ಇತಿಹಾಸ ಕುರಿತ ಲೇಖನಗಳ ಸಂಗ್ರಹ(೧೯೮೦), ಹರತಿಸಿರಿ(ಹೆಚ್ .ವಿ.ವೀರನಾಯಕ 'ಹರತಿ' ಅವರ ನೆನಪಿನ ಸಂಪುಟ ೧೯೮೭), ಸಂಶೋಧನ(ಡಾ.ಎಂ.ಚಿದಾನಂದ ಮೂರ್ತಿ ಅವರ ಗೌರವ ಸಂಪುಟ ೧೯೯೧), ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು ಭಾಗ-೨, (೧೯೯೨) ಮುಂತಾದವು. ಅವರೇ ಸ್ವತಃ ರಚಿಸಿರುವ ಪ್ರಮುಖ ಕೃತಿಗಳೆಂದರೆ 'ಚಿತ್ರದುರ್ಗ ದರ್ಶಿನಿ'(ಇತರರೊಡನೆ, ಚಿತ್ರದುರ್ಗದ ಸಚಿತ್ರ ಮಾರ್ಗದರ್ಶಿ(೧೯೮೦), 'ಜನಪದ ವೀರಸಾಹಿತ್ಯ: ಚಾರಿತ್ರಿಕ ವಿವೇಚನೆ(೧೯೮೭), ಇದು

ಚಿತ್ರದುರ್ಗ(೧೯೯೭ ಮತ್ತು ೧೯೯೯), ಚಿತ್ರದುರ್ಗ ಇನ್ ಸೈಟ್ (೧೯೯೯), 'ಬುರುಗು'(ಚಿಂತನ ಲೇಖನ ಸಂಕಲನ (೧೯೯೯), 'ಚಿತ್ರದುರ್ಗ ನಾಯಕ ಅರಸರ ಚರಿತ್ರೆ : ಒಂದು ಸ್ಥೂಲ ನೋಟ(೧೯೯೯), ಪ್ರಚಲಿತ ಹೋರಾಟ ಮತ್ತು ಸಮಸ್ಯೆಗಳನ್ನು ಕುರಿತ 'ಹಿಂದುಳಿದ ವರ್ಗಗಳ ಮತ್ತು ದಲಿತ ಚಳುವಳಿಗಳು(೧೯೯೯) ಮುಂತಾದವು. ಚಿತ್ರದುರ್ಗ ಪಾಳೆಯಗಾರರ ಚರಿತ್ರೆಗೆ ಸಂಬಂಧಪಟ್ಟಂತೆ ಅವರು ಮಾಡಿರುವಷ್ಟು ಸಂಶೋಧನೆ ಮತ್ತಾರು ಮಾಡಿರಲಾರರು ಎನ್ನಬಹುದು. ಸಂಶೋಧನೆಗಾಗಿ ತಮ್ಮ ಜೀವನವನ್ನೆ ಮುಡುಪಾಗಿಟ್ಟಿರುವ ಇವರು ಬ್ರಹ್ಮಚಾರಿಗಳು ಕೂಡ. ಸಾಹಿತ್ಯ ಮತ್ತು ಸಂಶೋಧನೆಗೆ ಇವರು ನೀಡಿದ ಕೊಡುಗೆ ಅತ್ಯಮೂಲ್ಯವಾದದ್ದು. ಇವರ ದೀರ್ಘಕಾಲದ ಸಂಶೋಧನೆಯನ್ನು ಗುರುತಿಸಿ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಗೌರವ ಪ್ರಶಸ್ತಿ ನೀಡಿ ಗೌರವಿಸಿವೆ. ಅವುಗಳಲ್ಲಿ ಚಿತ್ರದುರ್ಗ ನಗರಸಭೆಯು ಮೇ ೧೦, ೧೯೯೯ರಲ್ಲಿ 'ಪೌರ ಸನ್ಮಾನ' ಮಾಡಿ ಗೌರವಿಸಿದೆ. ಭಾರತೀಯ ದಲಿತ ಸಾಹಿತ್ಯ ಅಕಾಡಮಿಯು ೧೯೯೯ರಲ್ಲಿ 'ಡಾ.ಅಂಬೇಡ್ಕರ್ ಫೆಲೋಶಿಪ್' ನೀಡಿದೆ. ಇವುಗಳಲ್ಲದೆ ಅನೇಕ ಸಂಘಸಂಸ್ಥೆಗಳು ಗೌರವಿಸಿ ಸನ್ಮಾನಿಸಿವೆ.

ಲಕ್ಷ್ಮಣ್ ತೆಲಗಾವಿಯವರು ಸಂಶೋಧನೆಗಾಗಿ ವಿವಿಧ ವೃತ್ತಿಯಲ್ಲಿರುವ ಅನೇಕ ಹವ್ಯಾಸಿ ಸಂಶೋಧಕರನ್ನು ಸೇರಿಸಿಕೊಂಡು 'ಚಿತ್ರದುರ್ಗ ಸಂಶೋಧನ ತಂಡ'ವನ್ನು ಕಟ್ಟಿ ಬೆಳೆಸಿದ್ದಾರೆ. ಈ ತಂಡದಲ್ಲಿ ೪೦ಕ್ಕೂ ಹೆಚ್ಚು ಹವ್ಯಾಸಿ ಸಂಶೋಧಕರು ಇದ್ದಾರೆ. ಈ ತಂಡದಲ್ಲಿ ೫ಕ್ಕೂ ಹೆಚ್ಚು ಸಂಶೋಧಕರು ಮಾದಿಗ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಇದಲ್ಲದೇ ಅನೇಕ ಟೆಲಿ-ಸಾಕ್ಷಿಚಿತ್ರಗಳು ಮತ್ತು ಧಾರಾವಾಹಿಗಳಲ್ಲಿ ಮಾರ್ಗದರ್ಶನ, ಸಾಹಿತ್ಯರಚನೆ ಹಾಗೂ ಅಭಿನಯ ಸಹ ಮಾಡಿರುವರು.

**ಪ್ರೊ. ಸಿ.ಕೆ. ಮಹೇಶ್**

ಮಾದಿಗ ಜನಾಂಗಕ್ಕೆ ಸೇರಿದ ಇವರು(ಚಿತ್ರದುರ್ಗ) ನಗರ ವಾಸಿಗಳಾಗಿದ್ದು, ಸಾಹಿತ್ಯ ಕ್ಷೇತ್ರಕ್ಕೆ ಇವರು ನೀಡಿರುವ ಕೊಡುಗೆಯು ಸಹ ಪ್ರಮುಖವಾದುದಾಗಿದೆ. ದಲಿತ ಸಂಘರ್ಷ ಸಮಿತಿಯ ಬೌದ್ಧಿಕ ವಲಯದಲ್ಲಿ ಒಬ್ಬರಾಗಿರುವ ಇವರು ಬರೆದಿರುವ ಅನೇಕ ಕೃತಿಗಳು ದಲಿತ ಲೋಕದ ಒಳನೋಟವನ್ನು ತೆರೆದಿಡುತ್ತದೆ. ಒಬ್ಬ ದಲಿತ ಸಾಹಿತಿಯಾಗಿ ಗುರುತಿಸಿಕೊಂಡಿರುವ ಇವರು ಅನೇಕ ಕೃತಿಗಳ ರಚನೆ ಮತ್ತು ಭಾಷಾಂತರ ಮಾಡಿದ್ದಾರೆ. ''ಗಾಂಧಿ ಮತ್ತು ಅಂಬೇಡ್ಕರ್, 'ವಿವೇಚನ ಪಥ', 'ಮಹಾಡ್ ಸತ್ಯಾಗ್ರಹ', 'ಬಹುಜನಸಮಾಜ ಮತ್ತು ಬ್ರಾಹ್ಮಣ್ಯ', 'ಚಮಚಯುಗ', 'ಕಾರಂಚೇಡು ಕೊಲೆಗಳು' ಇತ್ತೀಚೆಗೆ ಹೊರಬಂದ 'ಅಂಬೇಡ್ಕರ್ ಮತ್ತು ಮೀಸಲಾತಿ ವರ್ಗೀಕರಣ' ಕೃತಿಯಲ್ಲಿ ಪ್ರಚಲಿತ ಸಮಸ್ಯೆಯನ್ನು ಕೇಂದ್ರವಾಗಿಟ್ಟುಕೊಂಡು ರಚನೆ ಮಾಡಲಾಗಿದೆ. ಈ ರೀತಿ ಸಾಹಿತ್ಯ ಲೋಕಕ್ಕೆ ತಮ್ಮ ಕೊಡುಗೆಯನ್ನು ನೀಡುವುದರ ಜೊತೆಗೆ ಚಿತ್ರದುರ್ಗದಲ್ಲಿರುವ ಸರ್ಕಾರಿ ಕಲಾ ಕಾಲೇಜು ಪ್ರಾಂಶುಪಾಲರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ.

**ಡಾ. ಕೆ. ಆರ್. ದುರ್ಗಾದಾಸ್**

ಮಾದಿಗ ಜನಾಂಗಕ್ಕೆ ಸೇರಿದ ಇವರು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ರಾಮಸಾಗರ ಗ್ರಾಮದವರು. ವೃತ್ತಿಯಲ್ಲಿ ಅಧ್ಯಾಪಕರಾಗಿರುವ ಇವರು ಪ್ರಸ್ತುತ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಅಧ್ಯಾಪಕರಾಗಿದ್ದಾರೆ. ತಮ್ಮ ಚಿಕ್ಕ ವಯಸ್ಸಿನಿಂದಲೂ ಈ ಭಾಗದ ಬಯಲಾಟಗಳನ್ನು ಗಮನಿಸುತ್ತಿದ್ದ ಇವರಿಗೆ ಈ ಬಗ್ಗೆ ಆಸಕ್ತಿ ಹೊಂದಿ ಸಂಶೋಧನೆ ಕೈಗೊಂಡರು. ಇವರು ಬಳ್ಳಾರಿ ಜಿಲ್ಲೆಯ ಬಯಲಾಟಗಳು' ಮಹಾಪ್ರಬಂಧ ರಚಿಸಿ ಗುಲ್ಬರ್ಗಾ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿ ಪಡೆದಿದ್ದಾರೆ. ಈ ಕೃತಿಯು ಬಳ್ಳಾರಿ ಜಿಲ್ಲೆಯ ಬಯಲಾಟಗಳ ಕುರಿತು ಅತ್ಯುತ್ತಮವಾದ ಮಾಹಿತಿಯನ್ನು ಒದಗಿಸುತ್ತದೆ. ಇದಲ್ಲದೆ ಕೃತಿಗಳನ್ನು ರಚಿಸುವುದರ ಜೊತೆಗೆ ಪ್ರಚಲಿತ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಮೌಲ್ಯಯುತವಾದ ಅನೇಕ ಲೇಖನಗಳನ್ನು ರಚಿಸಿದ್ದಾರೆ.

**ಎಸ್. ಆರ್. ಗುರುನಾಥ್**

ಮಾದಿಗ ಜನಾಂಗಕ್ಕೆ ಸೇರಿರುವ ಇವರು ಚಿತ್ರದುರ್ಗ ತಾಲ್ಲೂಕಿನ ಸಿಂಗಾಪುರ ಗ್ರಾಮದವರು. ಪ್ರಸ್ತುತ ಇವರು ಜಿಲ್ಲೆಯ ಕೈಗಾರಿಕೆ ತರಬೇತಿ ಇಲಾಖೆಯಲ್ಲಿ ತರಬೇತಿ ನೀಡುವ ವೃತ್ತಿಯಲ್ಲಿದ್ದಾರೆ. ಇವರು ಹವ್ಯಾಸಿ ಸಂಶೋಧಕರು ಕೂಡ. ಇವರು ಸಾಹಿತ್ಯ ಕ್ಷೇತ್ರಕ್ಕೆ ನೀಡಿರುವ ಕೊಡುಗೆ ಅಪಾರವಾಗಿದೆ. ಎಲೆ ಮರೆಯ ಕಾಯಿಯಂತೆ ಬೆಳೆದಿರುವ ಇವರು ನೂರಾರು ಕಥೆಗಳನ್ನು ಬರೆದಿದ್ದಾರೆ. ಅವುಗಳು ಕೆಲವು ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಅನೇಕ ಕಥಾಸಂಕಲನಗಳ ಜೊತೆಗೆ ಜಿಲ್ಲೆಯ ಅನೇಕ ದಲಿತ ಬರಹಗಾರರಿಗೆ ಪ್ರೋತ್ಸಾಹ ನೀಡುವ ಸಲುವಾಗಿ ಕೆಲವು ಕವನ ಸಂಕಲಗಳನ್ನು ಸಹ ಪ್ರಕಟಿಸಿದ್ದಾರೆ. 'ಒಡಂಬಡಿಕೆ'(ಕಥಾ ಸಂಗ್ರಹ) ೧೯೮೨, 'ಹಾಡಿದ್ದೆ ಹಾಡು'(ಕವನ ಸಂಕಲನ) ೧೯೮೭, 'ದಲಿತ ದನಿ'(ಪ್ರಾತಿನಿಧಿಕ ದಲಿತ ಕವನ ಸಂಕಲನ) ಹೀಗೆ ಅವರು ಸಾಹಿತ್ಯ ಕ್ಷೇತ್ರಕ್ಕೆ ಕೊಡುಗೆಯನ್ನು ನೀಡಿರುವರು. ಪ್ರಸ್ತುತ ಚಿತ್ರದುರ್ಗ ಜಿಲ್ಲೆಯ ದಲಿತ ಸಾಹಿತ್ಯ ಸಾಂಸ್ಕೃತಿಕ ವೇದಿಕೆಯ ಅಧ್ಯಕ್ಷರೂ ಆಗಿದ್ದಾರೆ. ಇವರ ಸಾಹಿತ್ಯ ಸೇವೆಯನ್ನು ಗುರುತಿಸಿದ ಭಾರತೀಯ ದಲಿತ ಸಾಹಿತ್ಯ ಅಕಾಡಮಿ(ದೆಹಲಿ) ಅವರು ೧೯೯೭ರಲ್ಲಿ 'ಡಾ.ಅಂಬೇಡ್ಕರ್ ಫೆಲೋಶಿಪ್' ನೀಡಿ ಗೌರವಿಸಿದೆ. ಕವನ, ಲೇಖನ, ಕಥೆ ಮುಂತಾದ ಪ್ರಕಾರಗಳಲ್ಲಿ ಕೃಷಿ ಮಾಡುತ್ತಿರುವ ಇವರು ಸಾಹಿತ್ಯಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ.

**ಡಾ. ಎಲ್ಲಪ್ಪ ಕೆ.ಕೆ.ಪುರ**

ಮಾದಿಗ ಜನಾಂಗಕ್ಕೆ ಸೇರಿದ ಇವರು ವೃತ್ತಿಯಲ್ಲಿ ಕೆ.ಎಸ್.ಆರ್.ಟಿ.ಸಿ.ನೌಕರ, ಪ್ರವೃತ್ತಿಯಲ್ಲಿ ಒಬ್ಬ ಸಾಹಿತಿ. ಇವರು ಬಹುಮುಖ ಪ್ರತಿಭೆಯಾಗಿದ್ದು, ಕಥೆ, ಕವನ, ಕಾದಂಬರಿ ಮುಂತಾದ

ಪ್ರಕಾರಗಳಲ್ಲಿ ಕೃಷಿ ಮಾಡಿದವರು. ಅನೇಕ ಕಥೆ ಮತ್ತು ಕವನ ಸಂಕಲನಗಳನ್ನು ಹೊರತಂದಿದ್ದಾರೆ. 'ದೊಕ್ಕಲು ಮಕ್ಕಳು' ಅಧ್ಯಯನಕ್ಕೆ ಇವರು ಕರ್ನಾಟಕ ವಿಶ್ವವಿದ್ಯಾನಿಲಯದಿಂದ ೧೯೯೬ರಲ್ಲಿ ಪಿಎಚ್.ಡಿ ಪದವಿ ಪಡೆದಿದ್ದಾರೆ. ಹೀಗೆ ಸಾಹಿತ್ಯ ಮತ್ತು ಸಂಶೋಧನೆಗೆ ತೊಡಗಿರುವ ಮಾದಿಗ ಜನಾಂಗದ ಅನೇಕರು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಸಾಹಿತ್ಯ ಕ್ಷೇತ್ರಕ್ಕೆ ತಮ್ಮನ್ನು ತೊಡಗಿಸಿಕೊಂಡವರಲ್ಲಿ ಪ್ರಮುಖರು ಎ.ಕೆ.ಹಂಪಣ್ಣ. ಅವರು ಹಲವು ಅತ್ಯುತ್ತಮವಾದ ಕೃತಿಗಳ ರಚನೆ ಮಾಡಿದ್ದಾರೆ. ಅನೇಕ ಉತ್ತಮವಾದ ಕವನಗಳನ್ನು ರಚಿಸಿ ಪ್ರತಿಭಾವಂತ ಕವಿಯಾಗಿ ಮಾಡನಾಯಕನಹಳ್ಳಿ ರಂಗಪ್ಪ ಗುರುತಿಸಿಕೊಂಡಿದ್ದಾರೆ. ಹೊಸದುರ್ಗದ ಕೈನಾಡು ಚಂದ್ರಪ್ಪನವರು ಸಹ ತಮ್ಮ ಬರಹಗಳ ಮೂಲಕ ಭಾರತೀಯ ದಲಿತ ಸಾಹಿತ್ಯ ಅಕಾಡಮಿಯಿಂದ ನೀಡುವ ಅಂಬೇಡ್ಕರ್ ಪೆಲೋಶಿಪ್ ಪಡೆದವರು. ತುರುವನೂರು ಗ್ರಾಮದಲ್ಲಿ ಕೃಷಿಯಲ್ಲಿ ತೊಡಗಿಕೊಂಡು ಸಾಹಿತ್ಯ ಕ್ಷೇತ್ರಕ್ಕೆ ಸೇವೆ ಸಲ್ಲಿಸುತ್ತಿರುವವರಲ್ಲಿ ಪ್ರಮುಖರು ನರಸಿಂಹಮೂರ್ತಿ. ಇವರ ಸೇವೆ ಶ್ಲಾಘನೀಯವೂ ಕೂಡ. ಇವರಲ್ಲದೇ ಈ ಜಿಲ್ಲೆಯಲ್ಲಿ ಅನೇಕ ಬರಹಗಾರರು ಈ ಜನಾಂಗದಲ್ಲಿ ಕಂಡುಬರುತ್ತಾರೆ. ಅವರೆಂದರೆ ಎಂ.ಚಿತ್ರಲಿಂಗ ಸ್ವಾಮಿ, ಹೆಚ್.ಲಿಂಗಪ್ಪ, ಬಿ.ಆರ್.ಶಿವಕುಮಾರ್, ಸಿ.ಎ.ಚಿಕ್ಕಣ್ಣ ಮುಂತಾದವರು.

ಬಳ್ಳಾರಿ ಜಿಲ್ಲೆಯಲ್ಲಿ ಇತ್ತೀಚೆಗೆ ಈ ಜನಾಂಗದ ಅನೇಕರು ಸಾಹಿತ್ಯ ಮತ್ತು ಸಂಶೋಧನೆ ಕ್ಷೇತ್ರಕ್ಕೆ ಕೊಡುಗೆಯನ್ನು ನೀಡಿದ್ದಾರೆ. ಕೂಡ್ಲಿಗಿ ತಾಲ್ಲೂಕಿನ ಜುಮ್ಮೋಬನಹಳ್ಳಿ ಗ್ರಾಮದ ತಿಪ್ಪೇಸ್ವಾಮಿಯವರು 'ದಾವಣಗೆರೆ ಜಿಲ್ಲೆಯ ದೇವಾಲಯಗಳ' ಮೇಲೆ ಸಂಶೋಧನೆ ಕೈಗೊಂಡು ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ೨೦೦೧ರಲ್ಲಿ ಪಿಎಚ್.ಡಿ. ಪಡೆದಿದ್ದಾರೆ. ಇದೇ ವಿಶ್ವವಿದ್ಯಾಲಯದ ಪಿಎಚ್.ಡಿ. ಪಡೆದವರಲ್ಲಿ ಹೊಸಪೇಟೆಯ ಡಾ.ಗೋವಿಂದ ಅವರು ಒಬ್ಬರು. ಅವರ ಅಧ್ಯಯನ ವಿಷಯ 'ಬಳ್ಳಾರಿ ಜಿಲ್ಲೆಯ ಜಾನಪದ ದೈವಗಳು' ಇದಲ್ಲದೆ ಇವರು ಎಂ.ಫಿಲ್. ಪದವಿಯನ್ನು 'ಹೈದರಾಬಾದ್ ಕರ್ನಾಟಕದ ಜಾನಪದ ದೈವಗಳು' ಎಂಬ ವಿಷಯದ ಮೇಲೆ ಗುಲ್ಬರ್ಗಾ ವಿಶ್ವವಿದ್ಯಾಲಯದಿಂದ ಪಡೆದಿದ್ದಾರೆ. ಇವರಿಬ್ಬರು ಅನೇಕ ಲೇಖನಗಳನ್ನು ಚರಿತ್ರೆ ಮತ್ತು ಜಾನಪದ ಕ್ಷೇತ್ರ ಕುರಿತು ಬರೆದಿದ್ದಾರೆ. ಇವರಲ್ಲದೇ ಈ ಜಿಲ್ಲೆಯಲ್ಲಿ ಇತ್ತೀಚೆಗೆ ಅನೇಕರು ವಿವಿಧ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆಗಳನ್ನೂ ಕೈಗೊಂಡಿರುವುದು ಕಂಡುಬರುತ್ತದೆ. ಅವರುಗಳೆಂದರೆ ಎಸ್.ಬಿ. ಚಂದ್ರಶೇಖರ್, ಎ.ವೆಂಕಟೇಶ್, ಕುಮಾರಸ್ವಾಮಿ, ಶಿವರಾಂ ಹಾಗೂ ವೆಂಕಟೇಶ, ತಿಪ್ಪೇಸ್ವಾಮಿ ಮುಂತಾದವರು.

**ಪ್ರಕಾಶನ ಸಂಸ್ಥೆ :** ಸಾಹಿತ್ಯ ಕ್ಷೇತ್ರದಲ್ಲಿ ಮಾತ್ರವಲ್ಲದೆ ಅನೇಕರು ಪ್ರಕಾಶನ ಸಂಸ್ಥೆಗಳನ್ನು ತೆರೆದು ಸಾಹಿತ್ಯ ಸೇವೆಯನ್ನು ಸಲ್ಲಿಸುತ್ತ ಬಂದಿದ್ದಾರೆ. ಅವುಗಳಲ್ಲಿ 'ವಿಮೋಚನ ಪ್ರಕಾಶನ' 'ಚಿತ್ರಕಲ್ಲು ಪ್ರಕಾಶನ' 'ದುರ್ಗ ಪ್ರಕಾಶನ' ಮುಂತಾದವು.

**ಪತ್ರಿಕಾರಂಗ :** ಪತ್ರಿಕಾ ರಂಗದಲ್ಲಿ ಈ ಜನಾಂಗದ ಅನೇಕರು ವರದಿಗಾರರಾಗಿ ಮತ್ತು ಸಂಪಾದಕರಾಗಿ ಸೇವೆ ಸಲ್ಲಿಸುತ್ತಿರುವುದು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತದೆ. ಸುಮಾರು ೮೦ರ ದಶಕದ ನಂತರವೇ ಅನೇಕ ಪತ್ರಿಕೆಗಳನ್ನು ಕೆಲವರು ತೆರೆದರು. ಅವುಗಳೆಂದರೆ ಚಿತ್ರದುರ್ಗ ಜಿಲ್ಲೆಯಲ್ಲಿ 'ಬಿಡುಗಡೆ' 'ಜನಸಾಗರ' 'ಗಿರಿಮಲ್ಲಿಗೆ', 'ಬಹುಜನಸಮಾಜ', 'ಆದಿಜಾಂಬವ', 'ಗ್ರಾಮೀಣ ಸೂರ್ಯ', 'ನಾವೆಲ್ಲಾ' ಸೂರ್ಯಕಿರಣ, ಪ್ರಕಾಶ್ ವಾಯ್ಸ್, ಹಾಯ್ ಮೊಳಕಾಲ್ಮೂರು, ಸರ್ಪವಾಣಿ, ಮುಖಾಮುಖಿ ಮುಂತಾದವು ಮುಖ್ಯವಾಗಿವೆ. ಆದರೆ ಇವುಗಳಲ್ಲಿ ಹಲವು ಪತ್ರಿಕೆಗಳು ಸ್ಥಗಿತಗೊಂಡಿವೆ. ಬಳ್ಳಾರಿ ಜಿಲ್ಲೆಯಲ್ಲಿ ಹೊಸಪೇಟೆ ಟೈಗರ್, ಉದಯ ಅಸ್ತ್ರ, ವಾಸ್ತವ ಮುಂತಾದವು.

**ಅಡಿಟಿಪ್ಪಣಿಗಳು**

೧. ಗ್ರಾಮದೇವತೆಗಳು, ಸಿದ್ದಲಿಂಗಯ್ಯ, ೧೯೯೭, ಪು.೭೩

೨. ಬಳ್ಳಾರಿ ಜಿಲ್ಲೆಯ ಜಾನಪದ ದೈವಗಳು, ಗೋವಿಂದ, ೨೦೦೧, ಪು.೧೦೫

೩. ಮದ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಎಂ.ಚಿದಾನಂದಮೂರ್ತಿ, ೧೯೮೫, ಪು.೨೮

೪. ಗ್ರಾಮದೇವತೆಗಳು, ಸಿದ್ದಲಿಂಗಯ್ಯ, ೧೯೯೭, ಪು.೩೨೦

೫. ಹಬ್ಬಗಳು, ಎಸ್.ಎಸ್.ಹಿರೇಮಠ, ೧೯೯೨, ಪು.೧೦೭

೬. ಬಳ್ಳಾರಿ ಜಿಲ್ಲೆಯ ಜಾನಪದ ದೈವಗಳು, ಗೋವಿಂದ, ೨೦೦೧, ಪು.೧೮೧

೭. ಅದೇ, ಪು.೧೮೩

೮. ಅದೇ, ಪು.೧೯೩

೯. ಗಟ್ಟಿಹೊಸಹಳ್ಳಿ ಗಟ್ಟಿಗ, ಹರ್ತಿಕೋಟೆ ವೀರೇಂದ್ರಸಿಂಹ, ತೇಜಸ್ವಿ ಕಟ್ಟಿಮನೆ, ೨೦೦೨, ಪು.೬೪

೧೦. ಅದೇ, ಪು. ೬೬

೧೧. ಬಳ್ಳಾರಿ ಜಿಲ್ಲೆಯ ಜಾನಪದ ದೈವಗಳು, ಗೋವಿಂದ, ೨೦೦೧, ಪು.೨೧೫

೧೨. ಗ್ರಾಮದೇವತೆಗಳು, ಸಿದ್ದಲಿಂಗಯ್ಯ, ೧೯೯೭, ಪು.೩೧೨

೧೩. ಗಾಳೆಮ್ಮ, ಸುಬ್ಬಣ್ಣ ರೈ, ೧೯೯೮, ಪು.೨೮

೧೪. ಬಳ್ಳಾರಿ ಜಿಲ್ಲೆಯ ಜಾನಪದ ದೈವಗಳು, ಗೋವಿಂದ, ೨೦೦೧, ಪು.೨೨೨

೧೫. ಅದೇ, ಪು.೧೭೪

೧೬. ಅದೇ, ಪು.೧೭೮

೧೭. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು ಮತ್ತು ಲಕ್ಷ್ಮಣ್ ತೆಲಗಾವಿ, ಎಂ.ವಿ.ಶ್ರೀನಿವಾಸ, ೧೯೯೫, ಪು.೧೦೩

೧೮. ಬಳ್ಳಾರಿ ಜಿಲ್ಲೆಯ ಜಾನಪದ ದೈವಗಳು, ಗೋವಿಂದ, ೨೦೦೧, ಪು.೩೬೧-೩೬೨

೧೯. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, ೧೯೯೫, ಪು.೩೭೦

೨೦. ಅದೇ, ಪು.೩೯೦

೨೧. ಅದೇ, ಪು.೩೯೩

೨೨. ಬಳ್ಳಾರಿ ಜಿಲ್ಲೆಯ ಜಾನಪದ ದೈವಗಳು, ಗೋವಿಂದ, ೨೦೦೧, ಪು.೫೬

೨೩. ಅದೇ, ಪು.೧೩೦

೨೪. ಗ್ರಾಮದೇವತೆಗಳು, ಸಿದ್ದಲಿಂಗಯ್ಯ, ೧೯೯೭, ಪು.೩೮೧

೨೫. ಅರಿವಿನ ಗುರುಪರಂಪರೆ, ಯಲ್ಲಪ್ಪಬೂತಯ್ಯ, ೧೯೯೮, ಪು.೯

೨೬. ಅದೇ, ಪು.೭

೨೭. ಅದೇ, ಪು.೭

೨೮. ಅದೇ, ಪು.೯

೨೯. ಅದೇ, ಪು.೧೦

೩೦. ಅದೇ, ಪು.೧೦

೩೧. ಅನಂತ ಕೃಷ್ಣಅಯ್ಯರ್

೩೨. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ಮೈಲಹಳ್ಳಿ ರೇವಣ್ಣ, ೧೯೯೬, ಪು.೧೨೭

೩೩. ಅದೇ, ಪು.೧೨೭

೩೪. ಮುನ್ನಡೆಯ ಕೂಡ್ಲಿಗಿ, ಪು.೫೨

೩೫. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ೧೯೯೬, ಪು.೧೨೭-೧೨೮

೩೬. ದುರುಗ ಜಾನಪದ, ಮೀರಾಸಾಬಿಹಳ್ಳಿ ಶಿವಣ್ಣ, ೧೯೯೯, ಪು.೫೦

೩೭. ಬಳ್ಳಾರಿ ಜಿಲ್ಲೆಯ ಜನಪದಸಾಹಿತ್ಯ ಪು.೫೦

೩೮. ದಲಿತರ ಬದುಕು ಮತ್ತು ಸಂಸ್ಕೃತಿ ಜಾನಪದೀಯ ಅಧ್ಯಯನ, ಅರ್ಜುನಗೊಳಸಂಗಿ, ೨೦೦೦, ಪು.೩೫೨

೩೯. ದುರುಗ ಜಾನಪದ, ೧೯೯೯, ಪು.೮೪

೪೦. ಕರ್ನಾಟಕ ಜನಪದ ಕಲೆಗಳ ಕೋಶ, ಗೊ.ರು.ಚನ್ನಬಸಪ್ಪ, ಪು.೭೨

೪೧. ದಲಿತರ ಬದುಕು ಮತ್ತು ಸಂಸ್ಕೃತಿ ಜಾನಪದೀಯ ಅಧ್ಯಯನ, ಅರ್ಜುನ ಗೋಳಸಂಗಿ, ೨೦೦೦, ಪು.೩೪೮-೩೪೯

೪೨. ಕನ್ನಡ ಜಾನಪದ ವಿಶ್ವಕೋಶ, ಚಂದ್ರಶೇಖರ ಕಂಬಾರ, ೧೯೮೫, ಪು.೭೯೩

೪೩. ದುರುಗ ಜಾನಪದ, ೧೯೯೯, ಪು.೭

೪೪. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ಮೈಲಹಳ್ಳಿ ರೇವಣ್ಣ, ೧೯೯೬, ಪು.೬೧೭

೪೫. ಹಂಪಿ ಜಾನಪದ, ಪುರುಷೊತ್ತಮ ಬಿಳಿಮಲೆ, ೧೯೯೯, ಪು.೧೩೯

೪೬. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ಮೈಲಹಳ್ಳಿ ರೇವಣ್ಣ, ೧೯೯೬, ಪು.೬೧೭

೪೭. ಜಂಬು ನೇರ್ಲೆ ಹಣ್ಣು ಜಗ್ಗಿಬಿದ್ದಾವೆ, ಮೈಲಹಳ್ಳಿ ರೇವಣ್ಣ ಪು.೧

೪೮. ಚಿತ್ರದುರ್ಗ ಜಿಲ್ಲೆಯ ಮಾದಾರ ಜನಾಂಗದ ಜಾನಪದ ಕಾವ್ಯಗಳು, ಮೈಲಹಳ್ಳಿ ರೇವಣ್ಣ, ೧೯೯೬, ಪು.೬೧೭

೪೯. ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಜೀ.ಶಂ.ಪ, ೧೯೭೯, ಪು.೪೭೭

೫೦. ಕೈಫಿಯತ್ತುಗಳಲ್ಲಿ ಕುಮಾರರಾಮ, ಪು.೭

೫೧. ನೂತನ, ೧೩ ಆಗಸ್ಟ್, ೨೦೦೦

೫೨. ಬಳ್ಳಾರಿ ಜಿಲ್ಲೆಯ ಬಯಲಾಟಗಳು, ಆರ್.ಕೆ.ದುರ್ಗಾದಾಸ್, ಪು.೧೦

ಪ್ರಸ್ತುತ ಅಧ್ಯಯನದ ನೆಲೆಯಲ್ಲಿ ಕಂಡುಕೊಂಡ ಮುಖ್ಯ ಫಲಿತಗಳನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

ಕನ್ನಡ ನಾಡಿನಲ್ಲಿ ಪರಿಶಿಷ್ಟ ಜಾತಿಯ ಇತರೆ ಜನಾಂಗಕ್ಕಿಂತಲೂ ಮಾದಿಗರು ಹೆಚ್ಚಿನ ಪ್ರಮಾಣದಲ್ಲಿ ನೆಲೆಸಿದ್ದು, ಕನ್ನಡ ಭಾಷೆಯನ್ನು ಪ್ರಧಾನವಾಗಿ ಸ್ವೀಕರಿಸಿರುವುದು ಕಂಡುಬರುತ್ತದೆ. ಇವರು ನೆಲೆಸಿರುವ ಜಿಲ್ಲೆಗಳಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳು ಮುಖ್ಯವಾದವು.

ಮಾದಿಗರು ಮೂಲತಃ ತೆಲುಗು ನಾಡಿನವರು ಇವರ ಭಾಷೆ ತೆಲುಗು ಎಂದು ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ಹಿನ್ನೆಲೆಯಲ್ಲಿ ಇವರನ್ನು ನೋಡುವಾಗ ಮಾದಿಗರು ವಲಸೆ ಬಂದವರೇ ಅಥವಾ ಸ್ಥಳೀಯರೇ ಎಂಬ ಪ್ರಶ್ನೆ ಎದುರಾಗುತ್ತದೆ. ವಲಸೆ ಬಂದ ಕಾಲಘಟ್ಟ ಮತ್ತು ಸ್ಥಳೀಯ ಭಾಷೆಯಾದ ಕನ್ನಡವನ್ನು ಪ್ರಧಾನ ಭಾಷೆಯಾಗಿ ಸ್ವೀಕರಿಸಿದ ಚಾರಿತ್ರಿಕ ಕಾರಣಗಳಿಗೆ ಉತ್ತರಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಈ ಎರಡು ಜಿಲ್ಲೆಗಳಲ್ಲಿ ಅನೇಕ ಮಾದಿಗ ಕುಟುಂಬಗಳು ಆಂಧ್ರದಿಂದ ವಲಸೆ ಬಂದಿರುವುದು ಉಂಟು. ಇವರು ತೆಲುಗು ಭಾಷೆಯನ್ನು ಮಾತನಾಡುವವರಾಗಿದ್ದು 'ತೆಲುಗು ಮಾದಿಗ'ರೆಂದೇ ಕರೆಸಿಕೊಳ್ಳುತ್ತಾರೆ. ಈ ಭಾಗಗಳಲ್ಲಿ ಕನ್ನಡ ಭಾಷೆಯನ್ನು ಸ್ವೀಕರಿಸಿರುವ ಮಾದಿಗರನ್ನು ಕನ್ನಡ ನಾಡಿನವರೆಂದೇ ತಿಳಿಯಲಾಗಿದೆ. ಏಕೆಂದರೆ ಇವರು ತಮ್ಮನ್ನು 'ಆದಿಕರ್ನಾಟಕ'ರೆಂದು ಗುರುತಿಸಿಕೊಂಡಿದ್ದಾರೆ. ಅಂದರೆ ಅವರು ಇಲ್ಲಿಯ ಮೂಲ ನಿವಾಸಿಗಳು. ಈ ಎರಡು ಜಿಲ್ಲೆಗಳಲ್ಲಿ ಆದಿ ಕರ್ನಾಟಕ ಎಂಬ ಹೆಸರಿನಿಂದ ಗುರುತಿಸಿಕೊಂಡಿರುವವರು ಮಾದಿಗರು ಮಾತ್ರ. ಹಾಗೆಯೇ ಹರಿಜನ ಪದಬಳಕೆಯು ಇವರಲ್ಲಿದೆ. ಒಟ್ಟಿನಲ್ಲಿ ಇವರು ವಿವಿಧ ಹೆಸರುಗಳನ್ನು ವಿವಿಧ ಕಾಲಘಟ್ಟಗಳಲ್ಲಿ ಪಡೆದಿದ್ದಾರೆನ್ನಬಹುದು. ಈ ಭಾಗದಲ್ಲಿ ಮಾದಿಗರು ಗುರುತಿಸಿಕೊಂಡಿರುವ ಈ ಹೆಸರಿನಲ್ಲಿ ಇತರೆಯವರು ಯಾರೂ ಗುರುತಿಸಿಕೊಂಡಿಲ್ಲವೆನ್ನುವುದು ಮುಖ್ಯ. ಮಾದಿಗ ಪದವೂ ಈ ಜನಾಂಗ ಈ ಹಿಂದೆ ಪ್ರಧಾನವಾಗಿ ಸ್ವೀಕರಿಸಿರಬಹುದಾದ ಚರ್ಮಗಾರಿಕೆರಯ ಹಿನ್ನೆಲೆಯಲ್ಲಿಯೇ ಬಂದುದು. ಇವರು ಅನೇಕರೊಂದಿಗೆ ಪೌರಾಣಿಕ ಹಿನ್ನೆಲೆಯಲ್ಲಿ ಸಂಬಂಧವನ್ನು ಹೊಂದಿರುವುದುಂಟು.

ಚರಿತ್ರೆಯ ವಿವಿಧ ಕಾಲಘಟ್ಟಗಳಲ್ಲಿ ಇವರು ರಾಜರು, ಸೈನ್ಯದ ಮುಖಂಡರು, ಸೈನಿಕರು, ವೀರರು, ತ್ಯಾಗಿಗಳು ಆಗಿ ಹೋಗಿರುವುದನ್ನು ಕಲ್ಪಿಸಿಕೊಳ್ಳಕ್ಕೂ ಸಾಧ್ಯವಾಗದಿದ್ದರೂ ಅಂತಹ ಚಾರಿತ್ರಿಕ ಅಂಶಗಳು ಅಪ್ರಜ್ಞಾಪೂರ್ವಕವಾಗಿ ಅನೇಕ ಸಾಹಿತ್ಯ ಕೃತಿಗಳು ಮತ್ತುಶಾಸನಗಳಲ್ಲಿ ದಾಖಲಾಗಿರುವುದು ಕಂಡುಬರುತ್ತದೆ. ಜನಪದರಲ್ಲಿ ಪ್ರಚಲಿತವಿರುವ ಐತಿಹ್ಯ, ಹಾಡು, ಕಥೆಗಳು, ಈ ಜನಾಂಗಕ್ಕೆ ಚಾರಿತ್ರಿಕ ಹಿನ್ನೆಲೆಯನ್ನು ಒದಗಿಸುತ್ತದೆ. ಈಗ ಸಾಮಾಜಿಕವಾಗಿ ಅತ್ಯಂತ

ಪ್ರಸ್ತುತ ಅಧ್ಯಯನದ ನೆಲೆಯಲ್ಲಿ ಕಂಡುಕೊಂಡ ಮುಖ್ಯ ಫಲಿತಗಳನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

ಕನ್ನಡ ನಾಡಿನಲ್ಲಿ ಪರಿಶಿಷ್ಟ ಜಾತಿಯ ಇತರೆ ಜನಾಂಗಕ್ಕಿಂತಲೂ ಮಾದಿಗರು ಹೆಚ್ಚಿನ ಪ್ರಮಾಣದಲ್ಲಿ ನೆಲೆಸಿದ್ದು, ಕನ್ನಡ ಭಾಷೆಯನ್ನು ಪ್ರಧಾನವಾಗಿ ಸ್ವೀಕರಿಸಿರುವುದು ಕಂಡುಬರುತ್ತದೆ. ಇವರು ನೆಲೆಸಿರುವ ಜಿಲ್ಲೆಗಳಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳು ಮುಖ್ಯವಾದವು.

ಮಾದಿಗರು ಮೂಲತಃ ತೆಲುಗು ನಾಡಿನವರು ಇವರ ಭಾಷೆ ತೆಲುಗು ಎಂದು ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ಹಿನ್ನೆಲೆಯಲ್ಲಿ ಇವರನ್ನು ನೋಡುವಾಗ ಮಾದಿಗರು ವಲಸೆ ಬಂದವರೇ ಅಥವಾ ಸ್ಥಳೀಯರೇ ಎಂಬ ಪ್ರಶ್ನೆ ಎದುರಾಗುತ್ತದೆ. ವಲಸೆ ಬಂದ ಕಾಲಘಟ್ಟ ಮತ್ತು ಸ್ಥಳೀಯ ಭಾಷೆಯಾದ ಕನ್ನಡವನ್ನು ಪ್ರಧಾನ ಭಾಷೆಯಾಗಿ ಸ್ವೀಕರಿಸಿದ ಚಾರಿತ್ರಿಕ ಕಾರಣಗಳಿಗೆ ಉತ್ತರಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಈ ಎರಡು ಜಿಲ್ಲೆಗಳಲ್ಲಿ ಅನೇಕ ಮಾದಿಗ ಕುಟುಂಬಗಳು ಆಂಧ್ರದಿಂದ ವಲಸೆ ಬಂದಿರುವುದು ಉಂಟು. ಇವರು ತೆಲುಗು ಭಾಷೆಯನ್ನು ಮಾತನಾಡುವವರಾಗಿದ್ದು 'ತೆಲುಗು ಮಾದಿಗ'ರೆಂದೇ ಕರೆಸಿಕೊಳ್ಳುತ್ತಾರೆ. ಈ ಭಾಗಗಳಲ್ಲಿ ಕನ್ನಡ ಭಾಷೆಯನ್ನು ಸ್ವೀಕರಿಸಿರುವ ಮಾದಿಗರನ್ನು ಕನ್ನಡ ನಾಡಿನವರೆಂದೇ ತಿಳಿಯಲಾಗಿದೆ. ಏಕೆಂದರೆ ಇವರು ತಮ್ಮನ್ನು 'ಆದಿಕರ್ನಾಟಕ'ರೆಂದು ಗುರುತಿಸಿಕೊಂಡಿದ್ದಾರೆ. ಅಂದರೆ ಅವರು ಇಲ್ಲಿಯ ಮೂಲ ನಿವಾಸಿಗಳು. ಈ ಎರಡು ಜಿಲ್ಲೆಗಳಲ್ಲಿ ಆದಿ ಕರ್ನಾಟಕ ಎಂಬ ಹೆಸರಿನಿಂದ ಗುರುತಿಸಿಕೊಂಡಿರುವವರು ಮಾದಿಗರು ಮಾತ್ರ. ಹಾಗೆಯೇ ಹರಿಜನ ಪದಬಳಕೆಯು ಇವರಲ್ಲಿದೆ. ಒಟ್ಟಿನಲ್ಲಿ ಇವರು ವಿವಿಧ ಹೆಸರುಗಳನ್ನು ವಿವಿಧ ಕಾಲಘಟ್ಟಗಳಲ್ಲಿ ಪಡೆದಿದ್ದಾರೆನ್ನಬಹುದು. ಈ ಭಾಗದಲ್ಲಿ ಮಾದಿಗರು ಗುರುತಿಸಿಕೊಂಡಿರುವ ಈ ಹೆಸರಿನಲ್ಲಿ ಇತರೆಯವರು ಯಾರೂ ಗುರುತಿಸಿಕೊಂಡಿಲ್ಲವೆನ್ನುವುದು ಮುಖ್ಯ. ಮಾದಿಗ ಪದವೂ ಈ ಜನಾಂಗ ಈ ಹಿಂದೆ ಪ್ರಧಾನವಾಗಿ ಸ್ವೀಕರಿಸಿರಬಹುದಾದ ಚರ್ಮಗಾರಿಕೆರಯ ಹಿನ್ನೆಲೆಯಲ್ಲಿಯೇ ಬಂದುದು. ಇವರು ಅನೇಕರೊಂದಿಗೆ ಪೌರಾಣಿಕ ಹಿನ್ನೆಲೆಯಲ್ಲಿ ಸಂಬಂಧವನ್ನು ಹೊಂದಿರುವುದುಂಟು.

ಚರಿತ್ರೆಯ ವಿವಿಧ ಕಾಲಘಟ್ಟಗಳಲ್ಲಿ ಇವರು ರಾಜರು, ಸೈನ್ಯದ ಮುಖಂಡರು, ಸೈನಿಕರು, ವೀರರು, ತ್ಯಾಗಿಗಳು ಆಗಿ ಹೋಗಿರುವುದನ್ನು ಕಲ್ಪಿಸಿಕೊಳ್ಳಕ್ಕೂ ಸಾಧ್ಯವಾಗದಿದ್ದರೂ ಅಂತಹ ಚಾರಿತ್ರಿಕ ಅಂಶಗಳು ಅಪ್ರಜ್ಞಾಪೂರ್ವಕವಾಗಿ ಅನೇಕ ಸಾಹಿತ್ಯ ಕೃತಿಗಳು ಮತ್ತುಶಾಸನಗಳಲ್ಲಿ ದಾಖಲಾಗಿರುವುದು ಕಂಡುಬರುತ್ತದೆ. ಜನಪದರಲ್ಲಿ ಪ್ರಚಲಿತವಿರುವ ಐತಿಹ್ಯ, ಹಾಡು, ಕಥೆಗಳು, ಈ ಜನಾಂಗಕ್ಕೆ ಚಾರಿತ್ರಿಕ ಹಿನ್ನೆಲೆಯನ್ನು ಒದಗಿಸುತ್ತದೆ. ಈಗ ಸಾಮಾಜಿಕವಾಗಿ ಅತ್ಯಂತ

ಕೆಳಸ್ತರದಲ್ಲಿದ್ದು ಬದುಕುತ್ತಿದ್ದರೂ ಈ ಜನಾಂಗದಲ್ಲಿ ಹುಟ್ಟಿ ಅನೇಕ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳನ್ನು ಕೈಗೊಂಡ ಪರಿಣಾಮವಾಗಿ ದೈವತ್ವಕ್ಕೆ ಏರಿದ ಅನೇಕ ಧಾರ್ಮಿಕ ಪುರುಷರು ಈ ಜನಾಂಗದವರೆಂಬುದು ಆಶ್ಚರ್ಯದ ಸಂಗತಿ. ಇಂಥವರು ಮೇಲಸ್ತರದ ಜಾತಿಗಳಿಂದಲೂ ಇಂದು ಪೂಜೆಗೊಳ್ಳುತ್ತಿರುವುದು ವಾಸ್ತವವಾಗಿದೆ.

ಆಧುನಿಕ ಕಾಲದಲ್ಲಿ ಈ ಜಿಲ್ಲೆಗಳಲ್ಲಿ ನಡೆದ ಸ್ವಾತಂತ್ರ್ಯ ಚಳವಳಿ, ಮೈಸೂರು ಸಂಸ್ಥಾನ ಚಳವಳಿ, ಏಕೀಕರಣ ಚಳವಳಿ ಹಾಗೂ ಸಂಡೂರು ಹೋರಾಟಗಳಲ್ಲಿ ಈ ಜನಾಂಗದವರು ಭಾಗವಹಿಸಿದ್ದರೂ ಕಾರಣಾಂತರಗಳಿಂದ ಅಂಥವರನ್ನು ದಾಖಲಿಸದೆ ನಿರ್ಲಕ್ಷಿಸಲಾಗಿದೆ. ಆದರೆ ಅಧ್ಯಯನ ಸಂದರ್ಭದಲ್ಲಿ ಈ ಎರಡು ಜಿಲ್ಲೆಗಳಲ್ಲಿ ೩೫ಕ್ಕೂ ಹೆಚ್ಚು ಮಂದಿ ಸ್ವಾತಂತ್ರ್ಯ ಹೋರಾಟಗಾರರು ಇರುವುದು ಕಂಡುಬಂದಿತು. ಅಲ್ಲದೆ ಕರ್ನಾಟಕ ಏಕೀಕರಣ ಮತ್ತು ಸಂಡೂರು ಹೋರಾಟಗಳಲ್ಲಿ ಇವರು ಭಾಗವಹಿಸಿರುವುದ ಗಮನಿಸಲಾಯಿತು. ಇಂದು ಪ್ರಚಲಿತದಲ್ಲಿರುವ ದಲಿತ ಚಳವಳಿ ಮತ್ತು ಪ್ರತ್ಯೇಕ ಮೀಸಲಾತಿ ಹೋರಾಟಗಳಲ್ಲಿ ಈ ಜನಾಂಗದವರ ಪಾತ್ರ ಮಹತ್ವದಾಗಿದೆ. ಇಂತಹ ಚಳವಳಿಗಳಲ್ಲಿ ಭಾಗವಹಿಸಿರುವ ಅನೇಕರನ್ನು ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಈ ಎರಡೂ ಜಿಲ್ಲೆಗಳ ಸಂಘಟನೆಗಳು ರಾಜ್ಯಮಟ್ಟದ ಸಂಘಟನೆಯ ಮೇಲೆ ಪ್ರಭಾವ ಬೀರಿರುವುದಲ್ಲದೆ, ರಾಜ್ಯಮಟ್ಟದಲ್ಲಿ ಈ ಜಿಲ್ಲೆಯಿಂದ ಕೆಲವು ನಾಯಕರು ರೂಪುಗೊಂಡಿರುವುದು ಕಂಡುಬಂದಿದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಈ ಜನಾಂಗ ಹೊಂದಿರುವ ಸಾಮಾಜಿಕ ಸ್ಥಾನಮಾನಗಳು ಅತ್ಯಂತ ಕೆಳಗಿನವು. ಇವರಿಗಿಂತಲೂ ಕನಿಷ್ಠವಾಗಿ ಜೀವನ ಮಾಡುತ್ತಿರುವ ಇತರೆ ಜಾತಿಗಳವರೂ ಇವರನ್ನು ನೋಡುವ ದೃಷ್ಟಿ ಮಾತ್ರ ತೀರಾ ಕೀಳುಭಾನೆಯಿಂದ ಕೂಡಿದೆ. ಪರಿಣಾಮವಾಗಿ ಇವರು ಅನೇಕ ಸಾಮಾಜಿಕ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದ್ದಾರೆ. ಅಸ್ಪೃಶ್ಯತೆ, ಹಲ್ಲೆ, ದೌರ್ಜನ್ಯ, ಬಸವಿ ಪದ್ಧತಿ ಮುಂತಾದ ಶೋಷಣೆಗಳಿಂದ ನರಳುತ್ತಿದ್ದಾರೆ. ಹೆಚ್ಚಿನ ಜನಸಂಖ್ಯೆಯನ್ನು ಹೊಂದಿ ಶೈಕ್ಷಣಿಕ ಮತ್ತು ಆರ್ಥಿಕವಾಗಿ ಮುಂದುವರಿದಿರುವ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಕೆಲವೊಂದು ಶೋಷಣೆಗಳನ್ನು ತಡೆಗಟ್ಟಲು ಸಾಧ್ಯವಾಗಿದ್ದರೂ ಅದರಿಂದ ಸಂಪೂರ್ಣವಾಗಿ ವಿಮೋಚನೆ ಹೊಂದಿದ್ದಾರೆಂದು ಹೇಳಲಾಗದು. ಅಸ್ಪೃಶ್ಯತೆಯಂತಹ ಅಮಾನವೀಯ ಪದ್ಧತಿಯನ್ನು ಹೋಗಲಾಡಿಸಲು ಗಾಂಧೀಜಿ ಮತ್ತು ಕೆಲವೊಂದು ಕಾಂಗ್ರೆಸ್ ಮುಖಂಡರು ಈ ಎರಡು ಜಿಲ್ಲೆಗಳಲ್ಲಿ ಸಂಚರಿಸಿ ಪ್ರಚಾರ ಮಾಡಿದ್ದರೂ ಅಸ್ಪೃಶ್ಯತೆ ಪಿಡುಗಿನಿಂದ ವಿಮೋಚನೆ ಸಾಧ್ಯವಾಗಿಲ್ಲ. ಗ್ರಾಮೀಣ ಪ್ರದೇಶದಲ್ಲಿ ದೇವಾಲಯ ಪ್ರವೇಶ ಇನ್ನೂ ಕೆಲವು ಕಡೆಗಳಲ್ಲಿ ಹೋಟೆಲ್ ಪ್ರವೇಶ ಸಾಧ್ಯವಾಗಿದ್ದರೂ ಬಹುತೇಕ ಕಡೆಗಳಲ್ಲಿ ಹೋಟೆಲ್ ಕಟ್ಟೆಯ ಮೇಲೆ ಕೂರುವ ಪರಿಸ್ಥಿತಿ ಇಂದಿಗೂ ಇಲ್ಲ. ದೇವಾಲಯ ಇಲ್ಲವೇ ಪಂಚಾಯಿತಿ ಕಟ್ಟೆಗಳ ಮೇಲೆ ಸಭೆ ನಡೆಯುವಾಗ ಅಲ್ಲಿಗೆ ಮಾದಿಗ ಜನಪ್ರತಿನಿಧಿಗಳೂ ಪ್ರವೇಶ ಮಾಡಲಾಗುವುದಿಲ್ಲ. ಇದಲ್ಲದೆ ಈ ಹಿಂದೆ ಪ್ರತಿಯೊಂದು ಗ್ರಾಮದಲ್ಲಿ ಬಸವಿಪದ್ಧತಿಯ ಅನೇಕ

ಕುಟುಂಬಗಳು ಇದ್ದು, ಇಂದು ಕಡಿಮೆಯಾಗುತ್ತಿವೆ. ಈ ಪದ್ಧತಿ ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬರುವುದು ಅಪರೂಪವಾದರೆ ಬಳ್ಳಾರಿ ಜಿಲ್ಲೆರಯ ಅನೇಕ ಗ್ರಾಮಗಳಲ್ಲಿ ಗುಪ್ತವಾಗಿ ಈ ಜನಾಂಗ ಒಳಗಾಗಿರುವುದು ಕಂಡುಬಂದಿತು. ಇಂದಿಗೂ ಅನೇಕ ಭಾಗಗಳಲ್ಲಿ ಈ ಜನಾಂಗದ ಮೇಲೆ ಹಲ್ಲೆ ದೌರ್ಜನ್ಯ ಮುಂದುವರಿದಿದೆ.

ಈ ಜನಾಂಗ ಆರ್ಥಿಕವಾಗಿ ಹಿಂದುಳಿದಿದ್ದು, ಅತ್ಯಂತ ಬಡತನದಿಂದ ನರಳುತ್ತಿರುವವರ ಸಂಖ್ಯೆ ಬಹಳವಾಗಿದೆ. ಇದರಿಂದಾಗಿ ಇವರು ಕೂಲಿ ಆಯಾಗಾರಿಕೆ, ಜೀತ, ಸಂಪ್ರದಾಯಿಕ ವೃತ್ತಿಗಳನ್ನು ಅವಲಂಬಿಸಿ ಜೀವನ ಮಾಡಬೇಕಾದ ಅನಿವಾರ್ಯ ಪರಿಸ್ಥಿತಿ ಎದುರಿಸುವಂತಾಗಿದೆ. ಈ ಎರಡೂ ಜಿಲ್ಲೆಗಳಲ್ಲಿ ನೆಲೆಸಿರುವ ಮಾದಿಗರ ಒಟ್ಟು ಜನಸಂಖ್ಯೆಯಲ್ಲಿ ಶೇ ೯೦ರಷ್ಟು. ಜನರು ನಂಬಿಕೊಂಡಿರುವುದು ಕೂಲಿಯನ್ನೆ. ಇದರೊಂದಿಗೆ ಜೀತಕ್ಕೂ ಒಳಗಾಗಿರುವುದು ವ್ಯಾಪಕವಾಗಿ ಕಂಡುಬರುತ್ತದೆ. ಈ ಪದ್ಧತಿಯನ್ನೂ ನಿಷೇದಿಸಿದ ನಂತರ ಈಗ ಇದೊಂದು ಕಾನೂನು ಅಪರಾಧವಾಗಿದ್ದರೂ ಕೆಲವು ಭಾಗಗಳಲ್ಲಿ ಇನೂ ಜಾರಿಯಲ್ಲಿರುವುದು ಕಂಡುಬರುತ್ತದೆ. ಹೊಳಲ್ಕೆರೆ ತಾಲ್ಲೂಕಿನಲ್ಲಿ ಹೆಣ್ಣುಮಕ್ಕಳು ಜೀತಕ್ಕಿರುವುದನ್ನು ಗಮನಿಸಲಾಗಿದೆ.

ಒಂದು ಕಾಲಕ್ಕೆ ಮಾದಿಗರು ಚರ್ಮಗಾರಿಕೆಯನ್ನು ಪ್ರಧಾನ ವೃತ್ತಿಯಾಗಿ ಸ್ವೀಕರಿಸಿದ್ದು ಭೂಮಾಲೀಕರಿಗೆ ಚಪ್ಪಲಿ ಹಾಗೂ ಕೃಷಿ ಸಲಕರಣೆಗೆ ಬೇಕಾಗಿರುವ ಚರ್ಮದ ವಸ್ತುಗಳನ್ನು ತಯಾರಿಸಿಕೊಟ್ಟು ಸುಗ್ಗಿಯ ಕಾಲಕ್ಕೆ ಅವರಿಂದ ಆಯಾವನ್ನು ಪಡೆಯುತ್ತಿದ್ದರು. ಆದರೆ ಆಧುನಿಕ ಕೈಗಾರಿಕೆಕಯ ಪರಿಣಾಮವಾಗಿ ಆ ವೃತ್ತಿಯಿಂದಲೇ ನಿರ್ಗಮಿಸುವಂತಾಯಿತು. ಇಂದು ಚಪ್ಪಲಿ ರಿಪೇರಿ ಮಾಡುವ ಕಾರ್ಯಕ್ಕೆ ಮಾತ್ರ ಸೀಮಿತಗೊಂಡಿದ್ದಾರೆ. ಇದರಿಂದಾಗಿ ಬಹುಪಾಲು ಜನರು ಕೂಲಿಯನ್ನೇ ಅವಲಂಬಿಸುವಂತಾದುದು ಸಹಜ.

ಎಲ್ಲ ವಿಧದ ಬಡತನದಿಂದ ನರಳುತ್ತಿರುವ ಮಾದಿಗ ಜನಾಂಗದವರು ಸಬಲೀಕರಣಕ್ಕೆ ಸರ್ಕಾರವು ಸ್ವಾತಂತ್ರ್ಯಪೂರ್ವ ಮತ್ತು ನಂತರದಲ್ಲಿ ಅನೇಕ ಕ್ರಮಗಳನ್ನು ಕೈಗೊಂಡಿದೆ. ಅವುಗಳಲ್ಲಿ ಭೂಹಂಚಿಕೆ, ಕೃಷಿ ಕಾಲೋನಿ ನಿರ್ಮಾಣ, ನೀರಾವರಿ ಸೌಲಭ್ಯ ವಸತಿ ವ್ಯವಸ್ಥೆ ಹಾಗೂ ಸ್ವಯಂ ಉದ್ಯೋಗ ಕೈಗೊಳ್ಳಲು ತರಬೇತಿ ಮತು ಸಾಲಸೌಲಭ್ಯ ಮುಖ್ಯವಾದವು. ಈ ಪ್ರಯೋಜನ ಪಡೆದ ಅನೇಕರು ಈ ಜನಾಂಗದಲ್ಲಿ ಇದ್ದಾರೆ. ಕೃಷಿಗೆ ಅನುಕೂಲವಾಗಲೆಂದು ಭೂರಹಿತ ಜನರಿಗೆ ಹಂಚಿಕೆ ಮಾಡಿರುವ ಸರ್ಕಾರ ಜಮೀನು ಇರುವ ಸ್ಥಳಗಳಲ್ಲಿ ಕೃಷಿಕಾಲೋನಿಗಳ ನಿರ್ಮಾಣಕ್ಕೂ ಸಹಾಯ ಮಾಡಿದೆ. ಅಂತಹ ಕಾಲೋನಿಗಳು ಚಿತ್ರದುರ್ಗ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ಮಾತ್ರ ಇದ್ದು ಬಳ್ಳಾರಿ ಜಿಲ್ಲೆಯಲ್ಲಿ ಇರುವುದಿಲ್ಲ. ಭೂಹಂಚಿಕೆಯ ಪರಿಣಾಮವಾಗಿ ಇಂದು ಈ ಜನಾಂಗದ ಅನೇಕರು ಸಣ್ಣ ಪುಟ್ಟ ಕೃಷಿಕ್ಷೇತ್ರಗಳ ಒಡೆಯರಾದರೂ ಅದನ್ನು ಬಳಸುವಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ

ವಿಫಲರಾಗಿದ್ದಾರೆ. ನೀರಾವರಿ ಭೂಮಿಯಂತೂ ತುಂಬಾ ಕಡಿಮೆ. ಅನೇಕ ಸಾಮಾಜಿಕ, ಆರ್ಥಿಕ ಕಾರಣಗಳಾಗಿ ಕೆಲವರು ಭೂಮಿಯನ್ನು ಮಾರಾಟ ಮಾಡಿದ್ದರೆ ಕೆಲವರು ಹಾಗೆಯೇ ಬೀಳು ಬಿಟ್ಟಿರುವುದು ಕಂಡುಬಂದಿತು.

ವಸತಿ ಯೋಜನೆಯಡಿಯಲ್ಲಿ ನಿವೇಶನ ಮತ್ತು ಮನೆಗಳ ನಿರ್ಮಾಣದ ಸಹಾಯ ಸಾಲ ಸೌಲಭ್ಯಗಳಿಂದಾಗಿ ಅನೇಕರು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಈ ಸೌಲಭ್ಯ ಪಡೆದಿದ್ದಾರೆ. ಈ ಹಿಂದೆ ಕೇವಲ ಗುಡಿಸಲುಗಳಿಂದಲೇ ತಂಬಿಕೊಂಡಿರುತ್ತಿದ್ದ ಮಾದಿಗರ ಕೇರಿಗಳು ಇಂದು ಸುಧಾರಿತ ಮನೆಗಳಿಂದ ಕೂಡಿವೆ. ಆದರೆ ಗುಡಿಸಲುಗಳಿಂದ ಮುಕ್ತರಾಗಿಲ್ಲವೆನ್ನೂವುದು ವಿಪರ್ಯಾಸದ ಸಂಗತಿ.

ಸಾಮಾಜಿಕ ನ್ಯಾಯದ ಹೆಸರಿನಲ್ಲಿ ದುರ್ಬಲ ಜಾತಿಗಳಿಗೆ ನೀಡುತ್ತಿರುವ ಉದ್ಯೋಗದ ಮೀಸಲಾತಿ ಸೌಲಭ್ಯವನ್ನು ಮಾದಿಗ ಜನಾಂಗದ ಅನೇಕರು ಪಡೆದಿದ್ದಾರೆ. ಅಂಥವರು ಎರಡು ಜಿಲ್ಲೆಗಳಲ್ಲಿ ಇರುವುದು ಕಂಡುಬಂದಿತಾದರೂ ಹೆಚ್ಚಿನ ಪ್ರಮಾಣದಲ್ಲಿ ದೊರಕಿರುವುದು ಕೆಳಹಂತದ ಉದ್ಯೋಗಗಳಲ್ಲಿ ಮಾತ್ರ. ಕಸಗುಡಿಸುವ, ಚರಂಡಿ ಸ್ವಚ್ಛಗೊಳಿಸುವ, ಕಕ್ಕಸ್ಸು ಬಾಚುವಂತಹ ಪೌರಕಾರ್ಮಿಕ ವೃತ್ತಿಗಳಲ್ಲಿ ಶೇ ೯೫ಕ್ಕೂ ಹೆಚ್ಚಿನ ಪ್ರಮಾಣದಲ್ಲಿ ನೇಮಕಗೊಂಡಿದ್ದಾರೆ. ಆನಂತರದಲ್ಲಿ ಶಿಕ್ಷಣ ಇಲಾಖೆಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಹಡಗಲಿ ಮತ್ತು ಸಿರುಗುಪ್ಪ ತಾಲ್ಲೂಕುಗಳನ್ನು ಹೊರತು ಪಡಿಸಿದರೆ ಉಳಿದ ಎಲ್ಲಾ ತಾಲ್ಲೂಕುಗಳು ಹಾಗೂ ಚಿತ್ರದುರ್ಗ ಜಿಲ್ಲೆಗಳಲ್ಲಿ ಪರಿಶಿಷ್ಟ ಜಾತಿಯ ಇತರೆ ಜನಾಂಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಪ್ರೈಮರಿ ಶಾಲಾ ಶಿಕ್ಷಕರಾಗಿ ಕೆಲಸ ನಿರ್ವಹಿಸುತ್ತಿರುವುದು ಕಂಡುಬಂದಿತು. ಉಳಿದ ಇಲಾಖೆಗಳಲ್ಲಿ ನೇಮಕವಾಗಿದ್ದರೂ ಕಡಿಮೆ ಪ್ರಮಾಣದಲ್ಲಿದೆ. ಉನ್ನತವಾದ ಹುದ್ದೆಗಳಿಗೆ ನೇಮಕವಾಗಿರುವುದು ಬೆರಳೆಣಿಕೆಯ ಮಾತ್ರ.

ಸಾವಿರಾರು ವರ್ಷಗಳಿಂದ ಶಿಕ್ಷಣದಿಂದ ವಂಚಿತರಾದ ಅಸ್ಪೃಶ್ಯರಿಗೆ ಶಿಕ್ಷಣ ಕಲಿಯುವ ಅವಕಾಶ ದೊರತದ್ದು ಬ್ರಿಟಿಷ್ ಆಡಳಿತದ ಸಂದರ್ಭದಲ್ಲಿ. ಅಲ್ಲಿಂದ ಆರಂಭಗೊಂಡ ಶೈಕ್ಷಣಿಕ ಅವಕಾಶಗಳು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಹೆಚ್ಚಾಗುತ್ತಾ ನಡೆದವು. ಮೊದಲು ಸಾರ್ವಜನಿಕ ಶಾಲೆಗಳಲ್ಲಿ ಅವರ ಪ್ರವೇಶವನ್ನು ವಿರೋಧಿಸಿದ ಇತರೆ ವರ್ಗಗಳವರು ಕ್ರಮೇಣ ಸುಮ್ಮನಾಗಬೇಕಾಯಿತು. ಇದರಿಂದಾಗಿ ಮಾದಿಗ ಜನಾಂಗದವರು ಇಂದು ಎಲ್ಲರಂತೆ ಸಮಾನವಾಗಿ ಕುಳಿತು ಶಿಕ್ಷಣ ಕಲಿಯಲು ಅವಕಾಶವಾಗಿದೆ. ಇಷ್ಟಾದರೂ ತಮ್ಮ ಮಕ್ಕಳ ವಿದ್ಯಾಭ್ಯಾಸ ಸಂಬಂಧದಲ್ಲಿ ಪೋಷಕರು ೭೦ ಮತ್ತು ೮೦ರ ದಶಕಗಳಲ್ಲಿ ತೋರುತ್ತಿದ್ದ ಉತ್ಸಾಹ ಇಂದು ಅನೇಕರಲ್ಲಿ ಆ ಉತ್ಸಾಹ ಇಲ್ಲವಾಗಿದೆ. ನಿರುದ್ಯೋಗ, ಬಡತನ ಮುಂತಾದ ಅಂಶಗಳು ಅವರನ್ನು ಇನ್ನಷ್ಟು ಕಂಗೆಡುವಂತೆ ಮಾಡಿರುವುದು ಕಂಡುಬರುತ್ತದೆ.

ಶಿಕ್ಷಣ ಪ್ರಸಾರದಲ್ಲಿ ಹಾಸ್ಟಲ್‌ಗಳ ಪಾತ್ರವು ಮುಖ್ಯವಾದವು. ಸ್ವಾತಂತ್ರ್ಯಪೂರ್ವ ಮತ್ತು

ನಂತರದಲ್ಲಿ ಸ್ಥಾಪನೆಗೊಂಡ ಸಮುದಾಯದ ಹಾಸ್ಟಲ್‌ಗಳು ಮಾದಿಗ ಜನಾಂಗದವರ ಶೈಕ್ಷಣಿಕ ಪ್ರಗತಿಯಲ್ಲಿ ಪ್ರಮುಖ ಪಾತ್ರವಹಿಸಿವೆ. ಹಿಂದೆ ಈ ಜನಾಂಗದವರಿಗಾಗಿಯೇ ಮೀಸಲಿದ್ದ ಹಾಸ್ಟಲ್‌ಗಳು ಇಂದು ಸಾರ್ವಜನಿಕ ಹಾಸ್ಟಲ್‌ಗಳಾಗಿ ಪರಿವರ್ತಿತಗೊಂಡು ಮೂಲ ಹೆಸರಿನಲ್ಲೆ ಮುಂದುವರಿದಿವೆಯಾದರೂ ಅಂತಹ ಹಾಸ್ಟಲ್‌ಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಇವರೆ ಇದ್ದಾರೆ. ಇಂತಹ ಹಾಸ್ಟಲ್‌ಗಳು ಇರುವುದು ಚಿತ್ರದುರ್ಗ ಜಿಲ್ಲೆಯಲ್ಲಿ ಮಾತ್ರ. ಸಮಾಜ ಕಲ್ಯಾಣ ಇಲಾಖೆವತಿಯಿಂದ ವಿವಿಧ ಶೈಕ್ಷಣಿಕ ಹಂತಕ್ಕೆ ಸಂಬಂಧಿಸಿದ ಹಾಸ್ಟಲ್‌ಗಳು ಎರಡು ಜಿಲ್ಲೆಯಲ್ಲಿದ್ದು, ಈ ಜನಾಂಗವು ಶಿಕ್ಷಣದಲ್ಲಿ ಪ್ರಗತಿಯನ್ನು ಸಾಧಿಸಲು ಸಹಕಾರಿಯಾಗಿವೆ. ಹೀಗಿದ್ದರೂ ಶೈಕ್ಷಣಿಕ ಮಟ್ಟ ಸುಧಾರಣೆಯಾಗಿಲ್ಲ. ಪ್ರೈಮರಿ ಮತ್ತು ಪ್ರೌಢಶಿಕ್ಷಣವನ್ನು ಹೆಚ್ಚಿನ ಸಂಖ್ಯೆಯಲ್ಲಿ ಪಡೆಯುವ ಈ ಜನಾಂಗದ ಮಕ್ಕಳು ಆನಂತರದ ಶಿಕ್ಷಣವನ್ನು ಮುಂದುವರೆಸುವುದು ಕಡಿಮೆ ಎಂಬುದು ದೃಢಪಟ್ಟಿದೆ. ಆನಂತರದ ಶಿಕ್ಷಣವನ್ನು ಮುಂದುವರೆಸುವುದು ಕಡಿಮೆ ಎಂಬುದು ದೃಢಪಟ್ಟಿದೆ. ಕಾಲೇಜು ಮತ್ತು ಉನ್ನತ ಶಿಕ್ಷಣ ಕಲಿಯುವ ಮಹಿಳೆಯರ ಪ್ರಮಾಣ ಅತ್ಯಂತ ಕಡಿಮೆ.

ಈ ಜನಾಂಗದ ಅನೇಕರು ಖಾಸಗಿ ಶೈಕ್ಷಣಿಕ ಸಂಸ್ಥೆಗಳನ್ನು ಕರೆದು ಶಿಕ್ಷಣ ಕಲಿಯಲು ಅನುಕೂಲ ಕಲ್ಪಿಸಿದ್ದಾರೆ. ಅಂತಹ ಸಂಸ್ಥೆಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬಂದರೆ, ಬಳ್ಳಾರಿ ಜಿಲ್ಲೆಯಲ್ಲಿ ಅಂತಹ ಸಂಸ್ಥೆಗಳು ಕಡಿಮೆ.

ಗ್ರಾಮಮಟ್ಟದಿಂದ ರಾಜ್ಯಮಟ್ಟದವರೆಗೆ ಇರುವ ರಾಜಕೀಯ ಪ್ರಾತಿನಿಧಿಕ ಸ್ಥಾನಗಳಲ್ಲಿ ಈ ಜಿಲ್ಲೆಗಳ ಮಾದಿಗರು ಹೊಂದಿರುವ ಪ್ರಾತಿನಿಧ್ಯವನ್ನು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಕೆಲವು ವಿಶೇಷ ಜನರಿಗೆ ಮಾತ್ರವೇ ಸೀಮಿತವಾಗಿದ್ದ ಮತದಾನದ ಹಕ್ಕು ಸ್ವಾತಂತ್ರ್ಯ ನಂತರದಲ್ಲಿ ಸರ್ವರಿಗೂ ಅನ್ವಯವಾದನಂತರ ಈ ಜನಾಂಗದವರೂ ರಾಜಕೀಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವಂತಾಯಿತು. ಸ್ವಾತಂತ್ರ್ಯನಂತರದಲ್ಲಿ ಏಕೀಕರಣಗೊಂಡ ಮೈಸೂರು ರಾಜ್ಯದಲ್ಲಿ ಸರ್ಕಾರ ತಂದಂಥ ಅನೇಕ ಪಂಚಾಯಿತಿ ಕಾಯಿದೆಗಳು ಈ ಜನಾಂಗ ರಾಜಕೀಯ ಪ್ರಾತಿನಿಧ್ಯ ಹೊಂದಲು ಸಹಕಾರಿಯಾಗಿವೆ. ೭೦ರ ದಶಕದವರೆಗೂ ಈ ಜನಾಂಗದ ಕೆಲವರು ಈ ಎರಡು ಜಿಲ್ಲೆಗಳಲ್ಲಿ ತಾಲೂಕು ಮತ್ತು ಜಿಲ್ಲಾಬೋರ್ಡ್‌ಗಳಲ್ಲಿ ಪ್ರಾತಿನಿಧ್ಯ ಹೊಂದಿದ್ದರು. ಆದರೆ ಮಹಿಳೆಯರು ಯಾರು ಈ ಬಗೆಯ ಪ್ರಾತಿನಿಧ್ಯ ಹೊಂದಿರುವುದು ಕಂಡುಬರುವುದಿಲ್ಲ. ಆದರೆ ಮಹಿಳೆಯರು ಯಾರು ಈ ಬಗೆಯ ಪ್ರಾನಿಧ್ಯ ಹೊಂದಿರುವುದು ಕಂಡುಬರುವುದಿಲ್ಲ. ಆದರೆ ೮೦ರ ದಶಕದಲ್ಲಿ ಜಾರಿಗೆ ಬಂದ ಪಂಚಾಯಿತಿ ಕಾಯಿದೆಗಳು ಅವರಿಗೂ ಪ್ರಾತಿನಿಧ್ಯವನ್ನು ಹೊರಕಿಸಿಕೊಟ್ಟಿವೆ. ಅಧ್ಯಕ್ಷ ಮತ್ತು ಉಪಾಧ್ಯಕ್ಷರಂತಹ ಸ್ಥಾನಗಳಿಗೂ ಮೀಸಲಾತಿ ನಿಮಯವನ್ನು ಅಳವಡಿಸಿದ್ದರಿಂದ ಈ ಜಿಲ್ಲೆಗಳಲ್ಲಿ ಪುರುಷ ಮತ್ತು ಮಹಿಳೆಯರು ಅಂತಹ ಸ್ಥಾನಗಳನ್ನು ಪಡೆದರು. ರಾಜ್ಯಮಟ್ಟದ

ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಈ ಜನಾಂಗದ ಕೆಲವರು ಸ್ವಾತಂತ್ರ್ಯಪೂರ್ವದಲ್ಲಿ ಪ್ರಾತಿನಿಧ್ಯ ಪಡೆದಿರುವುದು ಕಂಡುಬರುತ್ತದೆ. ಹಾಗೆಯೇ ಸ್ವಾತಂತ್ರ್ಯನಂತರದಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ವಿವಿಧ ಕಾಲಘಟ್ಟಗಳಲ್ಲಿ ನಡೆದ ಚುನಾವಣೆಗಳಲ್ಲಿ ಕೆಲವರು ಚುನಾಯಿತರಾಗಿದ್ದಾರೆ.

ಇಂದು ರಾಜಕೀಯ ನೆಲೆಯಲ್ಲಿ ಮಾದಿಗರು ಪ್ರತ್ಯೇಕ ಮೀಸಲಾತಿ ಬೇಡಿಕೆಯ ಹೋರಾಟ ಮಾಡುತ್ತಿದ್ದು ಅದು ಸಾಮಾಜಿಕ ಸಮಸ್ಯೆಯಾಗಿಯೂ ರೂಪುಗೊಳ್ಳುತ್ತಿದೆ. ಜನಸಂಖ್ಯಾ ಪ್ರಮಾಣದಲ್ಲಿ ತಮಗೆ ರಾಜಕೀಯ ಪ್ರಾತಿನಿಧ್ಯ ಮತ್ತು ಅಧಿಕಾರಗಳು ದೊರಕುತಿಲ್ಲ. ಇದರಿಂದ ತಮಗೆ ಅನ್ಯಾಯವಾಗಿದೆ ಇದನ್ನು ಸರಿಪಡಿಸಲು  ಜನಸಂಖ್ಯಾ ಪ್ರಮಾಣದಲ್ಲಿ ಮೀಸಲಾತಿ ಹಂಚಿಕೆಯಾಗಬೇಕೆಂದು ಹೋರಾಟ ತೀವ್ರಗೊಳಿಸಿದ್ದಾರೆ. ಇಂತಹ ಹೋರಾಟದಲ್ಲಿ ಎರಡು ಜಿಲ್ಲೆಗಳ ಮಾದಿಗರ ಪಾತ್ರ ಪ್ರಮುಖವಾದುದು. ಆದರೆ ಈ ಎರಡು ಜಿಲ್ಲೆಗಳ ಗ್ರಾಮಮಟ್ಟದಿಂದ ಜಿಲ್ಲಾಮಟ್ಟದವರೆಗಿನ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಮಾದಿಗರು ಹೆಚ್ಚಿನ ಪ್ರಮಾಣದಲ್ಲಿ ರಾಜಕೀಯ ಲಾಭಪಡೆದಿದ್ದಾರೆ. ಆದರೆ ಇಂತಹ ಸಂಸ್ಥೆಗಳ ಪರಿಶಿಷ್ಟ ಜಾತಿಗೆ ಮೀಸಲಿರುವ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳಿಗೆ ಆಯ್ಕೆಮಾಡುವ ಸಂದರ್ಭದಲ್ಲಿ ಮೊದಲ ಆದ್ಯತೆಯನ್ನು ಅಸ್ಪೃಶ್ಯೇತರರಿಗೂ ಅಸ್ಪೃಶ್ಯರ ನಡುವೆ ಆಯ್ಕೆ ಪ್ರಶ್ನೆ ಬಂದಾಗ ಮಾದಿಗೇತರರನ್ನು ಆಯ್ಕೆ ಮಾಡುತ್ತಿರುವುದು ಕಂಡುಬಂದಿತು. ಹೀಗಾಗಿ ಇಂತಹ ಮಹತ್ವದ ಸ್ಥಾನಗಳಿಂದ ಇವರು ವಂಚಿತರಾಗಿರುವ ಅನೇಕ ಉದಾಹರಣೆಗಳು ಈ ಎರಡು ಜಿಲ್ಲೆಗಳಲ್ಲಿಯೂ ಸಾಕಷ್ಟು ದೊರೆಯುತ್ತವೆ. ರಾಜ್ಯಮಟ್ಟದಲ್ಲಿ ರಾಜಕೀಯ ಅಧಿಕಾರ ಹಂಚಿಕೆಯ ಸಂದರ್ಭದಲ್ಲಿಯೂ ಈ ಜನಾಂಗದವರಿಗೂ ಅನ್ಯಾಯವಾಗಿರುವುದುಂಟು. ಇಂದು ರಾಜ್ಯಮಟ್ಟದಲ್ಲಿ ಮಾದಿಗರು ನಡೆಸುತ್ತಿರುವ ಜನಸಂಖ್ಯಾಧಾರದ ಮೀಸಲಾತಿ ಹಂಚಿಕೆಯ ಹೋರಾಟವನ್ನು ಈ ಜನಾಂಗದ ವಿವಿಧ ಸಂಘಟನೆಗಳು ಸಹಾ ಬೆಂಬಲಿಸವೆಯಾದರೂ ಒಂದೇ ವೇದಿಕೆಯ ಮೆಲೆ ಎಲ್ಲೂರು ಸೇರಿಕೊಂಡು ಹೋರಾಟ ನಡೆಸುತ್ತಿಲ್ಲ. ಜನಸಂಖ್ಯಾ ಆಧಾರದ ಮೇಲೆ ಮೀಸಲಾತಿ ಹಂಚಿಕೆಯ ಬೇಡಿಕೆ, ನ್ಯಾಯೋಚಿತವಾಗಿದ್ದರೂ ಈ ಬಗೆಯ ಹಂಚಿಕೆ ಪರಿಶಿಷ್ಟ ಜಾತಿಗಳನ್ನು ಗುಂಪುಗುಂಪಾಗಿ ಒಡೆಯುತ್ತದೆ ಎಂಬ ಭಾವನೆ ಬೆಳೆಯಲು ಅವಕಾಶಮಾಡಿಕೊಟ್ಟಿದೆಯಾದರೂ ಈ ಒಳಮೀಸಲಾತಿಯಿಂದಾಗಿ ಇದು ಪರಿಶಿಷ್ಟ ಜಾತಿಗಳಲ್ಲಿ ಇರುವ ಪ್ರಬಲ ಜಾತಿಗಳೊಂದಿಗೆ ಪೈಪೋಟಿ ಮಾಡಲಾಗದಂತಹ ಸಣ್ಣಪುಟ್ಟ ಜಾತಿಗಳಿಗೆ ಅಭಿವೃದ್ಧಿ ಹೊಂದಲು ಅವಕಾಶ ಮಾಡಿಕೊಡುವ ಸಾಧ್ಯತೆಯನ್ನು ತಳ್ಳಿಹಾಕುವ ಹಾಗಿಲ್ಲ.

ಸಾಂಸ್ಕೃತಿಕ ಕ್ಷೇತ್ರದಲ್ಲಿಯೂ ಮಾದಿಗರ ಪಾತ್ರ ಪ್ರಮುಖವಾಗಿ ಕಂಡುಬರುತ್ತದೆ. ಈ ಎರಡೂ ಜಿಲ್ಲೆಗಳಲ್ಲಿ ಯಾವುದೇ ಗ್ರಾಮದಲ್ಲಿ ನಡೆಯುವ ಹಬ್ಬ, ಜಾತ್ರೆ, ಉತ್ಸಹಗಳಂತಹ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮಾದಿಗ ಜನಾಂಗದವರ ಪಾತ್ರ ಇದ್ದೇ ಇರುತ್ತದೆ. ಮಾದಿಗರು ಕೆಲವೊಂದು ಧಾರ್ಮಿಕ ಕಾರ್ಯಗಳಲ್ಲಿ ವಿಶೇಷ ಮಾನ್ಯತೆಗಳಿಸಿದ್ದಾರೆ. ಇವರು ಪ್ರಧಾನವಾಗಿ ಮಾತೃಆರಾಧಕರಾಗಿದ್ದರೂ

ಕೆಲವು ಪುರುಷ ದೈವಗಳನ್ನೂ ಆರಾಧಿಸುವುದು ಕಂಡುಬರುತ್ತದೆ. ಪ್ರತಿಯೊಂದು ಗ್ರಾಮದಲ್ಲಿ ಸ್ತ್ರೀಸಂಪ್ರದಾಯದ ಹಾಡುಗಳನ್ನು ಮಹಿಳೆಯರು ಕಂಡುಬರುತ್ತಾರೆ. ಇದಲ್ಲದೆ ಕಥೆಗಾರಿಕೆ, ಅಭಿನಯ, ಕೋಲಾಟ ಮುಂತಾದ ಕಲೆಗಳನ್ನು ಬಲ್ಲವರಾಗಿದ್ದು, ವಿಶೇಷವಾಗಿ ತಮಟೆ ಬಾರಿಸುವ ಕಲೆಯನ್ನು ಕರಗತ ಮಾಡಿಕೊಂಡಿದ್ದಾರೆ. ಸಾಹಿತ್ಯ ಮತ್ತು ಸಂಶೋಧನೆ ಕ್ಷೇತ್ರದಲ್ಲಿ ಈ ಜನಾಂಗದ ಸೇವೆ ಗಮನರ್ಹದುದು.

ಮಾದಿಗರ ಗುರುಪರಂಪರೆಗೆ ಸೇರಿದ ಕೋಡಿಹಳ್ಳಿ ಮಠವು ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಕೋಡಿಹಳ್ಳಿ ಗ್ರಾಮದಲ್ಲಿದ್ದು, ಅದರ ಸ್ವಾಮಿಗಳು ಶ್ರೀ ರುದ್ರಾಕ್ಷಿಮುನಿಗಳು ಇದ್ದಾರೆ. ಈ ಗುರುಪರಂಪರೆಗೆ ಸೇರಿದ ಅನೇಕ ಕುಟುಂಬಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಮಾತ್ರವಲ್ಲದೇ ಇತರ ಭಾಗಗಳಲ್ಲೂ ನೆಲೆಸಿದ್ದಾರೆ.

# ಅನುಬಂಧಗಳು

ಸಂದರ್ಶಿಸಲಾದ ಗ್ರಾಮಗಳು

ಸಂದರ್ಶಿಸಲಾದ ವ್ಯಕ್ತಿಗಳು

ಮಾದಿಗ ಜನಾಂಗದ ಸ್ವಾತಂತ್ರ್ಯ ಹೋರಾಟಗಾರರ ಪಟ್ಟಿ

ಮಾದಿಗ ಜನಾಂಗವು ಸರ್ಕಾರಕ್ಕೆ ನೀಡಿರುವ ಮನವಿ ಪತ್ರಗಳು ಮತ್ತು ಇತರೆ

ಪ್ರತ್ಯೇಕ ಮತ್ತು ವರ್ಗೀಕರಣ ಮೀಸಲಾತಿ ಸಂಬಂಧ ನಡೆದ ಹೋರಾಟಗಳು

ಗ್ರಂಥಋಣ

ಛಾಯಾಚಿತ್ರಗಳು

## ಅಧ್ಯಯನಕ್ಕೊಳಪಡಿಸಲಾದ ಗ್ರಾಮಗಳು

| ಕ್ರ.ಸಂ. | ಗ್ರಾಮ/ಸ್ಥಳ | ತಾಲೂಕು | ಜಿಲ್ಲೆ |
|---|---|---|---|
| ೦೧ | ಮದಕರಿಪುರ | ಚಿತ್ರದುರ್ಗ | ಚಿತ್ರದುರ್ಗ |
| ೦೨ | ಪಂಡರಹಳ್ಳಿ | ಚಿತ್ರದುರ್ಗ | ಚಿತ್ರದುರ್ಗ |
| ೦೩ | ಹುಲ್ಲೂರು | ಚಿತ್ರದುರ್ಗ | ಚಿತ್ರದುರ್ಗ |
| ೦೪ | ಬಾಬುಜಗಜೀವನರಾಮ ಕಾಲೋನಿ | ಚಳ್ಳಕೆರೆ | ಚಿತ್ರದುರ್ಗ |
| ೦೫ | ಸಿದ್ದಾಪುರ | ಚಳ್ಳಕೆರೆ | ಚಿತ್ರದುರ್ಗ |
| ೦೬ | ಹೊಟ್ಟೆಪ್ಪನಹಳ್ಳಿ | ಚಳ್ಳಕೆರೆ | ಚಿತ್ರದುರ್ಗ |
| ೦೭ | ಕುರುಡಿಹಳ್ಳಿ | ಚಳ್ಳಕೆರೆ | ಚಿತ್ರದುರ್ಗ |
| ೦೮ | ದೊಡ್ಡೇರಿ | ಚಳ್ಳಕೆರೆ | ಚಿತ್ರದುರ್ಗ |
| ೦೯ | ಹಿರೇಹಳ್ಳಿ | ಚಳ್ಳಕೆರೆ | ಚಿತ್ರದುರ್ಗ |
| ೧೦ | ಬಗ್ಗನಡು | ಹಿರಿಯೂರು | ಚಿತ್ರದುರ್ಗ |
| ೧೧ | ಕಾಟನಾಯಕನಹಳ್ಳಿ | ಹಿರಿಯೂರು | ಚಿತ್ರದುರ್ಗ |
| ೧೨ | ಪಟ್ರೆಹಳ್ಳಿ | ಹಿರಿಯೂರು | ಚಿತ್ರದುರ್ಗ |
| ೧೩ | ನಂದಿಹಳ್ಳಿ | ಹಿರಿಯೂರು | ಚಿತ್ರದುರ್ಗ |
| ೧೪ | ಕಸ್ತೂರಿರಂಗಪ್ಪನಹಳ್ಳಿ | ಹಿರಿಯೂರು | ಚಿತ್ರದುರ್ಗ |
| ೧೫ | ಶಿವಗಂಗೆ | ಹೊಳಲ್ಕೆರೆ | ಚಿತ್ರದುರ್ಗ |
| ೧೬ | ಟಿ.ನೂಲೆನೂರು | ಹೊಳಲ್ಕೆರೆ | ಚಿತ್ರದುರ್ಗ |
| ೧೭ | ದೇವಿಗೆರೆ | ಹೊಸದುರ್ಗ | ಚಿತ್ರದುರ್ಗ |
| ೧೮ | ಬೀಸನಹಳ್ಳಿ | ಹೊಸದುರ್ಗ | ಚಿತ್ರದುರ್ಗ |
| ೧೯ | ಗೊರವಿನಕಲ್ಲು | ಹೊಸದುರ್ಗ | ಚಿತ್ರದುರ್ಗ |
| ೨೦ | ಮಧುರೆ | ಹೊಸದುರ್ಗ | ಚಿತ್ರದುರ್ಗ |
| ೨೧ | ಸುಲೇನಹಳ್ಳಿ | ಮೊಳಕಾಲ್ಮೂರು | ಚಿತ್ರದುರ್ಗ |
| ೨೨ | ಬಿ.ಜಿ.ಕೆರೆ | ಮೊಳಕಾಲ್ಮೂರು | ಚಿತ್ರದುರ್ಗ |
| ೨೩ | ರಾಯಪುರ | ಮೊಳಕಾಲ್ಮೂರು | ಚಿತ್ರದುರ್ಗ |

| | | | |
|---|---|---|---|
| ೨೪ | ಸಂಗನಕಲ್ಲು | ಬಳ್ಳಾರಿ | ಬಳ್ಳಾರಿ |
| ೨೫ | ಸಿರವಾರ | ಬಳ್ಳಾರಿ | ಬಳ್ಳಾರಿ |
| ೨೬ | ಕಪ್ಪಗಲ್ಲು | ಬಳ್ಳಾರಿ | ಬಳ್ಳಾರಿ |
| ೨೭ | ದೇವಲಾಪುರ | ಸಿರುಗುಪ್ಪ | ಬಳ್ಳಾರಿ |
| ೨೮ | ಕೆಂಚನಗುಡ್ಡ | ಸಿರುಗುಪ್ಪ | ಬಳ್ಳಾರಿ |
| ೨೯ | ಯರಕಲ್ಲು | ಸಿರುಗುಪ್ಪ | ಬಳ್ಳಾರಿ |
| ೩೦ | ನಿಟ್ಟೂರು | ಸಿರುಗುಪ್ಪ | ಬಳ್ಳಾರಿ |
| ೩೧ | ಇಬ್ರಾಹಿಂಪುರ | ಸಿರುಗುಪ್ಪ | ಬಳ್ಳಾರಿ |
| ೩೨ | ರಾಮಸಾಗರದ ಹಟ್ಟಿ | ಕೂಡ್ಲಿಗಿ | ಬಳ್ಳಾರಿ |
| ೩೩ | ಮಾರಮ್ಮನಹಳ್ಳಿ | ಕೂಡ್ಲಿಗಿ | ಬಳ್ಳಾರಿ |
| ೩೪ | ಕುಂಬಿಹಳ್ಳಿ | ಕೂಡ್ಲಿಗಿ | ಬಳ್ಳಾರಿ |
| ೩೫ | ಹಾರನಹಾಳಹಟ್ಟಿ | ಕೂಡ್ಲಿಗಿ | ಬಳ್ಳಾರಿ |
| ೩೬ | ಬಣವಿಕಲ್ಲು | ಕೂಡ್ಲಿಗಿ | ಬಳ್ಳಾರಿ |
| ೩೭ | ಸೊನ್ನ | ಹೆಚ್.ಬಿ.ಹಳ್ಳಿ | ಬಳ್ಳಾರಿ |
| ೩೮ | ದಶ್ಮಾಪುರ | ಹೆಚ್.ಬಿ.ಹಳ್ಳಿ | ಬಳ್ಳಾರಿ |
| ೩೯ | ಲಿಂಗದಹಳ್ಳಿ | ಸಂಡೂರು | ಬಳ್ಳಾರಿ |
| ೪೦ | ದರೋಜಿ | ಸಂಡೂರು | ಬಳ್ಳಾರಿ |
| ೪೧ | ಸೋವೆನಹಳ್ಳಿ | ಹೂವಿನಹಡಗಲಿ | ಬಳ್ಳಾರಿ |
| ೪೨ | ಹರವಿಬಸಾಪುರ | ಹೂವಿನಹಡಗಲಿ | ಬಳ್ಳಾರಿ |
| ೪೩ | ಕಮಲಾಪುರ | ಹೊಸಪೇಟೆ | ಬಳ್ಳಾರಿ |
| ೪೪ | ನಾಗೇನಹಳ್ಳಿ | ಹೊಸಪೇಟೆ | ಬಳ್ಳಾರಿ |
| ೪೫ | ಬಸವನದುರ್ಗ | ಹೊಸಪೇಟೆ | ಬಳ್ಳಾರಿ |

## ಸಂದರ್ಶಿಸಿಸಲಾದ ವ್ಯಕ್ತಿಗಳು

೦೧. ಎ.ಕೆ. ಯರ್ರಪ್ಪ, ಸ್ವಾತಂತ್ರ್ಯ ಹೋರಾಟಗಾರ, ತುರುವನೂರು, ಚಿತ್ರದುರ್ಗ ತಾಲೂಕು

೦೨. ಟಿ.ಮಾರಪ್ಪ, ಸ್ವಾತಂತ್ರ್ಯ ಹೋರಾಟಗಾರ, ಮಠದಕುರುಬರಹಟ್ಟಿ, ಚಿತ್ರದುರ್ಗ ತಾಲೂಕು

೦೩. ಕಾಂಗ್ರೇಸ್ ರಂಗಪ್ಪ, ಸ್ವಾತಂತ್ರ್ಯ ಹೋರಾಟಗಾರ, ಚಿಕ್ಕಜಾಜೂರು, ಹೊಳಲ್ಕೆರೆ ತಾಲೂಕು

೦೪. ಹನುಮಂತಪ್ಪ, ಸ್ವಾತಂತ್ರ್ಯ ಹೋರಾಟಗಾರ, ದೊಗ್ಗನಾಳ್, ಹೊಳಲ್ಕೆರೆ ತಾಲೂಕು

೦೫. ಶಿವಳ್ಳಿ ಸಿದ್ದಪ್ಪ, ಸ್ವಾತಂತ್ರ್ಯ ಹೋರಾಟಗಾರ, ದಾವಣಗೆರೆ

೦೬. ಬಿ.ಶ್ಯಾಮಪ್ಪ, ಸ್ವಾತಂತ್ರ್ಯ ಹೋರಾಟಗಾರ, ಚಳ್ಳಕೆರೆ

೦೭. ಮಣ್ಣಪ್ಪ, ಸ್ವಾತಂತ್ರ್ಯ ಹೋರಾಟಗಾರ, ಮರಡಿಹಳ್ಳಿ, ಹಿರಿಯೂರು ತಾಲೂಕು

೦೮. ಮಂಜುಳಮ್ಮ, ಗೃಹಿಣಿ, ಕೆ.ಆರ್.ಹಳ್ಳಿ, ಹಿರಿಯೂರು ತಾಲೂಕು

೦೯. ಸಣ್ಣೀರಮ್ಮ, ಗೃಹಿಣಿ, ಕೆ.ಆರ್.ಹಳ್ಳಿ, ಹಿರಿಯೂರು ತಾಲೂಕು

೧೦. ನಾಗಜ್ಜಿ, ಕೆ.ಆರ್.ಹಳ್ಳಿ, ಹಿರಿಯೂರು ತಾಲೂಕು

೧೧. ಜಿ.ಹನುಮಂತಪ್ಪ, ಮಾಜಿ ಉಪಾಧ್ಯಕ್ಷ, ಕೆ.ಆರ್.ಹಳ್ಳಿ, ಹಿರಿಯೂರು ತಾಲೂಕು

೧೨. ಹರಿಜನರ ಹುಲುಗಮ್ಮ, ಗೃಹಿಣಿ, ಕಮಲಾಪುರ, ಹೊಸಪೇಟೆ ತಾಲೂಕು

೧೩. ಹುಲುಗಪ್ಪ, ಯಜಮಾನ, ಗಾದಿಗನೂರು, ಹೊಸಪೇಟೆ ತಾಲೂಕು

೧೪. ಎಂ.ಜಯಣ್ಣ, ರಾಜ್ಯ ಸಂಚಾಲಕರು, ಕರ್ನಾಟಕ ದಲಿತ ಸಂಘರ್ಷ ಸಮಿತಿ, ಚಿತ್ರದುರ್ಗ

೧೫. ಮುಂಡರಗಿ ನಾಗರಾಜ್, ಜಿಲ್ಲಾ ಸಂಚಾಲಕರು, ದಸಂಸ, ಬಳ್ಳಾರಿ

೧೬. ಹುಲುಗಪ್ಪ, ತಾಲೂಕು ಸಂಚಾಲಕರು, ದಸಂಸ, ಹೊಸಪೇಟೆ

೧೭. ಡಿ.ಆರ್.ಪಾಂಡುರಂಗಸ್ವಾಮಿ, ಜಿಲ್ಲಾ ಸಂಘಟನಾ ಸಂಚಾಲಕ, ದಸಂಸ, ಹೊಳಲ್ಕೆರೆ ತಾಲೂಕು

೧೮. ಎಚ್.ಬಿ.ಗಂಗಪ್ಪ, ತಾಲೂಕು ಸಂಚಾಲಕ, ದಸಂಸ, ಸಿರುಗುಪ್ಪ ತಾಲೂಕು

೧೯. ಬಿ.ಪಿ.ಪ್ರಕಾಶ್‌ಮೂರ್ತಿ, ಜಿಲ್ಲಾಧ್ಯಕ್ಷ, ಮಾದಿಗ ದಂಡೋರ, ಚಿತ್ರದುರ್ಗ

೨೦. ಜೆ.ಜಗನ್ನಾಥ್, ಜಿಲ್ಲಾಧ್ಯಕ್ಷ, ಮಾದಿಗ ದಂಡೋರ, ಬಳ್ಳಾರಿ

೨೧. ಕೆ.ಎಲ್.ರಾಮಸ್ವಾಮಿ, ಮಾಜಿ ಜಿಲ್ಲಾ ಪಂಚಾಯಿತಿ ಸದಸ್ಯ, ಕೆ.ಆರ್.ಹಳ್ಳಿ, ಹಿರಿಯೂರು ತಾಲೂಕು

೨೨. ಎಂ.ರಾಮಚಂದ್ರಪ್ಪ, ಮಾಜಿ ಜಿಲ್ಲಾ ಪಂಚಾಯಿತಿ ಸದಸ್ಯ, ಚಿತ್ರದುರ್ಗ

೨೩. ಎಂ.ಗಂಗಾಧರಪ್ಪ, ಮಾಜಿ ಜಿಲ್ಲಾ ಪಂಚಾಯಿತಿ ಸದಸ್ಯ, ಪಟ್ರೆಹಳ್ಳಿ, ಹಿರಿಯೂರು ತಾಲೂಕು

೨೪. ಪೆನ್ನಪ್ಪ, ತಾಲೂಕು ಪಂಚಾಯಿತಿ ಸದಸ್ಯ, ಚಿತ್ರದುರ್ಗ

೨೫. ಸೋಮಶೇಖರ್, ಮಾಜಿ ತಾಲೂಕು ಪಂಚಾಯಿತಿ ಸದಸ್ಯ, ಕಮಲಾಪುರ, ಹೊಸಪೇಟೆ ತಾಲೂಕು

೨೬. ನಾಗರಾಜ, ಆಟೋಡ್ರೈವರ್, ಮದಕರಿಪುರ, ಚಿತ್ರದುರ್ಗ ತಾಲೂಕು

೨೭. ಎಂ.ಜಯಣ್ಣ, ನಿರುದ್ಯೋಗಿ, ಸಿಂಗಾಪುರ, ಚಿತ್ರದುರ್ಗ ತಾಲೂಕು

೨೮. ಮಂಜುನಾಥ, ಕಾರ್ಯದರ್ಶಿ, ಕೂಡು ಒಕ್ಕಲು ಬೇಸಾಯಗಾರರ ಸಂಘ, ಬಾಬು ಜಗಜೀವನರಾಂ ಕಾಲೋನಿ, ಚಳ್ಳಕೆರೆ ತಾಲೂಕು

೨೯. ದ್ಯಾಮಣ್ಣ, ಕೂಲಿ, ಸಿದ್ದಾಪುರ, ಚಳ್ಳಕೆರೆ ತಾಲೂಕು

೩೦. ದುರುಗೇಶಪ್ಪ, ವ್ಯವಸಾಯ, ದೊಡ್ಡೇರಿ, ಚಳ್ಳಕೆರೆ ತಾಲೂಕು

೩೧. ಮಲ್ಲಯ್ಯ, ವ್ಯವಸಾಯ, ಹಿರೇಹಳ್ಳಿ, ಚಳ್ಳಕೆರೆ ತಾಲೂಕು

೩೨. ರಂಗನಾಥ, ವಿದ್ಯಾರ್ಥಿ, ಬಗ್ಗನಡು, ಹಿರಿಯೂರು ತಾಲೂಕು

೩೩. ಧನಂಜಯ್ಯ, ನಿರುದ್ಯೋಗಿ, ಕಾಟನಾಯಕನಹಳ್ಳಿ, ಹಿರಿಯೂರು ತಾಲೂಕು

೩೪. ಎನ್.ಮೂರ್ತಿ, ವ್ಯವಸಾಯ, ಪಟ್ರೆಹಳ್ಳಿ, ಹಿರಿಯೂರು ತಾಲೂಕು

೩೫. ಕಂಬಣ್ಣ, ರಾಜಕಾರಣಿ, ನಂದಿಹಳ್ಳಿ, ಹಿರಿಯೂರು ತಾಲೂಕು

೩೬. ಎಚ್.ರಾಮಚಂದ್ರಪ್ಪ, ನಿವೃತ್ತ ಶಿಕ್ಷಕರು, ಕೆ.ಆರ್.ಹಳ್ಳಿ, ಹಿರಿಯೂರು ತಾಲೂಕು

೩೭. ದೇವರಾಜ, ನಿರುದ್ಯೋಗಿ, ಶಿವಗಂಗ, ಹೊಳಲ್ಕೆರೆ ತಾಲೂಕು

೩೮. ಶಿವಮೂರ್ತಿ, ನಿರುದ್ಯೋಗಿ, ಟಿ.ನೂಲಿನೂರು, ಹೊಳಲ್ಕೆರೆ ತಾಲೂಕು

೩೯. ಓಂಕಾರಪ್ಪ, ವಿದ್ಯಾರ್ಥಿ, ದೇವಿಗೆರೆ, ಹೊಸದುರ್ಗ ತಾಲೂಕು

೪೦. ಬಿ.ಕೆ.ಅಡಿವಪ್ಪ, ಕೂಲಿ, ಬೀಸನಹಳ್ಳಿ, ಹೊಸದುರ್ಗ ತಾಲೂಕು

೪೧. ಗಂಗಾಧರಪ್ಪ, ವ್ಯವಸಾಯ, ಗೊರವಿನಕಲ್ಲು, ಹೊಸದುರ್ಗ ತಾಲೂಕು

೪೨. ಶಿವಮೂರ್ತಿ, ನಿರುದ್ಯೋಗಿ, ಮಧುರೆ, ಹೊಸದುರ್ಗ ತಾಲೂಕು

೪೩. ದುರ್ಗಪ್ಪ, ಕೂಲಿ, ಸೂಲೇನಹಳ್ಳಿ, ಮೊಳಕಾಲ್ಮೂರು ತಾಲೂಕು

೪೪. ಈಶ್ವರಪ್ಪ, ಗಾರೆಕೆಲಸ, ಬಿ.ಜಿ.ಕೆರೆ, ಮೊಳಕಾಲ್ಮೂರು ತಾಲೂಕು

೪೫. ನಾಗೇಂದ್ರಪ್ಪ, ನಿರುದ್ಯೋಗಿ, ರಾಯಪುರ, ಮೊಳಕಾಲ್ಮೂರು ತಾಲೂಕು

೪೬. ಈರಪ್ಪ, ಕೂಲಿ, ಸೂಲೇನಹಳ್ಳಿ, ಮೊಳಕಾಲ್ಮೂರು ತಾಲೂಕು

೪೭. ಸಣ್ಣರುದ್ರಪ್ಪ, ಕೂಲಿ, ಸಿರಿವಾರ, ಬಳ್ಳಾರಿ ತಾಲೂಕು

೪೮. ಹೊನ್ನಪ್ಪ, ವ್ಯವಸಾಯ, ಕಪ್ಪಗಲ್ಲು, ಬಳ್ಳಾರಿ ತಾಲೂಕು

೪೯. ಪೂಜಾರಿ ಹುಲುಗಪ್ಪ, ದೇವಲಾಪುರ, ಸಿರುಗುಪ್ಪ ತಾಲೂಕು

೫೦. ಹರಿಜನ ಮಾರೆಪ್ಪ, ಕೂಲಿ, ಕೆಂಚನಗುಡ್ಡ, ಸಿರುಗುಪ್ಪ ತಾಲೂಕು

೫೧. ಹರಿಜನ ಲೋಕಣ್ಣ, ಕೂಲಿ, ಯರಕಲ್ಲು, ಸಿರುಗುಪ್ಪ ತಾಲೂಕು

೫೨. ಮಾರಪ್ಪ, ಕೂಲಿ, ನಿಟ್ಟೂರು, ಸಿರುಗುಪ್ಪ ತಾಲೂಕು

